|| ಓಂ ||



ಶ್ರೀ ಜಗನ್ನಾಥದಾಸರಾಯರಿಂದ ವಿರಚಿತ

# ಶ್ರೀಮದ್ಧರಿಕಥಾಮೃತಸಾರ

**ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲ ಸಂಜಾತ**

ಶ್ರೀಮತ್ಸಂಕರ್ಷಣ ಒಡೆಯರವರ

**ಮೂಲ-ಕನ್ನಡ ವ್ಯಾಖ್ಯಾನ ಸಹಿತ**

## ಪ್ರಥಮ ಸಂಪುಟ

೧ ರಿಂದ ೭ ಸಂಧಿಗಳು



**ಶ್ರೀ ಹರಿವಿಠ್ಠಲ ಪ್ರಕಾಶನ**

2–3, ಮೊದಲನೆಯ ಮುಖ್ಯ ರಸ್ತೆ

ನರಸಿಂಹರಾಜ ಕಾಲೊನಿ

ಬೆಂಗಳೂರು–560019

ಪ್ರಥಮ ಮುದ್ರಣ : ಸೆಪ್ಟೆಂಬರ್ 1976
(ಪ್ರತಿಗಳು : ೧೦೧೩)



ಪ್ರತಿಗಳು ದೊರೆಯುವ ಸ್ಥಳ :
**ಶ್ರೀ ಹರಿವಿಠ್ಠಲ ಪ್ರಕಾಶನ**
2-3, ಮೊದಲನೆಯ ಮುಖ್ಯ ರಸ್ತೆ
ನರಸಿಂಹರಾಜ ಕಾಲೊನಿ
ಬೆಂಗಳೂರು–560019
(ದೂರವಾಣಿ : 63412)



ಮುದ್ರಣ :
**ಪ್ರಭಾ ಮುದ್ರಣಾಲಯ**
22-A, ಡಾ. ಡಿ. ವಿ. ಗುಂಡಪ್ಪ ರಸ್ತೆ
ಬಸವನಗುಡಿ, ಬೆಂಗಳೂರು–560 004

# ಶ್ರೀ ಜಗನ್ನಾಥದಾಸವರ್ಯರ ಜೀವನಚರಿತ್ರೆ

ಶ್ರೀಮನ್ಮಧ್ವಸಿದ್ಧಾಂತದ ಅತಿಗಹನ ಪ್ರಮೇಯಗಳನ್ನು ಪಂಡಿತರಿಗೂ ಪಾಮರರಿಗೂ ರಂಜಿಸುವಂತೆ ತಿಳಿಯಾದ ಭಾಷೆಯಲ್ಲಿ ಸುಂದರವಾದ ಪದ್ಯಗಳಲ್ಲಿ ಭಕ್ತಿಭಾವದಿಂದ ಹಾಡಿದವರು ಅನೇಕ ಅಪರೋಕ್ಷ ಜ್ಞಾನಿಗಳಾದ ದಾಸವರ್ಯರು. ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ನರಹರಿತೀರ್ಥರ ಕಾಲಕ್ಕೇ ಈ ದಾಸಪಂಥದ ಉಗಮವಾಗಿದ್ದರೂ ಅದು ಪ್ರಾಬಲ್ಯವನ್ನು ಪಡೆದದ್ದು ಶ್ರೀ ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಜರ ಕಾಲದಲ್ಲಿ. ಸ್ವಯಂ ಅನೇಕ ದೇವರನಾಮಗಳನ್ನು ರಚಿಸಿರುವ ಈ ಮಹಾನುಭಾವರು ಪುರಂದರದಾಸರೇ ಮೊದಲಾದ ದಾಸಶ್ರೇಷ್ಠರಿಗೆ ಅನುಗ್ರಹಮಾಡಿ ದಾಸಪಂಥದ ಸ್ವರ್ಣ ಯುಗಕ್ಕೆ ಪ್ರವರ್ತಕರಾದರು ಮತ್ತು ಜನಸಾಮಾನ್ಯರಲ್ಲೂ ತತ್ವಪ್ರಸಾರವಾಗಲು ಕಾರಣ ಕರ್ತರಾದರು.

ಆದರೆ ಶ್ರೀ ಪುರಂದರದಾಸರ ನಂತರ ಸುಮಾರು ೨೫೦ ವರ್ಷಗಳವರೆಗೆ ದಾಸ ಪಂಥದ ಪ್ರಭಾವ ಅಷ್ಟಾಗಿ ಕಾಣಬರುವುದಿಲ್ಲ. ಪುನಃ ೧೮ನೇ ಶತಮಾನದಲ್ಲಿ ಶ್ರೀ ವಿಜಯ ದಾಸರೇ ಮೊದಲಾದ ಮಹನೀಯರು ಅವತರಿಸಿ ದಾಸಸಾಹಿತ್ಯದ ಸೃಷ್ಟಿಯನ್ನು ವಿಪುಲ ವಾಗಿ ಮಾಡಿದರು. ಇದೇ ಶತಮಾನದಲ್ಲಿ ಅವತರಿಸಿ ಅತ್ಯಂತ ಶ್ರೇಷ್ಠ ಕೃತಿಗಳನ್ನು ರಚಿಸಿ ಸಜ್ಜನರಿಗೆ ಅನುಗ್ರಹ ಮಾಡಿದವರು ಶ್ರೀ ಜಗನ್ನಾಥದಾಸರು.

ನೈಜಾಂ ಸಂಸ್ಥಾನದ ಮಾನವಿ ಕ್ಷೇತ್ರಕ್ಕೆ ಸೇರಿದ ಬ್ಯಾಗವಟ್ಟಿ ಗ್ರಾಮದಲ್ಲಿ ನರಸಪ್ಪ ನವರೆಂಬ ಶಾನುಭೋಗರಿದ್ದರು. ಇವರ ಪತ್ನಿ ಲಕ್ಷ್ಮಕ್ಕ. ಶ್ರೀ ರಾಯರ ಮಠಾಧೀಶರಾದ ಶ್ರೀ ಸುಮತೀಂದ್ರತೀರ್ಥ ಶ್ರೀಪಾದಂಗಳವರಲ್ಲಿ ಶಿಷ್ಯವೃತ್ತಿ ವಹಿಸಿದ್ದ ಶ್ರೀ ನರಸಪ್ಪನವರು ಗಾನಕಲೆಯಲ್ಲೂ ನಿಪುಣರಾಗಿದ್ದರು. ಇವರ ಗಾನವನ್ನು ಕೇಳಿದ ಶ್ರೀ ಉತ್ತರಾದಿಮಠದ ಶ್ರೀ ಸತ್ಯಪೂರ್ಣತೀರ್ಥರು ಇವರನ್ನು ಪರಾವಸುನಾಮಕಗಂಧರ್ವರೆಂದು ಕರೆದರು. ಸಂಸಾರದಲ್ಲಿ ವಿರಕ್ತರಾದ ಶ್ರೀ ನರಸಪ್ಪನವರು ಪಂಗನಾಮ ತಿಮ್ಮಣ್ಣದಾಸರಿಂದ ದೀಕ್ಷೆ ಪಡೆದು, ನರಸಿಂಹವಿಠ್ಠಲನೆಂದು ಅಂಕಿತ ಪಡೆದು ಹರಿದಾಸರಾದರು. ಇವರ ಪುತ್ರರೇ ಶ್ರೀ ಜಗನ್ನಾಥದಾಸರು. ಇವರು ಶಾಲೀವಾಹನಶಕ ೧೬೫೦, ಕೀಲಕ ಸಂವತ್ಸರ, ಶ್ರಾವಣ ಶುದ್ಧ ದ್ವಿತೀಯಾ (27–7–1728) ರಂದು ಜನಿಸಿದರು. ಅವರಿಗೆ ತಂದೆ ತಾಯಿಗಳು ಶ್ರೀನಿವಾಸಪ್ಪ ಎಂದು ನಾಮಕರಣ ಮಾಡಿದರು. ಮೇಧಾವಿಯಾಗಿದ್ದ ಬಾಲಕನಿಗೆ ಸಕಾಲದಲ್ಲಿ ಉಪನಯನಾದಿ ಸಂಸ್ಕಾರಗಳನ್ನು ಮಾಡಿ ನರಸಪ್ಪನವರು ಶಾಸ್ತ್ರಾಭ್ಯಾಸಕ್ಕಾಗಿ ಅವನನ್ನು ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಪೀಠಾಧೀಶರೂ, ಪ್ರಸಿದ್ಧ ವಿದ್ವಾಂಸರೂ ಆಗಿದ್ದ ಶ್ರೀ ವರದೇಂದ್ರ ತೀರ್ಥರಲ್ಲಿಗೆ ಕರೆದುಕೊಂಡು ಹೋದರು. ಶ್ರೀಗಳವರನ್ನು ಕಂಡಕೂಡಲೇ ಬಾಲಕ ಶ್ರೀನಿವಾಸಪ್ಪನು 'ವರದೇಂದ್ರ ಪಂಚರತ್ನ'ವೆಂಬ ಸುಂದರವಾದ ಐದು ಸಂಸ್ಕೃತಶ್ಲೋಕಗಳಿಂದ ಸ್ತೋತ್ರಮಾಡಿ ಅರ್ಪಿಸಿದನು. ತೇಜಸ್ವಿಯೂ, ಧೀಮಂತನೂ ಆದ ಆ ಬಾಲಕನ ಚತುರತೆಯನ್ನು ಕಂಡು ಸಂತುಷ್ಟರಾದ ಶ್ರೀಗಳವರು

ಕೂಡಲೆ ಶಿಷ್ಯನನ್ನಾಗಿ ಅವನನ್ನು ಪರಿಗ್ರಹಿಸಿದರು. ಅಸಾಧಾರಣ ಬುದ್ಧಿಪ್ರತಿಭಾದಿ ಗಳಿಂದ ಕೂಡಿದ ಬಾಲಕ ಶ್ರೀನಿವಾಸಪ್ಪನು ಅನತಿಕಾಲದಲ್ಲೇ ಗುರುಗಳ ಅನುಗ್ರಹದಿಂದ ನ್ಯಾಯವೇದಾಂತಾದಿ ಸಕಲ ಶಾಸ್ತ್ರಗಳಲ್ಲಿಯೂ, ಇತಿಹಾಸಪುರಾಣಗಳಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿದನು. ಜನರು ಶ್ರೀನಿವಾಸಪ್ಪನನ್ನು ಗೌರವದಿಂದ ಶ್ರೀನಿವಾಸಾಚಾರ್ಯರೆಂದು ಕರೆಯಲಾರಂಭಿಸಿದರು. ಕೇವಲ ೧೭-೧೮ ವಯಸ್ಸಿನಲ್ಲೇ ಸುಧಾಚಂದ್ರಿಕಾದಿ ಉದ್ಗ್ರಂಥಗಳನ್ನು ಶ್ರೀನಿವಾಸಾಚಾರ್ಯರು ನಿರರ್ಗಳವಾಗಿ ಪಾಠ ಹೇಳುತ್ತಿದ್ದರೆನ್ನುವುದನ್ನು ಗಮನಿಸಿದಾಗ ಅವರ ಪ್ರಖರ ಪಾಂಡಿತ್ಯದ ಅರಿವು ನಮಗೆ ಆಗಬಹುದು.

ಅನೇಕ ಶಾಸ್ತ್ರಗಳಲ್ಲಿ ಅದ್ವಿತೀಯ ವಿದ್ವತ್ತನ್ನು ಪಡೆದಿದ್ದ ಶ್ರೀನಿವಾಸಾಚಾರ್ಯರು ಸಹಜವಾಗಿ ಸಂಸ್ಕೃತಭಾಷೆಯ ಮೇಲೆ ಅಧಿಕ ಮೋಹವನ್ನೂ, ಪ್ರಾಕೃತ ಭಾಷೆಗಳ ಮೇಲೆ ತಿರಸ್ಕಾರವನ್ನೂ ತೋರಿಸುತ್ತಿದ್ದರು. ಮತ್ತು ವ್ರತನಿಯಮನಿಷ್ಠರಾಗಿ ಎಲ್ಲೂ ಭೋಜನಕ್ಕೆ ಹೋಗದೆ ಒಂದು ರೀತಿಯ ಶೀವಿಯನ್ನು ಬೆಳಸಿಕೊಂಡಿದ್ದರು. ಮನೆಯಲ್ಲೇ ವಿದ್ಯಾ ಕಾಂಕ್ಷಿಗಳಾದ ಅನೇಕ ಶಿಷ್ಯರಿಗೆ ಆಶ್ರಯ ಕೊಟ್ಟು ಪಾಠಪ್ರವಚನಾದಿಗಳನ್ನು ವೈಭವ ದಿಂದ ನಡೆಸುತ್ತಿದ್ದರು.

ಇದೇ ಸಮಯದಲ್ಲಿ ಭೃಗುಋಷಿಗಳ ಅಂಶಯುಕ್ತರೆಂದು ಪ್ರಸಿದ್ಧಿ ಪಡೆದಿರುವ ಶ್ರೀ ವಿಜಯದಾಸರು ದಾಸಸಾಹಿತ್ಯದಿಂದ ಮಧ್ವಶಾಸ್ತ್ರದ ತತ್ವಗಳನ್ನು ಪ್ರಚಾರ ಮಾಡುತ್ತಾ ಜನಗಳನ್ನು ಭಕ್ತಿಮಾರ್ಗಕ್ಕೆ ಕೊಂಡೊಯ್ಯುತ್ತ ಸಜ್ಜನರ ಭಕ್ತ್ಯಾದರಗಳಿಗೆ ಪಾತ್ರರಾಗಿದ್ದರು. ಅಪರೋಕ್ಷಜ್ಞಾನಿಗಳಾದ ಇವರು ತಮ್ಮ ಶಿಷ್ಯರಾದ ಗೋಪಾಲ ದಾಸರು, ಪಂಗನಾಮ ತಿಮ್ಮಣ್ಣದಾಸರು, ಮೋಹನದಾಸರು ಇವರಿಗೆ ಭಗವದಪರೋಕ್ಷ ವನ್ನುಂಟುಮಾಡಿಕೊಟ್ಟ ಮಹಾನುಭಾವರು. ಜನರು ಮಾಡುತ್ತಿದ್ದ ಶ್ರೀ ವಿಜಯ ರಾಯರ ಪ್ರಶಂಸೆ ಶ್ರೀನಿವಾಸಾಚಾರ್ಯರ ಕಿವಿಗೂ ಬೀಳುತ್ತಿತ್ತು. ಆದರೆ ಶಾಸ್ತ್ರಾಭ್ಯಾಸ ಮಾಡಿ ಪಾಂಡಿತ್ಯವನ್ನು ಸಂಪಾದಿಸದ ದಾಸರ ಮೇಲೆ ಶ್ರೀನಿವಾಸಾಚಾರ್ಯರಿಗೆ ತಾತ್ಸಾರ. ಬಹಿರಂಗವಾಗಿಯೇ 'ಈ ಕೂಸಿಮುಗ ದಾಸನ ವಿದ್ಯವೇನು, ಸಾಧನವೇನು, ಜ್ಞಾನ ವೇನು, ಅಪರೋಕ್ಷವೆಂದರೇನು?' ಎಂದು ಕ್ಷುದ್ರನುಡಿಗಳಿಂದ ಅವಹೇಳನ ಮಾಡು ತ್ತಿದ್ದರು.

ಒಂದು ದಿನ ಶ್ರೀ ವಿಜಯದಾಸರು ಮಾನವಿಗೆ ಬಂದು ಎಂದಿನಂತೆ ಹರಿಕೀರ್ತನೆ ಗಳನ್ನು ಹಾಡುತ್ತಾ ಗೋಪಾಳಕ್ಕೆ ಹೊರಟು ಶ್ರೀನಿವಾಸಾಚಾರ್ಯರ ಮನೆಯ ಮುಂದೂ ಹೋಗಿ ಗೋಪಾಳ ಬುಟ್ಟಿಯನ್ನು ಭಿಕ್ಷೆಗಾಗಿ ಮುಂದೆ ಚಾಚಿದರು. ಶ್ರೀನಿವಾಸಾ ಚಾರ್ಯರು ತಿರಸ್ಕಾರದಿಂದಲೇ ಶಿಷ್ಯನೊಬ್ಬನನ್ನು ಕರೆದು ದಾಸರಿಗೆ ಭಿಕ್ಷೆ ಹಾಕಿ ಕಳಿಸು ವಂತೆ ಹೇಳಿದರು. ಶ್ರೀ ವಿಜಯದಾಸರು ಅಷ್ಟಕ್ಕೇ ಬಿಡದೆ, ಆಚಾರ್ಯರಿಗೆ ಆ ದಿನ ತಮ್ಮಲ್ಲಿಗೆ ಭೋಜನಕ್ಕೆ ಬಂದು ಹರಿಪ್ರಸಾದವನ್ನು ಸ್ವೀಕರಿಸಬೇಕೆಂದು ಆಮಂತ್ರಣ ವಿತ್ತರು. ದಾಸರ ಹೆಸರನ್ನು ಕೇಳಲೂ ಸಹನೆಯಿರದ ಶ್ರೀನಿವಾಸಾಚಾರ್ಯರು ಹೊಟ್ಟೆ

ನೋವಿನ ನೆವವನ್ನು ಹೇಳಿ ಭೋಜನಕ್ಕೆ ಬರಲಾಗುವುದಿಲ್ಲವೆಂದು ತಿಳಿಸಿದರು. ದಾಸರು ಹೋದನಂತರ ತಮ್ಮಂತಹ ಆಢ್ಯರನ್ನು ಊಟಕ್ಕೆ ಕರೆಯುವ ಅಹಂಕಾರವನ್ನು ತೋರಿಸಿದ ರೆಂದು ದಾಸರನ್ನು ಜರಿದು ಶಿಷ್ಯವೃಂದದಲ್ಲಿ ಅವಹೇಳನ ಮಾಡಿದರು.

ಶ್ರೀ ವಿಜಯರಾಯರ ಶಿಷ್ಯಶ್ರೇಷ್ಠರಾದ ಶ್ರೀ ಗೋಪಾಲದಾಸರಿಗೆ ಶ್ರೀನಿವಾಸಾ ಚಾರ್ಯರು ಗುರುಗಳಿಗೆ ಮಾಡಿದ ಅಪಚಾರ ತಿಳಿದು ಬಲು ವ್ಯಸನವಾಯಿತು. ಸ್ವೋತ್ತಮರೂ ಮಹಾಜ್ಞಾನಿಗಳೂ ಆದ ಭಗವದ್ಭಕ್ತರು ಆದರದಿಂದ ಭೋಜನಕ್ಕೆ ಕರೆದಾಗ ಹೊಟ್ಟೆಯನೋವೆಂದು ಸುಳ್ಳಾಡಿ ಘೋರಪಾತಕವನ್ನೆಸಗಿದ ಶ್ರೀನಿವಾಸಾ ಚಾರ್ಯರಿಗೆ ಹೊಟ್ಟೆಯ ಶೂಲೆ ನಿಜವಾಗಿಯೂ ಬಾಧಿಸತೊಡಗಿತು. ಜೊತೆಗೆ ಕ್ಷಯ ರೋಗವೂ ಪೀಡಿಸಲಾರಂಭಿಸಿತು. ಅನೇಕ ಔಷಧೋಪಚಾರಗಳನ್ನು ನಡೆಸಿದರೂ ರೋಗ ಗುಣಮುಖವಾಗುವ ಸೂಚನೆ ಕಾಣಲಿಲ್ಲ. ತಾಯಿಯೊಡನೆ ತಿರುಪತಿಗೆ ಮತ್ತು ಘಟಿಕಾಚಲಕ್ಕೆ ಹೋಗಿ ಶ್ರೀ ಹರಿವಾಯುಗಳ ಸೇವೆ ಮಾಡಿದರೂ ಫಲವಾಗದೇ ಮಂತ್ರಾಲಯಕ್ಕೆ ಬಂದು ಪರಮಕರುಣಾಳುಗಳಾದ ಶ್ರೀ ರಾಘವೇಂದ್ರ ಸ್ವಾಮಿಗಳ ಸೇವೆ ಮಾಡಲಾರಂಭಿಸಿದರು.

ಒಂದು ದಿನ ರಾಯರು ಶ್ರೀನಿವಾಸಾಚಾರ್ಯರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಭಗವದ್ಭಕ್ತರ ಅವಹೇಳನ ಮಾಡಿದುದರಿಂದ ಬಂದ ಈ ಘೋರವ್ಯಾಧಿ ಅವರ ಅನುಗ್ರಹ ದಿಂದಲೇ ತೊಲಗಬೇಕಾಗಿರುವುದರಿಂದ ಶ್ರೀ ವಿಜಯದಾಸರಲ್ಲಿಗೇ ಹೋಗಿ ಕ್ಷಮಾಯಾಚನೆ ಮಾಡಬೇಕೆಂದು ಸೂಚಿಸಿದರು. ಅದರಂತೆ ರೋಗ ಜರ್ಜರಿತರಾಗಿದ್ದ ಆಚಾರ್ಯರು ಬಹು ನಿಃಶಕ್ತರಾಗಿದ್ದರೂ ಶ್ರೀ ವಿಜಯದಾಸರ ಅನುಗ್ರಹ ಪಡೆಯಬೇಕೆಂದು ಹಂಬಲದಿಂದ ಚೀಕಲಪರವಿಗೆ ಹೋದರು. ಅಲ್ಲಿ ಶ್ರೀ ವಿಜಯದಾಸರನ್ನು ಕಂಡು ಭಕ್ತಿಭಾವದಿಂದ ಸಾಷ್ಟಾಂಗ ನಮಸ್ಕಾರಮಾಡಿ ಉದ್ಧಾರಮಾಡಬೇಕೆಂದು ಪ್ರಾರ್ಥಿಸಿದರು. ಶ್ರೀ ವಿಜಯ ದಾಸರು, ಅವರ ಉದ್ಧಾರಕರು ಶ್ರೀ ಭಾಗಣ್ಣದಾಸರೆಂದೂ ಅವರಲ್ಲಿಯೇ ಕ್ಷಮೆ ಕೇಳಿ ಉದ್ಧಾರವಾಗಬೇಕೆಂದು ಆಜ್ಞಾಪಿಸಿದರು. ಅದರಂತೆ ಶ್ರೀನಿವಾಸಾಚಾರ್ಯರು ಉತ್ತ ನೂರಿನಲ್ಲಿದ್ದ ಭಾಗಣ್ಣದಾಸರನ್ನು ಕಂಡು ಸಾಷ್ಟಾಂಗವೆರಗಿ ಸರ್ವಾಪರಾಧಗಳನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಶ್ರೀನಿವಾಸಾಚಾರ್ಯರ ರೋಗಕ್ಕೆ ಚಿಕಿತ್ಸೆಯನ್ನು ಮಾಡಲು ಮೊದಲೇ ಗುರುಗಳ ಆಜ್ಞೆಯನ್ನು ಪಡೆದಿದ್ದ ಅಪರೋಕ್ಷಜ್ಞಾನಿಗಳಾದ ಶ್ರೀ ಗೋಪಾಲದಾಸರು ಅತಿಕರುಣೆಯಿಂದ ಚಿಕಿತ್ಸೆಯನ್ನಾರಂಭಿಸಿದರು. ಅವರು ಮಾಡಿ ದುದೂ ಅತಿ ವಿಚಿತ್ರವಾದ ಚಿಕಿತ್ಸೆ. ಸ್ನಾನಾದಿಗಳನ್ನು ಮಾಡಿ ಪರಿಶುದ್ಧರಾದ ಶ್ರೀನಿವಾಸಾ ಚಾರ್ಯರಿಗೆ ನರಸಿಂಹಮಂತ್ರವನ್ನು ಉಪದೇಶಿಸಿ ಎರಡು ಜೋಳದ ಭಕ್ರಿಗಳನ್ನು ಮಾಡಿಸಿ ತಮ್ಮ ಯೋಗಶಕ್ತಿಯಿಂದ ಅಭಿಮಂತ್ರಿಸಿ ತಿನ್ನಲು ಕೊಟ್ಟರು. ಅನಂತರ ಭಗವದನು ಗ್ರಹದಿಂದ ಜ್ಞಾನಭಕ್ತಿವೈರಾಗ್ಯಗಳು ವೃದ್ಧಿಯಾಗಲು ಮತ್ತು ಆಯುಷ್ಯ ವೃದ್ಧಿಯಾಗಲು ಶ್ರೀ ಧನ್ವಂತ್ರಿ ದೇವರನ್ನು ಪ್ರಾರ್ಥಿಸಿದರು.

**ರಾಗ—ಮೋಹನ, ಝಂಪೆತಾಳ**

ಎನ್ನ ಬಿನ್ನಪ ಕೇಳು ಧನ್ವಂತ್ರಿ ದಯಮಾಡು |
ಸಣ್ಣವನು ಇವ ಕೇವಲ ||
ಬನ್ನಬಡಿಸುವ ರೋಗವನ್ನು ಮೋಚನಮಾಡಿ |
ಚೆನ್ನಾಗಿ ಪಾಲಿಸುವದೊ ವಿಭುವೆ ||ಪ||

ಆರೋಗ್ಯ ಆಯುಷ್ಯ ಐಶ್ವರ್ಯವೆಂಬೊವಿವು |
ಮೂರು ವಿಧ ವಸ್ತುಗಳು
ನಾರಾಯಣನ ಭಜಕರಾದವರ ಸಾಧನಕೆ | ಪೂರಣವಾಗಿಪ್ಪವೊ |
ಘೋರವ್ಯಭಿಚಾರ ಪರನಿಂದೆ ವಿತ್ತಾಪ
ಹಾರ ಮಾಡಿದ ದೋಷದಿ |
ದಾರಿದ್ರರಾಗುವರು ಈ ಮೂರುವಿಧದಿಂದಲಿ |
ಕಾರಣನೆ ನೀನು ದುಷ್ಕರ್ಮ ಪರಿಹರಿಸುವದು ಸ್ವಾಮಿ ||೧||

ವಸುಮತಿಯ ಮೇಲಿನ್ನು ಅಸುರಜನರೇ ಬಹಳ |
ವಶವಲ್ಲ ಕಲಿಯ ಬಾಧೆ |
ಬಿಸಿಲಿಂದ ಪೀಡಿತವಾದ ಸಸಿಗಳಂತೆ | ಶಿಶುಗಳು ನಾವಿಪ್ಪೆವೋ |
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು
ಕುಶಲದಲಿ ಪಾಲಿಸುವುದು ||
ಕೆಸರಿಂದ ಕೆಸರ ತೊಳೆದಂತೆ ಕರ್ಮದ ಪಥವು |
ಅಸುನಾಥ ಹರಿಯೆ ಪೊರೆಯೊ ಸ್ವಾಮಿ ||೨||

ಅನ್ಯರನು ಭಜಿಸದಲೆ ನಿನ್ನನ್ನೇ ತುತಿಸುತ್ತ |
ನಿನ್ನ ಚಿನ್ಹೆಗಳ ಧರಿಸೀ |
ನಿನ್ನವರವನು ಎನಿಸಿ ನಿನ್ನ ನಾಮೋಚ್ಚರಿಸಿ |
ನಿನ್ನಿಂದ ಉಪಜೀವಿಸಿ
ಅನ್ನ ಆರೋಗ್ಯಕ್ಕೆ ಅಲ್ಪ ಜೀವಿಗಳಿಗೆ |
ಇನ್ನು ಅಲ್ಪರಿಯಬೇಕೇ |
ನಿನ್ನ ಸಂಕಲ್ಪ ಭಕ್ತರನು ಪೋಷಿಪೆನೆಂಬ
ಘನ್ನ ಬಿರುದನ್ನು ಉಳಹೋ ಸಲಹೋ ||೩||

ಆಧಿವ್ಯಾಧಿಗಳು ಉನ್ಮಾದ ವಿಭ್ರಮ ನಾನಾ
ಬಾಧೆಗೌಷಧವು ನೀನೆ |
ಹೇ ದೇವ ನಿನ್ನ ಕರಕಲಶ ಸುಧೆಯನು ಎರೆದು
ಸಾಧುಗಳ ಸಂತೈಸುವಿ ||

ಮೋದಪಡಿಸುವಿ ನಿನ್ನ ಸಾಧಿಸುವರಿಗೆ ಶು |
ಭೋದಯಂಗಳನು ನೀಡಿ |
ಆದರಿಸಿ ಇವಗೆ ತವ ಪಾದ ಧ್ಯಾನವನಿತ್ತು
ಸಾಧುಗಳೊಳಗಿಟ್ಟು ಮೋದಕೊಡು ಸರ್ವಪ ||೪||

ನಿನ್ನವರಲ್ಲಿವಗೆ ಇನ್ನು ರತಿಯನು ಕಂಡು
ನಿನ್ನವನೆಂದು ಅರಿದು
ನಿನ್ನನಾ ಪ್ರಾರ್ಥಿಸಿವೆ ಅನ್ಯರಿಗೆ ಅಲ್ಪರಿಯೆ |
ಎನ್ನ ಪಾಲಿಸುವ ಧೊರೆಯೆ
ಎನ್ನ ಮಾತಲ್ಲವಿದು ಎನ್ನ ಪಿರಿಯರ ಮಾತು
ಮನ್ನಿಸಬೇಕು ಕರುಣಿ |
ಅನ್ನಂತಗುಣಪೂರ್ಣ ಗೋಪಾಲವಿಠಲ
ಇನ್ನಿವನೆ ಲಾಲಿಸಯ್ಯಾ ಜೀಯಾ ||೫||

ಹೀಗೆ ಐದು ನುಡಿಗಳಿಂದ ಚಂದ್ರಮಂಡಲಾಂತರ್ಗತನೂ, ಅಮೃತಕಲಶವನ್ನು ಕೈಯಲ್ಲಿ ಧರಿಸಿ ಆರ್ತರಾದ ಭಕ್ತರಿಗೆ ಪ್ರಸನ್ನನಾಗಿ ಆಯುಷ್ಯ-ಆರೋಗ್ಯಾದಿಗಳನ್ನು ಕೊಡುವವನೂ ಆದ ಶ್ರೀ ಧನ್ವಂತರಿಯನ್ನು ಪ್ರಾರ್ಥಿಸಲು ಶ್ರೀನಿವಾಸಾಚಾರ್ಯರ ಹೊಟ್ಟೆಶೂಲೆ, ಕ್ಷಯರೋಗಗಳು ನಿಃಶೇಷವಾಗಿ ಪರಿಹಾರವಾದವು. ಇದೇ ಸಮಯದಲ್ಲಿ ಶ್ರೀ ಗೋಪಾಲದಾಸರು ತಮ್ಮ ಗುರುಗಳ ಆಜ್ಞೆಯಂತೆ ಸ್ವೋತ್ತಮರ ನಿಂದೆ ಮಾಡಿ ಆಯುಷ್ಯವನ್ನೆಲ್ಲ ಕಳೆದುಕೊಂಡಿದ್ದ ಶ್ರೀನಿವಾಸಾಚಾರ್ಯರಿಗೆ ತಮ್ಮ ಆಯುಷ್ಯದಿಂದ ೪೦ ವರ್ಷ ಆಯುಸ್ಸನ್ನು ದಾನ ಮಾಡಿದರು. ಶ್ರೀನಿವಾಸಾಚಾರ್ಯರು ಮೊದಲಿನಂತೆ ದೇಹದ ಆರೋಗ್ಯವನ್ನೂ ತೇಜಸ್ಸನ್ನೂ ಗಳಿಸಿದರು.

ಕೆಲವು ಸಮಯದನಂತರ ಶ್ರೀ ಗೋಪಾಲದಾಸರು ಎಂದಿನಂತೆ ತಿರುಪತಿಯ ಯಾತ್ರೆಗೆ ಹೊರಟಾಗ ಅವರ ಶಿಷ್ಯರ ಜೊತೆಗೆ ಶ್ರೀನಿವಾಸಾಚಾರ್ಯರೂ ಹೊರಟರು. ಏಕಭುಕ್ತ ಮೊದಲಾದ ನಿಯಮಗಳಿಂದ ಪ್ರಯಾಣಮಾಡಿ ಬೆಟ್ಟವನ್ನೇರಿದ ಆಚಾರ್ಯರಿಗೆ ತುಂಬಾ ಆಯಾಸವಾಯಿತಂತೆ. ಅವರು ಹಸಿವು-ಶ್ರಮಗಳಿಂದ ಬಳಲುತ್ತಿರುವುದನ್ನು ನೋಡಿ ಶ್ರೀ ಗೋಪಾಲದಾಸರು ಆಹಾರವನ್ನೇನಾದರೂ ತಂದುಕೊಟ್ಟರೆ ಅವರ ಬಳಲಿಕೆ ಕಡಿಮೆಯಾಗಬಹುದೆಂದು ಚಿಂತಿಸಿ ಆಹಾರವನ್ನು ತರಲು ಹೋದರು. ಅವರು ಹೋದ ಕೂಡಲೇ ಶ್ರೀಹರಿ ಗೋಪಾಲದಾಸರ ವೇಷವನ್ನು ಧರಿಸಿ ಅಮೃತಸದೃಶ ನೈವೇದ್ಯವನ್ನು ಶ್ರೀನಿವಾಸಾಚಾರ್ಯರಿಗೆ ತಂದು ಒಡಿಸಿ ಅದೃಶ್ಯನಾದನು. ಅನತಿಕಾಲದಲ್ಲೇ ಶ್ರೀ ಗೋಪಾಲದಾಸರು ಹೊರಗಿನಿಂದ ಆಹಾರವನ್ನು ತಂದು ಆಚಾರ್ಯರನ್ನು ಭೋಜನ ಕ್ಕೇಳಲು ಹೇಳಿದಾಗ ಅವರು ಪರಮ ವಿಸ್ಮಯದಿಂದ ಈಗ ತಾನೇ ಊಟಮಾಡಿಸಿ ಪುನಃ ಒತ್ತಾಯ ಮಾಡುತ್ತಿರುವುದೇಕೆಂದು ಕೇಳಿದರು. ಆಗ ಶ್ರೀ ಗೋಪಾಲದಾಸರು ತಮ್ಮ

*

ಜ್ಞಾನದೃಷ್ಟಿಯಿಂದ ಶ್ರೀಹರಿಯೇ ತಮ್ಮ ರೂಪದಿಂದ ಬಂದುದನ್ನು ತಿಳಿದು ರೋಮಾಂಚಿತರಾಗಿ ಶ್ರೀನಿವಾಸಾಚಾರ್ಯರ ಭಾಗ್ಯವನ್ನು ಕೊಂಡಾಡಿದರು. ಶ್ರೀನಿವಾಸಾಚಾರ್ಯರ ಆನಂದಕ್ಕಂತೂ ಪಾರವೇ ಇರಲಿಲ್ಲ. ತಾವೂ ದಾಸಪಂಥಕ್ಕೆ ಸೇರಿ ಹರಿದಾಸರಾಗಬೇಕೆಂಬ ಉತ್ಕಟೇಚ್ಛೆಯಿಂದ ಗೋಪಾಲದಾಸರನ್ನು ತಮಗೆ ದಾಸದೀಕ್ಷೆಯನ್ನಿತ್ತು ಅಂಕಿತವನ್ನು ದಯಪಾಲಿಸಬೇಕೆಂದು ಬೇಡಿದರು. ಅದಕ್ಕೆ ಗೋಪಾಲದಾಸರು ಆಚಾರ್ಯರಿಗೆ ವಿಠ್ಠಲನೇ ಅಂಕಿತವನ್ನು ಕೊಡುವನೆಂದು ಪಂಡರಪುರಕ್ಕೆ ಕಳಿಸಿದರು.

ಪಂಡರಪುರದಲ್ಲಿ ಆಚಾರ್ಯರು ಚಂದ್ರಭಾಗಾನದಿಯಲ್ಲಿ ಸ್ನಾನ ಮಾಡಿ ಮೇಲೇಳುತ್ತಿರುವಾಗ ಅವರ ಕೈಗೆ ಶಿಲೆಯೊಂದು ತಡವಿತು. ಅದನ್ನು ನೋಡಿದಾಗ ಅವರಿಗೆ "ಶ್ರೀ ಜಗನ್ನಾಥ ವಿಠ್ಠಲ" ಎಂಬ ಮಂಗಳಕರಗಳಾದ ಅಕ್ಷರಗಳು ಕಂಡವು. ಶ್ರೀ ಹರಿ ಈ ಬಗೆಯಿಂದ ತಮಗೆ ಅಂಕಿತವನ್ನು ಕೊಟ್ಟನೆಂದು ತಿಳಿದ ಅವರ ಕಣ್ಣಲ್ಲಿ ಆನಂದಾಶ್ರುಗಳು ಸುರಿದವು. ಭಕ್ತಿಪುಳಕಿತರಾಗಿ ಸ್ಫೂರ್ತಿಯಿಂದ ತಮ್ಮ ಆರಾಧ್ಯದೈವ ಶ್ರೀ ಲಕ್ಷ್ಮೀನರಸಿಂಹನನ್ನು ಸ್ತೋತ್ರಮಾಡಿದರು.

ರಾಗ ಮಧ್ಯಮಾವತಿ—ಅಟ್ಟತಾಳ

ಪಿಡಿ ಎನ್ನ ಕೈಯ್ಯ । ರಂಗಯ್ಯ । ಪಿಡಿ ಎನ್ನ ಕೈಯ್ಯ ||ಪ||
ಪಿಡಿ ಎನ್ನ ಕೈಯ್ಯ ಪಾಲ್ಗಡಲಶಯನ ಮೋಹ ।
ಮಡುವಿನೋಳ್ಬಿದ್ದು ಬಾಯ್ಬಿಡುವೆ ಬೇಗನೆ ಬಂದು ||ಅ.ಪ||

ನೀರಜನಾಭ । ನಂಬಿದೆ ನಿನ್ನ । ನೀರಪ್ರದಾಭ ।
ಕಾರುಣ್ಯನಿಧೆ ಲಕ್ಷ್ಮಿ । ನಾರಸಿಂಹನೆ ಪರಿ ।
ವಾರಸಹಿತ ಈ ಶ । ರೀರದೊಳಡಗಿರ್ದು ।
ಘೋರತರ ಸಂಸಾರ ಪಂಕದಿ । ಚಾರುವರಿವನ ದೂರ ನೋಡದೆ ।
ಹೇ ರಮಾಪತೆ ಗಾರು ಮಾಡದೆ । ಚಾರುವಿಮಲ ಕರಾರವಿಂದದಿ ||೧||

ಅನಿಮಿತ್ತ ಬಂಧು । ನೀನೇ ಗತಿ । ಗುಣಗಣಸಿಂಧು ||
ಅನಘ ಸೇವಿಸುವೆನೊ ವಿಧಿಭವಸಂಕ್ರಂ ।
ದನ ಮುಖ್ಯ ದೇವ ಸನ್ಮುನಿಗಣಾರ್ಚಿತ ಪಾದ ||
ಅನುಜ ತನುಜಾಗ್ರಜ ಸದಾನುಗ । ಜನನಿಜನಕರು ಪಶು ಕೃಷಿಧನ ।
ಘನಸದನ ಸಂಹನನ ಮೊದಲಾ । ದಿನಿತು ಸಾಕುವ ಘನತೆ ನಿನ್ನದು ||೨||

ಶ್ರೀ ಜಗನ್ನಾಥ ವಿಠ್ಠಲ ದ್ವಿಜ । ರಾಜವರೂಥ ||
ಓಜಕಾಮಿತ ಕಲ್ಪ ಭೂಜ ಭಾಸ್ಕರಕೋಟಿ ।
ತೇಜ ಮನ್ಮನದಿ ವಿರಾಜಿಸು ಪ್ರತಿದಿನ ||
ಈ ಜಗತ್ರಯ ಭಾಜನನೆ ಬಲು । ಸೋಜಿಗವೆಲಾ ನೈಜನೇ ನಿ ||
ರ್ವ್ಯಾಜದಿಂದಲಿ ನೀ ಜಯಪ್ರದ । ನೈಜ ಜನರಿಗೆ ಹೇ ಜಗತ್ಪತೆ ||೩||

ಕೂಡಲೇ ಫಂಡರಿರಾಯನ ದರ್ಶನವನ್ನು ಮಾಡಬೇಕೆಂಬ ತವಕದಿಂದ

"ಎಂದು ಕಾಂಬೆನೊ ಪಾಂಡುರಂಗ ಮೂರುತಿಯ |
ಇಂದುಭಾಗನಿವಾಸ ನರನ ಸಾರಥಿಯ || "

ಎಂದು ಹಾಡುತ್ತಲೇ ದೇವಾಲಯಕ್ಕೆ ಹೋದರು.

ದೇವರನ್ನು ನೋಡಿ ಮೈಮರೆತು

ಕಂಡೆ ಫಂಡರಿರಾಯನ | ಶ್ರೀ ಮಾನಿನಿ ಪ್ರೀಯನ |

ಎಂದು ಕುಣಿದಾಡಿದರು. ಇವರ ಅಪ್ರತಿಮ ಭಕ್ತಿಗೆ ಮೆಚ್ಚಿ ದರ್ಶನ ಕೊಟ್ಟ ಕೋಟಿ-ಸೂರ್ಯ ಪ್ರಕಾಶಮಾನನಾದ ಪಾಂಡುರಂಗ ವಿಠ್ಠಲನನ್ನು ಕಂಡು—

ತಟಿತ್ಕೋಟಿನಿಭ ಕಾಯ ಜಗನ್ನಾಥ ವಿಠಲಯ್ಯ | ವಿಠಲಯ್ಯ ||ಪ||
ಭಜಿಸುವೆ ನಿನ್ನನು | ಅಜ ಭವ ಸುರನುತ | ಭಜಕಾಮರತರು |
ಕುಜನ ಕುಠಾರ ||೧||
ನೀ ಕರುಣಿಸದೆ ನಿರಾಕರಿಸಲು ಎನ್ನ | ಸಾಕುವರಾರೊ ದ | ಯಾಕರ
ಮೂರುತಿ ||೨||
ಶರಣಾಗತರನು ಪೊರೆವೆನೆಂಬೊ ತವ | ಬಿರುದು ಕಾಣೋ ಕರಿ | ವರದ
ಜಗನ್ನಾಥ | ವಿಠಲಯ್ಯಾ ||೩||

ಎಂದು ಭಾವಪೂರ್ವಕವಾಗಿ ಹಾಡಿದರು. ಇದೇ ಸಮಯದಲ್ಲಿ ಅವರು

ರಾಗ ಧನ್ಯಾಸಿ—ಆದಿತಾಳ

ಧನ್ಯನಾದೆ ವಿಠಲನ ಕಂಡು | ಓಡಿತು ಅಘದ್ವಿಂಡು ||ಪ||
ಧನ್ಯನಾದೆನು ಜಾನ್ಹವಿಪಿತ ಲಾ | ವಣ್ಯ ಮೂರ್ತಿಯ ಕಣ್ಣಲ್ಲಿ ಕಂಡು ||ಅ.ಪ||
ದೇವವರೇಣ್ಯ ಸದಾವಿನೋದಿ ವೃಂ | ದಾವನ ಸಂಚರ ಗೋವನ ಕಂಡು ||೧||
ಮಂಗಳಾಂಗ ಕಾಳಿಂಗ ಮರ್ದನ ಮಾ | ತಂಗ ವರವರದ ರಂಗನ ಕಂಡು ||೨||
ಹಾಟಕಾಂಬರ ಕಿರೀಟಿ ಸಾರಥಿ | ತಾಟಕಾರಿ ವೈರಾಟನ ಕಂಡು ||೩||
ಚಿಂತಿತಫಲದ ಕೃತಾಂತನಾತ್ಮಜಾ | ದ್ಯಂತ ರಹಿತ ನಿಶ್ಚಿಂತನ ಕಂಡು ||೪||
ಮಾತುಳಾಂತಕ ಧಾತ ಪಿತ ಜಗ | ನ್ನಾಥ ವಿಠಲನ ವಿಖ್ಯಾತನ ಕಂಡು ||೫||

ಎನ್ನುವ ಕೀರ್ತನೆಯನ್ನೂ

ಪಾಲಿಸೊ ಫಂಡರಿ ಪುರಿರೇಯ | ಪಾವನಕಾಯ |
ಭೀಮರಥಿಕುಲ ನಿಲಯ ||ಪ||

ಎಂಬ ಪಾಂಡುರಂಗಪಾರಿಜಾತವನ್ನೂ ಹಾಡಿದರು. ಒಟ್ಟಿಗೆ ರಚಿತವಾದ ಈ ಐದು ಕೀರ್ತನೆಗಳು ಪಂಚರತ್ನ ಕೀರ್ತನೆಗಳೆಂದು ಪ್ರಸಿದ್ಧವಾಗಿವೆ.

ಶ್ರೀ ಜಗನ್ನಾಥದಾಸರು ಪಂಡರಪುರವನ್ನು ಬಿಟ್ಟು ಗುರುಗಳಾದ ವಿಜಯದಾಸರ ದರ್ಶನಮಾಡಿ, ಅವರು ತಮ್ಮಲ್ಲಿ ಮಾಡಿದ ಪರಮಾನುಗ್ರಹವನ್ನು ನೆನೆದು

ರಾಗ ಬಿಲಹರಿ—ಛಾಪು ತಾಳ

ರತುನ ದೊರಕಿತಲ್ಲಾ | ಎನಗೊಂದು ದಿವ್ಯ | ರತುನ ದೊರಕಿತಲ್ಲ ||ಪ||

ರತುನ ದೊರಕಿತು ಎನ್ನ ಜನ್ಮ ಪ | ವಿತ್ರವಾಯಿತು ಇಂದಿನ ದಿನ |
ಯತನಗೈಯುತ ಬರುತಲಿರೆ ಪ್ರ | ಯತನ ಮಾಡದೆ ವಿಜಯರಾಯರೆಂಬ ||ಅ.ಪ||

ಪಥದಿ ನಾ ಬರುತಿರಲು | ಥಳಥಳವೆಂದು |
ಅತಿಕಾಂತಿ ಝುಳಪಿಸಲು | ಬೆರಗಾಗುತ |
ಅತಿ ಚೋದ್ಯವ ಕಾಣಲು | ಸೇವಿಸುತಿರೆ ||
ಸತತ ಕರ ಪಿಡಿದಾದರಿಸಿ ಮನೋ | ರಥವ ಪೂರೈಸುತಲಿ ಎನಗೆ ಸ |
ನ್ಮತಿಯ ಪಾಲಿಸಿ ಮೋಕ್ಷ ಪಥವನೆ | ಅತಿಶಯದಲಿ ತೋರುತಲಿ ಮೆರೆಯುವ ||೧||

ಜ್ಞಾನವೆಂಬೋ ಪುತ್ಥಲಿ | ಕಂಬಿಯಲಿ |
ಆಣಿಮುತ್ತಿನ ಭಕ್ತಿಲಿ | ಸುಕೃತಮಾಲಾ |
ನಾನಾವಿಧ ಹವಳದಲಿ ಯೋಜಿಸುತಿರೆ ||
ಪ್ರಾಣಪದಕವೆಂಬ ಮಾಲೆನು | ಮಾನವಿಲ್ಲದೆ ಕೊರಳಿಗ್ಹಾಕುತ |
ಗಾನದಿಂದಲಿ ಕುಣಿದು ಪಾಡುತ | ದೀನ ಜನರುದ್ಧಾರ ಗೈಯ್ಯುವ ||೨||

ಶೋಧಿಸಿ ಗ್ರಂಥಗಳ | ಸುಳಾದಿಯ |
ಮೋದದಿಂದಲಿ ಬಹಳ | ಕವಿತೆಮಾಡಿ |
ಸಾಧುಜನಕೆ ಸುಕಾಲ | ಆನಂದವಿತ್ತು ||
ವಾದಿಜನರನು ಗೆದ್ದು ವಾದದಿ | ಮಾಧವ ಜಗನ್ನಾಥ ವಿಠಲನ |
ಪಾದಕಮಲಕೆ ಮಧುಪನಂದದಿ | ಸಾದರದಿ ತೋರುತಲಿ ಮೆರೆಯುವ ||೩||

ಎಂದು ಹಾಡಿ ಹೊಗಳಿದರು.

ಶ್ರೀ ಗೋಪಾಲದಾಸರು ತಮ್ಮಲ್ಲಿ ತೋರಿದ ಅವ್ಯಾಜವಾದ ಅಂತಃಕರಣ— ಅನುಗ್ರಹಗಳನ್ನು ಸ್ಮರಿಸುತ್ತ

ರಾಗ ಮೋಹನ—ಆದಿತಾಳ

ಗೋಪಾಲದಾಸರಾಯ | ನಿನ್ನಯ ಪಾದ | ನಾ ಪೊಂದಿದೆನೊ ನಿಶ್ಚಯ ||ಪ||

ಈ ಪೀಡಿಸುವ ತ್ರಯ | ತಾಪಗಳೋಡಿಸಿ
ಕೈಪಿಡಿದೆನ್ನನು ನೀ ಪಾಲಿಸನುದಿನ ಜೀಯಾ ||ಅ.ಪ.||

ಘೋರವ್ಯಾಧಿಗಳ ನೋಡಿ | ವಿಜಯ ರಾಯ | ಭೂರಿಕರುಣವನೆ ಮಾಡಿ ||

ತೋರಿದರಿವರೆ ಉ | ದ್ಧಾರಕರೆಂದಂದಿ |
ನಾರಭ್ಯ ತವ ಪಾದ | ಸಾರಿದೆ ಸಲಹೆಂದು ||
ಸೂರಿಜನ ಸಂಪ್ರೀಯ ಸುಗುಣೋ | ದ್ಧಾರ ದುರುಳನ ದೋಷನಿಚಯವ ||
ದೂರಗೈಸಿ ದಯಾಂಬುಸಿಧೆ ಸಿ | ವಾರಿಸಿವೆ ಕರ ಪಿಡಿದು ಬೇಗದಿ ||೧||

ಅಪಮೃತ್ಯುವನು ತರಿದೆ | ಎನ್ನೊಳಗಿದ್ದ | ಅಪರಾಧಗಳ ಮರೆವೆ ||
ಚಪಲಚಿತ್ತನಿಗೊಲಿದು | ವಿಪುಲಮತಿಯನಿತ್ತು |
ನಿಪುಣನೆಂದೆನಿಸಿದೆ | ತಪಸಿಗಳಿಂದಲಿ |
ಕೃಪಣವತ್ಸಲ ನಿನ್ನ ಕರುಣೆಗೆ | ಉಪಮೆಗಾಣೆನು ಸಂತತವು ಕಾ |
ಶ್ಯಪಿಯೊಳಗೆ ಬುಧರಿಂದ ಜಗದಾ | ಧಿಪನ ಕಿಂಕರನೆನಿಸಿ ಮೆರೆದೆ ||೨||

ಎನ್ನ ಪಾಲಿಸಿದಂದದಿ | ಸಕಲ ಪ್ರ | ಪನ್ನರ ಸಲಹೋ ಮೋದಿ ||
ಅನ್ಯರಿಗೀಪರಿ | ಬಿನ್ನಪ ಗೈಯೆ ಜ |
ಗನ್ನಾಥ ವಿಠಲನ | ಸನ್ನುತಿಸುವ ಧೀರ ||
ನಿನ್ನ ನಂಬಿದ ಜನರಿಗೀಪರಿ | ಬನ್ನವೇ ಭಕ್ತಾನುಕಂಪಿ ಶ |
ರಣ್ಯ ಬಂದೊದಗೀ ಸಮಯದಿ ಅ | ಹರ್ನಿಶಿ ಧ್ಯಾನಿಸುವೆ ನಿನ್ನನು ||೩||

ಎಂದು ಅವರನ್ನು ಕೊಂಡಾಡಿದರು.

ಶ್ರೀನಿವಾಸಾಚಾರ್ಯರು ಶ್ರೀ ಜಗನ್ನಾಥದಾಸರಾಗಿ ಮಾಡಿದ ಪವಾಡಗಳು ಅನೇಕ. ಒಮ್ಮೆ ಪಂಡರಪುರದಲ್ಲಿ ಶ್ರೀಹರಿಯೇ ಗೃಹಸ್ಥವೇಷದಿಂದ ಬಂದು ಇವರಿಗೆ ಭೋಜನ ಮಾಡಿಸಿದನಂತೆ. ದರಿದ್ರನೊಬ್ಬನ ದುರವಸ್ಥೆಯನ್ನು ನೋಡಿ ಕರುಣದಿಂದ ಅವನ ತಂಬಿಗೆ ಮಾರಿ, ಬಂದ ದ್ರವ್ಯದಿಂದ ಸಕ್ಕರೆ ಪಾನಕ ಮಾಡಿ ಬ್ರಾಹ್ಮಣರಿಗರ್ಪಿಸಿ "ದುರಿತವನಕುಠಾರ" ಎಂಬ ಸುಳಾದಿಯನ್ನು ರಚಿಸಿಕೊಟ್ಟು ಅವನ ದಾರಿದ್ರ್ಯವನ್ನು ಪರಿಹರಿಸಿದರಂತೆ. ಉಡುಪಿಯಲ್ಲಿ ಹರಿಕಥೆಯನ್ನು ಕೇಳುತ್ತಿದ್ದ ಮೂಕನೊಬ್ಬನೊಡನೆ ಸಂಭಾಷಣೆ ಮಾಡಿದರಂತೆ. ಸೋದೆಯಲ್ಲಿ ಯುವತಿಯೊಬ್ಬಳನ್ನು ಪೀಡಿಸುತ್ತಿದ್ದ ಬ್ರಹ್ಮ ರಾಕ್ಷಸನಿಗೆ ತಮ್ಮ ಪಂಚಪ್ರಾಣಾಹುತಿಯ ಒಂದರ ಅರ್ಧದಷ್ಟನ್ನು ದಾನಮಾಡಿ ಬ್ರಹ್ಮ ರಾಕ್ಷಸ ಜನ್ಮದಿಂದ ಮುಕ್ತಗೊಳಿಸಿದರಂತೆ. ಸರ್ಪದಿಂದ ಕಚ್ಚಲ್ಪಟ್ಟು ಮರಣಿಸಿದ್ದ ಒಬ್ಬನನ್ನು, ಸರ್ಪವು ವಿಷವನ್ನು ಹಿಂತೆಗೆದುಕೊಳ್ಳುವಂತೆ ಮಾಡಿ ಬದುಕಿಸಿದರಂತೆ. ಇದಕ್ಕಾಗಿ ಅವರಿಗೆ ಭೂದಾನವು ದೊರೆಯಿತು. ಮೈಸೂರಿನ ದಿವಾನರಾಗಿದ್ದ ಪೂರ್ಣಯ್ಯನವರು ದಾಸರ ಪಾಂಡಿತ್ಯವನ್ನೂ ಭಕ್ತಿಪರವಶತೆಯನ್ನು ಕಣ್ಣಾರೆ ಕಂಡು ರಾಜಮರ್ಯಾದೆ ಮಾಡಿದರಂತೆ. ಮಂತ್ರಾಲಯಕ್ಕೆ ಹೋದಾಗಲೆಲ್ಲ ಶ್ರೀರಾಯರ ಜೊತೆಗೆ ಸಂಭಾಷಣೆ ಯನ್ನು ನಡೆಸುತ್ತಿದ್ದರಂತೆ.

ಇಂತಹ ಪವಾಡಗಳು ಇನ್ನೂ ನೂರಾರು ನಡೆದಿರಬಹುದು. ಆದರೆ ಶ್ರೀ ಜಗನ್ನಾಥ ದಾಸರು ಮಾಡಿದ ಪರಮೋಪಕಾರವೆಂದರೆ ಅನೇಕ ಕೀರ್ತನೆಗಳನ್ನೂ ಸುಳಾದಿಗಳನ್ನೂ

ರಚಿಸಿರುವುದು. ಒಂದೊಂದು ಕೀರ್ತನೆಯೂ ಅವರಿಗಿದ್ದ ಅಗಾಧ ಸಂಗೀತಶಾಸ್ತ್ರದ ಜ್ಞಾನ, ವೇದಾಂತ ಶಾಸ್ತ್ರದ ಆಳವಾದ ಪರಿಚಯಕ್ಕೆ ನಿದರ್ಶನವಾಗಿರುವಂತೆಯೇ ಭಕ್ತಿ ರಸ ಪೂರ್ಣವಾಗಿ ಪಂಡಿತಪಾಮರರನ್ನು ತನ್ಮಯಗೊಳಿಸುತ್ತವೆ. ಶ್ರೀ ಮಧ್ವಮತದಲ್ಲಿ ಅವರಿಗಿರುವ ದೃಢವಾದ ದೀಕ್ಷೆ ಅವುಗಳಲ್ಲಿ ವ್ಯಕ್ತವಾಗುತ್ತದೆ.

ಶ್ರೀ ಜಗನ್ನಾಥದಾಸರ ಮೇರುಕೃತಿಯೆಂದರೆ ಶ್ರೀಮದ್ಧರಿಕಥಾಮೃತಸಾರ. ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಜರು, ಶ್ರೀ ವಾದಿರಾಜರು ಮತ್ತು ಶ್ರೀ ಪುರಂದರ ದಾಸರು ಸ್ವಪ್ನದಲ್ಲಿ ಬಂದು ಮಾಡಿದ ಪ್ರೇರಣೆಗನುಸಾರವಾಗಿ ರಚಿತವಾದ ದಿವ್ಯ ಗ್ರಂಥ ವಿದು. ಶ್ರೀ ಶ್ರೀದವಿಠ್ಠಲರು ಇದನ್ನು ತಮ್ಮ ಕೀರ್ತನೆಯಲ್ಲಿ ಸೂಚಿಸಿದ್ದಾರೆ.

> ವ್ಯಾಸತೀರ್ಥರ ಒಲುಮೆಯೋ ವಿಠಲೋಪಾಸಕ ಪ್ರಭುವರ್ಯ ಪುರಂದರ |
> ದಾಸರಾಯರ ದಯವೋ, ತಿಳಿಯದು ಓದಿ ಕೇಳದೆಲೆ ||
> ಕೇಶವನ ಗುಣಮಣಿಗಳನು ಪ್ರಾಣೇಶಗರ್ಪಿಸಿ ವಾದಿರಾಜರ |
> ಕೋಶಕೊಪ್ಪುವ ಹರಿಕಥಾಮೃತಸಾರ ||

ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠಕೃತಿಯೆಂದು ಪ್ರಖ್ಯಾತವಾಗಿರುವ, ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರುವ ಈ ಪದ್ಯಗ್ರಂಥ ದಾಸರ ಕವಿತಾಚಾತುರ್ಯವನ್ನು, ಭಗವಂತನಲ್ಲಿರುವ ಅನನ್ಯಭಕ್ತಿಯನ್ನು ಎತ್ತಿತೋರಿಸುತ್ತದೆ. ಉಪನಿಷತ್ತು, ಇತಿಹಾಸ, ಪುರಾಣ, ಶ್ರೀಮದಾಚಾರ್ಯರ ಸರ್ವಮೂಲ, ಟೀಕಾಟಿಪ್ಪಣಿಗಳು—ಇವುಗಳಲ್ಲಿ ಇರುವ ಪ್ರಮೇಯ ರಹಸ್ಯಗಳನ್ನು ಕ್ರೋಢೀಕರಿಸಿ ಕೊಡುವ ಶ್ರೀಹರಿಕಥಾಮೃತಸಾರದ ವೈಶಿಷ್ಟ್ಯ ಅತ್ಯಪೂರ್ವ ವಾದುದು. ಶ್ರೀಹರಿಕಥಾಮೃತಸಾರದ ಅತಿಶಯವನ್ನು ಕರ್ಜಗಿಯ ದಾಸಪ್ಪದಾಸರು ಬಹು ಸುಂದರವಾಗಿ ವರ್ಣಿಸಿದ್ದಾರೆ.

> ಮಣಿಖಚಿತ ಹರಿವಾಣದಲಿ ವಾ |
> ರಣ ಸುಭೋಜ್ಯ ಪದಾರ್ಥ ಕೃಷ್ಣಾ ||
> ರ್ಪಣವೆನುತ ಪಸಿದವರಿಗೋಸುಗ ನೀಡುವಂದದಲಿ ||
> ಪ್ರಣತರಿಗೆ ಪೊಂಗನಡ ವರ ವಾಙ್ |
> ಮಣಿಗಳಿಂ ವಿರಚಿಸಿದ ಕೃತಿಯೋ ||
> ಉಣಿಸಿ ನೋಡುವ ಹರಿಕಥಾಮೃತಸಾರವನುದಾರ ||

ಇಂತಹ ಅಸಂಖ್ಯಾಕ ಪ್ರಮೇಯ ರಹಸ್ಯಗಳಿಂದ ಕೂಡಿದ ಈ ಗ್ರಂಥಕ್ಕೆ ಸಂಸ್ಕೃತ ಕನ್ನಡ ಎರಡರಲ್ಲೂ ಅನೇಕ ವ್ಯಾಖ್ಯಾನಗಳಿರುವುದು ಇನ್ನೊಂದು ವೈಶಿಷ್ಟ್ಯ.

### ಶ್ರೀ ಹರಿಕಥಾಮೃತಸಾರದ ಕನ್ನಡ ವ್ಯಾಖ್ಯಾನಗಳು

೧. ಶ್ರೀ ಸಂಕರ್ಷಣ ಒಡೆಯರು ವಿರಚಿಸಿರುವ ಟೀಕೆ.

೨. ಶ್ರೀ ಗುರು ವಿಜಯವಿಠ್ಠಲರ ಟೀಕೆ (ಶ್ರೀ ಮೊದಲಕಲ್ ಶೇಷದಾಸರು).

೩. ಗುರು ಶ್ರೀಶವಿಠ್ಠಲರ ಟೀಕೆ (ಶ್ರೀ ಕುಂಟೋಜಿ ದಾಸರೆನ್ನುವರು ರಚಿಸಿದ್ದು).
೪. ದ್ರೌಪದೀಶಪತಿ ವಿಠ್ಠಲರ ಟೀಕೆ.
೫. ಭಾವಸೂಚನ (ಜಮಖಂಡೀ ವಾದಿರಾಜಾಚಾರ್ಯರು ರಚಿಸಿದ್ದು.)

## ಶ್ರೀ ಹರಿಕಥಾಮೃತಸಾರದ ಸಂಸ್ಕೃತ ವ್ಯಾಖ್ಯಾನಗಳು

೧. ಶ್ರೀ ತಾಮ್ರಪರ್ಣೀಯಾ (ಪದಪ್ರಕಾಶಿಕೆ ಎಂದು ಇನ್ನೊಂದು ಹೆಸರು, ರಚಿಸಿದವರ ಹೆಸರು ಪ್ರಸಿದ್ಧವಾಗಿಲ್ಲ).
೨. ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ (ಜಮಖಂಡೀ ವಾದಿರಾಜಾಚಾರ್ಯರು).

ಶ್ರೀ ಜಗನ್ನಾಥದಾಸರು ಹೀಗೆ ಅನೇಕ ದೇವರನಾಮಗಳ, ಗ್ರಂಥಗಳ, ರಚನೆಯಿಂದ ಮಾತ್ರವಲ್ಲದೆ ಅನೇಕ ಶಿಷ್ಯರಿಗೆ ಹರಿದಾಸ ದೀಕ್ಷೆಯನ್ನು ಕೊಟ್ಟು ದಾಸಪಂಥವನ್ನು ಬೆಳೆಸಿ ಭಕ್ತಿಮಾರ್ಗ ಪ್ರಚುರವಾಗಲು ಅವಕಾಶ ಮಾಡಿಕೊಟ್ಟರು. ಅವರಿಗೆ ಹನ್ನೊಂದು ಮಂದಿ ಶಿಷ್ಯರಿದ್ದರಂತೆ. ಅವರಲ್ಲಿ ಪ್ರಮುಖರಾದವರು ಲಿಂಗಸೂಗೂರಿನ ಶ್ರೀ ಪ್ರಾಣೇಶ ದಾಸರು, ಕರ್ಜಗಿಯ ಶ್ರೀ ಶ್ರೀದವಿಠ್ಠಲದಾಸರು, ಶ್ರೀಶವಿಠ್ಠಲರು ಮೊದಲಾದವರು. ಶ್ರೀ ಶ್ರೀದವಿಠ್ಠಲರು ಶ್ರೀ ಹರಿಕಥಾಮೃತಸಾರಕ್ಕೆ ಫಲಶ್ರುತಿ ಸಂಧಿಯನ್ನು ಬರೆದಿದ್ದಾರೆ.

ಶ್ರೀ ಜಗನ್ನಾಥದಾಸರು ಪ್ರಹ್ಲಾದರಾಜನ ಸಹೋದರರಾದ ಸಹ್ಲಾದರಾಜರ ಅವತಾರಪುರುಷರೆಂದು ಪ್ರಖ್ಯಾತರಾಗಿದ್ದಾರೆ. ಶ್ರೀ ಜಗನ್ನಾಥದಾಸರ ಸಾಕ್ಷಾತ್ ಶಿಷ್ಯರಾದ ಶ್ರೀ ಪ್ರಾಣೇಶದಾಸರು ತಮ್ಮ ಗುರುಗಳ ಸ್ವರೂಪವನ್ನು, ಜನ್ಮಗಳನ್ನು ಹೀಗೆ ವರ್ಣಿಸಿದ್ದಾರೆ.

ತಿಳಿಯನು ಎಂದೆಂದಿಗನ್ಯ | ರಂಗ | ಒಲಿದ ದಾಸರು ಜಗನ್ನಾಥನ್ಯ ||ಪ||
ಅಲವಮಹಾತ್ಮರೆಂಬ ಪುಣ್ಯಶ್ರವಣ ಕೀರ್ತಿಗಳ | ನಿತ್ಯ ಕೇಳ್ವ ನರ ಧನ್ಯ ||ಅ.ಪ||

ಹಿರಣ್ಯಕಶಿಪುಜ ಸಹ್ಲಾದ | ನೀವೆ | ಎರಡನೇ ಜನ್ಮದಲ್ಲಿ ಶಲ್ಯನಾದ |
ಗುರು ವಾದಿರಾಜರನರ್ಚಿಸಿದ | ಪುರಂದರ | ದಾಸರಾಯರಲ್ಲುದಿಸಿದ ||೧||

ಐದನೆಯ ರೂಪ ಈಗಿದಂತೆ | ಮುಂದೆ | ಬಹುದು ಏಳು ಜನ್ಮಗಳಂತೆ ||
ಮೋದಾಭಿ ವೃದ್ಧಿಗೇನೋ ಅಂತೆ | ಎಂಬ | ವಾದಿಗಳಿಗಿದು ಅಂತೆಗಂತೆ ||೨||

ದಾಸಕೂಟಸ್ಥರಿಗೀ ಮಾತು | ಹಲವು | ದೇಶಗಳಲ್ಲಿ ಅನುಭವವಾಯ್ತು ||
ಈ ಸುಕಥಾಲಾಪವಲ್ಲಾಯಿತು ಶ್ರೀ | ಪ್ರಾಣೇಶವಿಠ್ಠಲನಲ್ಲಿಹನಾತು ||೩||

ಪೂಜೆಯ ಸಮಯದಲ್ಲಿ ದಶಾವತಾರವೇ ಮೊದಲಾದ ಭಗವಂತನ ರೂಪಗಳನ್ನು ಬಲು ಸುಂದರವಾಗಿ ಬರೆದು ರಂಗೋಲಿದಾಸರೆಂದು ಪ್ರಖ್ಯಾತರಾಗಿದ್ದ ಶ್ರೀ ಜಗನ್ನಾಥ ದಾಸರು ತಾವು ಜೀವಿಸಿದ ಸುಮಾರು ಎಂಭತ್ತೊಂದು ವರ್ಷಗಳ ಕಾಲವೂ ವಿಹಿತನಿತ್ಯ ಕರ್ಮಾನುಷ್ಠಾನ, ಸಚ್ಛಾಸ್ತ್ರ ಪ್ರವಚನ, ಭಗವತ್ಕೀರ್ತನೆಗಳ, ಗ್ರಂಥಗಳ ರಚನೆ

ಮೊದಲಾದ ಸತ್ಕಾರ್ಯಗಳಲ್ಲೇ ಅವಿರತರಾಗಿ ತೊಡಗಿದ್ದರು. ಶಾಲಿವಾಹನ ಶಕ ೧೭೩೧ ಶುಕ್ಲನಾಮ ಸಂವತ್ಸರ ಭಾದ್ರಪದ ಶುದ್ಧ ನವಮಿ ಭಾನುವಾರ (17–9–1809) ದಂದು ತಾವು ಈ ಲೋಕವನ್ನು ಬಿಡುವಕಾಲ ಬಂದಿದೆಯೆಂದು ಮನಗಂಡ ಶ್ರೀ ಜಗನ್ನಾಥ ದಾಸರು ಬೆಳಗಿನಿಂದ ರಾತ್ರಿಯವರೆಗೂ ಎಂದಿನಂತೆ ಸಕಲ ಸತ್ಕರ್ಮಾನುಷ್ಠಾನವನ್ನು ನಡೆಸಿ ರಾತ್ರಿ ಎಲ್ಲರೂ ನಿದ್ರೆ ಹೋಗುತ್ತಿದ್ದರೂ ತಾವು ಎಚ್ಚರಿದ್ದು ಭಗವಂತನಲ್ಲಿ ಲಯ ಚಿಂತನೆ ಮಾಡುತ್ತಾ, ಶ್ವಾಸನಿರೋಧಮಾಡಿ, ಯೋಗಶಕ್ತಿಯಿಂದ ಬ್ರಹ್ಮರಂಧ್ರದ ಮೂಲಕ ಹೊರಟು ವೈಕುಂಠಕ್ಕೆ ಪ್ರಯಾಣಿಸಿದರು. ಇದನ್ನು ಶ್ರೀ ಜಗನ್ನಾಥದಾಸರ ಸಾಕ್ಷಾತ್ ಶಿಷ್ಯರಾದ ಶ್ರೀ ಶ್ರೀದವಿಠ್ಠಲರು

‘ ತೆರಳಿದರು ಜಗನ್ನಾಥದಾಸವರ್ಯರು ’—

ವರಶುಕ್ಲವತ್ಸರದ ಭಾದ್ರಪ್ರದ ಶಿತಪಕ್ಷ | ಹರಿವಾರ ನವಮಿಯಲ್ಲಿ |
ಸುರಸಿದ್ಧ ಸಾಧ್ಯ ಸನ್ಮುನಿಗಣಾರ್ಚಿತ ಪಾದ ಹರಿಯೆ ಪರನೆಂದನುತಲಿ |
ಧರಣಿಯನು ತ್ಯಜಿಸಿ ಬಹುಮಾನಪೂರ್ವಕವಾಗಿ | ಬೆರೆದು
ಸುರಸಂದಣಿಯಲಿ | ಪಾರಮಾರ್ಥವೈದಿ ಮನ ಹರಿಯ
ಪಾದದಲಿಟ್ಟು | ವರವಿಷ್ಣುದೂತ ವೈಮಾನಿಕರ ಒಡಗೂಡಿ ||

ಎಂದು ವರ್ಣಿಸಿದ್ದಾರೆ. ತಾವು ದೇವಾಂಶರೆಂದು ತಿಳಿಸಲು ಒಂದಂಶವನ್ನು ಕಂಬದಲ್ಲಿಟ್ಟು ಶ್ರೀ ಜಗನ್ನಾಥದಾಸರು ಹರಿಪಾದ ಸೇರಿದರು. ಇದನ್ನು ಶ್ರೀ ಅಭಿವನ ಜನಾರ್ಧನ ವಿಠ್ಠಲರು—

“ ನೋಳ್ಪ ಜನಕೆ | ಸಾಂಶವೆಂದು ತಿಳಿವುದಕೆ ಒಂದಂಶ ಸ್ತಂಭದಲಿ ನಿಲಿಸಿ ||
ಹರಿಯ ಪುರಕೆ ತೆರಳಿ ಪೋದರು ” ಎಂದು ಹಾಡಿದ್ದಾರೆ.

ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್ |
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ||

# ಶ್ರೀ ಸಂಕರ್ಷಣ ಒಡೆಯರು
## (1810—1862)

ಶ್ರೀ ಜಗನ್ನಾಥದಾಸವರ್ಯರು ರಚಿಸಿರುವ ಶ್ರೀ ಹರಿಕಥಾಮೃತಸಾರಕ್ಕೆ ಅನೇಕ ಮಹನೀಯರು ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ವ್ಯಾಖ್ಯಾನ ಒರೆದಿದ್ದಾರೆ. ಈ ವ್ಯಾಖ್ಯೆಗಳಲ್ಲೆಲ್ಲ ಅತ್ಯಂತ ವಿಸ್ತೃತವೂ, ಶ್ರೀ ಮಧ್ವಮತದ ಪ್ರಮೇಯಗಳನ್ನು ಶ್ರೀ ಹರಿಕಥಾಮೃತಸಾರದಿಂದ ತಿಳಿಯಲು ಬಯಸುವವರಿಗೆ ಅತ್ಯಂತ ಉಪಕಾರಿಯೂ ಆದ ಕನ್ನಡ ಭಾಷೆಯ ವ್ಯಾಖ್ಯಾನವನ್ನು ಶ್ರೀ ಸಂಕರ್ಷಣ ಒಡೆಯರು ರಚಿಸಿದ್ದಾರೆ.

ಶ್ರೀ ಸಂಕರ್ಷಣ ಒಡೆಯರ ಪೂರ್ವಾಶ್ರಮದ ಹೆಸರು ತಮ್ಮಣ್ಣನಾಯಕರು ಎಂದು. ಇವರ ಪೂರ್ವಜರು ಬಹಳ ಶ್ರೀಮಂತರಾಗಿದ್ದು ಧಾರವಾಡದಲ್ಲಿ ವಾಸ ಮಾಡುತ್ತಿದ್ದರು. ಇವರ ತಂದೆಯ ಹೆಸರು ಧೂಮಪ್ಪನಾಯಕರೆಂದು. ಧೂಮಪ್ಪನಾಯಕರಿಗೆ ಇಬ್ಬರು ಪತ್ನಿಯರಿದ್ದರು. ಮೊದಲನೇ ಪತ್ನಿಯಲ್ಲಿ ನಾಲ್ಕು ಮಕ್ಕಳನ್ನೂ, ಎರಡನೆಯ ಪತ್ನಿಯಲ್ಲಿ ಐದು ಮಕ್ಕಳನ್ನು ಅವರು ಪಡೆದರು. ತಮ್ಮಣ್ಣನಾಯಕರು ಎರಡನೇ ಪತ್ನಿಯ ಎರಡನೇ ಮಕ್ಕಳು. ಧೂಮಪ್ಪನಾಯಕರು, ಶಿವಮೊಗ್ಗೆ ಸಮೀಪದ ಹೊಳೆಹೊನ್ನೂರಿನಲ್ಲಿ ವೃಂದಾವನಸ್ಥರಾಗಿರುವ, ರುದ್ರಾಂಶರೆಂದು ಪ್ರಖ್ಯಾತರಾಗಿರುವ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರನ್ನು ಸೇವೆ ಮಾಡಿ ಅವರ ಅನುಗ್ರಹದಿಂದ ತಮ್ಮಣ್ಣನಾಯಕರನ್ನು ಪಡೆದರು.

ಧೂಮಪ್ಪನಾಯಕರು ಮಗನಿಗೆ ಸಕಾಲದಲ್ಲಿ ಉಪನಯನವನ್ನು ಮಾಡಿ, ಅವರ ಮನೆಯಲ್ಲೇ ಇದ್ದ ಭೀಮವರಾಹಾಚಾರ್ಯರೆಂಬ ದೊಡ್ಡ ಜ್ಞಾನಿಗಳ ಹತ್ತಿರ ವಿದ್ಯಾಭ್ಯಾಸ ಮಾಡಿಸಿದರು. ತಮ್ಮಣ್ಣನಾಯಕರಿಗೆ ಬಾಲ್ಯದಿಂದಲೇ ಏಕಾದಶಿಯೇ ಮೊದಲಾದ ವ್ರತಾಚರಣೆಯಲ್ಲಿ ಅತ್ಯಂತ ಶ್ರದ್ಧೆಯಿದ್ದಿತು. ಪ್ರತಿನಿತ್ಯವೂ ತಪ್ಪದೇ ಕ್ರಮವಾಗಿ ದೇವಪೂಜಾದಿಗಳನ್ನು ನೆರವೇರಿಸುತ್ತಿದ್ದರು. ಇವರ ಸದ್ಧರ್ಮಾಚರಣೆಯ ನಿಷ್ಠೆಯನ್ನು ಕಂಡು ಶ್ರೀ ಭೀಮವರಹಾಚಾರ್ಯರು ಇವರನ್ನು ಋಷಿಯೆಂದು ಕರೆಯುತ್ತಿದ್ದರು. ಯೋಗ್ಯವಯಸ್ಸಿನಲ್ಲಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ ತಮ್ಮಣ್ಣನಾಯಕರಿಗೆ ಇಪ್ಪತ್ತೆರಡನೇ ವರ್ಷಕ್ಕೇ ಪತ್ನೀವಿಯೋಗವಾಯಿತು. ಇಬ್ಬರು ಮಕ್ಕಳು ಇದ್ದರು. ಕೆಲವು ಸಮಯದನಂತರ ಎರಡನೇ ವಿವಾಹಕ್ಕೆ ಒತ್ತಾಯ ಬಂದರೂ, ಆಗಲೇ ವೈರಾಗ್ಯವನ್ನು ಹೊಂದಿದ್ದ ತಮ್ಮಣ್ಣನಾಯಕರು ಅದಕ್ಕೆ ಒಪ್ಪಲಿಲ್ಲ.

ಕೆಲವು ಸಮಯದ ನಂತರ ತಮ್ಮಣ್ಣನಾಯಕರು ಶ್ರೀಮದಾಚಾರ್ಯರ ಗ್ರಂಥಗಳನ್ನು ಅಧ್ಯಯನ ಮಾಡಬೇಕೆಂದು ತೀವ್ರವಾದ ಅಭಿಲಾಷೆಯಿಂದ ಉಡುಪಿಗೆ ಹೋಗಿ, ಆಗ ಶ್ರೀ ಸೋದೆ ಮಠದ ಪೀಠಾಧೀಶರಾಗಿದ್ದ ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದರಲ್ಲಿ ಸಕಲ ಮಾಧ್ವ ವಾಙ್ಮಯವನ್ನೂ ಅಧ್ಯಯನ ಮಾಡಿದರು. ದ್ವೈತಸಿದ್ಧಾಂತದ ವಿಶೇಷ

ಪ್ರಮೇಯಗಳನ್ನೆಲ್ಲ ಗುರೂಪದೇಶದಿಂದ ಚೆನ್ನಾಗಿ ಅರಿತು ಅನೇಕ ವರ್ಷಗಳಕಾಲ ಸಂಸಾರದಲ್ಲಿ ಪೂರ್ಣವಾಗಿ ನಿರ್ಲಿಪ್ತರಾಗಿ ಪರಮಾತ್ಮನ ಧ್ಯಾನದಲ್ಲಿ ನಿರತರಾಗಿದ್ದರು.

ಆಗಿನಕಾಲದ ಶ್ರೀ ಉತ್ತರಾದಿ ಮಠಾಧೀಶರಾಗಿದ್ದ ಶ್ರೀ ಸತ್ಯಸಂತುಷ್ಟತೀರ್ಥರು ಮತ್ತು ಶ್ರೀ ಸತ್ಯಸಂಕಲ್ಪತೀರ್ಥರು ಶ್ರೀಮಠಕ್ಕೆ ಕಾರಣಾಂತರದಿಂದ ಹಣದ ತೊಂದರೆ ಒದಗಿದಾಗ, ಶ್ರೀ ರಾಮದೇವರ ಪೂಜೆಗೆ ಉಪಯೋಗಿಸುತ್ತಿದ್ದ ಅಮೂಲ್ಯವಾದ ನವರತ್ನ ಮಂಟಪವನ್ನೂ, ಉತ್ತರ ಆರ್ಕಾಟಿನ ಆರಣಿ ಸಂಸ್ಥಾನದಿಂದ ಕಾಣಿಕೆಯಾಗಿ ಬಂದಿದ್ದ ದೊಡ್ಡ ಭಂಗಾರದ ಗಂಗಾಳವೊಂದನ್ನೂ ಶ್ರೀ ತಮ್ಮಣ್ಣನಾಯಕರ ಅಣ್ಣನವರಲ್ಲಿ, ಅಡವಿಟ್ಟು ಸಾಲ ತೆಗೆದುಕೊಂಡರು. ಕಾಲಾಂತರದಲ್ಲಿ ಬಡ್ಡಿಸೇರಿ ಆ ಹಣವು ೪೦ ಸಹಸ್ರ ರೂಗಳಷ್ಟಾಯಿತು. ಶ್ರೀ ಸತ್ಯಸಂತುಷ್ಟತೀರ್ಥರ ನಂತರ ಪೀಠಾಧೀಶರಾದ ಶ್ರೀ ಸತ್ಯಪರಾಯಣತೀರ್ಥ ಶ್ರೀಪಾದರು ಒಮ್ಮೆ ದೇಶಸಂಚಾರ ಹೊರಟು, ಧಾರವಾಡಕ್ಕೆ ಬಂದು ಶ್ರೀ ತಮ್ಮಣ್ಣನಾಯಕರ ಮನೆಯಲ್ಲೇ ಎರಡು ತಿಂಗಳಕಾಲ ಶ್ರೀ ರಾಮ ವೇದ-ವ್ಯಾಸರ ಪೂಜೆಯನ್ನು ನಡೆಸುತ್ತಿದ್ದರು. ಪೂಜೆಗೆ ನವರತ್ನ ಮಂಟಪವಿಲ್ಲದಿದ್ದುದರಿಂದ ಖಿನ್ನರಾಗಿದ್ದ ಅವರು ಒಮ್ಮೆ ತಮ್ಮಣ್ಣನಾಯಕರ ಅಣ್ಣನವರನ್ನು ಕರೆಸಿ, ಸಂಚಾರ ಮಾಡಿ ಸಾಲದ ಹಣವನ್ನು ಹಿಂತಿರುಗಿಸುವುದಾಗಿಯೂ, ಅದಕ್ಕಾಗಿ ಯಾರನ್ನಾದರೂ ಮಠದ ಜೊತೆಯಲ್ಲಿ ಕಳಿಸಬೇಕೆಂದೂ ಹೇಳಿದರು. ಆ ಸಮಯದಲ್ಲಿ ಅಲ್ಲೇ ಇದ್ದ ಶ್ರೀ ತಮ್ಮಣ್ಣನಾಯಕರು ತೀರ್ಥಕ್ಷೇತ್ರಗಳ ಯಾತ್ರೆಯೂ ಆಗುವುದೆಂಬ ಉದ್ದೇಶದಿಂದ ತಾವೇ ಶ್ರೀಮಠದ ಜೊತೆಯಲ್ಲಿ ಹೋಗುವುದಾಗಿ ಮುಂದೆ ಬಂದರು.

ಶ್ರೀ ಮಠದ ಜೊತೆ ಸಂಚಾರಕ್ಕೆ ಹೊರಟ ಶ್ರೀ ತಮ್ಮಣ್ಣನಾಯಕರು ವ್ಯರ್ಥ ಸಮಯಹರಣ ಮಾಡಲು ಇಷ್ಟಪಡದೇ ಪುನಃ ಸುಧಾದಿ ಗ್ರಂಥಗಳನ್ನು ಶ್ರೀಗಳವರ ಬಳಿಯಲ್ಲಿ ಪಾಠ ಕೇಳಲಾರಂಭಿಸಿದರು. ಸಾಂಗವಾಗಿ ಪಾಠ ಮುಗಿದ ನಂತರ ಒಂದು ದಿನ ಶ್ರೀರಾಮವೇದವ್ಯಾಸರ ಪೂಜೆಯ ಖರ್ಚನ್ನು ತಾವೇ ವಹಿಸಿಕೊಂಡು, ಮಂಗಳವನ್ನೂ ನೆರವೇರಿಸಿದರು. ಪೂಜೆ ಮುಗಿದ ಮೇಲೆ ಶ್ರೀಗಳವರು ತಮ್ಮಣ್ಣನಾಯಕರನ್ನು ಕರೆದು ಗುರುದಕ್ಷಿಣೆಯಾಗಿ ನವರತ್ನ ಮಂಟಪವನ್ನೂ, ಬಂಗಾರದ ಗಂಗಾಳವನ್ನೂ ಅರ್ಪಿಸಬೇಕೆಂದು ಕೇಳಿದಾಗ, ಲವಕಾಲವೂ ಯೋಚಿಸದೇ ತಮ್ಮಣ್ಣನಾಯಕರು ಕೃಷ್ಣಾರ್ಪಣವೆಂದರು. ಇದೊಂದೇ ನಿದರ್ಶನದಿಂದ ನಾವು, ಆ ಸಮಯಕ್ಕೆ ಶ್ರೀ ತಮ್ಮಣ್ಣನಾಯಕರ ಜ್ಞಾನ ಎಷ್ಟು ಪರಿಪಕ್ವವಾಗಿದ್ದಿತು, ಅವರ ವೈರಾಗ್ಯ ಎಷ್ಟು ನೈಜವಾಗಿದ್ದಿತು ಎಂಬುದನ್ನು ಅರಿಯಬಹುದು.

ಶ್ರೀ ತಮ್ಮಣ್ಣನಾಯಕರು ಅನಂತರ 'ಮಠದಿಂದ ಸಲ್ಲಬೇಕಾದ ಹಣಸಂದಿದೆ, ಮಂಟಪವನ್ನು ಮತ್ತು ಗಂಗಾಳವನ್ನು ಕಳಿಸುವುದು' ಎಂದು ತಮ್ಮ ಅಣ್ಣಂದಿರಿಗೆ ಪತ್ರ ಬರೆದು ಮಂಟಪಗಂಗಾಳಗಳನ್ನು ತರಿಸಿ ಶ್ರೀಗಳವರಿಗೆ ಒಪ್ಪಿಸಿದರು. ಶ್ರೀರಾಮವೇದ ವ್ಯಾಸರ ಪೂಜೆಯನ್ನು ಮೊದಲಿನಂತೆ ವೈಭವದಿಂದ ನೆರವೇರಿಸಲು ಕಾರಣರಾದ

ಶ್ರೀ ತಮ್ಮಣ್ಣನಾಯಕರನ್ನು, ಗುರುಗಳು ಅತಿಶಯ ಅಭಿಮಾನದಿಂದ ಶ್ರೀಮಠದ ಮುಖ್ಯ ಶಿಷ್ಯರೆಂದು ಭಾವಿಸಿ ಪರಮಾನುಗ್ರಹ ಮಾಡಿದರು.

ತಮ್ಮಣ್ಣನಾಯಕರ ಅಣ್ಣನವರು ಕೆಲಕಾಲ ಹಣದೊಂದಿಗೆ ತಮ್ಮನು ಬರಬಹುದೆಂದು ನಿರೀಕ್ಷಿಸಿ, ಬಾರದಿರಲು ತಾವೇ ಮಠಕ್ಕೆ ಬಂದು ನಡೆದ ಸಂಗತಿಯನ್ನೆಲ್ಲ ತಿಳಿದು ವ್ಯಥೆಗೊಂಡರು. ಆದರೆ ಶ್ರೀ ತಮ್ಮಣ್ಣನಾಯಕರು ತಮ್ಮ ಪಾಲಿನ ಆಸ್ತಿಯನ್ನು ತಾವು ಶ್ರೀರಾಮನಿಗೆ ಅರ್ಪಿಸಿದ್ದೆಂದು ಹೇಳಿ ಅಣ್ಣನನ್ನು ಸಮಾಧಾನಗೊಳಿಸಿದರು.

ತಮ್ಮ ಮೂವತ್ತೆರಡನೇ ವಯಸ್ಸಿನಲ್ಲಿ ಶ್ರೀ ತಮ್ಮಣ್ಣನಾಯಕರು ಸಂಸಾರದಲ್ಲಿ ಅತ್ಯಂತ ವಿರಕ್ತರಾಗಿ ಸನ್ಯಾಸವನ್ನು ಸ್ವೀಕರಿಸಲು ನಿಶ್ಚಯಿಸಿದರು. ಅವರು ಉಡುಪಿ ಕ್ಷೇತ್ರಕ್ಕೆ ಹೋಗಿ ದಂಡತೀರ್ಥದಲ್ಲಿ ಹತ್ತು ಮಂದಿ ಬ್ರಾಹ್ಮಣರ ಸಮಕ್ಷಮದಲ್ಲಿ ವಿಧಿವತ್ತಾಗಿ, ಸನ್ಯಾಸ ಸ್ವೀಕರಿಸಿ, ಶಿರಸ್ಸಿನಲ್ಲಿ ಮೂರು ಕೇಶವನ್ನು ಬಿಟ್ಟುಕೊಟ್ಟು, ಕ್ರಮವಾದ ಗುರೂಪದೇಶವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ, ನಿರಾಹಾರರಾಗಿ, ಶ್ರೀ ಸತ್ಯ-ಪರಾಯಣತೀರ್ಥರಿದ್ದಲ್ಲಿಗೆ ನಡೆದು ಬಂದರು. ಶ್ರೀಗಳವರಿಗೆ ಸಾಷ್ಟಾಂಗವೆರಗಿ ಯತ್ಯಾಶ್ರಮವನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡರು. ಪ್ರಾರಂಭದಲ್ಲಿ ಶ್ರೀಗಳವರು ಒಪ್ಪದಿದ್ದರೂ ತಮ್ಮಣ್ಣನಾಯಕರ ದೃಢವಾದ ವಿರಕ್ತಿಯನ್ನು ಮನಗಂಡು (ಕ್ರಿ.ಶ. ೧೮೪೨) ಸನ್ಯಾಸವನ್ನು ದಯಪಾಲಿಸಿದರು ಮತ್ತು ಶ್ರೀ ಸಂಕರ್ಷಣಒಡೆಯರೆಂದು ನಾಮಕರಣ ಮಾಡಿ ರಜತವೇಣುಗೋಪಾಲಮೂರ್ತಿಯನ್ನು ಅನುಗ್ರಹಿಸಿದರು.

ಶ್ರೀ ಸಂಕರ್ಷಣಒಡೆಯರು ಸನ್ಯಾಸ ಸ್ವೀಕರಿಸಿದ ಪ್ರಾರಂಭದಲ್ಲಿ ಸ್ವಲ್ಪಕಾಲ ತಮ್ಮ ಪೂರ್ವಾಶ್ರಮದ ಮನೆಯಲ್ಲಿದ್ದರೂ, ಅಲ್ಲಿ ಸರಿಹೋಗದೇ ಧಾರವಾಡದ ವಿಠಲದೇವರ ಗುಡಿಯಲ್ಲೇ ತಪೋನಿರತರಾಗಿದ್ದರು. ಅನಂತರ ಶ್ರೀ ತಿರುಪತಿಕ್ಷೇತ್ರಕ್ಕೆ ಯಾತ್ರೆ ಮಾಡುವ ಉದ್ದೇಶದಿಂದ ಹೊರಟು, ಹೊಳೇನರಸೀಪುರದಲ್ಲಿ ಕೆಲವು ಕಾಲ ತಪಶ್ಚರಣಮಾಡಿ, ಕಠಿಣವಾದ ಆಹಾರನಿಯಮವನ್ನು ಕೈಗೊಂಡು ಸ್ವಲ್ಪ ಸಮಯದ ನಂತರ ತಿರುಮಲೆಗೆ ಬಂದರು.

ತಿರುಮಲೆಯಲ್ಲಿ ಶ್ರೀ ಸಂಕರ್ಷಣಒಡೆಯರು ತಮ್ಮಲ್ಲಿದ್ದ ಬೆಳ್ಳಿಭಂಗಾರವನ್ನೆಲ್ಲ ಬ್ರಾಹ್ಮಣರಿಗೆ ದಾನಮಾಡಿ, ಪೂಜೆಗೆ ಅಗತ್ಯವಾದ ಪಾತ್ರೆಗಳನ್ನು ಮಾತ್ರ ಉಳಿಸಿಕೊಂಡು ಶ್ರೀ ವರಾಹದೇವರ ಸನ್ನಿಧಿಯಲ್ಲಿ ಒಂದು ತಿಂಗಳಿನವರೆಗೆ ತಪಸ್ಸು ಮಾಡುತ್ತಿದ್ದರು. ಅನಂತರ ಶ್ರೀನಿವಾಸನು ಒಂದು ಸ್ವಪ್ನದಲ್ಲಿ ಸೂಚಿಸಿದಂತೆ ಘಟಿಕಾಚಲಕ್ಕೆ ಬಂದು ಶ್ರೀ ಲಕ್ಷ್ಮೀನರಸಿಂಹನ ಮತ್ತು ಶ್ರೀ ಪ್ರಾಣದೇವರ ಸೇವೆಯನ್ನು ಮಾಡಿದರು. ಅನಂತರ ರಾಮೇಶ್ವರಯಾತ್ರೆಗೆ ಹೊರಡಲು ಸಂಕಲ್ಪಿಸಲು 'ವೇಲೂರಿಗೆ ಹೋಗಿ ಶ್ರೀ ಸತ್ಯಾಧಿರಾಜರ ಸೇವೆಯಲ್ಲಿ ನಡೆದಿರುವ ಅಕ್ರಮವನ್ನು ಸರಿಪಡಿಸಿದರೆ ರಾಮೇಶ್ವರ ಯಾತ್ರೆಯ ಫಲ ದೊರೆಯುವುದು' ಎಂದು ಸ್ವಪ್ನವಾಯಿತು. ಅದರಂತೆ ಅವರು ವೇಲೂರಿಗೆ ಬಂದು ಶ್ರೀ ಸತ್ಯಾಧಿರಾಜರ ಭಕ್ತರನ್ನು ತಮ್ಮ ಶಿಷ್ಯರನ್ನಾಗಿ ಗ್ರಹಿಸಿ, ವಿರೋಧ ಮಾಡಿದವರನ್ನು

ವಾದದಲ್ಲಿ ಜಯಿಸಿ, ಶ್ರೀ ಸತ್ಯಾಧಿರಾಜರ ಸೇವೆ ಕ್ರಮವಾಗಿ ನಡೆಯುವಂತೆ ವ್ಯವಸ್ಥೆ ಮಾಡಿ ಸುಮಾರು ಒಂಭತ್ತು ವರ್ಷಗಳಕಾಲ ಅಲ್ಲೇ ತಪೋನಿರತರಾಗಿದ್ದರು.

ಈ ಸಮಯದಲ್ಲಿ ಇವರ ಶಿಷ್ಯರಾದ ಆರಣಿ ಹನುಮಂತರಾಯರು, ಆದ್ಯ ಶ್ರೀನಿವಾಸಚಾರ್ಯರು ಮೊದಲಾದವರು, ಶ್ರೀಗಳವರನ್ನು ಚಿತ್ತೂರಿನ ಸಮೀಪದ ಗಿರಿಂಪೇಟೆಗೆ ಕರೆದುಕೊಂಡು ಹೋಗಿ, ಅಲ್ಲಿ ಶ್ರೀ ಬ್ರಹ್ಮಸೂತ್ರಭಾಷ್ಯಾದಿಗ್ರಂಥಗಳನ್ನು, ಶ್ರೀಹರಿಕಥಾಮೃತಸಾರ ಇತ್ಯಾದಿ ಪ್ರಮೇಯರಹಸ್ಯಗಳನ್ನು ತಿಳಿಸುವ ಗ್ರಂಥಗಳನ್ನು ಅಧ್ಯಯನ ಮಾಡಿದರು. ಶ್ರೀಸಂಕರ್ಷಣಒಡೆಯರು ಕ್ರಮೇಣ ಆಹಾರವನ್ನೂ ತ್ಯಜಿಸಿ, ಪಕ್ಷೋಪವಾಸಾದಿಗಳನ್ನು ಆಚರಿಸುತ್ತ ಭಗವದ್ಧ್ಯಾನ ನಿರತರಾದರು.

ಒಮ್ಮೆ ಶ್ರೀ ಸತ್ಯಪರಾಯಣತೀರ್ಥರು ಸಂಚಾರ ಮಾಡುತ್ತ, ವೇಲೂರಿಗೆ ಬಂದು, ಶ್ರೀ ಸಂಕರ್ಷಣಒಡೆಯರು ನಡೆಸುತ್ತಿದ್ದ ಅಮೋಘ ತಪಶ್ಚರ್ಯೆಯನ್ನು ನೋಡಿ ಸಂಪ್ರೀತ ರಾಗಿ, ಸಮಸ್ತ ತೀರ್ಥಕ್ಷೇತ್ರಗಳ ಯಾತ್ರೆಯ ಫಲವು ಅವರಿಗೆ ಲಭಿಸಿವೆಯೆಂದನುಗ್ರಹಿಸಿ, ಶ್ರೀ ಸತ್ಯಾಧಿರಾಜರ ಸೇವೆಯನ್ನು ಮುಂದುವರಿಸಬೇಕೆಂದು ಆಜ್ಞೆ ಮಾಡಿದರು. ಅದರಂತೆ ಸೇವಾನಿರತರಾಗಿದ್ದ ಶ್ರೀ ಸಂಕರ್ಷಣಒಡೆಯರು ತಮ್ಮ 52 ನೇ ವರ್ಷದಲ್ಲಿ, ಶಿಷ್ಯರಾದ ಬ್ರಹ್ಮಸಮುದ್ರಂ ಮಧ್ವರಾಯರ ಆಮಂತ್ರಣವನ್ನು ಮನ್ನಿಸಿ, ಪೋಳೂರಿನ ಸಮೀಪವಿರುವ ಕರಂಪುಂಡೀಗ್ರಾಮಕ್ಕೆ ಹೋಗಿ, ಬಾಹುದಾನದೀತೀರದಲ್ಲಿ ಸಂಪದ್ಗಿರಿ ನರಸಿಂಹದೇವರ ಪರ್ವತದ ಛಾಯೆಯು ಬೀಳುವ ಸ್ಥಳದಲ್ಲಿ, ಅಶ್ವತ್ಥವೃಕ್ಷದ ಕೆಳಗೆ ಮಠವನ್ನು ಕಟ್ಟಿಸಿದರು. ಅಲ್ಲೇ ತಪೋನಿರತರಾಗಿದ್ದು ಶಾಲಿವಾಹನ ಶಕ ೧೭೮೫ (ಕ್ರಿ. ಶ. 1862) ದುಂದುಭಿ ಸಂವತ್ಸರದ ಮಾರ್ಗಶೀರ್ಷ ಶುದ್ಧ ಪಂಚಮಿಯಂದು ಹರಿಪದವನ್ನು ಸೇರಿದರು. ಅವರ ಪಾರ್ಥಿವಶರೀರವನ್ನು ಭೂಮಿಯಲ್ಲಿ ಸ್ಥಾಪಿಸಿ, ಎಂಟು ತಿಂಗಳಗಳನಂತರ ಶೋಧನೆ ಮಾಡಿ ವಿಧ್ಯುಕ್ತವಾಗಿ ವೃಂದಾವನವನ್ನು ನಿರ್ಮಿಸಲಾಯಿತು. ಶೋಧನೆ ಮಾಡಿದ ಸಂದರ್ಭದಲ್ಲಿ ದೇಹವನ್ನು ತೆಗೆದಾಗ, ಜಟಿ, ದ್ವಾದಶನಾಮಗಳು, ಕೌಪೀನ ಹೊಸದಾಗಿಯೇ ಕಂಡ ವಂತೆ. ಕಣ್ಣಿನ ಕಾಂತಿ ಸ್ವಲ್ಪವೂ ಕಡಿಮೆಯಾಗಿರಲಿಲ್ಲವಂತೆ. ಶ್ರೀಗಳವರು ತಮ್ಮ ಜೀವಿತಕಾಲದಲ್ಲಿ ನಡೆಸಿದ ಅಖಂಡತಪಶ್ಚರಣೆಯನ್ನು ನೆನೆಸಿದಾಗ ಇದೇನೂ ಆಶ್ಚರ್ಯಕರ ವಲ್ಲವೆಂದೆನಿಸುವುದು. ಶ್ರೀ ಸಂಕರ್ಷಣಒಡೆಯರು ರುದ್ರಾಂಶರೆಂದು ಪ್ರಖ್ಯಾತರಾಗಿದ್ದಾರೆ. ಗೋದಾವರೀ ತೀರದ ಶ್ರೀ ವೆಂಕಟರಮಣಚಾರ್ಯರೆನ್ನುವವರು, ಶ್ರೀ ಶ್ರೀಗಳವರ ಪ್ರತ್ಯಕ್ಷವನ್ನು ಪಡೆದು, ರುದ್ರಾಂಶರೆನ್ನುವುದನ್ನರಿತು, ಶ್ರೀಗಳವರ ಮೇಲೆ, ಕವಚ, ಕಲ್ಪತರು ಸ್ತೋತ್ರ, ಅಷ್ಟಕ ಮೊದಲಾದವುಗಳನ್ನು ಭಕ್ತಿಯಿಂದ ರಚಿಸಿದ್ದಾರೆ.

ಶ್ರೀ ಸಂಕರ್ಷಣಒಡೆಯರ ಅಮೋಘ ವಿದ್ವತ್ತಿಗೆ ಅವರು ರಚಿಸಿರುವ ಕನ್ನಡಭಾಷೆಯ ವ್ಯಾಖ್ಯಾನವು ಇಂದಿಗೂ ಸಾಕ್ಷಿಯಾಗಿ ನಿಂತಿದೆ. ಶ್ರೀಗಳವರ ವ್ಯಾಖ್ಯಾನಕ್ರಮವು ಅಪೂರ್ವವಾದುದು. ಪ್ರತಿಯೊಂದು ಪದ್ಯಕ್ಕೂ ಮೊದಲು ಅವತಾರಿಕೆಯನ್ನು ಬರೆದು ನಂತರ ಪ್ರತಿಪದಾರ್ಥವನ್ನು ಬರೆಯುತ್ತಾರೆ. ಅನಂತರ ತಾತ್ಪರ್ಯವನ್ನು ತಿಳಿಸಿ ಇಡೀ

ಪದ್ಯದ ಭಾವವೂ ಕಣ್ಮುಂದೆ ನಿಲ್ಲುವಂತೆ ಪದ್ಯದ ಯಾವ ಅಂಶವನ್ನೂ ಬಿಡದೇ ವಿವರಿಸುತ್ತಾರೆ. ಈ ವಿಶೇಷಾರ್ಥಗಳಲ್ಲೇ ಶ್ರೀ ಸಂಕರ್ಷಣಒಡೆಯರ ವೈಶಿಷ್ಟವನ್ನು ನಾವು ಕಾಣುವೆವು. ವಿಶೇಷಾರ್ಥಗಳನ್ನು ತಿಳಿಸುವ ನೆವದಿಂದ ಅವರು ಆಯಾ ಪ್ರಮೇಯಕ್ಕೆ ಸಂಬಂಧಿಸಿದ ಸಕಲ ವಿಷಯಗಳನ್ನೂ ಸಪ್ರಮಾಣವಾಗಿ ಪ್ರತಿಪಾದಿಸುತ್ತಾರೆ. ಭಾಗವತ ತಾತ್ಪರ್ಯ, ಭಾರತ ತಾತ್ಪರ್ಯ, ಉಪನಿಷದ್ಭಾಷ್ಯಗಳು, ಪ್ರಕರಣ ಗ್ರಂಥಗಳು ಬ್ರಹ್ಮಸೂತ್ರಭಾಷ್ಯ, ಇತ್ಯಾದಿ ಶ್ರೀಮದಾಚಾರ್ಯರ ಗ್ರಂಥಗಳಲ್ಲದೆ, ಅನೇಕ ಪುರಾಣಗಳು, ಪ್ರಕಾಶಸಂಹಿತಾ, ಇತ್ಯಾದಿ ಅಪೂರ್ವ ಪ್ರಮೇಯ ಗ್ರಂಥಗಳು, ಸ್ಮೃತಿಗಳು, ಇವುಗಳನ್ನು ವಿಪುಲವಾಗಿ ಉದಾಹರಿಸುತ್ತಾರೆ. ಈ ವ್ಯಾಖ್ಯಾನವನ್ನು ನೋಡಿದ ಮೇಲೆಯೇ ಶ್ರೀ ಹರಿಕಥಾಮೃತಸಾರದ ನಿಜವಾದ ಮಹತ್ವವು ನಮಗೆ ಮನವರಿಕೆಯಾಗುವುದೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಸುಮಾರು ನೂರು ವರ್ಷಗಳಿಗೂ ಹಿಂದೆ ರಚಿತವಾದದ್ದರಿಂದ ಈ ವ್ಯಾಖ್ಯಾನದ ಭಾಷೆ ಪ್ರಾರಂಭದಲ್ಲಿ ಸ್ವಲ್ಪ ಅಪರಿಚಿತ ಎನ್ನಿಸಿದರೂ, ಕೆಲವು ಪದ ಪ್ರಯೋಗಗಳನ್ನು ರೂಢಿಸಿಕೊಂಡಾಗ ಸುಲಭವಾಗಿ ಅರ್ಥವಾಗುವುದು. ಇಂತಹ ಮಹತ್ವಪೂರ್ಣವಾದ ಗ್ರಂಥ ಪುನಃ ಪ್ರಕಟವಾಗುತ್ತಿರುವುದು ಜಿಜ್ಞಾಸುಗಳ ಸುದೈವ.

ಸುರುಟಿ—ಆದಿತಾಳ

ಸಂ | ಕರುಷಣ ಒಡೆಯ | ಹರಿಪಾದ | ಪಂಕಜಕೆ ಭ್ರಮರ |
ಝೇಂಕರಿಸುತ ಮಧು | ಶಂಕರಾಂಶನೆ ತಂದು | ಕಿಂಕರರಿಗೆ ಇತ್ತೆ | ಸಂಕರುಷಣ
ಪ್ರಿಯ || ಪ ||

ಸತ್ಯಧರ್ಮರ ವರದಿ | ಬಹುಸು | ವಿಪ್ರಜನ್ಮದಿ ಬಂದು |
ಸತ್ಯ ಪರಾಯಣರ | ಶಿಷ್ಯನಾಗುತ್ತಲವರ | ಉತ್ತಮ ಪೂಜೆಗಿತ್ತೆ | ವಿತ್ತಸರ್ವಸ್ವವ ||೧||

ಸೋದೆರಾಜರ | ದಯದಿ | ಓದಿಶ್ರೀ | ವಿಶ್ವಪ್ರಿಯರಲ್ಲಿ |
ವೇದಶಾಸ್ತ್ರದ ಮರ್ಮ | ಸಾಧಿಸಿ ತಿಳಿಯುತ್ತ | ಮಾಧವ ಭಕ್ತಿಯ | ಹಾದಿಯ
ಹಿಡಿದೆ ||೨||

ಅತ್ಯಾಸಕ್ತಿಯಲಿ | ಗುರುಶ್ರೀ | ಸತ್ಯಪರಾಯಣರ |
ಯತ್ಯಾಶ್ರಮ ಬೇಡಿ | ಮತ್ತದ ಪಡೆಯುತ್ತ | ಉತ್ತಮ ಮುನಿಯಾದ | ಸತ್ವ
ಚರಿತ್ರನೆ ||೩||

ಗುರುವರ ಜಗನ್ನಾಥ | ದಾಸರ | ಹರಿಕಥಾಮೃತಸಾರ |
ವರಸಂಪದ್ಗಿರಿ | ನರಹರಿ ಚರಿತೆಯ | ಸುವಿಸ್ತಾರ ಮಾಡಿದೆ | ಹರಿಗುರು ಕೃಪೆಯಲಿ ||೪||

ದುಂದುಭಿವತ್ಸರದಿ | ಮಾರ್ಗಶಿರ | ಒಂದನೆ ಪಂಚಮಿಯೊ |
ಅಂದು ಬಹುದಾತೀರ | ವೃಂದಾವನ ಸೇರಿ | ನಿಂದೆ ಸೀತಾರಾಮ | ವಿಠಲನ
ಧ್ಯಾನದಿ ||೫||

ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಸುಪ್ರಸೀದ

ಶ್ರೀ ಗುರುರಾಜೋ ವಿಜಯತೇ

## ಶ್ರೀ ಜಗನ್ನಾಥದಾಸಾರ್ಯರ ಉಪಾಸ್ಯ ಸಕಲ ದುರಿತ ನಿವಾರಕ

# ಗರುಡವಾಹನ ಶ್ರೀ ಲಕ್ಷ್ಮೀನೃಸಿಂಹದೇವರ ಸ್ತೋತ್ರ

|| ಶ್ರೀ ಜಗನ್ನಾಥವಿಠ್ಠಲ ||

**ಪದ ರಾಗ—ಶಂಕರಾಭರಣ—ಅಟ್ಟತಾಳ**

ನರಸಿಂಹ ಪಾಹಿ ಲಕ್ಷ್ಮೀನರಸಿಂಹ |
ನರಸಿಂಹ ನಮಿಪೆ ನಾ ನಿನ್ನ |
ಚಾರುಚರಣ ಕಮಲಕೆ ನೀ ಎನ್ನ | ಆಹ |
ಕರವಪಿಡಿದು ನಿಜ ಶರಣನೆಂದೆನಿಸೊ | ಭಾ |
ಸುರ ಕರುಣಾಂಬುಧೆ **ಗರುಡವಾಹನ ಲಕ್ಷ್ಮೀನರಸಿಂಹ** ||ಪ||

ತರಳ ಪ್ರಹ್ಲಾದನ ನುಡಿಯಾ ಕೇಳಿ |
ತ್ವರಿತಾದಿ ಬಂದ್ಯೊ ಎನ್ನೊಡೆಯಾ | ಏನು |
ಕರುಣಾಳು ಭಕ್ತರ ಭಿಡೆಯಾ | ಮಾರ |
ಲರಿಯ ಎಂದೆಂದು ಕೆಂಗಿಡಿಯಾ | ಆಹ |
ಭರದಿಂದುಗುಳುತ ಬೊಬ್ಬಿರಿದು ಬೆಂಬತ್ತಿ | ಕ
ರ್ಬುರ ಕಶಿಪುವಿನ ಮುಂಗುರುಳ ಪಿಡಿದೆ | ಲಕ್ಷ್ಮೀನರಸಿಂಹ ||೧||

ಪ್ರಳಯಾಂಬುನಿಧಿ ಘನಘೋಷ | ದಂತೆ |
ಘುಳಿ ಘುಳಿಸುತಲಿ ಪ್ರದೋಷ | ಕಾಲ |
ತಿಳಿದು ದೈತ್ಯನ ಅತಿರೋಷ | ದಿಂದ |
ಸ್ಪಳಿಸಿ ಮೇದಿನಿಗೆ ನಿರ್ದೋಷ || ಆಹ ||
ಸೆಳೆಸೆಳೆಯುತ ಚರ್ಮಸುಲಿದು ಕೆನ್ನೆತ್ತರೋ |
ಕುಳಿಯಾನಾಡಿದ ದಿಶಾವಳಿಗಳೊಳಗೆ ಲಕ್ಷ್ಮೀನರಸಿಂಹ ||೨||

ಕ್ರೂರ ದೈತ್ಯನ ತೋರಕರುಳಾ | ತೆಗೆ |
ದ್ವಾರಮಾಡಿದೆ ನಿಜಕೊರಳಾ | ಕಂಡು |
ವಾರಿಜಾಸನ ಮುಖ್ಯರರಳ | ಪುಷ್ಪ |
ಧಾರೆಗರೆದು ವೇಗತರಳಾ || ಆಹ ||
ಧೀರ ಪ್ರಹ್ಲಾದಗೆ ತೋರಿತವಾಂಘ್ರಿ ಸ |
ರೋರುಹವನುಕಾಯ್ದೆ ಕಾರುಣ್ಯನಿಧಿ ಲಕ್ಷ್ಮೀನರಸಿಂಹ ||೩||

ಜಯ ಜಯ ದೇವ ವರೇಣ್ಯ | ಮಹ |
ದ್ಭಯನಿವಾರಣನೆ ಅಗ್ರಗಣ್ಯ | ಗುಣಾ |
ಶ್ರಯ ಘೋರ ದುರಿತಾರುಣ್ಯ | ಧನಂ |
ಜಯ ಜಗದೇಕಶರಣ್ಯ || ಆಹ ||
ಲಯ ವಿವರ್ಜಿತ ಲೋಕ |
ತ್ರಯ ವ್ಯಾಪ್ತ ನಿಜ ಭಕ್ತ |
ಪ್ರಿಯ ಘೋರ ಭಯಹರ |
ದಯ ಮಾಡೆಂದರೊ ಲಕ್ಷ್ಮೀನರಸಿಂಹ ||೪||

ಕುಟಿಲ ದ್ವೇಷದವನೀನಲ್ಲ | ನಿನ್ನಾ |
ಭ್ರುಟಿಕಂಜಿದರುಸುರರೆಲ್ಲಾ | ನರ |
ನಟನೆ ತೋರಿದ್ಯೋ ಲಕ್ಷ್ಮೀನಲ್ಲಾ | ಇದು |
ಸಟಿಯಲ್ಲ ಅಪ್ರತಿಮಲ್ಲ || ಆಹ ||
ವಟಪತ್ರ ಶಯನ ಧೂ | ರ್ಜಟಿವಂದ್ಯ ಜಗನ್ನಾಥ |
ವಿಠಲಕೃತಾಂಜಲಿ | ಪುಟದಿ ಬೇಡುವೆ ಲಕ್ಷ್ಮೀನರಸಿಂಹ ||೫||

---

# ಸಕಲಾಭೀಷ್ಟದ ಶ್ರೀ ಲಕ್ಷ್ಮೀವೆಂಕಟೇಶನ ಪ್ರಾರ್ಥನಾ

ಪದ ರಾಗ ವರಾಳಿ—ಏಕತಾಳ

ಶ್ರೀನಿಕೇತನಾ | ಪಾಲಯ ಮಾಂ | ಶ್ರೀನಿಕೇತನಾ ||
ಜ್ಞಾನಗಮ್ಯ ಕರುಣಾನಿಧೆ ನಿನ್ನಡಿ |
ಗಾ ನಮಿಸುವೆ ಪೊರೆ ದೀನದಯಾಳೊ | ಶ್ರೀನಿಕೇತನಾ ||ಪ||

ಶ್ರೀಕರಾರ್ಚಿತಾ | ಪಾದಾಬ್ಜ ಪರಾಕು ಅಚ್ಯುತ |
ಶೋಕನಾಶನ ವಿ | ಶೋಕ ಸುಲಭ ಹೃ |
ದ್ವ್ಯಾಕುಲ ಕಳೆಯೊ ಕೃಪಾಕರ ವೊಲಿದೂ ||೧||

ಜ್ಞಾನ ಮಾನದ ಶರಣರ ಸುರ | ಧೇನು ಸರ್ವದಾ |
ನೀನೆಂದರಿತು ಸದಾನುರಾಗದಲಿ |
ಧೇನಿಪೆ ಮನದನುಮಾನವ ಬಿಡಿಸೊ ||೨||

ಪನ್ನಗಾಚಲಾ ನಿವಾಸ ಪ್ರ | ಪನ್ನ ವತ್ಸಲಾ |
ಬಿನ್ನಪ ಕೇಳೊ **ಜಗನ್ನಾಥವಿಠಲ**
ಧನ್ಯನ ಮಾಡೊ ಶರಣ್ಯ ಶರಣನಾ ||೩||

# ಮಂಗಳಾಚರಣ ಧ್ಯಾನಶ್ಲೋಕಗಳು

ಹರಿಃ ಓಂ ಶ್ರೀಗುರುಭ್ಯೋನಮಃ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ |
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ||೧||

ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ |
ಸರ್ವಜೀವ ಪ್ರಣೇತಾರಂ ವಂದೇ ವಿಜಯದಂ ಹರಿಮ್ ||೨||

ಧ್ಯಾಯೇನ್ನೃಸಿಂಹಮುರುವೃತ್ತರವಿತ್ರಿಣೇತ್ರಂ
ಜಾನುಪ್ರಸಕ್ತಕರಯುಗ್ಮಮಥಾಪರಾಭ್ಯಾಮ್ ||
ಚಕ್ರಂ ಧರಂ ಚ ದಧತಂ ಪ್ರಿಯಯಾ ಸಮೇತಂ
ತಿಗ್ಮಾಂಶು ಕೋಟ್ಯಧಿಕತೇಜಸಮಗ್ರ್ಯಶಕ್ತಿಮ್ ||೩||

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ |
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ||೪||

ಶ್ರೀಮಧ್ವಸಂಸೇವನಲಬ್ಧಶುದ್ಧ-
ವಿದ್ಯಾಸುಧಾಂಭೋನಿಧಯೋಽಮಲಾ ಯೇ ||
ಕೃಪಾಲವಃ **ಪಂಕಜನಾಭತೀರ್ಥಾಃ**
ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ||೫||

ಭೂದೇವೀತನಯಾಸಕ್ತರಘ್ವೀಶಪದಮಾನಸಃ ||
**ನೃಹರ್ಯಾಖ್ಯ**ಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ||೬||

ಮಾಧವಾಂಘ್ರಿಯುಗಾಸಕ್ತಾಃ **ಮಾಧವಾಖ್ಯಮುನೀಶ್ವರಾಃ** ||
ವಿತೇನುಃ ಮಧ್ವತೀರ್ಥಂ ಯೇ ದದ್ಯುಸ್ತೇಭೀಷ್ಟಸಂತತಿಮ್ ||೭||

ಶ್ರೀಮದ್ರಮಾರಮಣಸದ್ಗಿರಿಪಾದಸಂಗಿ-
ವ್ಯಾಖ್ಯಾನಿನಾದದಲಿತಾಖಿಲದುಷ್ಟದರ್ಪಂ |
ದುರ್ವಾದಿವಾರಣವಿದಾರಣದಕ್ಷದೀಕ್ಷ-
**ಮಕ್ಷೋಭ್ಯತೀರ್ಥ**ಮೃಗರಾಜಮಹಂ ನಮಾಮಿ ||೮||

ಚಿತ್ರೈಃ ಪದ್ಯೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ |
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀ ಜಯತೀರ್ಥವಾಕ್ ||೯||

ಯದ್ವೃಂದಾವನಸೇವಯಾ ಸುಧಿಮಲಾಂ ವಿದ್ಯಾಂ ಪಶುಂ ಸಂತತಿಮ್
ಧ್ಯಾನಂ ಜ್ಞಾನಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಶೀಘ್ರಂ ಜನಃ ||
ತಂ ವಂದೇ ನರಸಿಂಹತೀರ್ಥನಿಲಯಂ ಶ್ರೀ ವ್ಯಾಸರಾಟ್ಪೂಜಿತಮ್ |
ಧ್ಯಾಯಂತಂ ಮನಸಾ ನೃಸಿಂಹಚರಣಂ **ಶ್ರೀಪಾದರಾಜಂ ಗುರುಮ್** ||೧೦||

ಅರ್ಥಕಲ್ಪಿತಕಲ್ಪೋಯಂ ಪ್ರತ್ಯರ್ಥಿಗಜಕೇಸರೀ |
**ವ್ಯಾಸತೀರ್ಥಗುರುರ್ಭೂಯಾ**ದಸ್ಮದಿಷ್ಟಾರ್ಥಸಿದ್ಧಯೇ ||೧೧||

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಂ |
**ವಾದಿರಾಜಗುರೂನ್ ವಂದೇ** ಹಯಗ್ರೀವದಯಾಶ್ರಯಾನ್ ||೧೨||

ಮೂಕೋಪಿ ಯತ್ಪ್ರಸಾದೇನ ಮುಕುಂದಶಯನಾಯತೇ |
ರಾಜರಾಜಾಯತೇ ರಿಕ್ತೋ **ರಾಘವೇಂದ್ರಂ ತಮಾಶ್ರಯೇ** ||೧೩||

---

## ಶ್ರೀ ದಾಸವರ್ಯರು

ನಮಃ **ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ |**
ನಮಃ **ಪುರಂದರಾರ್ಯಾಯ ವಿಜಯಾರ್ಯಾಯ** ತೇ ನಮಃ ||೧||

ಮನ್ಮನೋಭೀಷ್ಟವರದಂ ಸರ್ವಾಭೀಷ್ಟ ಫಲಪ್ರದಂ |
**ಪುರಂದರಗುರುಂ ವಂದೇ** ದಾಸಶ್ರೇಷ್ಠಂ ದಯಾನಿಧಿಮ್ ||೨||

ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಮ್ |
ವಿಜ್ಞಾನವಿಮಲಂ ಶಾಂತಂ **ವಿಜಯಾಖ್ಯಗುರುಂ ಭಜೇ** ||೩||

ಆಗತಾದಿ ತ್ರಿಕಾಲಜ್ಞಂ ಆಗಮಾರ್ಥವಿಶಾರದಮ್ |
ತ್ಯಾಗಭೋಗಸಮಾಯುಕ್ತಂ **ಭಾಗಣ್ಣಾರ್ಯ**ಗುರುಂ ಭಜೇ ||

ದಾಸವರ್ಯಂ ದಯಾಯುಕ್ತಂ ದೂರೀಕೃತದುರಾಶಿಷಮ್ |
ಹರಿಕಥಾಮೃತವಕ್ತಾರಂ **ಜಗನ್ನಾಥ**ಗುರುಂ ಭಜೇ ||

ಪ್ರಾಣನಾಥಪದದ್ವಂದ್ವಪಂಕಜಾಸಕ್ತಮಾನಸಮ್ |
ಶಮಾದಿಗುಣಸಂಯುಕ್ತಂ **ಶ್ರೀಪ್ರಾಣೇಶ**ಗುರುಂ ಭಜೇ ||

ಗುರುಭಕ್ತಿಮತಾಂ ಶ್ರೇಷ್ಠಂ ಗುರುಪಾದಾವಲಂಬಿನಮ್ |
ಗುರೂಪದಿಷ್ಟಮಾರ್ಗಸ್ಥಂ **ಗುರುಪ್ರಾಣೇಶ**ಗುರುಂ ಭಜೇ ||೭||

**ಗುರುಶ್ರೀಶನುಹಂ** ವಂದೇ ಗುರುತತ್ವವಿಬೋಧಕಮ್ |
ಗುಹಾಶಯಂ ಗುಣಾತೀತಂ ಭಾವಯಂತಂ ಮಹಾಮತಿಮ್ ||೮||

ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ |
ತೇನ ವಿಘ್ನಾಃ ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ ||೯||

ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ |
ವೈಷ್ಣವಾಃ ವಿಷ್ಣುಹೃದಯಾಃ ತಾನ್ನಮಸ್ಯೇ ಗುರೂನ್ಮಮ ||೧೦||

---

# ವಿಷಯಾನುಕ್ರಮಣಿಕೆ

# ಶ್ರೀ ರಾಘವೇಂದ್ರಸ್ವಾಮಿಗಳು, ಮಂತ್ರಾಲಯ



ತಪ್ತಕಾಂಚನಸಂಕಾಶಂ ಅಕ್ಷಮಾಲಾಕಮಂಡಲುಮ್
ದೋರ್ಭ್ಯಾಂ ದಧಾನಂ ಕಾಷಾಯವಸನಂ ರಾಮಮಾನಸಂ |
ಯೋಗೀಂದ್ರತೀರ್ಥವಂದ್ಯಾಂಘ್ರಿಂ ತುಲಸೀದಾಮಭೂಷಿತಂ
ಜ್ಞಾನಭಕ್ತಿತಪಃಪೂರ್ಣಂ ಧ್ಯಾಯೇದಿಷ್ಟಾರ್ಥಸಿದ್ಧಯೇ ||

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ |
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ||

ರಾಮ ನರಹರಿ ಕೃಷ್ಣ ಕೃಷ್ಣರ | ನೇಮದಿಂದೀ ಮೂರ್ತಿಗಳ ಪದ |
ತಾಮರಸ ಭಜನೆಯನು ಮಾಳ್ಪರು | ಕೋಮಲಾಂಗರು ಕಠಿಣ ಪರವಾದಿ ||
ಸ್ತೋಮಗಳ ಮಹಮಸ್ತಕಾದ್ರಿಗೆ | ಭೂಮಿಯೊಳು ಪವಿಯೆನಿಸಿದಾ ಯತಿ |
ಯಾಮ ಯಾಮಕೆ ಎಲ್ಲರಿಗೆ ಶುಭ | ಕಾಮಿತಾರ್ಥವ ಕೊಡುವ ಗುರುಗಳ |
ನೋಡಿದೇ ಗುರುಗಳ ನೋಡಿದೇ ||

—ವಿಜಯ ದಾಸರು

ಶ್ರೀ ಸತ್ಯವರತೀರ್ಥರ ವೃಂದಾವನ
ಸಂತೇಬಿದನೂರು



ಶ್ರೀ ಸತ್ಯಸಂಧಸಿಂಧೂತ್ಥಃ ಶ್ರೀ ಸತ್ಯವರಚಂದ್ರಮಾಃ |
ಪ್ರಾರ್ಥಿತಾರ್ಥಪ್ರದೋ ನಿತ್ಯಂ ಭೂಯಃ ಸ್ಯಾದಿಷ್ಟಸಿದ್ಧಯೇ॥

ಶ್ರೀ ಸತ್ಯಧರ್ಮತೀರ್ಥರ ವೃಂದಾವನ
ಹೊಳೆಹೊನ್ನೂರು (ಶಿವಮೊಗ್ಗ ಜಿಲ್ಲೆ)



ಶ್ರೀ ಸತ್ಯವರದುಗ್ಧಾಬ್ಧೇರುತ್ಥಿತಾ ಜಗತೀತಲೇ |
ಸುಧಾ ಶ್ರೀ ಸತ್ಯಧರ್ಮಾಖ್ಯಾ ಪಾವಯೇತ್ ಸ್ಮರತಸ್ಸತಃ॥

ಶ್ರೀ ಸತ್ಯಪರಾಯಣತೀರ್ಥರ ವೃಂದಾವನ
ಸಂತೇಬಿದನೂರು



ಸತ್ಯಸಂತುಷ್ಟವಾರಾಶೇಃ ಜಾತಸ್ಸತ್ಯಪರಾಯಣಃ |
ಚಿಂತಾಮಣಿಸ್ಸದಾ ಭೂಯಾತ್ಸತಾಂ ಚಿಂತಿತಸಿದ್ಧಯೇ ॥

## ಶ್ರೀ ಸಂಕರ್ಷಣ ಒಡೆಯರವರ ವೃಂದಾವನ

ಕರಂಪೂಂಡಿ - ಪೋಳೂರು ಮಾರ್ಗ, ಉತ್ತರ ಆರ್ಕಾಟ್ ಜಿಲ್ಲಾ



ಸಂಕರ್ಷಣಯತೀಂದ್ರಾಯ ಶಾಂತಾಯಾಮಲಚೇತಸೇ ।
ದಾಂತಾಯ ಭಜತಾಂ ಕಲ್ಪತರವೇ ಗುರವೇ ನಮಃ ॥

# ಶ್ರೀ ಜಗನ್ನಾಥದಾಸವರ್ಯರು
(ಮಾನವಿಯಲ್ಲಿರುವ ದಾಸರ ಸ್ತಂಭ)



ದಾಸವರ್ಯಂ ದಯಾಯುಕ್ತಂ ದೂರೀಕೃತದುರಾಶಿಷಂ ।
ಹರಿಕಥಾಮೃತವಕ್ತಾರಂ ಜಗನ್ನಾಥಗುರುಂ ಭಜೇ ॥

ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್ ।
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ॥

ಓಂ

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

ಶ್ರೀ ಜಗನ್ನಾಥದಾಸರಾಯವಿರಚಿತ

# ಶ್ರೀಮದ್ಧರಿಕಥಾಮೃತಸಾರ

**ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲಸಂಜಾತ**

ಶ್ರೀಮತ್ಸಂಕರ್ಷಣತೀರ್ಥವಿರಚಿತ

**ಕನ್ನಡ ಭಾಷಾ ಟೀಕಾ ಸಹಿತ.**

## ಒಂದನೆಯ ಸಂಧಿ

ಮಂಗಳಾಚರಣ ಸಂಧಿ—ನಾಂದೀ ಸಂಧಿ

**ಮೂಲ :**

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

ಈ ಮೂಲಗ್ರಂಥ ಕರ್ತೃಗಳಾದ ಶ್ರೀ ಜಗನ್ನಾಥದಾಸರಾಯರು ತಾವು ಮಾಡಿದ ಗ್ರಂಥದ ಹೆಸರನ್ನು ಹೇಳಿ, ಆ ಗ್ರಂಥದಲ್ಲಿ ಆದರ ಮಾಡಬೇಕೆಂದು ಭಕ್ತರ ಪ್ರಾರ್ಥನಾ ಮಾಡುತ್ತಾರೆ, ಮತ್ತು ಈ ಗ್ರಂಥಕ್ಕೆ ಅಧಿಕಾರಿಗಳನ್ನು ಹೇಳಥಾರೆ.

**ಟೀಕಾ :**

ಹರಿ–ಪಾಪಪರಿಹಾರಕನಾದ ಸರ್ವೋತ್ತಮನಾದ ಶ್ರೀ ಪರಮಾತ್ಮನ, ಕಥಾ–ಸೃಷ್ಟ್ಯಾದಿ ವ್ಯಾಪಾರರೂಪವಾದ ಕಥಾವ್ಯಂಬ, ಅಮೃತ–ಅಮೃತದಲ್ಲಿ ತೆಗೆಯಲ್ಪಟ್ಟ, ಸಾರ–ಅಧ್ಯಾತ್ಮರೂಪವಾದ ಅನುಸಂಧಾನಾಖ್ಯಸಾರವೆಂಬ ಎಂವರೆ ಶ್ರೀದೇವರ ಪ್ರಸ್ತಾಪ, ಶ್ರವಣ ಅಮೃತಕ್ಕೆ (ಮೋಕ್ಷಕ್ಕೆ) ಮುಖ್ಯ ಸಾಧನ. ಶ್ರೀ ಹರಿಕಥೆಯೇ ದೇವಗುಣಾನು ವರ್ಣನ ಅಮೃತಕ್ಕಿಂತ ರಸಜ್ಞರಿಗೆ ರುಚಿಕರ. "ದಧಿ ಮಧುರಂ, ಮಧು ಮಧುರಂ, ದ್ರಾಕ್ಷಾ ಮಧುರಾ, ಸುಧಾಪಿ ಮಧುರೈವ । ಮಧುರಾದಪಿ ತನ್ಮಧುರಂ ಮಧುರಾನಾಥಸ್ಯ ನಾಮ ಯದ್ಗೀತಂ ||" ಎಂಬುವುದೇ ಮೊದಲಾದ ಅರ್ಥಗಳು ತಿಳಿಯುತ್ತವೆ. ದೇವರ ಸ್ವರೂಪ ಪ್ರತಿಪಾದಕವಾದ ವೇದಾದಿ ಹರಿಕಥೆಯೇ ಮೋಕ್ಷದಲ್ಲಿಯ ಸಾರ, ಸಾಮಗಾನ ದಿಂದ ಆನಂದೋದ್ರೇಕವಾಗುವದ್ದರಿಂದ ಮುಖ್ಯವೆಂದು "ಏತತ್ಸಾಮಗಾಯನ್ನಾಸ್ತೇ" ಎಂಬ ಶೃತ್ಯಾದಿಗಳಿಂದ ಜ್ಞಾತವಾಗುತ್ತದೆ. ಇಂತಹ ಗ್ರಂಥವನ್ನು, ಗುರುಗಳ ಕರುಣದಿಂದ–

ಸಚ್ಛಾಸ್ತ್ರೋಪದೇಶಕ ಗುರುಗಳ ತಥಾ ಜಗದ್ಗುರುಗಳಾದ ಶ್ರೀ ಮಧ್ವಾಚಾರ್ಯರ— ಇನ್ನೂ ತತ್ವೇಶರೇ ಮೊದಲಾದ ಗುರುಗಳ ಅಧೀನವಾದ್ದರಿಂದ ತಮ್ಮ ಹೇಳುವಿಕೆ ಕರ್ತೃತ್ವ ಬಹುಪರಾಧೀನವೆಂದು ಅರ್ಥ. ಇವರುಗಳ ಅನುಗ್ರಹ ಬಲದಿಂದ, ಆಪನಿತು–ಬುದ್ಧಿಗೆ ತೋರಿದಷ್ಟು ಎಂದರೆ

"ಆಚಕ್ಷ್ವ ಆತ್ಮಾವಗವೋತ್ರ ಯಾವಾನ್ ।
ನಭಃ ಪತಂತ್ಯಾತ್ಮಸಮಂ ಪತತ್ರಿಣಃ ।
ತಥಾ ಸಮಂ ವಿಷ್ಣುಗತಂ ವಿಪಶ್ಚಿತಃ ॥"

ಎಂತ ಯಥಾಶಕ್ತಿ ಪಕ್ಷಿಗಳು ಅಂತರಿಕ್ಷದಲ್ಲಿ ಹಾರುವುವೋ ಹಾಗೆ ತಮ್ಮ ತಮ್ಮ ಜ್ಞಾನತಾರತಮ್ಯಾನುಸಾರ ದೇವರ ಗುಣ ವರ್ಣಿಸುವರು ಜನರು ಎಂಬ ಭಾಗವತಾರ್ಥ ಇರುವುದರಿಂದ, ಯಥಾಮತಿ, ಪೇಳುವನಾಗುತ್ತೇನೆ. ಪರಮ ಭಗವದ್ಭಕ್ತರು— "ನಾನ್ಯಥಾ ಹ್ಯಾವಯೋರರ್ಥೋ ರಾಜಸೇವಕಯೋರಿವ" ಎಂಬಂತೆ ಪರಸ್ಪರ ಫಲಾಪೇಕ್ಷೆಯುಳ್ಳ ದೊರೆ ಮತ್ತು ಆಳಿನ ಹಾಂಗೂ ಕಾರ್ಯಸಾಧನಾಪೇಕ್ಷೆ ಇಲ್ಲದೇ, ಮೋಡವಿದ್ದುದಕ್ಕೆ ಮಯೂರ ಕುಣಿವಂತೆ ಸ್ವಾಭಾವಿಕ ನಿಷ್ಕಾಮುಕರಾದ ಭಕ್ತರೇ ಈ ಗ್ರಂಥಾಭ್ಯಾಸಕ್ಕೆ ಅಧಿಕಾರಿಗಳು. ಇಂಥಾ ಭಕ್ತರು, ಇದನ–ಈ ಹರಿಕಥಾಮೃತಸಾರಾಖ್ಯ ಗ್ರಂಥವನ್ನ, ಪರಮಾದರದಿ–ವಿಶ್ವಾಸಾತಿಶಯ, ಮುಖೋಲ್ಲಾಸಾದಿಗಳಿಂದ, ಕೇಳುವುದು–ಕೇಳೋಣರಾಗಬೇಕು ಎಂತು ತಾತ್ಪರ್ಯ.

ಹೀಗೆ ಪರಮತ ನಿರಾಕರಣ, ಸ್ವಮತ ಸ್ಥಾಪನ ಸಂಕ್ಷೇಪದಿಂದ ಪ್ರತಿಜ್ಞಾ ವಾಕ್ಯವೆಂತ, ಸಂಧಿ ಸೂಚನೆಯೆಂದು ಸಹಕರಿಸುವ ಅರ್ಧ ಪದ್ಯದಲ್ಲಿ ಹೇಳಿ "ಸಂಕ್ಷೇಪ ವಿಸ್ತಾರಾಭ್ಯಾಂ ಚ ಕಥಯಂತಿ ಮನೀಷಿಣಃ" ಎಂಬ ನ್ಯಾಯಾನುಸಾರ ನಾಂದೀ ಸಂಧಿಯೆಂಬ ನಿರ್ವಿಘ್ನ ಪ್ರಚಯಾದ್ಯನೇಕ ಫಲಪ್ರದವಾದ ಮಂಗಳಾಚರಣ ಸಂಧಿಯಲ್ಲಿ ಶ್ರೀ ಪರಮಾತ್ಮನಾರಭ್ಯ ಸಕಲ ದೇವತೆಗಳು, ವಿಷ್ಣುಭಕ್ತರು ಇವರುಗಳನ್ನು ಸ್ತೋತ್ರಮಾಡಿ ಗ್ರಂಥ ಉಪಕ್ರಮವನ್ನು ಮಾಡತಾರೆ.

**ಶ್ರೀ ರಮಣಿ ಕರಕಮಲಪೂಜಿತ ।**
**ಚಾರುಚರಣ ಸರೋಜ ಬ್ರಹ್ಮ ಸ ।**
**ಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ ವಿನುತ ॥**
**ನೀರಜ ಭವಾಂಡೋದಯಸ್ಥಿತಿ ।**
**ಕಾರಣನೆ ಕೈವಲ್ಯದಾಯಕ ।**
**ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವ ॥ ೧ ॥**

ಇಷ್ಟದೇವತೆಯೂ, ಗ್ರಂಥಪ್ರತಿಪಾದ್ಯ ದೇವತೆಯೂ ಆದ ಗುಣಪೂರ್ಣನಾದ, ಶ್ರೀ ನರಸಿಂಹದೇವರನ್ನು ವಂದನ ಮಾಡಿ ಪ್ರಾರ್ಥನೆ ಮಾಡತಾರೆ.

ಶ್ರೀ–ಕಾಂತಿಸಂಪನ್ನಳಾದ, ಐಶ್ವರ್ಯಪೂರ್ಣಳಾದ, ರಮಣಿ–ಶ್ರೀ ನಾರಾಯಣ ದೇವರಿಗೆ ರಮಣಿಯಾಗಿರುಳ್ಳ, ಲಕ್ಷ್ಮೀದೇವಿಯರ, ಕರಕಮಲ–ಕರಗಳೆಂಬ ಕಮಲಪುಷ್ಪಗಳಿಂದ, ಪೂಜಿತ–ಪೂಜಿತನಾದವ, ಅಂದರೆ ರಮಾದೇವಿಯರು ತಮ್ಮ ಕರಗಳನ್ನು ಸದಾ ಪರಮಾತ್ಮನ ಪಾದಸೇವೆಯಲ್ಲೇ ಉಪಯೋಗಿಸತಕ್ಕದೆಂದು ತಾತ್ಪರ್ಯ. ಶ್ರೀ ಪರಮಾತ್ಮನಾದರೋ ಸರ್ವಸೇವಾ ರಮಾದ್ವಾರಾ ಸ್ವೀಕರಿಸತಕ್ಕವ, ಮತ್ತು ಪ್ರಳಯಕಾಲದಲ್ಲಿಯೂ, ಶುದ್ಧ ಲಕ್ಷ್ಮ್ಯಾತ್ಮಕ ಶ್ರೀ ಭಾಗದಲ್ಲಿಯೂ ರಮಾದೇವಿಯರಿಂದಲೇ ಸೇವಿತನಾದವ. ಅನ್ಯರಿಂದ ಸೇವಿತನಲ್ಲ. ಇಂಥಾ ಪೂಜಿತವಾದ, ಚಾರು–ಮನೋಹರವಾದ, ಚರಣಸರೋಜ–ಚರಣಕಮಲಗಳುಳ್ಳವ (ಕಮಲವತು ಪಾದಗಳೆಂದು ತಾತ್ಪರ್ಯ) ಬ್ರಹ್ಮ–ಚತುರ್ಮುಖ ಬ್ರಹ್ಮದೇವರು, ಸಮೀರ–ಪ್ರಧಾನವಾಯುದೇವರು, ವಾಣಿ–ಸರಸ್ವತೀದೇವಿಯರು, ತಥಾ ಭಾರತೀದೇವಿಯರು, ಫಣೀಂದ್ರ–ಸರ್ಪಶ್ರೇಷ್ಠನಾದ ಶೇಷದೇವರು, ವೀಂದ್ರ–ಪಕ್ಷಿಶ್ರೇಷ್ಠನಾದ ಗರುಡದೇವರು, ಭವೇಂದ್ರ–ಏಕಾದಶರುದ್ರರೊಳಗೆ ಶ್ರೇಷ್ಠನಾದ, ಪಾರ್ವತೀಪತಿಯಾದ ರುದ್ರದೇವರು, ಮುಖ–ಇವರೇ ಮೊದಲಾದ ಸಮೂಹಗಳಿಂದ, ವಿನುತ–ಸ್ತುತ್ಯನಾದವ. ಪೂರ್ವೋಕ್ತಪ್ರಕಾರ ಪಾದಸೇವಾ ಇವರಿಗಿಲ್ಲ. ಆ ಸ್ಥಾನದಲ್ಲಿ ಇವರಿಗೆ ಪ್ರವೇಶವಿಲ್ಲ. ಇಂಥಾ ಪಾದಸೇವಾವುಳ್ಳವನೆಂದು ಸ್ತುತಿಮಾತ್ರವೇ. ಮತ್ತು ಅಂಡದ ಹೊರಗೆ ಬ್ರಹ್ಮಾದಿ ದೇವತೆಗಳ ಸೃಷ್ಟಿಸಿದ ಅನಂತರ ತಮ್ಮಗಳಿಗೆ ಆವಾಸಸ್ಥಾನಗಳು ಬೇಕೆಂದು ಸ್ತುತಿಸೋದರಾದರು. ಆದ್ದರಿಂದ ತದ್ವಿವಕ್ಷಯಾ ಬ್ರಹ್ಮಾದಿಗಳಿಂದ ವಿನುತ, ಪಾದಸೇವಾ ಸ್ತುತ್ಯ ಎಂಬ ಎರಡು ವಿಶೇಷಣಗಳು. ಪ್ರಳಯಕಾಲದಲ್ಲಿ ರಮಾದೇವಿಯರಿಂದ ಪಾದಸೇವಿತನಾಗಿ, ಬ್ರಹ್ಮಾದಿಗಳಿಂದ ವಿನುತನಾದವನಾಗಿ, ಈ ಬ್ರಹ್ಮಾದಿಗಳಿಗೆ ಆವಾಸಕ್ಕೆ ಯೋಗ್ಯವಾದ, ನೀರಜ–ಉದಕದಲ್ಲಿ ಉತ್ಪನ್ನವಾದ ಕಮಲ, ಭವಾಂಡ–ಇದರಲ್ಲಿ ಉತ್ಪನ್ನನಾದವ ಬ್ರಹ್ಮ, ಇವನ ದೇಹ, ಇದಕ್ಕೆ ಬ್ರಹ್ಮಾಂಡ ಎಂದು ಸಾಂಕೇತ. ಇಂಥ ಬ್ರಹ್ಮಾಂಡವನ್ನು, ಉದಯ–ಸೃಷ್ಟಿಮಾಡೋದಕ್ಕೇನು ಮತ್ತು ಸ್ಥಿತಿ–ಪಾಲನಮಾಡೋದಕ್ಕೇನು, ಕಾರಣನೆ–ಮುಖ್ಯಕಾರಣನಾದವನೇ, ಕೈವಲ್ಯದಾಯಕ–ಕೈವಲ್ಯ ಎಂಬುದು ಪ್ರಳಯಕಾಲದಲ್ಲಿ ಆಗತಕ್ಕದ್ದಾದ್ದರಿಂದ, ಕೈವಲ್ಯ ಶಬ್ದದಿಂದ ಪ್ರಳಯವನ್ನೂ ಹೇಳಿದಂತಾಯಿತು. ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಪ್ರದಾತೃವಾದ, ನಾರಸಿಂಹನೇ–ಹೇ ನಾರಸಿಂಹರೂಪಿಯಾದ ಶ್ರೀ ಪರಮಾತ್ಮನೇ, ನಮಿಪೆ–ಸಾಷ್ಟಾಂಗ ವಂದನ ಮಾಡುವೆ. ಎಮಗೆ–ನಿಮ್ಮ ಪಾದ ನಂಬಿದ ನಮಗೆ, ಮಂಗಳವ–ಅಹಂ ಮಮತಾದಿ ಅಮಂಗಳವ ಬಿಡಿಸಿ, ದಿವ್ಯಜ್ಞಾನವನ್ನೂ, ಐಶ್ವರ್ಯವನ್ನೂ, ಶುಭವನ್ನೂ, ಕರುಣಿಪುದು–ಕರುಣದಿಂದ ಕೊಡೋವನಾಗು ಎಂತ ಅರ್ಥ. ಪ್ರತ್ಯಕ್ಷವಾಗಿರುವ ಪ್ರಪಂಚಕ್ಕೆ ಸೃಷ್ಟಿಲಯಾದಿಗಳು ಮನುಷ್ಯಯತ್ನ ಮಾತ್ರ ಸಾಧ್ಯವಲ್ಲದ್ದಾಗಿರುವದ್ದರಿಂದ ವಿವೇಕಿಗಳಿಗೆ ಈ ಜಗತ್ಕಾರಣವಸ್ತು ಒಂದು ಇದೆ ಎಂದು ತಿಳಿದುಬರುತ್ತದೆ. ಆ ವಸ್ತುವೇ ಪರಬ್ರಹ್ಮಪದವಾಚ್ಯನಾದ ತಾರತಮ್ಯೋಪೇತ ಸರ್ವರಿಂದಲೂ ಅತ್ಯುತ್ತಮನಾದ, ಶ್ರೀ ನಾರಸಿಂಹಾಭಿನ್ನ ಶ್ರೀ ನಾರಾಯಣದೇವರು. ಇವನನ್ನು ನಿರ್ದೋಷನು, ಜ್ಞಾನಾನಂದಾದ್ಯನಂತಗುಣಪರಿಪೂರ್ಣನು ಎಂದು ಭಜಿಸಬೇಕೆಂತ ತಾತ್ಪರ್ಯ.

**ಜಗದುದರನತಿವಿಮಲ ಗುಣರೂ ।**
**ಪಗಳನಾಲೋಚನದಿ ಭಾರತ ।**
**ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ ॥**
**ಬಗೆ ಬಗೆಯ ನೂತನವ ಕಾಣುತ ।**
**ಮಿಗೆ ಹರುಷದಿಂ ಪೊಗಳಿ ಹಿಗ್ಗುವ ।**
**ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ॥ ೨ ॥**

ಪೂರ್ವೋಕ್ತ ಪ್ರಳಯಕಾಲದಲ್ಲಿ ಶ್ರೀ ನಾರಾಯಣದೇವರ ಪಾದಸೇವಾ ಮಾಡತಕ್ಕ, ಈ ಪರಮಾತ್ಮನ ವಿವಕ್ಷಯಾ ನ್ಯೂನಳಾದ ಶ್ರೀ ಲಕ್ಷ್ಮೀದೇವಿಯರನ್ನು ಸ್ತೋತ್ರ ಮಾಡತಾರೆ.

ಜಗದುದರನ "ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂ ಭರಂ" ಎಂತ ದ್ವಾದಶಸ್ತೋತ್ರ ಪ್ರಮಾಣ ಇರುವದರಿಂದ, ಈ ವರ್ತಮಾನ ಸ್ಥಾವರಜಂಗಮಾತ್ಮಕ ಜಗತ್ತೇನು ಮತ್ತು ಇನ್ನೂ ಅನಂತಾನಂತ ಜಗತ್ತುಗಳೇನು ಉದರದಲ್ಲಿ ಉಳ್ಳ ಶ್ರೀ ಪರಮಾತ್ಮನ, ಅತಿವಿಮಲಗುಣ—ಅತ್ಯಂತ ನಿರ್ದುಷ್ಟಗಳಾದ, ಕಲ್ಯಾಣಗುಣಗಳಿಂದ ಪೂರ್ಣವಾದ, ರೂಪಗಳನ—ರೂಪಗಳನ್ನು, ಆಲೋಚನದಿ—ಆಲೋಚನಾದಿಂದ, ಈ ರಮಾದೇವಿಯು ಜಗದ್ವಿಚಾರ ಆಲೋಚನೆ ಇಲ್ಲದಂತೆ, ಹಸ್ತಗತ ವಸ್ತುವಿನಂತೆ ತಿಳಿಯುತ್ತಾಳೆಂತಲೂ, ಶ್ರೀ ಪರಮಾತ್ಮನ ಗುಣಗಳು ಆಲೋಚನೆಯಿಂದ ಕಾಂಬುವ ಳೆಂತಲೂ ಅರ್ಥ. ಇನ್ನು ಭಾರತ—ನಾಲ್ಕು ವೇದಗಳ ಭಗವದ್ಗುಣಗಳು ಪ್ರತಿಪಾದಿಸುವ ಜಟಿಲವಾಗಿರತಕ್ಕ (ತನ್ನಿಮಿತ್ತದಿಂದ) ಏಕೈಕ ವೇದಾಪೇಕ್ಷಯಾ ಅಧಿಕ ಎಂತ ಕರಿನತಕ್ಕ, ನಾಲ್ಕು ವೇದ ವಿವಕ್ಷಯಾ ವೇದಸಮ ಎಂತ ಕರಿಸತಕ್ಕ ಪೌರುಷೇಯ ವಾದ ವೇದಾನುಶ್ರುತ್ಯವಾದ ಭಾರತಗತ ಪರಮಾತ್ಮನ ಗುಣಗಳೇನು, ನಿಗಮತತಿಗಳ—ವೇದ ಸಮೂಹಗಳಲ್ಲಿ ವಿದ್ಯಮಾನವಾದ ಗುಣಗಳೇನು, ಅತಿಕ್ರಮಿಸಿ—ಈ ಎರಡರಲ್ಲಿ ಹೇಳದೇ ಇರುವ ಗುಣಗಳಲ್ಲಿ ರಮಾದೇವಿಯರಿಗೆ ಆಲೋಚನೆಯಿಲ್ಲ ಎಂತ ತಾತ್ಪರ್ಯ. ಭಾರತ, ವೇದಗಳು ಎರಡರ ಅತಿಕ್ರಮಿಸಿದ ಗುಣಗಳ ಉಪಾಸನಾಕಾಲದಲ್ಲಿ, ಕ್ರಿಯಾವಿಶೇಷಗಳ—ಶ್ರೀ ಪರಮಾತ್ಮನ ವ್ಯಾಪಾರವಿಶೇಷಗಳ, ಅತಿಶಯವುಳ್ಳ, ಬಗೆ ಬಗೆಯ—ನಾನಾ ವಿಧವಾದ, ನೂತನವ—ಹೊಸ ಹೊಸದಾಗಿ ಎಂದರೇ ಗುಣತಃ ಅಸಮ ಳಾದ್ದರಿಂದ ಅಸಮನಾದ ಶ್ರೀ ಪರಮಾತ್ಮನ ಗುಣೋಪಾಸನೆ ಸದಾ ಇರೋದಿಲ್ಲ. ಭಗವದನುಗ್ರಹದಿಂದ ಒಂದಾನೊಂದು ಕಾಲವಲ್ಲಿ ಇರುತ್ತದೆ. ಇದು ಸ್ವಾಖ್ಯ ಪ್ರದೇಶ. ಇಲ್ಲಿ ವಿದ್ಯಮಾನ ಪರಮಾತ್ಮನ ಗುಣವ್ಯಾಪಾರ ವೇದತತಿಗಳಲ್ಲಿ ಇಲ್ಲ. ಇಲ್ಲಿನ ವೈಚಿತ್ರ್ಯವೇ ಬ್ಯಾರೆ. ಆದ್ದರಿಂದ ಇದು ರಮಾವೇವಿಯರಿಗೆ ನೂತನವು. ಇದುವರೆವಿಗೆ ಕಂಡಿದ್ದಿಲ್ಲ. ಆದ್ದರಿಂದಲೇ ನೂತನ ನೂತನವಾಗಿ ಆಲೋಚನೆಯಿಂದ, ಕಾಣುತ — ನೋಡುತಾ ಹೋಗಿ, ಆಶ್ಚರ್ಯಳಾಗಿ, ಮಿಗೆ ಹರುಷದಿಂ—ತನ್ನ ಯೋಗ್ಯತಾಕ್ಕೆ ಮೀರಿದ ಆನಂದ ದಿಂದ, ಪೊಗಳಿ—ಸ್ತೋತ್ರಮಾಡಿ, ಹಿಗ್ಗುವ—ಪರಮಾನಂದದಿಂದ, ಮೈಮರೆತು, ಉಬ್ಬಿ

ದವಳಾದ ಮತ್ತು ತ್ರಿಗುಣಮಾನಿ–ಜಗದುಪಾದಾನವಾದ ತ್ರಿಗುಣಗಳಿಗೆ ಅಭಿಮಾನಿಯಾದ ಮಹಾಲಕುಮಿ–ಬ್ರಹ್ಮಾದಿಗಳಿಕ್ಕಿಂತಲೂ ಶ್ರೇಷ್ಠಳಾದ ಲಕ್ಷ್ಮೀದೇವಿಯರು, ಸಂತೈಸಲಿ–ಸಂರಕ್ಷಣೆ ಮಾಡಲಿ, ಅನುದಿನವು–ಪ್ರತಿದಿನವಲ್ಲೂ ಎಂತ ಅರ್ಥ.

ಪ್ರತಿದಿನದಲ್ಲೂ ಮಾಡತಕ್ಕ ಏಕಾದಶೇಂದ್ರಿಯಜನಿತ ಕರ್ಮಗಳಲ್ಲಿ ಅಂತರ್ಗತನಾಗಿ ಬಿಂಬರೂಪೀ ಪರಮಾತ್ಮ ಇದ್ದಾನೆಂಬ ಜ್ಞಾನವೂ, ಭಕ್ತಿಯೂ ಆ ಪ್ರಕಾರ ತಿಳಿಯೋದರಲ್ಲಿ ವಿರಕ್ತಿಯೂ ಕೊಟ್ಟು ಲಕ್ಷ್ಮೀದೇವಿಯರು ನಮ್ಮನ್ನು ಸಂರಕ್ಷಣ ಮಾಡಲಿ ಎಂತ ಪ್ರಾರ್ಥನಾ ಮಾಡೋವರಾಗಿದ್ದಾರೆಂತ ತಾತ್ಪರ್ಯ.

**ನಿರುಪಮಾನಂದಾತ್ಮಭವ ನಿ ।**
**ರ್ಜರಸಭಾಸಂಸೇವ್ಯ ಋಜುಗಣ ।**
**ದರಸೆ ಸತ್ವಪ್ರಚುರ ವಾಣೀಮುಖಸರೋಜೇನ ।**
**ಗರುಡ ಶೇಷ ಶಶಾಂಕದಳ ಶೇ ।**
**ಖರರ ಜನಕ ಜಗದ್ಗುರುವೇ ತ್ವ ।**
**ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ ॥ ೩ ॥**

ಪೂರ್ವೋಕ್ತ ಶ್ರೀ ಪರಮಾತ್ಮನ ಸ್ತುತಿಮಾಡಿದ ದೇವತೆಗಳ ಒಳಗೆ ಶ್ರೇಷ್ಠರಾದ ಜೀವೋತ್ತಮರಾದ ಬ್ರಹ್ಮದೇವರ ಸ್ತೋತ್ರ ಮಾಡುತಾರೆ.

ನಿರುಪಮ–ಜೀವಕೋಟಿಯೊಳಗೆ ಉಪಮಾನರಹಿತನಾದವ, ಜೀವೋತ್ತಮನಾದ (ಉಪಲಕ್ಷಣಯಾ ೨೦೦ ಮಂದಿ ಋಜುಗಳು ಗ್ರಾಹ್ಯರು). ಆನಂದ–ಅಸುರಾವೇಶ, ಭಾವರೂಪ ಅಜ್ಞಾನ, ಅಪರೋಕ್ಷ ತಿರೋಧಾನಾದಿ ದೋಷರಹಿತವಾದ ಆನಂದವುಳ್ಳವ, ಆತ್ಮ–ರಮಾಮಧುಸೂದನರ ವ್ಯತಿರಿಕ್ತ ಜಗತ್ತಿಗೆ ನಿಯಾಮಕಸ್ವಾಮಿಯಾದವ, ಇನ್ನೊಂದು ಅರ್ಥ ಏನೆಂದರೆ ಅಸದೃಶಾನಂದವುಳ್ಳ ಶ್ರೀ ನಾರಾಯಣದೇವರ ಪುತ್ರನೇ, ಭವನಿರ್ಜರ–ಸಭಾಸಂಸೇವ್ಯ–ರುದ್ರದೇವರೇ ಮೊದಲಾದ ದೇವತೆಗಳ ಸಮೂಹದಿಂದ ಛಂದಾಗಿ ಸೇವಿತನಾದವನೇ, ಋಜುಗಣದರಸೇ–ಅಜ್ಞಾನಾದಿ ದೋಷಗಳೆಂಬ ವಕ್ರಮಾರ್ಗರಹಿತರಾಗಿ, ಭಗವದ್ವಿಷಯದಲ್ಲಿ ಸರಿಯಾದ ಮಾರ್ಗವುಳ್ಳ, ಋಜುಸಾಂಕೇತವಾದ ಬ್ರಹ್ಮಪಟ್ಟಕ್ಕೆ ಯೋಗ್ಯರಾದ, ಗಣದ ಇನ್ನೂರು ಮಂದಿ ಸಮೂಹದೊಳಗೆ, ಅರಸೆ–ಪಕ್ವ ಸಾಧನೆ ಲಕ್ಷಣದಿಂದ ಶ್ರೇಷ್ಠನಾದವನೇ, ಸತ್ವಪ್ರಚುರ–ರುದ್ರಾದ್ಯಪೇಕ್ಷಯಾ ಸತ್ವ ಗುಣಪ್ರಚುರ ಬಹಳವಾಗುಳ್ಳ ಮಹತ್ತತ್ವಾತ್ಮಕ ಶರೀರವುಳ್ಳವನೇ, ವಾಣೀಮುಖಸರೋಜೇನ–ಸರಸ್ವತೀದೇವಿಯರ ಮುಖವೆಂಬ ಕಮಲಕ್ಕೆ, ಇನ–ಸೂರ್ಯಸದೃಶನಾದವನೇ, ಸೂರ್ಯ ತನ್ನ ಕಿರಣಗಳಿಂದ ಕಮಲವನ್ನು ಹ್ಯಾಂಗೆ ವಿಕಾಸಮಾಡತಾನೋ ಹಾಂಗೆ ವಾಣೀ ಮುಖಕಮಲ ವಿಕಾಸಮಾಡತಕ್ಕ ಸೂರ್ಯಸ್ಥಾನಾಪನ್ನನಾದವ. ರುದ್ರಾದಿಗಳಲ್ಲಿ ಇಂಥಾದ್ದು ಇಲ್ಲ. ಕದಾಚಿತ್ ದಾಂಪತ್ಯ ಪ್ರತಿಕೂಲಗಳುಂಟು. ಈ ದಂಪತಿಗಳಲ್ಲಿ ಅಂಥಾದ್ದು ಇಲ್ಲ. ಈ ವಿಷಯದಲ್ಲೂ ಉಪಮಾನರಹಿತನು ಎಂದು

ಅರ್ಥ. ಇನ್ನು ಗರುಡ–ಗರುಡದೇವರು, ಶೇಷ–ಶೇಷದೇವರು, ಶಶಾಂಕದಳಶೇಖರರ–ಮೃಗವಿಶೇಷದೋಪಾದಿಯಲಿ ಚಿನ್ಹೆಯುಳ್ಳ ಚಂದ್ರನ ಷೋಡಶಕಳಾದಲ್ಲಿ ಒಂದು ಕಳಾ ವಿಶೇಷದಿಂದ ಸಹಿತನಾದ ಚಂದ್ರನೇ ಶಿರದಲ್ಲುಳ್ಳ ರುದ್ರದೇವರು, ಜನಕ–ಇವರುಗಳಿಗೆ ತಂದೆಯಾದವನೇ, ಅಂದರೆ ಮಹತ್ತತ್ವಕ್ಕೆ ವೊದಲು ಬ್ರಹ್ಮದೇವರು ಅಭಿಮಾನಿ ಆದ್ದರಿಂದ ಈ ಮಹತ್ತತ್ವದಿಂದ ಅಹಂಕಾರತತ್ವ ಹುಟ್ಟಿದ್ದರಿಂದ ಅದಕ್ಕೆ ಗರುಡ, ಶೇಷ, ರುದ್ರರು ಅಭಿಮಾನಿಗಳು. ಈ ಮೂರು ಮಂದಿಯೂ ಬ್ರಹ್ಮದೇವರ ಪುತ್ರರೆಂತ ಅಭಿಪ್ರಾಯ. "ಪ್ರಕೃತ್ಯಾ ಪುರುಷಾಜ್ಜೀವಾಃ ಕಾಲೋ ವಾಗ್ವಾಯುರ್ಯೋಗತಃ । ಸರ್ಪಾಕಾರೋಭವಜ್ಜೀವಃ ಕಾಲೋಭೂತ್ಪಕ್ಷಿರೂಪಧೃಕ್ ॥ ಚತುರ್ಮುಖಾಭಾಂಶ್ಚತುರಃ ಕುಮಾರಾನ್ ಸಾ ದ್ರೌಪದೀ ನಾಮ ಬಭೂವ ಭೂಮೌ ವೈಕಾರಿಕೋ ಬ್ರಹ್ಮಜಸ್ತು" ಇತ್ಯಾದಿ ವಚನಗಳು ಪ್ರಮಾಣ. ಜಗದ್ಗುರುವೇ–ಮುಕ್ತಿಯೋಗ್ಯಜೀವರಿಗೆ ಮೂಲಗುರು ಆದವನೇ, ಎಂದರೆ ಮಹರಾದಿ ಲೋಕಗತ ಜೀವನ್ಮುಕ್ತರಾದ, ಬ್ರಹ್ಮಾಂತರ್ಗತ ಉಪಾಸನಾ ಮಾಡತಕ್ಕ, ತನ್ನ ಸಂಗಡ ಮುಕ್ತರಾಗತಕ್ಕ ಜೀವರಿಗೆ ಗುರುವಾದವನೇ ಎಂತ ಅರ್ಥ. ಜೀವನ್ಮುಕ್ತರಲ್ಲದ ಅಪಕ್ವರಾದವರಿಗೆ ವಾಯುದೇವರು ಗುರುಗಳು. ಅವರು ವಾಯ್ವಂತರ್ಗತ ಪರಮಾತ್ಮನ ಉಪಾಸನಾ ಮಾಡತಕ್ಕವರೆಂದು ಅರ್ಥ. ಜಗದ್ಗುರುತ್ವ ಬ್ರಹ್ಮವಾಯುಗಳಿಗೆ ಈ ರೀತ್ಯಾ ಇರುವುದರಿಂದ ಜಗದ್ಗುರುವೇ, ತ್ವಚ್ಚರಣಗಳಿಗೆ–ನಿನ್ನ ಪಾದದ್ವಯಗಳಿಗೆ, ಅಭಿ–ಛಂದಾಗಿ ಸಾಷ್ಟಾಂಗದಿಂದ, ವಂದಿಸುವೆ–ನಮಸ್ಕಾರ ಮಾಡುವೆ. ಬೇರಿಗೆ ನೀರು ಹಾಕಿದರೆ ಅದು ಶಾಖೋಪಶಾಖೆಗಳಿಗೆ ಸೇರುವಂತೆ, ಬೇರು ಸಾಮ್ಯವುಳ್ಳ ಪಾದಕ್ಕೆ ವಂದನ ಮಾಡೋಣದರಿಂದ ಸರ್ವಾವಯವಗಳಿಗೂ ವಂದನ ಮಾಡಿದಂತಾಗುತ್ತದೆ. ಈ ಪ್ರಕಾರ ವಂದಿಸುವೆ. ಸನ್ಮತಿಯ–ದಿವ್ಯಜ್ಞಾನ ಭಕ್ತ್ಯಾದಿಗಳಿಂದ ಯುಕ್ತವಾದ ಬುದ್ಧಿಯನ್ನೂ, ಇನ್ನೂ ಐಶ್ವರ್ಯವನ್ನೂ, ಪಾಲಿಪುದು–ಕೊಡೋವನಾಗು.

**ಆರು ಮೂರೆರಡೊಂದು ಸಾವಿರ ।**
**ಮೂರೆರಡು ಶತಶ್ವಾಸ ಜಪಗಳ ।**
**ಮೂರು ವಿಧ ಜೀವರೊಳಗಬ್ಜಜಕಲ್ಪ ಪರಿಯಂತ ।**
**ತಾ ರಚಿಸಿ ಸಾತ್ತ್ವರಿಗೆ ಸುಖ ಸಂ ।**
**ಸಾರ ಮಿಶ್ರರಿಗಧಮಜನರಿಗ ।**
**ಪಾರ ದುಃಖಗಳೀವ ಗುರುಪವಮಾನ ಸಲಹೆಮ್ಮ ॥ ೪ ॥**

ಸ್ವರೂಪತಃ ಬ್ರಹ್ಮನಿಗೆ ಸಮಾನರಾದ, ಪಕ್ವಸಾಧನದಲ್ಲಿ ಬ್ರಹ್ಮನಿಗೆ ಅವರರಾದ ಶ್ರೀ ವಾಯುದೇವರ ಪ್ರಾರ್ಥನೆ ಮಾಡತಾರೆ.

ಆರು ಮೂರೆರಡೊಂದು – ಇಪ್ಪತ್ತೊಂದು (೬×೩=೧೮+೨+೧) ಎಂತ ಅರ್ಥ, ಸಾವಿರ–ಅಂತ ಇಪ್ಪತ್ತೊಂದು ಸಾವಿರ, ಮೂರೆರಡುಶತ–ಆರುನೂರು, (೩×೨) ಅಂತು

(೨೧೬೦೦) ಇಪ್ಪತ್ತೊಂದುಸಾವಿರದ ಆರುನೂರು ಸಂಖ್ಯಾಕವಾದ ಶ್ವಾಸಜಪಗಳ–ನಾಸಿಕಾದ್ವಾರದಿಂದ ಬಿಡತಕ್ಕ ಶ್ವಾಸಾಖ್ಯ ಆವರ್ತನಗಳ, (ಶ್ವಾಸಜಪಗಳು ಹ್ಯಾಂಗೆ ಆಗುತವೇ ಎಂದರೇ, ಶ್ವಾಸಗಳು ಎರಡು ವಿಧ. ಉಚ್ಛ್ವಾಸ ಮತ್ತು ನಿಶ್ವಾಸ. ಉಚ್ಛ್ವಾಸ ಎಂದರೆ ಹೊರಗಿನ ಶ್ವಾಸ ಒಳಗೆ ತೊಕೊಂಬೋದು. ನಿಶ್ವಾಸ ಎಂದರೆ ಒಳಗಿನಿಂದ ಶ್ವಾಸ ಹೊರಗೆ ಬಿಡೋದು. ಈ ಎರಡೂ ಸೇರಿ ಒಂದು ಶ್ವಾಸವು. ನಿಶ್ವಾಸ ಎಂಬುವು "ಹಂ" ಎಂಬ ವರ್ಣ ವಿಶಿಷ್ಟವಾಗಿ ಹೊರಗೆ ಬರೋದಾಗತದೆ. ಉಚ್ಛ್ವಾಸ ಎಂಬುದು "ಸ" ಎಂಬ ವರ್ಣದಿಂದ ವಿಶಿಷ್ಟವಾಗಿ ಒಳಗೆ ಹೋಗತದೆ. ಇದರಿಂದ ಹಂಸ ಎಂತ ಹಂಸಮಂತ್ರವಾಯಿತು.) ಏತಾದೃಶ ಮಂತ್ರವನ್ನು ವಾಯುದೇವರು, ಮೂರು ವಿಧ ಜೀವರೊಳು– ಬ್ರಹ್ಮದೇವ ರಾರಭ್ಯ ತೃಣಾಂತ ಮುಕ್ತಿಯೋಗ್ಯರು (೧), ಪುರಂಜನ ಆರಂಭಮಾಡಿ ತೃಣಾಂತ ನಿತ್ಯಸಂಸಾರಿಗಳು (೨) ಮತ್ತು ಕಲಿ ಆರಂಭಮಾಡಿ ತೃಣಾಂತ ತಮೋಯೋಗ್ಯರು (೩) ಅಂತು ತ್ರಿವಿಧ ಜೀವರು. ಅವರಲ್ಲಿ ಬ್ರಹ್ಮದೇವರು ಆರಂಭಮಾಡಿ ೨೦೦ ಮಂದಿ ಋಜುಗಳಲ್ಲಿ ಶ್ವಾಸಕಾರ್ಯ ಶ್ರೀ ಪರಮಾತ್ಮನೇ ವಾಯುರೂಪದಿಂದ ಇದ್ದು ಮಾಡತಾನೆ. ತದನ್ಯ ರುದ್ರಾದಿ ತ್ರಿವಿಧ ಜೀವರಲ್ಲಿ ಶ್ವಾಸಕಾರ್ಯವನ್ನು ವಾಯುದೇವರು ಸ್ಥೂಲದೇಹ ದಲ್ಲಿ ಇದ್ದು ಮಾಡತಾರೆ. ಈ ಪ್ರಕಾರ, ಅಬ್ಜಜಕಲ್ಪಪರಿಯಂತ–ಬ್ರಹ್ಮಕಲ್ಪದ ಅಂತ್ಯದ ವರೆಗೂ ತಾವು ಮಾಡೋವರಾಗತಾರೆ. ತ್ರಿವಿಧರಿಗೂ ಬ್ರಹ್ಮಣಾ ಸಹ ಮುಕ್ತಿ. ಆದರೆ ಮುಕ್ತಿಯೋಗ್ಯರಿಗೆ ಲಿಂಗಭಂಗವಾಗಬೇಕಾದರೆ, ರಮಾತ್ಮಕ ವಿರಜಾನದೀ ಕಾರಣ. ನಿತ್ಯ ಸಂಸಾರಿಗಳಿಗೆ, ತಮೋಯೋಗ್ಯರಿಗೆ ಲಿಂಗಭಂಗವಾಗಬೇಕಾದರೆ ವಾಯುದೇವರು ಕಾರಣ ವೆಂತು ತಿಳಿಯಬೇಕು. ವಾಯುದೇವರು ಸಾತ್ವಿಕರಿಗೆ ಸುಖ, ರಾಜಸರಿಗೆ ಮಿಶ್ರಸುಖ, ತಾಮಸರಿಗೆ ದುಃಖ—ಈ ಪ್ರಕಾರ ಕೊಡತಕ್ಕ ತ್ರಿವಿಧಪ್ರಕಾರವಾದ ಹಂಸಮಂತ್ರ ಜಪ ಮಾಡತಾರೆ. ತಾ ರಚಿಸಿ–ಈ ಜಪವನ್ನು ತಾವು ಒಬ್ಬರೇ ಮಾಡತಾರೆ ಹೊರತು ಅನ್ಯರಾದ ರುದ್ರಾದಿ ದೇವತೆಗಳಿಗೆ ಅಧಿಕಾರವಿಲ್ಲವಾದ್ದರಿಂದ, ತಾವೇ ರಚನಾ ಮಾಡಿ, ಸತ್ವರಿಗೆ–ಮುಕ್ತಿಯೋಗ್ಯರಾದ ಜೀವರಿಗೆ, ಸುಖ–ಲಿಂಗಭಂಗಾನಂತರ ವೈಕುಂಠಾದಿಗಳಲ್ಲಿ ಸುಖ, ಸಂಸಾರಮಿಶ್ರರಿಗೆ–ನಿತ್ಯಸಂಸಾರಿಗಳಿಗೆ ಸುಖ–ದುಃಖ ಎರಡೂ ಕಲಿತ ಸುಖ, ಅಧಮಜನರಿಗೆ–ಅಧಮರಾದ ತಮೋಯೋಗ್ಯರಿಗೆ, ಅಪಾರ ದುಃಖಗಳೀವ–ಲಿಂಗಭಂಗಾ ನಂತರ ಅಂತ್ಯರಹಿತವಾದ ದುಃಖಸ್ವರೂಪರಾದ ದೈತ್ಯರಿಗೆ ನಿತ್ಯದುಃಖಗಳ ಕೊಡತಕ್ಕ, ಗುರುಪವಮಾನ–ಜೀವೋತ್ತಮರಾದ ವಾಯುದೇವರೇ, ಎಮ್ಮ–ನಮ್ಮನ್ನು, ಸಲಹು– ದಿವ್ಯಜ್ಞಾನವನ್ನು ಕೊಟ್ಟು ಸಂರಕ್ಷಣ ಮಾಡಿರಿ.

**ವಿಶೇಷಾರ್ಥ :**

(೧) ಹಂಸ ಎಂಬ ಶಬ್ದದಿಂದ "ನಿತ್ಯಂ ಹೀನೋಽಖಿಲೈಃ ದೋಷೈಃ ಸಾರರೂಪೋ ಯತೋ ಹರಿಃ" || ಎಂತ ಮುಕ್ತಿಯೋಗ್ಯರ ಉಪಾಸನ. (೨) ಇದೇ ಹಂಸಮಂತ್ರದಿಂದ ತಮೋಯೋಗ್ಯರು ವರ್ಣವ್ಯತ್ಯಾಸದಿಂದ ಸೋಽಹಂ ಎಂತ ಉಪಾಸನ ಮಾಡತಾರೆ. (೩) ನಿತ್ಯಸಂಸಾರಿಗಳು ಸ್ವಾಹಾ ಎಂತ ಉಭಯಕ್ಕೂ ಸಂಬಂಧಪಡದ ಸಂದೇಹಜ್ಞಾನ

ದಿಂದ ಉಪಾಸನ ಮಾಡತಾರೆ. ತ್ರಿವಿಧಜೀವರ ಸೃಷ್ಟಿ ಎಂಬುದು ಅವರವರ ಸ್ವರೂಪದ ಅಭಿವ್ಯಕ್ತಿಗಾಗಿಯೇ ಹೊರತು ಅನ್ಯಕಾರಣವಲ್ಲ. ಆದ್ದರಿಂದ ಲಿಂಗಭಂಗಾನಂತರ ತ್ರಿವಿಧರಿಗೆ ತ್ರಿವಿಧಗತಿ ಆಗತದೆ. ವಾಯುದಶಾದಲ್ಲಿ ತ್ರಿವಿಧಜೀವರನ್ನ ಜೀವನ್ಮುಕ್ತರನ್ನಾಗಿ ಮಾಡಿ, ಬ್ರಹ್ಮದಶಾದಲ್ಲಿ ಲಿಂಗಭಂಗರನ್ನಾಗಿ ಮಾಡತಾನೆ. ವಿರಜಾಸ್ನಾನದಿಂದ ಮುಕ್ತಿಯೋಗ್ಯರಿಗೆ, ವಾಯುಪದಕ್ಕೆ ಬಂದ ವಾಯುದೇವರಿಂದ ನಿತ್ಯಸಂಸಾರಿತಮೋಯೋಗ್ಯರಿಗೆ ಲಿಂಗಭಂಗ ವಿಧಿಸತಾರೆ. "ಮುಕ್ತಿಯೋಗ್ಯಾನಾಂ ತು ಯಲ್ಲಿಂಗಂ ಗದಯಾ ವ್ಯಪೋಹತಿ | ನಿತ್ಯಸಂಸಾರಿಣಾಂ ತು ಯಲ್ಲಿಂಗಂ ಹೂಂಕಾರೇಣ ವಿನಶ್ಯತಿ ||" ಇತಿ ವಾಯುಪ್ರೋಕ್ತೇ. ಈ ಪ್ರಕಾರ ಪ್ರಮಾಣಗಳು ಇವೆ.

**ಚತುರವದನನ ರಾಣಿ ಅತಿರೋ |**
**ಹಿತ ವಿಮಲ ವಿಜ್ಞಾನಿ ನಿಗಮ |**
**ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ ||**
**ನತಿಸಿ ಬೇಡುವೆ ಜನನಿ ಲಕುಮೀ |**
**ಪತಿಯ ಗುಣಗಳ ತುತಿಪುದಕೆ ಸ |**
**ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನಸದನದಲಿ || ೫ ||**

ಸರಸ್ವತೀದೇವಿಯರ ಪ್ರಾರ್ಥನಾ ಮಾಡಥಾರೆ.

ಚತುರವದನನರಾಣಿ–ಚತುರ್ಮುಖ ಬ್ರಹ್ಮದೇವರ ಪತ್ನಿಯಾದವಳೇ, ಅತಿರೋ-ಹಿತ – ತಿರೋಧಾನವಿಲ್ಲದಂಥಾ, ವಿಮಲ – ನಿರ್ದೋಷವಾದ, ವಿಜ್ಞಾನಿ – ರುದ್ರಾದ್ಯಪೇಕ್ಷಯಾ ವಿಶೇಷವಾದ ಜ್ಞಾನವುಳ್ಳವಳೇ, ನಿಗಮಪ್ರತತಿಗಳಿಗೆ–ನಿಗಮ–ಅನಂತವೇದಗಳೊಳಗೆ ವಿಭಾಗಮಾಡಿ, ಪ್ರ–ಛಂದಾಗಿ, ತತಿಗಳಿಗೆ–ಗುಂಪಾಗಿ ಕೂಡಿರತಕ್ಕ ಪತ್ಯಮಾನ ವೇದಸಮೂಹಗಳಿಗೆ, ಅಭಿಮಾನಿ–ಅಭಿಮಾನಿಯಾದವಳೇ, ವೀಣಾಪಾಣಿ–ಕಚ್ಛಪೀ ನಾಮಕ ವೀಣಾವನ್ನ ಕರದಲ್ಲಿ ಉಳ್ಳವಳೇ, ಬ್ರಹ್ಮಾಣಿ – ಪುನರುಕ್ತಿಪರಿಹಾರಾರ್ಥ ಪರತತ್ವೋಪದೇಶಕಳಾದ್ದರಿಂದ ಬ್ರಹ್ಮಾಣಿ ಪದ ಪ್ರಯೋಗವು, ನತಿಸಿ–ವಂದನಮಾಡಿ, ಸೋತ್ರಮಾಡಿ, ಬೇಡುವೆ–ಯಾಚನ ಮಾಡುವೆ, ಜನನಿ–ಸೃಷ್ಟಿಕರ್ತನಾದ ಬ್ರಹ್ಮದೇವರ ಪತ್ನಿಯಾದ್ದರಿಂದ ಲೋಕಕ್ಕೆ ತಾಯಿಯೆಂತ ಕರಿಸತಕ್ಕವಳೇ, ಲಕುಮೀಪತಿಯ–ಲಕ್ಷ್ಮೀಪತಿಯಾದ, ಶ್ರೀ ನಾರಾಯಣ ದೇವರ, ಗುಣಗಳ–ಸೃಷ್ಟ್ಯಾದಿ ಗುಣಗಳ, ತುತಿಪುದಕೆ–ಸ್ತೋತ್ರಮಾಡುವುದಕ್ಕೆ, ಸನ್ಮತಿಯ–ನಿರ್ಮಲವಾದ, ಅಚಂಚಲವಾದ ಬುದ್ಧಿಯನ್ನ, ಪಾಲಿಸು–ಕೊಡೋವಳಾಗು, ನೀ–ನೀನಾದರೋ ವಾಕ್ಯಗಳಿಂದ ಛಂದಾಗಿ ಸ್ತೋತ್ರ ಮಾಡಿಸೋದಕ್ಕಾಗಿ, ಮದ್ವದನ – ನನ್ನ ಮುಖಗತವೆಂಬ, ಸದನದಲಿ – ಮನೆಯಲ್ಲಿ, ನೆಲಸು–ಆವಾಸಳಾಗಿರು.

**ಕೃತಿರಮಣ ಪ್ರದ್ಯುಮ್ನನಂದನೆ |**
**ಚತುರವಿಂಶತಿ ತತ್ತ್ವಪತಿ ದೇ |**
**ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ ||**

**ಸತತ ಹರಿಯಲಿ ಗುರುಗಳಲಿ ಸ |**
**ದ್ರತಿಯ ಪಾಲಿಸಿ ಭಾಗವತ ಭಾ |**
**ರತ ಪುರಾಣ ರಹಸ್ಯ ತತ್ತ್ವಗಳರುಪು ಕರುಣದಲಿ || ೬ ||**

ಭಾರತೀದೇವೇರ ಸ್ತೋತ್ರ ಮಾಡತಾರೆ.

ಕೃತಿರಮಣ–ಕೃತಿನಾಮಕ ಲಕ್ಷ್ಮೀದೇವೇರ ಪತಿಯಾದ, ಪ್ರದ್ಯುಮ್ನನಂದನೆ–ಪ್ರದ್ಯುಮ್ನನಾಮಕ ಶ್ರೀ ನಾರಾಯಣ ದೇವರಿಂದ, ಅಂಡದ ಹೊರಗೆ ಸೂಕ್ಷ್ಮ ಸೃಷ್ಟಿಕಾಲದಲ್ಲಿ ಪುತ್ರಿಯಾಗಿ ಜನಿಸಿದವಳೇ, ಚತುರವಿಂಶತಿ ತತ್ವಪತಿ–ಇಪ್ಪತ್ತುನಾಲ್ಕು ತತ್ವಗಳಿಗೆ ಅಭಿಮಾನಿಗಳಾದ, ದೇವತೆಗಳಿಗೆ–ರುದ್ರಾದಿದೇವತೆಗಳಿಗೆ, ಗುರುವೆನಿಸುತಿಹ–ನಿಯಾಮಕ ಸ್ವಾಮಿಯಂತ ಎನಿಸುತ, ಚತುರವಿಂಶತಿ ತತ್ವಗಳಲ್ಲಿರತಕ್ಕ, ಮಾರುತನ–ಅಂಡದ ಹೊರಗೆ ಸೂಕ್ಷ್ಮ ಸೃಷ್ಟಿಕಾಲದಲ್ಲಿ ಜಯಾಪತಿ ಸಂಕರ್ಷಣನಾಮಕ ಪರಮಾತ್ಮನ ದೆಸೆಯಿಂದ ಪುತ್ರತ್ವೇನ ಜನಿಸಿದ ಶ್ರೀ ವಾಯುದೇವರ, ನಿಜಪತ್ನಿ–ನಿಯತವಾಗಿ ಪತ್ನಿಯಾಗಿ ಇರತಕ್ಕವಳೇ, (ಅಂದರೆ ಅನ್ಯರಾದ ದೇವತೆಗಳಿಗೆ ಅವತಾರಗಳಲ್ಲಿ ಪತ್ನಿಯರ ಭೇದಿಸೋಣ ಉಂಟು. ಈ ಭಾರತೀದೇವೇರು ಹಾಗೆ ಭೇದಿಸಿ ಇರತಕ್ಕವಳಲ್ಲ ಎಂತ ತಾತ್ಪರ್ಯ) ಇಂತಹ ಭಾರತಿದೇವಿಯೇ (ಅಜ್ಞಾನಿಯಾದ ನಮ್ಮಲ್ಲಿ), ಕರುಣದಲಿ – ಪರಮಾಂತಃ ಕರುಣದಿಂದ, ಸತತ–ನಿರಂತರದಲ್ಲೂ, ಹರಿಯಲಿ–ಗುಣಪೂರ್ಣನಾದ ಶ್ರೀ ನಾರಾಯಣ ದೇವರಲ್ಲಿ, ಗುರುಗಳಲಿ–ನಿನ್ನ ಪತಿಯಾದ ಜಗದ್ಗುರುಗಳಾದ ಶ್ರೀ ವಾಯುದೇವರಲ್ಲಿ, ಸದ್ರತಿಯ ಪಾಲಿಸಿ,–ಸತ್–ದೋಷರಹಿತವಾದ, ತಾರತಮ್ಯ, ಪಂಚಭೇದಗಳ ಸಮೀಚೀನ ಜ್ಞಾನ, ಭಕುತಿ, ವೈರಾಗ್ಯಪೂರ್ವಕ, ರತಿಯ–ಆಸಕ್ತಿಯ, ಪಾಲಿಸಿ–ಕೊಟ್ಟವಳಾಗಿ ಭಾಗವತ–ಶ್ರೀ ಭಾಗವತದ, ಭಾರತ–ವೇದತುಲ್ಯವಾದ ಶ್ರೀ ಮಹಾಭಾರತದ, ಪುರಾಣ ರಹಸ್ಯತತ್ವಗಳ, ಪುರಾಣಗಳಲ್ಲಿ ಗರ್ಭೀಭೂತವಾದ ರಹಸ್ಯವಾದ, ತತ್ವಗಳ–ಶ್ರೀ ಭಗವತ್ತತ್ವಗಳ, ಅರುಪು–ತಿಳಿಸೋವಳಾಗು ಎಂತ ಪ್ರಾರ್ಥನ ಮಾಡೋವರಾಗಿದ್ದಾರೆ ಎಂತ ತಾತ್ಪರ್ಯ.

**ವೇದಪೀಠ ವಿರಿಂಚಿ ಭವ ಶ |**
**ಕ್ರಾದಿ ಸುರವಿಜ್ಞಾನದಾಯಕ |**
**ಮೋದಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ||**
**ಛೇದಭೇದವಿಷಾದಕುಟಿಲಾಂ |**
**ತಾದಿಮಧ್ಯವಿದೂರ ಆದಾ |**
**ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ || ೭ ||**

ಶ್ರೀ ವೇದವ್ಯಾಸದೇವರ ಪ್ರಾರ್ಥನಾ ಮಾಡತಾರೆ.

ಮ್ಯಾಲೆ ಪ್ರಾರ್ಥನಾ ಮಾಡಿದ್ದು ಮೂಲರೂಪವಿವಕ್ಷಾದಿಂದ, ಮೂಲರೂಪಗಳಾದ, ಅಂಶಿರೂಪಗಳ ಪ್ರಾರ್ಥನಾ ಮಾಡಿ, ಈಗ ಅವತಾರ ರೂಪಗಳಾದ ಅಂಶರೂಪಗಳ ವಿವಕ್ಷಾ ಮಾಡಿ ಪ್ರಾರ್ಥಿಸುತ್ತಾರಾದ್ದರಿಂದ ಪುನರುಕ್ತಿದೋಷವಿಲ್ಲ. ಮೊದಲು

ಶ್ರೀ ವೇದವ್ಯಾಸದೇವರ ಪ್ರಾರ್ಥನ ಮಾಡುವುದು ಯಾಕೆ ಎಂದರೆ ಗಾರುಡೇ ಬ್ರಹ್ಮಕಾಂಡೇ ಸೂತಃ–"ವಿಷ್ಣೋರನಂತರಂ ವ್ಯಾಸನಮನಂ ಮುಖ್ಯಮೇವ ಹಿ| ಹರಿರೇವ ಯತೋ ವ್ಯಾಸೋ ವಾಚ್ಯವಕ್ತೃಸ್ವರೂಪಕಃ| ವ್ಯತ್ಯಾಸೇನೈವ ನಮ್ಯತ್ವಂ ಮಯೋಕ್ತಂ ಭವತೋ ಹರೇಃ| ತತ್ರಾಪಿ ಕಾರಣಂ ವಕ್ಷ್ಯೇ ಸಾದರೇಣ ಮುನೀಶ್ವರಾಃ| ವ್ಯಾಸಸ್ತು ಕಶ್ಚನ ಋಷಿಃ ಪುರಾಣೇ ತಾಮಸೇ ಸ್ಮೃತಃ| ಇತಿ ಜ್ಞಾನಾವಲಂಬೇನ ದೈತ್ಯಾ ದೈತ್ಯಾನುಗಾಃ ಸದಾ ||" ಎಂತ ಪ್ರಮಾಣ ಇರುವದರಿಂದ ಮತ್ತು ವೇದಗಳು, ಪುರಾಣಗಳು ಇವುಗಳಲ್ಲಿರುವ ತತ್ವಾರ್ಥಗಳನ್ನು ಬಾದರಾಯಣ ದೇವರು ನಿರ್ಣಯ ಮಾಡಿದ್ದರಿಂದಲೂ, ವೇದವ್ಯಾಸ ದೇವರನ್ನ ಪ್ರಾರ್ಥನಾ ಮಾಡತಾರೆ. ಶ್ರೀ ವೇದವ್ಯಾಸ ದೇವರು ಎಂತಹವರೆಂದರೆ—

ವೇದಪೀಠ–ವೇದಗಳು ಆಸನವಾಗಿ ಉಳ್ಳವರು ರಮಾದೇವೇರು, ಭಾರತ ನಿಗಮ ತತಿಗಳ ಅತಿಕ್ರಮಿಸಿದ ಗುಣಗಳ ಉಪಾಸನಾ ಮಾಡತಕ್ಕವಳಾದ್ದರಿಂದ ವೇದಗಳು ಪೀಠ ರೂಪವಾಯಿತು. ಭಗವದ್ಗುಣಗಳ ಉಪಾಸನಕ್ಕೆ ವೇದದ ಅಗತ್ಯವಿಲ್ಲ. ಋಜುಗಳಿಗೇ ವೇದವು ಸಂವಾದ ರೂಪವಾದ ಮ್ಯಾಲೆ ರಮಾದೇವೇರಿಗೆ ಹೇಳತಕ್ಕದ್ದೇನಿದೆ ? ವೇದ ಪೀಠ–ರಮಾದೇವಿ, ವಿರಂಚಿ–ಬ್ರಹ್ಮದೇವರು, ಭವ–ರುದ್ರದೇವರು, ಶಕ್ರಾದಿಸುರ–ಇಂದ್ರ ದೇವರೇ ಮೊದಲಾದ ದೇವತೆಗಳಿಗೆ, ವಿಜ್ಞಾನದಾಯಕ–ವಿ–ವಿಶೇಷಾಕಾರವಾಗಿ, ಜ್ಞಾನ–ಜ್ಞಾನವನ್ನು, ದಾಯಕ–ಕೊಡತಕ್ಕವನು. ರಮಾದೇವೇರಿಗೆ ವಿಶೇಷ ಜ್ಞಾನ ದಾವದೆಂದರೆ, ಪೂರ್ವೋಕ್ತ ಪ್ರಕಾರ ನೂತನವಾಗಿ ಕಾಣೋಣವೇ. ತದನ್ಯರಾದ ಬ್ರಹ್ಮಾದಿಗಳಿಗೆ ಸಾಧನಪರಿಪಾಕಾನುಸಾರ ವಿಶೇಷ ಜ್ಞಾನದಾಯಕನು. ಇನ್ನೂ ಎಂತಹವನೆಂದರೆ, ಮೋದ–ಆನಂದ, ಚಿತ್–ಜ್ಞಾನ, ಈ ಎರಡರಿಂದ, ಮಯ–ತನ್ಮಯ ವಾದ, ಗಾತ್ರ–ಶರೀರವುಳ್ಳವನು (ಎಂದರೆ ಅಸದೃಶವಾದ ಜ್ಞಾನಾನಂದ ಶರೀರವುಳ್ಳವನು ಎಂತ ತಾತ್ಪರ್ಯ). ಇನ್ನು ಲೋಕಪವಿತ್ರ–ತ್ರಿವಿಧ ಜೀವರು, ಲಿಂಗಭಂಗದಿಂದ ಸ್ವರೂಪ ವ್ಯಕ್ತಿ ಇಲ್ಲದೇ ಅಪವಿತ್ರರಾಗಿ ಇದ್ದಾರೆ. ಇಂಥಾವರಲ್ಲಿ ಮುಕ್ತಿ ಯೋಗ್ಯ ಜೀವ ರಿಗೆ ಲಿಂಗಭಂಗ ರೂಪವಾದ ಪಾವಿತ್ರ್ಯವನ್ನ ಮಾಡತಕ್ಕವ. ಸುಚರಿತ್ರ–ಮಂಗಳ ರೂಪವಾದ ಚರಿತ್ರೆ ಉಳ್ಳವ. ಛೇದ–ಆಯುಧದಿಂದ ಛೇದವೂ, ಭೇದ–ಪರಿಮಿತಿಯು, ಇಷ್ಟು ಎಂತ ಭೇದಿಸೋಣವು, ವಿಷಾದ–ವ್ಯಸನವು, ಕುಟಿಲ–ವೈಷಮ್ಯಾದಿಕಪಟವು, ಅಂತ–ಅಂತ್ಯಭಾಗವು, ಆದಿ–ಆದಿಭಾಗವು, ಮಧ್ಯ–ಮಧ್ಯಭಾಗವು, ಇವುಗಳಿಂದ, ವಿದೂರ–ಅತ್ಯಂತ ದೂರನಾದವನು, ಅನಾದಿಕಾರಣ–ಆದಿರಹಿತವಾದ ಸೃಷ್ಟ್ಯಾದಿಗಳಿಗೆ ನಿಮಿತ್ತ ಕಾರಣನಾದವನು, ಬಾದರಾಯಣ–"ವೇದವಾದರತಾನಾಂ ವಾದಿನಾಮಾಶ್ರಯ-ತ್ವಾದ್ಬಾದರಾಯಣಃ| ಬದರಾಣಾಂ ಸಂಬಂಧಿ ಯತ್ ಬಾದರಂ ತತ್ ಅಯನಂ ಸ್ಥಾನಂ ಯಸ್ಯ ಸಃ ತಥೋಕ್ತ ಇತಿ ವಾ ಬಾದರಾಯಣಃ||" ಎಂತ ಇರುವದರಿಂದ ಇಂಥಾ ವೇದ ವ್ಯಾಸ ದೇವರೇ, ಸತ್ರಾಣ–ಸತ್–ಸಮೀಚೀನವಾದ ನಿನ್ನ ಭಜನೆಗೆ ದಾರ್ಢ್ಯರೂಪವಾದ, ತ್ರಾಣ–ಶಕ್ತಿಯನ್ನು ಕೊಟ್ಟು, ಪಾಹಿ–ಸಂರಕ್ಷಣಮಾಡು ಎಂತ ಪ್ರಾರ್ಥನ ಮಾಡೋವ ರಾಗಿದ್ದಾರೆ ಎಂತ ತಾತ್ಪರ್ಯ.

**ಕ್ಷಿತಿಯೊಳಗೆ ಮಣಿಮಂತ ಮೊದಲಾ ।**
**ದತಿ ದುರಾತ್ಮರು ಒಂದಧಿಕ ವಿಂ ।**
**ಶತಿ ಕುಭಾಷ್ಯವ ರಚಿಸೆ ನಡುಮನೆಯೆಂಬ ಬ್ರಾಹ್ಮಣನ ॥**
**ಸತಿಯ ಜಠರದೊಳವತರಿಸಿ ಭಾ ।**
**ರತಿರಮಣ ಮಧ್ವಾಭಿಧಾನದಿ ।**
**ಚತುರದಶಲೋಕದಲಿ ಮೆರೆದಪ್ರತಿಮಗೊಂದಿಸುವೆ ॥೮॥**

ಶ್ರೀ ವಾಯುದೇವರ ಅವತಾರವಾದ ಶ್ರೀಮಧ್ವಾಚಾರ್ಯರಿಗೆ ವಂದನ ಮಾಡತಾರೆ.

ಕ್ಷಿತಿಯೊಳಗೆ–ಈ ಭರತಖಂಡದ ಭೂಮಿಯಲ್ಲಿ, ಮಣಿಮಂತ ಮೊದಲಾದ–ಮಣಿಮಂತನೇ ಮೊದಲಾದ ದೈತ್ಯರು, ಅತಿ ದುರಾತ್ಮರು–ಇವರು ಭಗವದ್ವೇಷಿಗಳು, ದುಷ್ಟ ಸ್ವಭಾವ ಉಳ್ಳಂಥಾವರು. ಇವರು ಹುಟ್ಟಿದವರಾಗಿ ಒಂದಧಿಕವಿಂಶತಿ–(೨೧)ಇಪ್ಪತ್ತೊಂದು ಸಂಖ್ಯಾಕವಾದ, ಕುಭಾಷ್ಯದ–ಹರಿಸರ್ವೋತ್ತಮ ಎಂಬ ವೇದಾರ್ಥಕ್ಕೆ ವಿರುದ್ಧವಾದ, ದುಷ್ಟವಾದ ಭಾಷ್ಯಗಳ, ರಚಿಸೆ–ರಚನಾ ಮಾಡಿರಲಾಗಿ, ಅದರ ಖಂಡನೆಗೆ, ನಡುಮನೆಯೆಂಬ–ಮಧ್ಯಗೇಹ ಎಂತ ನಾಮವುಳ್ಳ, ಬ್ರಾಹ್ಮಣನ–ಬ್ರಹ್ಮಜ್ಞಾನಿಯಾದ ಬ್ರಾಹ್ಮಣನ, ಸತಿಯ–ಪತ್ನಿಯಾದ ವೇದವತೀ ದೇವಿಯ, ಜಠರದೊಳು–ಉದರದೊಳು, ಇದ್ದು ಜನಿಸಿದಂತೆ ಪ್ರದರ್ಶನಮಾಡಿ, ತತ್ಕಾಲದಲ್ಲಿ, ಅವತರಿಸಿ–ಮೂಲ ರೂಪದಿಂದ ಅಂಶತ್ವೇನ ಹೊರಟು ಅವತಾರಮಾಡಿ, ಭಾರತೀರಮಣ–ಭಾರತೀ ದೇವಿಯವರಿಗೆ ಪತಿಯಾದ ಶ್ರೀವಾಯುದೇವರು, ಅನಂತರ ಆಶ್ರಮ ಧರಿಸಿ, ಮಧ್ವಾಭಿಧಾನದಿ– "ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಂ। ಮಧ್ವ ಆನಂದತೀರ್ಥಶ್ಚ ತೃತೀಯಾ ಮಾರುತೀ ತನುಃ॥" ಎಂತ ತೈತ್ತಿರೀಯ ಭಾಷ್ಯದಲ್ಲಿ ಇರುವದರಿಂದ ಇಂಥಾ ಮಧ್ವಾಚಾರ್ಯರು ಎಂಬ ನಾಮದಿಂದ, ಚತುರ್ದಶ ಲೊಕದಲಿ ಮೆರೆದ–ಹದಿನಾಲ್ಕು ಲೋಕಗಳಲ್ಲಿ ಮೆರೆದು ಕೀರ್ತಿಪೆತ್ತ, ಅಪ್ರತಿಮಗೆ–ಇಪ್ಪತ್ತೊಂದು ಭಾಷ್ಯ ನಿರಾಕರಿಸಿ, ಹರಿ ಸರ್ವೋತ್ತಮನೆಂದು ಸ್ಥಾಪನ ಮಾಡಿದ ವಿಷಯದಲ್ಲಿ ಸದೃಶರಹಿತರಾದ ಮಧ್ವಾಚಾರ್ಯರಿಗೆ, ವಂದಿಸುವೆ–ಸಾಷ್ಟಾಂಗನಮಸ್ಕಾರ ಮಾಡುವೆ ಎಂತ ತಾತ್ಪರ್ಯ.

**ಪಂಚಭೇದಾತ್ಮಕ ಪ್ರಪಂಚಕೆ ।**
**ಪಂಚರೂಪಾತ್ಮಕನೆ ದೈವಕ ।**
**ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ॥**
**ಪಂಚವಿಂಶತಿ ತತ್ತ್ವ ತರತಮ ।**
**ಪಂಚಿಕೆಗಳನು ಪೇಳ್ದ ಭಾವಿ ವಿ ।**
**ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥೯॥**

ಈ ಪೂರ್ವೋಕ್ತ ಮಧ್ವಾಚಾರ್ಯರು ದುರ್ಮತ ನಿರಾಕರಣ ಪೂರ್ವಕ ಸ್ವಸಿದ್ಧಾಂತ ಸ್ಥಾಪನ ಮಾಡಿದುದನ್ನು ಸಂಗ್ರಹವಾಗಿ ಹೇಳತಾರೆ.

ಪಂಚಭೇದ–ಐದು ಭೇದ, ಅದು ದಾವದೆಂದರೆ (೧) ಜೀವ ಜೀವರಿಗೆ ಭೇದ, (೨) ಜಡ ಜಡಕ್ಕೆ ಭೇದ, (೩) ಜೀವ ಜಡಕ್ಕೆ ಭೇದ, (೪) ಜಡ ಪರಮಾತ್ಮಗೆ ಭೇದ, (೫) ಜೀವ ಪರಮಾತ್ಮಗೆ ಭೇದ. ಜಡ ಶಬ್ದದಿಂದ ಜಡ ಜೀವರು ಶುದ್ಧ ಜಡಗಳು ಗ್ರಾಹ್ಯ. ಇದು ಐದು ಕ್ಷರದಲ್ಲಿ ಭೇದ. ಅಕ್ಷರದಲ್ಲಿ ಲಕ್ಷ್ಮಿಗೂ, ಶ್ರೀ ನಾರಾಯಣ ದೇವರಿಗೂ ಭೇದ ಉಂಟು. ಇದು ಸಂಧ್ಯಂತರದಲ್ಲಿ ವಿದಿತವಾಗಿದೆ. ಮತ್ತು ಅಸ್ವತಂತ್ರ ಲಕ್ಷಣಯಾ ಜೀವ ಸಮೂಹದಲ್ಲಿ ಗಣನ ಮಾಡಿದರೇ ಐದು ಭೇದವೇ ಆಗತದೆ. ಅಕ್ಷರ ಲಕ್ಷಣಯಾ ಆರನೇ ಭೇದವುಳ್ಳವಳೆಂದು ಕರಿಸತಾಳೆ. ಉಭಯ ಲಕ್ಷಣಾವೂ ಇರೋಣದರಿಂದ ದಾವ ಪ್ರಕಾರ ತಿಳಿದರೂ ವಿರುದ್ಧವಲ್ಲ, ಈ ಪ್ರಕಾರ ಪಂಚ ಭೇದದಿಂದ, ಆತ್ಮಕ–ಯುಕ್ತವಾದ, ಪ್ರಪಂಚಕೆ–ಛಂದಾಗಿ ಈ ಐದರಿಂದ ಸಹಿತವಾದ ಈ ಜಗತ್ತಿಗೆ, ಪಂಚರೂಪಾತ್ಮಕನೆ ದೈವಕ–ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ, ಎಂತು ಐದು ರೂಪಗಳು ಉಳ್ಳ, ಗುಣಪೂರ್ಣನಾದ, ಆತ್ಮನಾಮಕ ಶ್ರೀ ಪರಮಾತ್ಮನೇ, ಮತ್ತು ಈ ಪರಸ್ಪರ ರೂಪಗಳಲ್ಲಿ ಅತ್ಯಂತ ಅಭೇದಾತ್ಮಕವಾದ ಸೃಷ್ಟ್ಯಾದ್ಯಷ್ಟಕರ್ತೃವಾದವನು ಶ್ರೀನಾರಾಯಣ ದೇವರೇ. ಈ ನಾರಾಯಣದೇವರಿಗೆ, ಪಂಚಮುಖ–ಶ್ರೀ ಹರಿಸರ್ವೋತ್ತಮನೆಂದು ಸ್ಥಾಪನಾಮಾಡೋವರಾದ ಮಧ್ವಾಚಾರ್ಯರು(ಭಾವಿ ಬ್ರಹ್ಮರಾದ್ದರಿಂದ ಉಪಲಕ್ಷಣಯಾ ಬ್ರಹ್ಮದೇವರು ಗ್ರಾಹ್ಯರು) ಬ್ರಹ್ಮದೇವರು ಮತ್ತು ಐದು ಮುಖವುಳ್ಳ ರುದ್ರದೇವರು, ಶಕ್ರಾದಿಗಳು–ಇಂದ್ರಾದಿ ಯಾವತ್ತೂ ದೇವತೆಗಳು, ಇವರು, ಕಿಂಕರರು–ಸೇವಾಮಾಡ ತಕ್ಕವರು, ಶ್ರೀಹರಿಗೆ–ಶ್ರೀಹರಿಗೆ ಎಂತಲೂ, ಮತ್ತು ಪಂಚವಿಂಶತಿ ತತ್ವ–ಇಪ್ಪತ್ತೈದು ತತ್ವ, ಅವು ದಾವದೆಂದರೆ–ದಶೇಂದ್ರಿಯಗಳು, ಪಂಚಭೂತ, ಪಂಚತನ್ಮಾತ್ರಗಳು, ಮನಸ್ಸು, ಮಹತ್ತತ್ವ, ಅವ್ಯಕ್ತ ತತ್ವ, ಅಹಂಕಾರ ತತ್ವ, ಅಂತು (೨೪) ಇಪ್ಪತ್ತುನಾಲ್ಕು ತತ್ವ ಆಯಿತು. ೨೫ನೆ ತತ್ವ ಶ್ರೀಪರಮಾತ್ಮ. ಅದರ ಮ್ಯಾಲೆ ತತ್ವವಿಲ್ಲ. ಈ ಚತುರ್ವಿಂಶತಿ ತತ್ವಾಂತರ್ಗತನು ಶ್ರೀಪರಮಾತ್ಮನು. ಇಂತಹ ಇಪ್ಪತ್ತೈದು ತತ್ವಗಳು ಹ್ಯಾಂಗೆ, ತರತಮ–ಸ್ವೋತ್ತಮ, ಸ್ವಾವರ ತಾರತಮ್ಯವನ್ನು, ಪಂಚಕಿಗಳನು–ಪಂಚದಿಂದ ಸಹಿತವಾದುದು ಪಂಚಕೀ- ಜಗತ್ತು ಪೂರ್ವೋಕ್ತ ಪ್ರಕಾರ ಪಂಚಭೇದದಿಂದ ಯುಕ್ತವಾದದ್ದು, ಎಂತ ಪೇಳ್ದ–ವೇದಶಾಸ್ತ್ರಾದಿ ಸಮ್ಮತಿಗಳಿಂದ ಸ್ಥಾಪನಮಾಡಿ ಹೇಳಿದಂತಹ, ಭಾವಿವಿರಿಂಚಿಯೆನಿಪ ಉತ್ತರ ಬ್ರಹ್ಮಕಲ್ಪಕ್ಕೆ ಬ್ರಹ್ಮದೇವರು ಆಗತಕ್ಕವರೆಂದು ಎನಿಸತಕ್ಕ, ಆನಂದ ತೀರ್ಥರ–"ಆನಂದರೂಪಸ್ಯ ಪರಸ್ಯ ಪಾತ್ರಧೀರಾನಂದಸಂದಾಯಿಸುಶಾಸ್ತ್ರಕೃತ್ಸ ಯತ್ | ಆಸಂದ ತೀರ್ಥೇತಿ ಪದಂ ಗುರೂದಿತಂ ಬಭೂವ ತಸ್ಯಾತ್ಯನುರೂಪರೂಪಕಂ ||" ಎಂತ ಮಧ್ವ ವಿಜಯೋಕ್ತಿ ಇರುವದರಿಂದ ಸಂತೋಷಕರವಾದ ಶಾಸ್ತ್ರವುಳ್ಳ ಮಧ್ವಾಚಾರ್ಯರ, ಅನು ದಿನವೂ–ಪ್ರತಿದಿನದಲ್ಲೂ, ನೆನೆವೆ–ಸ್ಮರಣೆಮಾಡುವೆ. ದಿವ್ಯಜ್ಞಾನವನ್ನು ಕೊಟ್ಟು ಸಂರಕ್ಷಿಸಲಿ ಎಂತ ಪ್ರಾರ್ಥನ ಮಾಡೋವರಾಗಿದ್ದಾರೆ ಎಂತ ತಾತ್ಪರ್ಯ.

**ವಾಸುದೇವ ವಿರಿಂಚಿತನಯ ಉ |**
**ಮಾಮನೋಹರ ಉಗ್ರಧೂರ್ಜಟಿ |**
**ಸಾಮಜಾಜಿನವಸನಭೂಷಣ ಸುಮನಸೋತ್ತಂಸ ||**

**ಕಾಮಹರ ಕೈಲಾಸ ಮಂದಿರ ।**
**ಸೋಮ ಸೂರ್ಯಾನಲ ವಿಲೋಚನ ।**
**ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ ॥೧೦॥**

ಶ್ರೀ ವಾಯುದೇವರಿಗೆ ಅವರರಾದ* ಮನೋಭಿಮಾನಿಯಾದ ಶ್ರೀ ರುದ್ರದೇವರನ್ನು, ಈ ಶ್ಲೋಕದಿಂದಲೂ, ಮತ್ತು ಉತ್ತರ ಶ್ಲೋಕದಿಂದಲೂ ಸ್ತೋತ್ರ ಮಾಡುತ್ತಾರೆ.

ವಾಮದೇವ—ಗಾರುಡೇ ಬ್ರಹ್ಮಕಾಂಡೇ "ಈಶಾನ್ಯಕೋಣೇ ಸಂಸ್ಥಿತೋ ಯಸ್ತು ರುದ್ರೋ ಹ್ಯವಾಪ ದೇವೋ ವಾಮದೇವೇತಿ ಸಂಜ್ಞಾಮ್। ಸ್ವವಾಮಭಾಗೇ ಸಂಸ್ಥಿತಂ ವಾಸುದೇವಂ ಸ್ವಯೋಗ್ಯಭಕ್ತ್ಯಾ ಪೂಜತೇ ಸರ್ವದೈವ। ಅತೋ ರುದ್ರೋ ವಾಮದೇವೇತಿ ಸಂಜ್ಞಾಂ ಹ್ಯವಾಪ ಜ್ಯೇಷ್ಠತ್ವಮಥೋತ್ತಮತ್ವಂ ॥" ಎಂತ ಉಕ್ತಿ ಇರುವುದರಿಂದ ಇಂತಹ ರುದ್ರದೇವರೇ, ಇನ್ನೂ ವಿರಂಚಿತನಯ—ಬ್ರಹ್ಮದೇವರ ಭ್ರೂಮಧ್ಯದಿಂದ ಜನಿಸಿದವರೇ, ಉಮಾಮನೋಹರ—ಪಾರ್ವತಿ ದೇವಿಯರ ಮನಸ್ಸನ್ನ ಸಂತೋಷಪಡಿಸಿದವರೇ, ಉಗ್ರ—ಜಗತ್ಸಂಹಾರ ಮಾಡತಕ್ಕ ಕ್ರೂರವಾದ ಕಾರ್ಯ ಉಳ್ಳವರೇ, ಧೂರ್ಜಟಿ—ಧೂಮ್ರವರ್ಣದೋಪಾದಿಯಲಿ ಜಟೆಗಳುಳ್ಳವರೇ, ಮನುಜ—ಗಜದ, ಅಜಿನ—ಚರ್ಮವೇ ವಸನಭೂಷಣ—ವಸ್ತ್ರವಾಗಿ ಅಲಂಕರಿಸಿ ಕೊಂಡವರೇ, ಸುಮನಸ—ಇಂದ್ರಾದಿ ದೇವತೆಗಳ ದೆಸೆಯಿಂದ ಉತ್ತಂಸ—ಉತ್ತಮರಾದವರೇ, ಉತ್ತಮವಾದ ಭುಜ ಪರಾಕ್ರಮ ಉಳ್ಳವರೇ, ಕಾಮಹರ—ತಪೋವಿಘ್ನಮಾಡಿದ ಮನ್ಮಥನನ್ನು ನೇತ್ರಾಗ್ನಿಯಿಂದ ಭಸ್ಮಮಾಡಿದವರೇ, ಕೈಲಾಸ ಮಂದಿರ—ಕೈಲಾಸ ಪರ್ವತದಲ್ಲಿ ಮನೆಯುಳ್ಳವರೇ, ಸೋಮಸೂರ್ಯಾನಲ—ಸೋಮ—ಚಂದ್ರ ಕಿರಣಗಳೋಪಾದಿಯಲಿ ಶಾಂತಕರವಾದ ಎಡನೇತ್ರ, ಸೂರ್ಯ—ಸೂರ್ಯಕಿರಣಗಳೋಪಾದಿಯಲಿ ತೇಜೋಬಾಹುಳ್ಯ ಉಳ್ಳ ಶಾಂತಿರಹಿತವಾದ ಬಲನೇತ್ರ, ಅನಲ—ಅಗ್ನಿಯೋಪಾದಿಯಲಿ ದಾಹಕ ಶಕ್ತಿವುಳ್ಳ ಮಧ್ಯಗತ ನೇತ್ರ, ಅಂತು ಈ ಪ್ರಕಾರ, ವಿಲೋಚನ—ವಿಶೇಷದಿಂದ ಯುಕ್ತವಾದ ನೇತ್ರತ್ರಯವುಳ್ಳವರೇ, ಕಾಮಿತಪ್ರದ—ಬೇಡಿದ ಇಷ್ಟಾರ್ಥಗಳ ತಮಗೆ ಕೊಡೋದಕ್ಕೆ ಯೋಗ್ಯತಾ ಎಷ್ಟು ಇದೆಯೋ ಅಷ್ಟುಮಾತ್ರ ಕೊಡತಕ್ಕವರೇ, ಸದಾ—ನಿರಂತರದಲ್ಲೂ, ಎಮಗೆ-ನಮಗೆ, ಇನ್ನೂ ಶ್ರೀಹರಿಭಕ್ತರಿಗೆ, ಸುಮಂಗಳವ—ಸಮೀಚೀನವಾದ, ಭೇದಜ್ಞಾನ ರೂಪವಾದ ಮಂಗಳವನ್ನು ಐಶ್ವರ್ಯವನ್ನು, ಕರುಣಿಸು—ಅಂತಃಕರಣದಿಂದ ಕೊಡೋವನಾಗು ಎಂತ ಪ್ರಾರ್ಥಿಸೋವರಾಗಿದ್ದಾರೆ ಎಂತ ತಾತ್ಪರ್ಯ.

**ಕೃತ್ತಿವಾಸನೆ ಹಿಂದೆ ನೀ ನಾ ।**
**ಲ್ವತ್ತು ಕಲ್ಪ ಸಮೀರನಲಿ ಶಿ ।**
**ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳು ॥**
**ಹತ್ತು ಕಲ್ಪದಿ ತಪವ ಗೈದಾ ।**
**ದಿತ್ಯರೊಳಗುತ್ತಮನೆನಿಸಿ ಪುರು ।**
**ಷೋತ್ತಮನ ಪರಿಯಂಕ ಪದವೈದಿದೆಯೋ ಮಹದೇವ ॥೧೧॥**

* ತಾರತಮ್ಯದಲ್ಲಿ ನೀಚರಾದ

ಈ ರುದ್ರದೇವರು ಶೇಷಪದಕ್ಕಾಗಿ ಸಾಧನಮಾಡಿದ್ದು ಹೇಳಿ, ಶೇಷದೇವರ ಸ್ತೋತ್ರವನ್ನೂ ಈ ಶ್ಲೋಕದಿಂದಲೇ ಹೇಳತಾರೆ.

ಕೃತ್ತಿವಾಸನೇ–ಮೃಗಚರ್ಮವೇ ವಸ್ತ್ರವಾಗಿ ಉಳ್ಳ ರುದ್ರದೇವರೇ, ಹಿಂದೆ–ವರ್ತಮಾನ ಬ್ರಹ್ಮಕಲ್ಪಕ್ಕೆ ಹಿಂದೆ ಗತವಾದ ಪೂರ್ವ ಬ್ರಹ್ಮಕಲ್ಪವಾದ ಒಂದು ಕಲ್ಪದಲ್ಲಿ, ನೀ ನಾಲ್ವತ್ತು ಕಲ್ಪ–ನೀ ನಾಲ್ವತ್ತು ಸಂಖ್ಯಾಕವಾದ ಬ್ರಹ್ಮನ ದಿನ ಕಲ್ಪಗಳಲ್ಲಿ, ಸಮೀರನಲಿ–ಶ್ರೀ ವಾಯುದೇವರಲ್ಲಿ, ಶಿಷ್ಯತ್ವ ವಹಿಸಿ–ಶಿಷ್ಯನಾಗಿ ಇದ್ದು, ಅಖಿಲಾಗಮಾರ್ಥಗಳ–ಯೋಗ್ಯತಾಕ್ಕೆ ಅನುಸರಿಸಿದ ಸಮಸ್ತವಾದ ವೇದಗಳು, ಅದರ ಆರ್ಥಗಳು, ಇವುಗಳನ್ನ ಓದಿ–ಓದಿದವರಾಗಿ, ಅನಂತರ, ಜಲಧಿಯೊಳು–ಲವಣ ಸಮುದ್ರದಲ್ಲಿ, ಹತ್ತು ಕಲ್ಪದಿ–ಹತ್ತು ಸಂಖ್ಯಾತವಾದ ಬ್ರಹ್ಮದೇವರ ದಿನ ಕಲ್ಪಗಳಲ್ಲಿ, ತಪವ ಗೈದು–ಮುಳುಗಿದ್ದು ತಪಸ್ಸನ್ನು ಮಾಡಿದವರಾಗಿ, ಅನಂತರ, ಆದಿತ್ಯರೊಳು–ದೇವತೆಗಳೊಳು, ಉತ್ತಮನೆನಿಸಿ–ಶ್ರೇಷ್ಠ ಎಂತ ಎನಿಸಿಕೊಂಡವರಾಗಿ, ವರ್ತಮಾನ ರುದ್ರಪದಕ್ಕೆ ಬರೋವರಾದಿರಿ ಎಂತ ರುದ್ರ ದೇವರ ಸ್ತೋತ್ರ. ಇದರಿಂದಲೇ ಶೇಷದೇವರ ಸ್ತೋತ್ರವು. ಹೇಗೆಂದರೆ, ಪುರುಷೋತ್ತಮ–ಕ್ಷರಾಕ್ಷರ ಪುರುಷರಿಂದ ಶ್ರೇಷ್ಠನಾದ ಶ್ರೀ ನಾರಾಯಣ ದೇವರ, ಪರಿಯಂಕ ಪದ–ಮಂಚವಾಗಿ ಇರತಕ್ಕ ಐಶ್ವರ್ಯವನ್ನ, ಐದಿದೆಯೊ–ವರ್ತಮಾನ ಪರಿಯಂಕ ರೂಪವಾದ ಶೇಷ ದೇವರೇ ಪೂರ್ವೋಕ್ತ ಪ್ರಕಾರ ಸಾಧನೆ ಮಾಡಿ ಶಯ್ಯಾರೂಪ ಪದವ ಪಡೆದಿರಿ ಎಂತ ಶೇಷ ದೇವರ ಸ್ತುತಿ. ಮಹದೇವ–ಹೇ ರುದ್ರದೇವರೇ ನೀವೂ ಉತ್ತರ ಕಲ್ಪಕ್ಕೆ ದೇವರ ಪರಿ ಯಂಕ ಪದವ ಪಡೆಯುವವರಾಗುತ್ತೀರಿ ಎಂತ ರುದ್ರದೇವರ ಸ್ತೋತ್ರ. ರುದ್ರಗಣ ಬ್ಯಾರೆ, ಶೇಷಗಣ ಬ್ಯಾರೆ, ಇಲ್ಲವಾದ್ದರಿಂದ ರುದ್ರಪದದಿಂದಲೇ ಶೇಷಪದ ಹೊಂದಬೇಕು. ಆದ್ದರಿಂದ ಕ್ಷೀರ ನೀರು ಮಿಶ್ರದಂತೆ ಸ್ತೋತ್ರ ಮಾಡಲ್ಪಟ್ಟಿದೆ. ಇದರ ವಿಸ್ತಾರ ಅಪರೋಕ್ಷ ತಾರ ತಮ್ಯ ಸಂಧಿಯಲ್ಲಿ ವಿವರ ಮಾಡಿದ್ದೇವೆ, ತಿಳಿಯಬಹುದು.

**ಪಾಕಶಾಸನ ಮುಖ್ಯ ಸಕಲ ದಿ ।**
**ವೌಕಸರಿಗಭಿನಮಿಪೆ ಋಷಿಗಳಿ ।**
**ಗೇಕ ಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥**
**ಆ ಕಮಲನಾಭಾದಿ ಯತಿಗಳ ।**
**ನೀಕಕಾನಮಿಸುವೆನು ಬಿಡದೆ ರ ।**
**ಮಾ ಕಳತ್ರನ ದಾಸವರ್ಗಕೆ ನಮಿಪೆನನವರತ ॥೧೨॥**

ಇಂದ್ರದೇವರು ಮೊದಲುಮಾಡಿ ಯಾವತ್ತೂ ಭಗವದ್ಭಕ್ತರಿಗೂ ವಂದನ ಮಾಡಿ ಸ್ತೋತ್ರ ಮಾಡತಾರೆ.

ಪಾಕಶಾಸನ–ಪಾಕನೆಂಬ ಅಸುರಹಂತೃವಾದ ಇಂದ್ರದೇವರೇ ಮೊದಲಾದ ಶತಸ್ಥ ದೇವಗಣಾಂತ, ಮುಖ್ಯ–ಮುಖ್ಯವಾದ, ತತ್ವಾಭಿಮಾನಿಗಳಾದ, ಸಕಲ ದಿವೌಕಸರಿಗೆ–ಸಮಸ್ತರಾದ ದೇವತೆಗಳಿಗೆ, ಏಕಚಿತ್ತದಿ–ಅಚಂಚಲವಾದ ಸ್ಥಿರಚಿತ್ತದಿಂದ, ಋಷಿಗಳಿಗೆ–

(ಋಷಿಸಾಂಕೇತದಿಂದ ಕರ್ಮಜ ದೇವತೆಗಳು ಪುಷ್ಕರಾಂತವರೆಗೂ ಅಮುಖ್ಯ ತತ್ವಾಭಿಮಾನಿಗಳು ವಿವಕ್ಷಿತರು), ಕರ್ಮಜರಲ್ಲಿ ಪ್ರವಿಷ್ಟರಾದ ಋಷಿಗಳು ಆರಂಭಮಾಡಿ ಪುಷ್ಕರಾಂತ ದೇವತೆಗಳಿಗೆ, ಪಿತೃಗಳಿಗೆ– (ಆಜಾನಜರಲ್ಲಿ ಸೇರಿದವರು ಪಿತೃಗಳು. ಪಿತೃಶಬ್ದ ಸಾಂಕೇತದಿಂದ ಪುಷ್ಕರನ ಅನಂತರ ಅವರರಾದ ದೇವ ಗಂಧರ್ವರ ಪರಿಯಂತ ಆಜಾನಜರು ಗ್ರಾಹ್ಯ.) ಆಜಾನಜರ ಸಮೇತವಾಗಿ ಪಿತೃದೇವತೆಗಳಿಗೆ, ಇಲ್ಲಿಗೆ ಮೂವತ್ತು ಮೂರು ಕೋಟಿ ದೇವತೆಗಳನ್ನು ಹೇಳಿದಂತಾಯಿತು, ಇವರುಗಳಿಗೆ, ಅಭಿನಮಿಪೆ–ಛಂದಾಗಿ ವಂದನೆ ಮಾಡುವೆ. ಗಂಧರ್ವಕ್ಷಿತಿಪರಿಗೆ–ಮಾನುಷಗಂಧರ್ವರು, ಹಾಗೂ ಮಾನುಷಚಕ್ರವರ್ತಿಗಳು ಇವರುಗಳಿಗೆ, ಆ ಕಮಲನಾಭಾದಿ–ಆ ಎಂದರೆ ಪೂರ್ವೋಕ್ತ ಮಧ್ವಾಚಾರ್ಯರ ಶಿಷ್ಯರುಗಳೇ ಮೊದಲಾದ, ಯತಿಗಳ–ಪದ್ಮನಾಭತೀರ್ಥರು, ಅಕ್ಷೋಭ್ಯತೀರ್ಥರು, ಟೀಕಾಚಾರ್ಯರು, ವಾದಿರಾಜಸ್ವಾಮಿಗಳು, ವ್ಯಾಸರಾಯರು, ಶ್ರೀಪಾದರಾಯರು, ರಾಘವೇಂದ್ರ ಸ್ವಾಮಿಗಳು, ಸ್ವಾಜ್ಞತೀರ್ಥರು, ಮೊದಲಾದ ಯತಿಶ್ರೇಷ್ಠರಾದ, ಕಾಮ್ಯಕರ್ಮತ್ಯಾಗಿಗಳ, ನಿಕಕ್ಕೆ–ಸಮೂಹಕ್ಕೆ, ಅನಮಿಸುವೆನು–ಛಂದಾಗಿ ವಂದನಮಾಡುವೆನು, ಬಿಡದೇ–ವಿಸ್ಮೃತಿಯಿಂದ ಬಿಡದೇ, ಅನವರತ ನಿರಂತರದಲ್ಲೂ, ರಮಾಕಳತ್ರನ–ರಮಾಪತಿಯಾದ ಶ್ರೀಹರಿಯ ದಾಸವರ್ಗಕೆ–ಪುರಂದರದಾಸರು, ವಿಜಯದಾಸರು, ಭಾಗಣ್ಣದಾಸರು ಮೊದಲಾದ ದಾಸಕೂಟ ಸಮೂಹಕ್ಕೆ, ನಮಿಪೆ–ನಮಸ್ಕಾರಮಾಡುವೆ (ಅಂತರ್ಗತ ಶ್ರೀಪರಮಾತ್ಮನ ತಿಳಿದು ವಂದಿಸುವೆ ಎಂತ ಅರ್ಥ. ನೀಚಾಧಿಷ್ಠಾನದಲಿ, ಅಂತರ್ಗತನನ್ನು ತಿಳಿದರೂ ವಂದನೆಗೆ ಅರ್ಹನಲ್ಲ. ಉತ್ತಮಾಧಿಷ್ಠಾನದಲ್ಲಿ ಅಂತರ್ಗತನನ್ನು ತಿಳಿಯದಿದ್ದರೇ ವಂದನಾರ್ಹವಲ್ಲ ಎಂತ ತಾತ್ಪರ್ಯ)

**ಪರಿಮಳವು ಸುಮನದೊಳಗನಲನು ।**
**ಅರಣಿಯೊಳಗಿಪ್ಪಂತೆ ದಾಮೋ ।**
**ದರನು ಬ್ರಹ್ಮಾದಿಗಳ ಮನದಲಿ ತೋರಿತೋರದಲೆ ॥**
**ಇರುತಿಹ ಜಗನ್ನಾಥವಿಠ್ಠಲನ ।**
**ಕರುಣ ಪಡೆದ ಮುಮುಕ್ಷುಜೀವರು ।**
**ಪರಮಭಾಗವತರನು ಕೊಂಡಾಡುವುದು ಪ್ರತಿದಿನವು ॥೧೪॥**

ಸರ್ವರೂ ಭಗವದ್ಭಕ್ತರನ್ನು ಕೊಂಡಾಡಬೇಕು ಎಂತ ಹೇಳಿ, ಚರಾಚರದಲ್ಲಿ ಶ್ರೀಪರಮಾತ್ಮನ ವ್ಯಾಪ್ತಿಪ್ರಕಾರವನ್ನು ಹೇಳತಾರೆ.

ಪರಿಮಳವು–ಸುವಾಸನೆಯು, ಸುಮನದೊಳು–ಪುಷ್ಪದೊಳಗೆ, ಅನಲನು–ಅಗ್ನಿಯು, ಅರಣಿಯೊಳು–ಕಾಷ್ಠವಿಶೇಷದೊಳು, ಇಪ್ಪಂತೆ–ಇರುವಂತೆ, ದಾಮೋದರನು–ಗುಣಪೂರ್ಣನಾದ ಶ್ರೀ ನಾರಾಯಣದೇವರು, ಬ್ರಹ್ಮಾದಿಗಳ–ಜೀವೋತ್ತಮರಾದ ಬ್ರಹ್ಮದೇವರೇ ಮೊದಲಾದ ಯಾವತ್ತು ಸ್ಥಾವರಜಂಗಮ ಜೀವರುಗಳ, ಮನದಲಿ–ಮನವೆಂಬ ಅಧಿಷ್ಠಾನದಲ್ಲಿ, ತೋರಿ–ಪುಷ್ಪಗತ ಪರಿಮಳ ಪುಷ್ಪ ಅರಳಿದರೆ, ನಾಸಿಕೇಂದ್ರಕ್ಕೆ ತೋರುವುದಾಗು

ತ್ತದೆ. ಕಾಷ್ಟಮಥನ ಮಾಡಿದರೇ ಅಗ್ನಿ ಕಣ್ಣಿಗೆ ತೋರುತ್ತದೆ. ಹಾಗೆಯೇ ಅಹಂ ಮಮತಾದಿಗಳಿಂದ ಮುಕುಳಿತಭಾವವನ್ನು ಹೊಂದಿರುವ ಮನವೆಂಬ ಪುಷ್ಪ, ಜ್ಞಾನ, ಭಕುತಿ ವೈರಾಗ್ಯ ಇವುಗಳಿಂದ ವಿಕಸಿತವಾದರೇ ಪರಿಮಳಕ್ಕೆ ಸಮನಾದ ಪರಮಾತ್ಮ ತನ್ನ ರೂಪ ತೋರಿ ಉದ್ಧಾರ ಮಾಡತಾನೆ. (ಆದ್ದರಿಂದ ಮೊದಲು ಅಹಂಮಮತಾದಿಗಳನ್ನು ತ್ಯಾಗ ಮಾಡಬೇಕು. ನಂತರ ಜ್ಞಾನಭಕ್ತಿ ವೈರಾಗ್ಯಗಳಿಂದ ಮನಸ್ಸೆಂಬ ಪುಷ್ಪವನ್ನು ವಿಕಾಸ ಗೊಳಿಸಬೇಕು) ಮತ್ತು ಕಾಷ್ಠಮಥನದಂತೆ ಮನಸ್ಸಿನಿಂದ ಪರಮಾತ್ಮನ ಕಲ್ಯಾಣಗುಣಗಳ ವಿಚಾರರೂಪ ಮಥನಮಾಡಿದರೇ ಕಾಷ್ಠಗತ ಅಗ್ನಿ ಪ್ರತ್ಯಕ್ಷವಾದಂತೆ ತಾನು ಕಣ್ಣಿಗೆ ತೋರಿ ಉದ್ಧಾರ ಮಾಡತಾನೆ. ತೋರದಲೆ–ಪೂರ್ವೋಕ್ತ ಪ್ರಕಾರ ಮಾಡದವರಿಗೆ ಪ್ರತ್ಯಕ್ಷನಾಗದಲೆ ಅವರವರ ಹೃದಯದಲಿ ಪುಷ್ಪಗತಪರಿಮಳದಂತೆ, ಕಾಷ್ಟಗತ ಅಗ್ನಿಯಂತೆ ಅವ್ಯಕ್ತನಾಗಿ ಕಾಣಿಸಿಕೊಳ್ಳದೇ ಬ್ರಹ್ಮಾದಿಗಳ ಮನದಲಿ, ಇರುತಿಹ–ಇರತಕ್ಕ, ಜಗನ್ನಾಥ ವಿಠ್ಠಲನ–ಜಗತ್ತಿಗೇ ಸ್ವಾಮಿಯಾಗಿ ಪಾಪಪರಿಹಾರಕನಾಗಿ ವಿಠ್ಠಲರೂಪಿಯಾದ ಶ್ರೀಬಿಂಬ ರೂಪಿ ಪರಮಾತ್ಮನ, ಕರುಣಪಡೆವ–ಅಂತಃಕರಣಹೊಂದತಕ್ಕ, ಮುಮುಕ್ಷುಜೀವರು–ಮೋಕ್ಷಾ ಪೇಕ್ಷಿಗಳಾದ ಜೀವರುಗಳು, ಪರಮಭಾಗವತರನ–ಉತ್ತಮರಾದ ಭಗವದ್ಭಕ್ತರನ್ನು, ಪ್ರತಿ ದಿನವು–ಪ್ರತಿದಿನದಲ್ಲೂ, ಕೊಂಡಾಡುವದು–ಕೂಡಿಕೊಂಡು ಸಂಚರಿಸೋವರಾಗಬೇಕು ಎಂತ ಅರ್ಥ.

**ವಿಶೇಷಾರ್ಥ :–** ಕುಸುಮದಲ್ಲಿ ಪರಿಮಳವು ಇರುವ ಹಾಗೆ, ಅರಣಿಯಲ್ಲಿ ಅಗ್ನಿ ಇರುವ ಹಾಗೆ, ಬ್ರಹ್ಮಾದಿಗಳ ಮನಸ್ಸಿನಲ್ಲಿ ಕಾಣಿಸಿಕೊಂಡು ಸಾಕಲ್ಯೇನ ಗೊತ್ತಾಗದೇ ಭಕ್ತಿ ನಿಮಿತ್ತ ಯಶೋದಾದೇವಿಯಿಂದ ದಾಮಬದ್ಧ ಉದರದಲ್ಲಿ ಶ್ರೀಕೃಷ್ಣ ಇರೋವನಾಗಿದ್ದಾನೆ. ಇಂತಹ ಜ್ಞಾನಪ್ರದಸ್ವಾಮಿಯ ದಯ ಸಂಪಾದಿಸುವ ಮೋಕ್ಷಾಕಾಂಕ್ಷಿಗಳು ಪೂರ್ವೋಕ್ತ ಪರಮಭಾಗವತರಾದ ಬ್ರಹ್ಮಾದಿಗಳನ್ನು ಸದಾ ತಾರತಮ್ಯಕ್ರಮದಿಂದ ಸ್ತುತಿಸತಕ್ಕದ್ದೆಂತ ತಾತ್ಪರ್ಯ. ಪುಷ್ಪಗತ ದೃಷ್ಟಾಂತದಿಂದ ಕಾರ್ಯಭೂತ ಈ ಜಗತ್ತಿಗೆ ಕಾರಣಭೂತ ದೇವರು ಇದ್ದಾನೆ ಎಂತ ಶ್ರುತಿ, ಸ್ಮೃತಿಗಳಿಂದ ತಿಳಿಸಿದರು. ಅರಣಿಗತ ಅಗ್ನಿ ಪ್ರಾಪ್ತಿಗೆ ಮಥನದಂತೇ ಗುರುಸೇವಾ ಶಾಸ್ತ್ರಾಭ್ಯಾಸ ಮೊದಲಾದ ಸೇವಾ ಹೊರತು ದೇವರು ದೊರಕು ವುದಿಲ್ಲ ಎಂತ ಅರ್ಥ ತಿಳಿಸುವುದಕ್ಕೆ ಎರಡು ದೃಷ್ಟಾಂತ ಕೊಟ್ಟಿದ್ದಾರೆ ಎಂತ ತಾತ್ಪರ್ಯ.

**ಇತಿ**

**ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲಸಂಜಾತ ಶ್ರೀಮತ್ಸಂಕರ್ಷಣ-ತೀರ್ಥ ವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರ ಕನ್ನಡಭಾಷಾ-ಟೀಕಾಯಾಂ ಮಂಗಳಾಚರಣ ಅಥವಾ ನಾಂದೀಸಂಧಿವ್ಯಾಖ್ಯಾನಂ ಸಂಪೂರ್ಣಂ**

" ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನೃಸಿಂಹಃ ಪ್ರೀಯತಾಂ "

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಎರಡನೆಯ ಸಂಧಿ

## ಕರುಣಾಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥**

**ಮೂಲ :**

**ಶ್ರವಣ ಮನಕಾನಂದವೀವುದು ।**
**ಭವಜನಿತ ದುಃಖಗಳ ಕಳೆವುದು ।**
**ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವುದು ॥**
**ಭುವನ ಪಾವನವೆನಿಪ ಲಕುಮಿ ।**
**ಧವನ ಮಂಗಳ ಕಥೆಯ ಪರಮೋ ।**
**ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥ ೧ ॥**

**ಟೀಕಾ :**

ಹಿಂದಿನ ಸಂಧಿಯಲ್ಲಿ ಶ್ರೀ ಪರಮಾತ್ಮನ್ನ ಪ್ರಾರಂಭ ಮಾಡಿ ಸಕಲ ವಿಷ್ಣುಭಕ್ತರಾದ ದೇವತೆಗಳನ್ನ, ಪದ್ಮನಾಭತೀರ್ಥರೇ ಮೊದಲಾದ ಗುರುಗಳನ್ನ ಪ್ರಾರ್ಥನಾ ಮಾಡಿ, ವಂದನ ಮಾಡಿದವರಾಗಿ ಶ್ರೀ ಪರಮಾತ್ಮನ ಕರುಣಾತಿಶಯವನ್ನ ಈ ಸಂಧಿಯಲ್ಲಿ ಹೇಳ್ತಾರೆ. ಈ ಗ್ರಂಥಕರ್ತೃಗಳಾದ ಶ್ರೀಜಗನ್ನಾಥದಾಸರಾಯರು ತಮ್ಮಿಂದ ಕೃತವಾದ ಈ ಹರಿಕಥಾಮೃತಸಾರವೆಂಬ ಗ್ರಂಥವನ್ನ ಕೇಳೋಣದರಿಂದ ಆಗತಕ್ಕ ಫಲವನ್ನ ಮೊದಲನೆಯ ಪದ್ಯದಲ್ಲಿ ಹೇಳ್ತಾರೆ.

ಶ್ರವಣ–ಈ ಗ್ರಂಥವನ್ನು ಸಂಪೂರ್ಣವಾಗಿ ಕೇಳೋಣದರಿಂದ, ಮನಕೆ–ದಾರ ಮನಸ್ಸಿಗೆ, ಆನಂದವ–ಸಂತೋಷವು, ಈವುದು–ಕೊಡೋದಾಗತಮೋ (ಅವರ), ಭವ–ಸಂಸಾರಕ್ಕೆ ಕಾರಣವಾದ ಲಿಂಗದೇಹದಿಂದ, ಜನಿತ–ಉತ್ಪನ್ನಗಳಾದ, ದುಃಖಗಳ–ಜನನ ಮರಣಾದಿ ದುಃಖಗಳ, ಕಳೆವುದು–ಪರಿಹಾರ ಮಾಡೋದಾಗತದೆ. ಲಿಂಗದೇಹ ಇರೋವರಿಗೂ ಸಂಸಾರ ದುಃಖ. ಅದನ್ನ ಪರಿಹಾರ ಮಾಡತದೆ. ವಿವಿಧ ಭೋಗಗಳ–ನಾನಾ ವಿಧವಾದ ಸುಖ ಭೋಗಗಳನ್ನ, ಇಹ–ಈ ಲೋಕದಲ್ಲಿ, ಪರ–ಸ್ವರ್ಗಲೋಕ ತಥಾ

ಮಹರಾದಿ ಲೋಕಗಳಲ್ಲಿ, ಇತ್ತು–ಕೊಟ್ಟು, ಸಲಹುವುದು–ಸಂರಕ್ಷಣೆ ಮಾಡತದೆ (ಜೀವನ್ಮುಕ್ತರನ್ನಾಗಿ ಮಾಡಿ ಮಹರಾದಿ ಲೋಕಗಳಲ್ಲಿರುವಂತೆ ಮಾಡತದೆ. ಅನಂತರ ಬ್ರಹ್ಮಣಾ ಸಹ ಲಿಂಗಭಂಗ ಐದಿಸಿ ಸ್ವರೂಪಾನಂದ ಅಭಿವ್ಯಕ್ತಿ ಮಾಡಿ ರಕ್ಷಿಸೋದಾಗತದೆ), ಆದ್ದರಿಂದ, ಭುವನಪಾವನವೆನಿಪ–ಹದಿನಾಲ್ಕು ಲೋಕಗತ ಭಕ್ತಜೀವರನ್ನ ಪವಿತ್ರ ಮಾಡತಕ್ಕದ್ದು ಎಂತ ಎಣಿಸತಕ್ಕ, ಲಕುಮಿಧವನ–ಲಕ್ಷ್ಮೀಪತಿಯಾದ ಶ್ರೀ ನಾರಾಯಣ ದೇವರ, ಮಂಗಳಕಥೆಯ–ಶುಭಕರವಾದ ಚರಿತ್ರೆಯನ್ನ, ಪರಮೋತ್ಸವದಿ–ಅತ್ಯಂತ ಮನೋಲ್ಹಾಸದಿಂದ, ಕಿವಿಗೊಟ್ಟಾಲಿಪುದು–ಅನ್ಯವಾರ್ತೆಗೆ ಶ್ರವಣೇಂದ್ರಿಯ ಹೋಗದಂತೆ ಹರಿಕಥಾಕ್ಕೆ ದತ್ತಮಾಡಿ ಶ್ರದ್ಧೆಯಿಂದ ಕೇಳುವುದು. ದಾರು ಎಂದರೇ, ಭೂಸುರರು–ಭಗವದನುಗ್ರಹ ಸಂಪಾದನೆ ಮಾಡಬೇಕೆಂಬ ಬ್ರಾಹ್ಮಣರು, ದಿನದಿನದಿ–ಪ್ರತಿದಿನದಲ್ಲೂ ಎಂತ ಅರ್ಥ.

**ತಾ||** ಈ ಗ್ರಂಥವನ್ನು ಸಂಪೂರ್ಣವಾಗಿ ಕೇಳೋಣದರಿಂದ ದಾರ ಮನಸ್ಸಿಗಾದರೂ ಸಂತೋಷವು ಕೊಡೋಣದಾಗತದೋ, ಅವರ ಸಂಸಾರಕ್ಕೆ ಕಾರಣವಾದ ಲಿಂಗದೇಹ ದಿಂದ ಉತ್ಪನ್ನಗಳಾದ ಜನನ ಮರಣಾದಿ ದುಃಖಗಳು ಪರಿಹಾರ ಮಾಡೋಣಾಗತದೆ. ಲಿಂಗದೇಹ ಇರೋವರಿಗೂ ಸಂಸಾರ ದುಃಖ, ಅದನ್ನ ಪರಿಹಾರ ಮಾಡತದೆ. ಪರಿಹಾರ ಮಾಡಿ ನಾನಾ ವಿಧಗಳಾದ ಸುಖಭೋಗಗಳನ್ನ ಭೂಲೋಕದಲ್ಲೂ, ಸ್ವರ್ಗ ಮೊದಲಾದ ಮಹರಾದಿ ಲೋಕಗಳಲ್ಲೂ ಕೊಟ್ಟು ಸಂರಕ್ಷಣ ಮಾಡತದೆ. ಆದ್ದರಿಂದ ಹದಿನಾಲ್ಕು ಲೋಕಗತ ಭಕ್ತ ಜೀವರನ್ನ ಪವಿತ್ರಮಾಡತಕ್ಕ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣ ದೇವರ ಶುಭಕರವಾದ ಚರಿತ್ರೆಗಳಿಗೆ ಅತ್ಯಂತ ಮನೋಲ್ಹಾಸದಿಂದ ಶೋತ್ರೇಂದ್ರಿಯವನ್ನು ದತ್ತ ಮಾಡಿ ಶ್ರದ್ಧೆಯಿಂದ ಪ್ರತಿದಿನದಲ್ಲೂ ಕೇಳತಕ್ಕದ್ದು.

**ವಿಶೇಷಾರ್ಥ :–** ಇಹಲೋಕದಲ್ಲಿ ವಿವಿಧ ಭೋಗಗಳು ಎಂಥಾವು ಎಂದರೆ, ಅಹಂ ಮಮತಾದಿಗಳಿಂದ ರಹಿತನ್ನ ಮಾಡಿ, ದಿವ್ಯಸ್ಥಾನವು, ಮಹದೈಶ್ವರ್ಯವು ಶ್ರೀಹರಿಯಲ್ಲಿ ಭಕ್ತಿಯು ಮತ್ತು ವಿಷಯಗಳಲ್ಲಿ ವೈರಾಗ್ಯವು ಕೊಡೋಣವೇ ಮತ್ತು "ತದೇವ ಸತ್ಯಂ ತದು ಹೈವ ಮಂಗಳಂ, ತದೇವ ಪುಣ್ಯಂ ಭಗವದ್ಗುಣೋದಯಂ | ತದೇವ ಪುಣ್ಯಂ ರುಚಿರಂ ನವಂ ನವಂ, ತದೇವ ಶಾಸ್ತ್ರಂ ಗೃಣತೋ ಮಹೋತ್ಸವಃ | ತದೇವ ಶೋಕಾರ್ಣವಶೋಷಣಂ ನೃಣಾಂ ಯದುತ್ತಮಶ್ಲೋಕಗುಣಾನುವರ್ಣನಮ್||" ಎಂತ ಶ್ರೀ ಭಾಗವತ ದ್ವಾದಶಸ್ಕಂದ ವಚನ ಇರುವದರಿಂದಲೂ "ಕಾಲಕಾಲಕ್ಕೆ ಹರಿಕಥಾ ಶ್ರವಣ ಗುರುಗಳ ಮುಖದಿಂದ ಕೇಳಿದ್ದೇ ಕೇಳುತ್ತಾ, ಹಾಡುತ್ತಾ ಪಾಡುತ್ತಾ ಮನನ ಮಾಡುತ್ತಾ ಕೇಳಿದಂತೆ ಧ್ಯಾನವು ಮಾಡುತ್ತಾ" ಎಂತ ಶ್ರೀಗೋಪಾಲದಾಸರಾಯರ ವಾಕ್ಯ ಇರೋಣದರಿಂದಲೂ, ಶ್ರೀಪರಮಾತ್ಮನ ಕಥೆಯನ್ನ, ಮಹಾತ್ಮೆಯನ್ನ, ವೇದಾಧಿಕಾರಿಗಳಾದ ಬ್ರಾಹ್ಮಣರು ಸದಾ ಕೇಳೋವರಾಗಬೇಕು ಎಂತ ತಾತ್ಪರ್ಯ.

ಮತ್ತು ಕನಕದಾಸರ ಭಕ್ತಿಸಾರದಲ್ಲಿ ಈ ಮಾತನ್ನು ಹೇಳಿದ್ದಾರೆ.

ಕೇಳುವುದು ಹರಿಕಥೆಯ ಕೇಳಲು
ಹೇಳುವದು ಹರಿಭಕ್ತಿ ಮನದಲಿ
ತಾಳುವದು ಹಿರಿದಾಗಿ ನಿನ್ನಯ ಚರಣ ಸೇವೆಯಲಿ ||
ಊಳಿಗವ ಮಾಡುವದು ವಿಷಯವ
ಹೂಳುವದು ನಿಜಮುಕ್ತಿಕಾಂತೆಯ
ನಾಳುವದು ಕೃಪೆಮಾಡಿ ರಕ್ಷಿಸು ನಮ್ಮನನವರತ || ೧೦ ||

ಆದ ಕಾರಣ ಹರಿಕಥಾಶ್ರವಣ ಮುಕ್ತಿಗೆ ಮೊದಲ ಸೋಪಟಿಗೆ.

**ಮಳೆಯ ನೀರೋಣಿಯಲಿ ಪರಿಯಲು ।**
**ಬಳಸರೂರೊಳಗಿದ್ದ ಜನರಾ ।**
**ಜಲವು ಹೆದ್ದೊರೆಗೂಡೆ ಮಜ್ಜನಪಾನ ಗೈದಪರು ॥**
**ಕಲುಷ ವಚನಗಳಾದರಿವು ಬಾಂ ।**
**ಬೊಳೆಯ ಪೆತ್ತನ ಪಾದ ಮಹಿಮಾ ।**
**ಜಲಧಿ ಪೊಕ್ಕದರಿಂದ ಮಾಣ್ದಪರೇ ಮಹೀಸುರರು ॥ ೨ ॥**

ವೇದಶಾಸ್ತ್ರನಿಷ್ಠರಾದ ಬ್ರಾಹ್ಮಣರು ಪ್ರಾಕೃತ ಕಾವ್ಯಾಸಕ್ತವಾಗಿವೆ ಎಂಬ ಆಕ್ಷೇಪ ಮಾಡಲು, ಸಲ್ಲದು ಎಂತಲೂ, "ಪುರಾಣೈಃ ಪ್ರಸ್ತುತೈರಪಿ" ಎಂತ ಭಾಗವತಾದಿ ಶಾಸ್ತ್ರಗಳಲ್ಲಿ ಬ್ರಾಹ್ಮಣರಿಗೂ ಸಹ ಹೇಳುವದರಿಂದಲೂ, ಶಾಸ್ತ್ರಾಭಿಪ್ರಾಯವೇ ಕರ್ಣಾಟಕ ಭಾಷಾದಿಂದ ಹೇಳುವ ಕಾರಣ, ಬ್ರಾಹ್ಮಣರು ಇವರನ್ನ ಉದಾಸೀನ ಮಾಡಿ, ಬಿಡಬಾರದೆಂದು ಸದೃಷ್ಟಾಂತವಾಗಿ ಹೇಳಥಾರೆ.

ಮಳೆಯ ನೀರು–ಮೇಘಗಳಿಂದ ಸುರಿಯಲ್ಪಟ್ಟ ಉದಕ, ಓಣಿಯಲಿ–ಬೀದಿಗಳಲ್ಲಿ, ಪರಿಯಲು–ಪ್ರವಹಿಸುತಾ ಇದ್ದರೆ, ಊರೊಳಗಿದ್ದ ಜನರು–ಗ್ರಾಮದೊಳಗೆ ಇದ್ದ ಜನರು, ಬಳಸರು–ಉಪಯೋಗಿಸಿಕೊಂಬೋದಿಲ್ಲ, ಆ ಜಲವು–ಅದೇ ಉದಕ, ಹೆದ್ದೊರೆಗೂಡೆ–ದೊಡ್ಡದಾದ ನದಿಯಲ್ಲಿ ಸೇರಿದರೆ, ಮಜ್ಜನಪಾನ–ಸ್ನಾನವೇನು ಪಾನವೇನು, ಗೈದಪರು–ಮಾಡತಾರೆ, ಕಲುಷ–ಸ್ವೋತ್ತಮರ ವಾಕ್ಯಗಳಕ್ಕಿಂತಲೂ ನನ್ನ ವಾಕ್ಯಗಳು ಓಣಿಗತ ಉದಕ ಸದೃಶವಾಗಿ ನೀಚಗಳಾದ, ವಚನಗಳು–ನನ್ನ ಮಾತುಗಳು, ಆದರಿವು–ಆದರೂನೂ, ಬಾಂಬೊಳೆಯ ಪೆತ್ತನ–ಭಾಗೀರಥಿಯ ಪಡದಂಥಾ ಶ್ರೀ ಪರಮಾತ್ಮನ, ಪಾದ ಮಹಿಮಾ–ಪಾದಗಳ ಮಹಿಮಾ ಎಂಬ, ಜಲಧಿ–ಸಮುದ್ರದಲ್ಲಿ, ಪೊಕ್ಕದರಿಂದ–ಸೇರಿ ಇರೋ ಕಾರಣದಿಂದ, ಮಾಣ್ದಪರೇ–ಈ ಗ್ರಂಥವನ್ನ ನಿರಾಕರಿಸೋರೆ? ನಿರಾಕರಿಸೋದಿಲ್ಲ, ಮಹೀಸುರರು–ಜ್ಞಾನಶ್ರೇಷ್ಠರಾದ ಬ್ರಾಹ್ಮಣೋತ್ತಮರು ಎಂತ ತಾತ್ಪರ್ಯ.

**ತಾ॥** ಬೀದಿಗಳಲ್ಲಿ ಬಿದ್ದ ಉದಕ, ನದೀ ಸಂಬಂಧದಿಂದ ಪವಿತ್ರವಾಗಿ ಸ್ನಾನಪಾನಾದಿಗಳಿಗೆ ಯೋಗ್ಯವಾದಂತೆ ಸ್ವೋತ್ತಮರ ವಾಕ್ಯಗಳಕ್ಕಿಂತಲೂ ನನ್ನ ವಾಕ್ಯಗಳು ಓಣಿಗತ

ಉದಕ ಸದೃಶವಾಗಿ ನೀಚಗಳಾದ ಮಾತುಗಳಾದರೂ ಸಾಕ್ಷಾತ್ ಭಾಗೀರಥೀ ನದಿಯನ್ನು ಪಡದಂಥಾ ಶ್ರೀಮನ್ನಾರಾಯಣನ ಮಹಿಮಾ ಎಂಬ ಸಮುದ್ರವನ್ನ ಸೇರಿ ಇರೋಣದರಿಂದ, ಜ್ಞಾನಶ್ರೇಷ್ಠರಾದಂಥ ಬ್ರಾಹ್ಮಣೋತ್ತಮರು ಈ ಗ್ರಂಥವನ್ನು ನಿರಾಕರಿಸೋರೆ? ಎಂದಿಗೂ ಈ ಗ್ರಂಥವನ್ನ ನಿರಾಕರಣ ಮಾಡಲಾರರು, ಎಂತ ಅರ್ಥ.

**ವಿಶೇಷಾರ್ಥ** :– "ಗಂಗಾಸಂಗೇನ ನೈರ್ಮಲ್ಯಂ ರಥ್ಯಾದ್ಭಿರ್ಲಭ್ಯತೇ ಯಥಾ। ಪಾಚೋವಿಶುದ್ಧಿಸಿದ್ಧ್ಯರ್ಥಂ ಸಂಗಮ್ಯಂತೇ ಗುರೋರ್ಗಿರಃ॥" ಎಂತ ತತ್ವಪ್ರಕಾಶಿಕಾ ವಚನ ಇರುವದರಿಂದ ಇವರಲ್ಲಿ ಲೋಕವಾರ್ತೆ ಪ್ರಸಕ್ತಿ ಇಲ್ಲದೇ ಭಗವನ್‌ಮಾಹಾತ್ಮ್ಯ ವರ್ಣನೆ ಇರೋಣದರಿಂದ ಅನ್ಯ ವಾರ್ತೆಗಳಲ್ಲಿ ಲಕ್ಷ್ಯ ಇಡದೇ ಭಗವನ್ಮಾಹಾತ್ಮ್ಯೆಯಲ್ಲಿ ಲಕ್ಷ್ಯವಿಟ್ಟು ಸ್ವೀಕಾರ ಮಾಡಬೇಕು ಎಂತ ಪ್ರಾರ್ಥನ ಮಾಡೋವರಾಗಿದ್ದಾರೆ.

**ಶ್ರುತಿ ತತಿಗಳಗಭಿಮಾನಿ ಲಕುಮಿ ।**
**ಸ್ತುತಿಗಳಿಗೆ ಗೋಚರಿಸದಪ್ರತಿ ।**
**ಹತ ಮಹೈಶ್ವರ್ಯಾದ್ಯಖಿಳ ಸದ್ಗುಣ ಗಣಾಂಭೋಧಿ ॥**
**ಪ್ರತಿದಿವಸ ತನ್ನಂಘ್ರಿಸೇವಾ ।**
**ರತ ಮಹಾತ್ಮರು ಮಾಡುತಿಹ ಸಂ ।**
**ಸ್ತುತಿಗೆ ವಶನಾಗುವನಿವನ ಕಾರುಣ್ಯಕೇನೆಂಬೆ ॥ ೩ ॥**

ಶ್ರೀ ಪರಮಾತ್ಮ ಎಂಥಾಪನೆಂದರೆ ಹೇಳಥಾರೆ.

ಶ್ರುತಿತತಿಗಳಿಗೆ–ವೇದ ಸಮೂಹಗಳಿಗೆ, ಅಭಿಮಾನಿ–ಅಭಿಮಾನಿಯಾದ, ಲಕುಮೀ–ಲಕ್ಷ್ಮಿದೇವೇರ, ಸ್ತುತಿಗಳಿಗೆ–ಭಾರತ ನಿಗಮತತಿಗಳತಿಕ್ರಮಿಸಿ ಮಾಡಿದ ಸ್ತುತಿಗಳಿಗೆ, ಗೋಚರಿಸಿದ–ಗೋಚರವಾಗದಂಥಾ, ಅಪ್ರತಿಹತ–ಸವ್ರಶರಹಿತವಾದ, ನಾಶರಹಿತವಾದ, ಮಹೈಶ್ವರ್ಯ–ಅಪರಿಚ್ಛಿನ್ನವಾದ, ಸ್ವರಮಣಾಖ್ಯ ಐಶ್ವರ್ಯವೇ, ಆದಿ–ಮೊದಲಾದ ಎಂದರೇ, (ಸ್ವಾಖ್ಯದಲ್ಲಿ ತಾನೇ ರಮಾ ಬ್ರಹ್ಮರುದ್ರೇಂದ್ರಾದಿ ರೂಪಗಳಿಂದ ಸ್ವರಮಣಾಖ್ಯ ಐಶ್ವರ್ಯ ಉಳ್ಳವ), ಅಖಿಳ–ಸಮಸ್ತವಾದ, ಸದ್ಗುಣಗಣಾಂಭೋಧಿ–ಸತ್–ಪರಾಧೀನತೆಯೇನು, ನ್ಯೂನತೆಯೇನು, ಇಂಥಾ ದೋಷರಹಿತನಾದ, ಮಂಗಳಕರಗಳಾದ ಸ್ವಾಭಿನ್ನಗಳಾದ ಗುಣಗಳ ಸಮೂಹದಿಂದ ಸಮುದ್ರ ಸ್ಥಾನಾಪನ್ನನಾದವ, ಎಂದರೇ ರಮಾದೇವೇರಿಗೂ ಅಂತ ಸಿಕ್ಕದ, ಆಶ್ಚರ್ಯಗೊಳಿಸತಕ್ಕ ವಿಚಿತ್ರ ಗುಣಗಳುಳ್ಳವ. ಇಂಥಾ ಗುಣ ಪೂರ್ಣನಾದ ಶ್ರೀ ಪರಮಾತ್ಮ, ಪ್ರತಿದಿವಸ–ಪ್ರತಿದಿನದಲ್ಲೂ, ತನ್ನಂಘ್ರಿ–ತನ್ನ ಪಾದಗಳ, ಸೇವಾರತ–ಧ್ಯಾನೋಪಾಸನಾದಿರೂಪವಾದ ಸೇವಾದಲ್ಲಿ ಆಸಕ್ತರಾದ, ಮಹಾತ್ಮರು–ಅತಿಶಯವಾದ ನಿಷ್ಕಾಮುಕವಾದ ಮನಸ್ಸುಳ್ಳ ಭಕ್ತರು, ಮಾಡುತಿಹ–ಮಾಡತಾ ಇರತಕ್ಕಂಥ, ಸಂಸ್ತುತಿಗೆ–ಸಮೀಚೀನವಾದ, ಏಕಾಗ್ರಚಿತ್ತದ ಸ್ತೋತ್ರಕ್ಕೆ, ವಶನಾಗುವನು–ಪ್ರತ್ಯಕ್ಷನಾಗಿ ದರ್ಶನ ಕೊಡುವ, ಎಂದರೇ ಪೂರ್ವೋಕ್ತ ಪ್ರಕಾರ ಮಹಾ ಐಶ್ವರ್ಯ

ವುಳ್ಳವನಾದಾಗ್ಯೂನೂ ಭಕ್ತರ ಅಧೀನನಾಗಿ ತನ್ನ ವಶವಾದ ಜೀವಗೆ ಅಪರೋಕ್ಷನಾಗ ಥಾನೆ ಎಂತ ಅರ್ಥ ಇವನ–ಇಂಥಾ ಶ್ರೀಹರಿಯು, ಕಾರುಣ್ಯಕ್ಕೆ–ಕರುಣಕ್ಕೆ ಅಂಪರೇ ಅಲ್ಪಾಧಿಕಾರಿಯ ಅಲ್ಪವಾದ ಸ್ತೋತ್ರಾದಿಗಳಿಗೆ ಪ್ರತ್ಯಕ್ಷನಾಗೋಣವರಿಂದ ಮಹಾ ಕರುಣೆ ಉಳ್ಳವ. ಇಂಥಾ ಕರುಣಕ್ಕೆ, ಏನೆಂಬೆ–ನಾನು ಏನೆಂತ ಹೇಳಲಿ? ತನ್ನ ಭಕ್ತರಲಿ ಬಹು ಅಂತಃಕರಣಯುಕ್ತನಾದವನು ಎಂತ ತಾತ್ಪರ್ಯ.

**ತಾ||** ಶ್ರೀ ಪರಮಾತ್ಮ ಎಂಥಾವನೆಂದರೇ, ವೇದ ಸಮೂಹಗಳಿಗೆ ಅಭಿಮಾನಿಯಾದ ಲಕ್ಷ್ಮೀದೇವೇರು ಭಾರತ ನಿಗಮತತಿಗಳತಿಕ್ರಮಿಸಿ ಮಾಡಿದ ಸ್ತುತಿಗಳಿಗೆ ಗೋಚರನಾಗ ದಂಥಾವನು. ಸ್ವಾಖ್ಯದಲಿ ತಾನೇ ರಮಾಬ್ರಹ್ಮರುದ್ರೇಂದ್ರಾದಿ ರೂಪಗಳಿಂದ ಸ್ವ-ರಮಣಾಖ್ಯ ಐಶ್ವರ್ಯ ಉಳ್ಳವನು. ಸಮಸ್ತವಾದ ಪರಾಧೀನತೆಯೇನು, ನ್ಯೂನತೆ ಯೇನು, ಇಂಥಾ ದೋಷರಹಿತವಾದಂಥಾ ಮಂಗಳಕರಗಳಾದ, ಸ್ವಾಭಿನ್ನಗಳಾದ ಗುಣ ಗಳ ಸಮೂಹದಿಂದ ರಮಾದೇವೇರನ್ನೂ ಆಶ್ಚರ್ಯಗೊಳಿಸತಕ್ಕ ವಿಚಿತ್ರ ಗುಣಗಳುಳ್ಳ ವನು. ಇಂಥಾ ಗುಣಪೂರ್ಣನಾದ ಶ್ರೀ ಪರಮಾತ್ಮನು ಪ್ರತಿದಿನದಲ್ಲೂ ತನ್ನ ಪಾದಗಳ ಧ್ಯಾನೋಪಾಸನಾದಿ ಸೇವಾದಲ್ಲಿ ಆಸಕ್ತರಾದ, ಅತಿಶಯವಾದ ನಿಷ್ಕಾಮುಕವಾದ ಮನಸ್ಸುಳ್ಳ ಭಕ್ತರು ಮಾಡುವ ಸಮೀಚೀನವಾದ, ಏಕಾಗ್ರಚಿತ್ತದ ಸ್ತೋತ್ರಕ್ಕೆ ಪ್ರತ್ಯಕ್ಷನಾಗಿ ಭಕ್ತರ ಅಧೀನನಾಗಿ ಅಪರೋಕ್ಷನಾಗಥಾನೆ. ಇನ್ನೂ ಅಲ್ಪಾಧಿಕಾರಿಯ ಅಲ್ಪವಾದ ಸ್ತೋತ್ರಾದಿಗಳಿಗೆ ಪ್ರತ್ಯಕ್ಷನಾಗೋಂಥಾ ಕರುಣ ಉಳ್ಳವನ ಕರುಣಕ್ಕೆ ಏನೆಂತ ಹೇಳಲಿ?

**ಮನವಚನಕತಿ ದೂರ ನೆನೆವರ |**
**ನನುಸರಿಸಿ ತಿರುಗುವನು ಜಾನ್ಹವಿ |**
**ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನು ||**
**ಘನಮಹಿಮ ಗಾಂಗೇಯನುತ ಗಾ |**
**ಯನವ ಕೇಳುತ ಗಗನಚರವಾ |**
**ಹನ ದಿವೌಕಸರೊಡನೆ ತಿರುಗುವನು ಮನೆಮನೆಗಳಲ್ಲಿ || ೪ ||**

ಇನ್ನೂ ಶ್ರೀಹರಿ ಎಂಥಾ ಕರುಣವುಳ್ಳವನೆಂದರೆ ಹೇಳಥಾರೆ.

ಜಾನ್ಹವಿಜನಕ–ಗಂಗಾಜನಕನಾದ ಶ್ರೀಹರಿ, ಮನ– ಮನಸ್ಸಿನಿಂದ ಆಲೋಚನಿ ಮಾಡಿ ಮಹಿಮಾವನ್ನ ಸಾಕಲ್ಯೇನ ತಿಳಿಕೊಂಬೋಣ, ಎನತಕ್ಕ ರಮಾದೇವೇರ ಮನಸ್ಸಿ ಗೇನು, ತಥಾ ಭಕ್ತರ ಮನಸ್ಸಿಗೇನು, ವಚನಕ್ಕೆ–ವಾಕ್ಯರೂಪವಾದ, ಅಪೌರುಷೇಯ ವಾದ ವೇದಗಳಿಗೇನು, ವಾಕ್ಕುಗಳಿಗೇನು, ಅತಿದೂರ–ಅತ್ಯಂತವಾಗಿ ದೂರನಾದವನು. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದರೇ ದೂರಗತ ಪದಾರ್ಥ ಹ್ಯಾಂಗೆ ಅಗೋಚರವೋ, ಇನ್ನೂ ದೂರತರವಾದ ಆಕಾಶ ಸಾಕಲ್ಯೇನ ಹ್ಯಾಂಗೆ ಮನವಚನಗಳಿಗೆ ಗೋಚರವಲ್ಲವೋ, ತದ್ವತ್ ಸಾಕಲ್ಯೇನ ತಿಳಿಯೋದಕ್ಕೆ

ಅತಿ ದೂರನಾದವನು, ಇನ್ನೂ, ನೆನೆವರ_ಅವರವರ ಯೋಗ್ಯತಾನುಸಾರ, ಧ್ಯಾನೋಪಾಸನಾದಿಗಳಿಂದ ನಾಮೋಚ್ಚಾರಣ ಮಾಡತಕ್ಕವರ, ಅನುಸರಿಸಿ_ಸ್ವರೂಪ ಯೋಗ್ಯತೆಗೆ ಅನುಸರಿಸಿ, ತಿರುಗುವನು_ಅಪರೋಕ್ಷೀಕರಿಸಿಕೊಂಬುವುದಕ್ಕೆ ಅಭಿಮುಖನಾಗಿ ತಿರುಗುವನು. ಇನ್ನೂ, ಜನರ_ಭಕ್ತಾಭಕ್ತ ಸಮಸ್ತ ಜನಗಳ, ಒಳಗಿದ್ದು_ಸ್ವರೂಪ ದೇಹದ ಒಳಗೆ ಬಿಂಬನಾಗಿದ್ದು, ಜನಿಸುವ_ಸ್ಥೂಲ ದೇಹಗಳಿಂದ ಜನಿಸಿದರೆ ಅವಿಯೋಗಿಯಾದ ಬಿಂಬನಾದ ತಾನೂ ಜನಿಸತಾನೆ. ಜಗದುದರ ತಾನು_ಅನಂತಾನಂತ ಜಗತ್ತುಗಳ ಉದರದಲ್ಲಿ ಉಳ್ಳವನು, ಘನಮಹಿಮ_ನಿಬಿಡೀಕೃತವಾದ, ಅಪರಿಚ್ಛಿನ್ನವಾದ ಅಸದೃಶವಾದ ಮಹಿಮೋಪೇತನಾದವನು. ಗಾಂಗೇಯನುತ_ಶರತಲ್ಪದಲ್ಲಿ ಮಹಾದುಃಖದಿಂದ ಸಹಿತರಾದ, ಶ್ರೀ ಪರಮಾತ್ಮನಲ್ಲಿ ಸ್ಮೃತಿಯುಕ್ತರಾದ, ಗಂಗಾಪುತ್ರರಾದ ಭೀಷ್ಮಾಚಾರ್ಯರಿಂದ ಸ್ತುತ್ಯನಾದ ಶ್ರೀಕೃಷ್ಣರೂಪೀ ಪರಮಾತ್ಮನು, ಗಾಯನವ ಕೇಳುತ_ಭಕ್ತರು ಮಾಡತಕ್ಕ ಪ್ರಾರ್ಥನಾ ರೂಪವಾದ ಗಾನವನ್ನು ಕೇಳುತ, ಗಗನಚರ ವಾಹನ_ಆಕಾಶದಲ್ಲಿ ಸಂಚಾರ ಮಾಡತಕ್ಕ ಪಕ್ಷಿಶ್ರೇಷ್ಠನಾದ ಗರುಡ ದೇವರನ್ನ ವಾಹನವಾಗಿ ಉಳ್ಳ, ಈ ಕೃಷ್ಣ, ದಿವೌಕಸರೊಡನೆ_ತನ್ನ ಭಕ್ತರಾದ ದೇವತೆಗಳ ಸಹಿತನಾಗಿ, ತಿರುಗುವನು_ಸಂಚಾರ ಮಾಡುವನು. ಮನೆ ಮನೆಗಳಲ್ಲಿ_ಭಕ್ತರ ಮನೆಗಳಲ್ಲಿ ಎಂತ ಒಂದರ್ಥ. ಇನ್ನೊಂದರ್ಥ ಏನೆಂದರೆ, ಪ್ರತಿ ಪ್ರತಿ ಇಂದ್ರಿಯಾಖ್ಯ ಮನೆಗಳಲ್ಲಿ ಎಂತ ತಾತ್ಪರ್ಯ. ಸರ್ವೇಂದ್ರಿಯಗಳಲ್ಲಿ ಸಂಚಾರ ಮಾಡಿ ಇಂದ್ರಿಯಾಭಿಮಾನಿಗಳಾದ ದೈತ್ಯರ ಕಾರ್ಯ ನಡೆಯದಂತೆ ರಕ್ಷಿಸುತ್ತಾನೆ ಎಂತ ತಾತ್ಪರ್ಯ.

**ತಾ||** ಇನ್ನೂ ಶ್ರೀಹರಿ ಎಂಥಾ ಕರುಣವುಳ್ಳವನು ಎಂದರೇ, ಗಂಗಾಜನಕನಾದ ಶ್ರೀಹರಿ ಮನಸ್ಸಿನಲ್ಲಿ ಆಲೋಚನೆ ಮಾಡಿ ಮಹಿಮಾವನ್ನ ಸಾಕಲ್ಯೇನ ತಿಳಿಕೊಂಬೋಣ ಎನತಕ್ಕ ರಮಾದೇವೇರ ಮನಸ್ಸಿಗೂ, ತಥಾ ಭಕ್ತರ ಮನಸ್ಸಿಗೂ, ವಾಕ್ಯರೂಪವಾದ, ಅಪೌರುಷೇಯವಾದ ವೇದಗಳಿಗೂ ಅತ್ಯಂತವಾಗಿ ದೂರನಾದವನು. ದೂರಗತ ಪದಾರ್ಥ ಹ್ಯಾಂಗೆ ಅಗೋಚರವೋ ಅದರಂತೆಯೂ, ಇನ್ನೂ ದೂರತರವಾದ ಆಕಾಶ ಸಾಕಲ್ಯೇನ ಹ್ಯಾಂಗೆ ಮನವಚನಗಳಿಗೆ ಗೋಚರವಲ್ಲವೋ ತದ್ವತ್ ಸಾಕಲ್ಯೇನ ತಿಳಿಯೋದಕ್ಕೆ ಅತಿ ದೂರನಾದವನು. ಇನ್ನೂ, ಅವರವರ ಯೋಗ್ಯತಾನುಸಾರ ಧ್ಯಾನೋಪಾಸನಾದಿಗಳಿಂದ ನಾಮೋಚ್ಚಾರಣೆ ಮಾಡತಕ್ಕವರ ಸ್ವರೂಪ ಯೋಗ್ಯತೆಗೆ ಅನುಸರಿಸಿ ಅಪರೋಕ್ಷೀಕರಿಸಿಕೊಂಬೋದಕ್ಕೆ ಅಭಿಮುಖನಾಗಿ ತಿರುಗುವನು. ಇನ್ನೂ, ಭಕ್ತಾಭಕ್ತ ಜನರ ಅಂದರೆ ಸಮಸ್ತ ಜೀವರ ಸ್ವರೂಪ ದೇಹದ ಒಳಗೆ ಬಿಂಬನಾಗಿ ಇದ್ದು ಸ್ಥೂಲ ದೇಹಗಳಿಂದ ಜನಿಸಿದರೆ ಅವಿಯೋಗಿಯಾದ ಬಿಂಬನಾದ ತಾನೂ ಜನಿಸತಕ್ಕವನು. ಈ ಬಿಂಬ ಮೂರ್ತಿಯಾದ ತಾನು ಅನಂತಾನಂತ ಜಗತ್ತುಗಳು ಉದರದಲ್ಲಿ ಉಳ್ಳವನು. ಇನ್ನೂ, ನಿಬಿಡೀಕೃತವಾದ, ಅಪರಿಚ್ಛಿನ್ನವಾದ ಅಸದೃಶವಾದ ಮಹಿಮೋಪೇತನಾದವನು. ಇನ್ನು, ಶರತಲ್ಪದಲ್ಲಿ ಮಹಾ ದುಃಖದಿಂದ ಸಹಿತರಾದ ಶ್ರೀ ಪರಮಾತ್ಮನ ಸ್ಮೃತಿಯುಕ್ತರಾದ,

ಗಂಗಾಪುತ್ರರಾದ, ಭೀಷ್ಮಾಚಾರ್ಯರಿಂದ ಸ್ತುತ್ಯನಾದ, ಶ್ರೀಕೃಷ್ಣರೂಪಿಯಾದ ಶ್ರೀ ಪರಮಾತ್ಮನು, ಭಕ್ತರು ಮಾಡತಕ್ಕ ಪ್ರಾರ್ಥನಾರೂಪವಾದ ಗಾನವನ್ನು ಕೇಳುತ್ತಾ, ಆಕಾಶದಲ್ಲಿ ಸಂಚಾರ ಮಾಡತಕ್ಕ ಪಕ್ಷಿ ಶ್ರೇಷ್ಠನಾದ ಗರುಡ ದೇವರನ್ನ ವಾಹನವಾಗಿ ಉಳ್ಳ ಶ್ರೀಕೃಷ್ಣ ತನ್ನ ಭಕ್ತರಾದ ದೇವತೆಗಳ ಸಹಿತವಾಗಿ ಭಕ್ತರ ಮನೆಗಳಲ್ಲಿಯೂ, ಪ್ರತಿ ಪ್ರತಿ ಇಂದ್ರಿಯಾಖ್ಯವಾದ, ಮನೆಗಳಲ್ಲಿಯೂ, ಸರ್ವೇಂದ್ರಿಯಗಳಲ್ಲೂ ಸಂಚಾರ ಮಾಡಿ ಇಂದ್ರಿಯಾಭಿಮಾನಿಗಳಾದ ದೈತ್ಯರ ಕಾರ್ಯ ನಡೆಯದಂತೆ ಸಂರಕ್ಷಣೆ ಮಾಡೋವ ನಾಗತಾನೆ ಎಂತ ತಾತ್ಪರ್ಯ.

**ಮಲಗಿ ಪರಮಾದರದಿ ಪಾಡಲು ।**
**ಕುಳಿತು ಕೇಳುವ ಕುಳಿತು ಪಾಡಲು ।**
**ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ ॥**
**ಸುಲಭನೋ ಹರಿ ತನ್ನವರನರ ।**
**ಘಳಿಗೆ ಬಿಟ್ಟಗಲನು ರಮಾಧವ ।**
**ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ॥ ೫ ॥**

ಮಲಗಿ—ಅಸ್ಮದಾದಿಗಳು ಮಲಗಿದ ಕಾಲದಲ್ಲಿ ದಶೇಂದ್ರಿಯಗಳನ್ನು ಬಾಹ್ಯ ವ್ಯಾಪಾರ ಶೂನ್ಯಗಳನ್ನಾಗಿ ಮಾಡಿ, ಮನ ಇಂದ್ರಿಯ ಸ್ವಪ್ನ ಕಾರ್ಯದಲ್ಲಿ ರತ ವಾಗಿ ಇದ್ದಂತೆ ದಶೇಂದ್ರಿಯಗಳನ್ನ ಮನಇಂದ್ರಿಯದಲ್ಲಿ ಲಯವೈದಿಸಿ ಆ ಮನಸ್ಸಿನ ಸ್ವಪ್ನಕಾಲದ ಸಂಚಾರವನ್ನು ವಿಷಯಾದಿಗಳಲ್ಲಿ ಹೋಗಲೀಸದೆ ಶ್ರೀ ಪರಮಾತ್ಮನ ಪಾದ ದಲ್ಲಿ ಲಯವೈದಿಸಿ ಅಂತರ್ನಿಷ್ಠ ಸಮಾಧಿಯುಕ್ತನಾಗಿ, ಪರಮಾದರದಿ— "ಪರಮಸ್ನೇಹ-ಸಂಯುಕ್ತೋ ಯಥಾರ್ಥಜ್ಞಾನತೋ ಭವೇತ್ । ಸಾ ಭಕ್ತಿರಿತಿ ವಿಜ್ಞೇಯಂ ಸಾಧನಂ ಭೋಗಮೋಕ್ಷಯೋಃ" ಎಂತ ಶ್ರೀ ಮಧ್ವಾಚಾರ್ಯರ ವಾಕ್ಯರೀತ್ಯಾ ಅತ್ಯಾದರದಿಂದ, ಪಾಡಲು—ಸ್ತೋತ್ರ ಮಾಡಿದರೆ, ಕುಳಿತು—ಹೃದಯಾಕಾಶದಲ್ಲಿ ಕುಳಿತುಕೊಂಡು, ಕೇಳುವ—ಆದರದಿಂದ ಕೇಳೋವನಾಗಥಾನೆ. ಅಸ್ಮದಾದಿಗಳಿಗೆ ಪರಮಾತ್ಮನಲ್ಲಿ ಎಷ್ಟು ಆದರವಿರತದೋ ಅಷ್ಟು ಆದರವೂ ಪರಮಾತ್ಮಗೆ ನಮ್ಮಗಳಲ್ಲಿ ಇರತದೆ. ಕುಳಿತು—ಈ ಪ್ರಕಾರ ಅಧಿಕಾರಿಯಾದವ, ತದೇಕ ಧ್ಯಾನದಿಂದ ಕೂತುಕೊಂಡು, ಪಾಡಲು—ಸ್ತೋತ್ರ ಮಾಡಿದರೆ, ನಿಲುವ—ತನ್ನ ಸಂದರ್ಶನ ರೂಪವಾದ ಅಪರೋಕ್ಷಕ್ಕಾಗಿ ಸಿದ್ಧ ನಾಗಿ ನಿಲ್ಲೋವನಾಗಥಾನೆ. ನಿಂತರೆ—ಪೂರ್ವದಂತೆ ಏಕಾದಶೇಂದ್ರಿಯಗಳು ಏಕವಾಗಿ ನಿಂತು ಸ್ತೋತ್ರ ಮಾಡಿದರೆ, ನಲಿವ—ಎದುರಿಗೆ ಸುಳಿದಾಡಥಾನೆ. (ಮೇಘಾಚ್ಛಾದಿತ ಸೂರ್ಯನೋಪಾದಿಯಲಿ) ಎಂತ ತಾತ್ಪರ್ಯ. ನಲಿದರೆ—ಇಂದ್ರಿಯಗಳು ಶ್ರೀ ಪರ ಮಾತ್ಮನ ಜ್ಞಾನಾನಂದಾದಿ ಗುಣಗಳಲ್ಲಿ ಅವಿಚ್ಛಿನ್ನವಾಗಿ ಸಂಚಾರ ಮಾಡಿದರೆ, ಒಲಿವೆ—ಪ್ರತ್ಯಕ್ಷನಾಗಿ ಒಲಿಯೋವನಾಗಿದ್ದೇನೆ, ನಿಮಗೆ—ನಿಮ್ಮಗಳಿಗೆ ಎಂತ, ಎಂಬ—ಹೇಳೋವ

ನಾಗತಾನೆ. ಇನ್ನು ವೇದಶಾಸ್ತ್ರಾಖ್ಯ ವಾಕ್ಯಗಳಿಂದ ಅಂಬೋಣವನಾಗಿದ್ದಾನೆ. ಸುಲಭನೋ ಹರಿ–ಈ ಶ್ರೀಪರಮಾತ್ಮ, ಹೇ ಅಧಿಕಾರಿಗಳಿರಾ ! ಅತಿ ಸುಲಭನೋ ಎಂತ ಸಂಬೋಧನ. ತದುಕ್ತಂ ಭಗವದ್ಗೀತಾಯಾಂ–"ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ | ಅನನ್ಯಚೇತಾಸ್ಸತತಂ ಯೋ ಮಾಂ ಸ್ಮರತಿ ನಿತ್ಯಶಃ | ತಸ್ಯಾಹಂ ಸುಲಭಃ ಪಾರ್ಥ" ಎಂತ ಇರುವದರಿಂದ ಇಂಥಾ ಶ್ರೀಹರಿ, ತನ್ನವರ– ಈ ಪೂರ್ವೋಕ್ತರಾದ ತನ್ನ ಭಕ್ತರನ್ನ, ಅರಘಳಿಗೆ–ಸ್ವಲ್ಪಕಾಲವಾದರೂ, ಬಿಟ್ಟು–ಬಿಟ್ಟು, ಅಗಲನು–ದೂರನಾಗೋದಿಲ್ಲ ಸದಾ ಅಪರೋಕ್ಷಿತನಾಗಿ ಇರತಾನೆ. ಇಂಥಾ ರಮಾ ಧವನ–ಲಕ್ಷ್ಮೀಪತಿಯಾದ ನಾರಾಯಣ ದೇವರ, ಒಲಿಸಲು–ವಶಮಾಡಿಕೊಂಬೋದಕ್ಕೆ, ಅರಿಯದೆ–ಪೂರ್ವೋಕ್ತಮಾರ್ಗ ಅರಿಯದೆ, ಪಾಮರರು–ಶ್ರೀ ಪರಮಾತ್ಮನ ಸ್ಮೃತಿರಹಿತ ರಾಗಿ ಅಹಿತವಾದ ಐಶ್ವರ್ಯದಲ್ಲಿ ಅಹಂಮಮತಾಯುಕ್ತರಾಗಿ ಆಸಕ್ತಿಯುಳ್ಳ ಜನರು, ಭವದೊಳಗೆ–ಅಜ್ಞಾನಾಖ್ಯ ಅಂಧಕಾರದಲ್ಲಿ, ಬಳಲುವರು–ನಶ್ವರವಾದ ದಾರಪುತ್ರಾದಿ ಯುಕ್ತವಾದ ಸಂಸಾರದಲ್ಲಿ ಕಷ್ಟಪಡತಾ ಇರಥಾರೆ.

**ತಾ||** ಅಸ್ಮದಾದಿಗಳು ಮಲಗಿದ ಕಾಲದಲ್ಲಿ ದಶೇಂದ್ರಿಯಗಳನ್ನು ಬಾಹ್ಯ ವ್ಯಾಪಾರ ಶೂನ್ಯಗಳನ್ನಾಗಿ ಮಾಡಿ, ಮನಇಂದ್ರಿಯ ಸ್ವಪ್ನಕಾರ್ಯದಲ್ಲಿ ರತವಾಗಿದ್ದಂತೆ, ದಶೇಂದ್ರಿಯಗಳನ್ನ ಮನಇಂದ್ರಿಯದಲ್ಲಿ ಲಯವೈದಿಸಿ, ಆ ಮನಸ್ಸಿನ ಸ್ವಪ್ನಕಾಲದ ಸಂಚಾರವನ್ನು ವಿಷಯಾದಿಗಳಲ್ಲಿ ಹೋಗಲೀಸದೆ ಶ್ರೀ ಪರಮಾತ್ಮನ ಪಾದದಲ್ಲಿ ಲಯ ವೈದಿಸಿ ಅಂತರ್ನಿಷ್ಠ ಸಮಾಧಿಯುಕ್ತನಾಗಿ ಅತ್ಯಾದರದಿಂದ ಸ್ತೋತ್ರ ಮಾಡಿದರೆ ಹೃದಯಾಕಾಶದಲ್ಲಿ ಕೂತುಕೊಂಡು ಆದರದಿಂದ ಕೇಳೋವನಾಗಥಾನೆ. ಅಸ್ಮದಾದಿಗಳಿಗೆ ಪರಮಾತ್ಮನಲ್ಲಿ ಎಷ್ಟು ಆದರವಿರುತದೋ ಅಷ್ಟೇ ಆದರವು ಪರಮಾತ್ಮನಿಗೆ ನಮ್ಮಲ್ಲಿ ಇರತದೆ. ಈ ಪ್ರಕಾರ ಅಧಿಕಾರಿಯಾದವ ತದೇಕಧ್ಯಾನದಿಂದ ಕೂತುಕೊಂಡು ಸ್ತೋತ್ರ ಮಾಡಿದರೆ ತನ್ನ ಸಂದರ್ಶನ ರೂಪವಾದ ಅಪರೋಕ್ಷಕ್ಕಾಗಿ ಸಿದ್ಧನಾಗಿ ನಿಲ್ಲೋವ ನಾಗಥಾನೆ, ಮತ್ತು ಏಕಾದಶೇಂದ್ರಿಯಗಳು ಏಕವಾಗಿ ನಿಂತು ಸ್ತೋತ್ರ ಮಾಡಿದರೆ ಮೇಘಾಚ್ಛಾದಿತ ಸೂರ್ಯನೋಪಾದಿಯಲಿ ಎದುರಿಗೆ ಸುಳಿದಾಡಥಾನೆ. ಇಂದ್ರಿಯಗಳು ಶ್ರೀ ಪರಮಾತ್ಮನ ಜ್ಞಾನಾನಂದಾದಿ ಗುಣಗಳಲ್ಲಿ ಅವಿಚ್ಛಿನ್ನವಾಗಿ ಸಂಚಾರ ಮಾಡಿದರೆ ಪ್ರತ್ಯಕ್ಷನಾಗಿ ಒಲಿಯೋವನಾಗಥಾನೆ. ಈ ಪ್ರಕಾರ ಪರಮಾತ್ಮ ವೇದಶಾಸ್ತ್ರಾಖ್ಯ ವಾಕ್ಯಗಳಿಂದ ಅಂಬೋಣವನಾಗಿದ್ದಾನೆ. ಆದ ಕಾರಣ ಓ ಅಧಿಕಾರಿಗಳಿರಾ ! ಪರಮಾತ್ಮ ಅತಿ ಸುಲಭ. ಇಂಥಾ ಶ್ರೀಹರಿ ಈ ಪೂರ್ವೋಕ್ತ ಪ್ರಕಾರ ಭಗವದನುಗ್ರಹ ಸಂಪಾದಿಸಿದ ಭಕ್ತರನ್ನು ಸ್ವಲ್ಪ ಕಾಲವಾದರೂ ಬಿಟ್ಟು ದೂರಾಗೋದಿಲ್ಲ. ಸದಾ ಅಪರೋಕ್ಷಿತನಾಗಿ ಇರಥಾನೆ. ಇಂಥಾ ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ ವಶಮಾಡಿಕೊಂಬೋ ದಕ್ಕೆ ಪೂರ್ವೋಕ್ತ ಮಾರ್ಗವನ್ನ ಅರಿಯದೇ ಶ್ರೀಪರಮಾತ್ಮನ ಸ್ಮೃತಿರಹಿತರಾಗಿ ಐಹಿಕ ಐಶ್ವರ್ಯದಲ್ಲಿ ಅಹಂಮಮತಾಯುಕ್ತರಾಗಿ ಆಸಕ್ತಿಯುಳ್ಳ ಜನರು ಅಜ್ಞಾನಾಖ್ಯ

ಅಂಧಕಾರದಲ್ಲಿ ನಶ್ವರವಾದ ದಾರಾಪುತ್ರಾದಿಯುಕ್ತವಾದ ಸಂಸಾರದಲ್ಲಿ ಕಷ್ಟಪಡತಾ ಇರಥಾರೆ ಎಂತ ತಾತ್ಪರ್ಯ.

**ವಿಶೇಷಾರ್ಥ :–**

ಶ್ರೀ ಪರಮಾತ್ಮನ ಧ್ಯಾನಗಾನಗಳಿಗೆ ಕಾಲನೇಮವಿಲ್ಲ, ಎಂಬುದಕ್ಕೆ ಪ್ರಮಾಣ. "ಉಕ್ತಂ ಚ ಬೃಹನ್ನಾರದೀಯ ಪುರಾಣೇ ಏಕಾದಶೀಮಾಹಾತ್ಮ್ಯೇ, "ಯಃ ಸ್ವಪಂಸ್ತು ಶಯನೇ ಹರಿಂ ಚಿಂತಯತೇ ನರಃ । ಸ ಹರಿಃ ಕೀರ್ತನಂ ತಸ್ಯ ಸಂಶಿಷ್ಟಃ ಶೃಣುತೇ ಮುದಾ ॥ ಯಸ್ತಿಷ್ಠನ್ ಕೀರ್ತಯೇದ್ದೇವಂ ಭಕ್ತ್ಯಾ ಯುಕ್ತೋ ನರೋತ್ತಮಃ । ಸ್ವಯಮುತ್ಥಾಯ ಯತಿರ್ಮಾ ಜಗದಾಧಾರಮೀಶ್ವರಂ । ಕೀರ್ತಯೇದ್ವಿಪಶೋ ಗೀರ್ಭಿ–ರ್ಮಹಾಭಕ್ತಿಸಮನ್ವಿತಃ ॥ ಸ ಹರಿಃ ಶೃಣುತೇ ಸ್ತೋತ್ರಂ ನೃತ್ಯಮಾನೋsತಿಹರ್ಷಿತಃ ॥ ಯಃ ಪುಮಾನ್ ನೃತ್ಯಮಾನಸ್ಸನ್ ವಿಲಜ್ಜೋ ಗೀಯತೇ ಯದಿ ॥ ಸ ಹರಿಃ ಪರಮಃ ಪ್ರೀತೋ ಪ್ರತ್ಯಕ್ಷೋ ಭವತಿ ಧ್ರುವಮ್" ಇತಿ ॥

**ಮನದೊಳಗೆ ತಾನಿಪ್ಪ ಮನವೆಂ ।**
**ದೆನಿಸಿಕೊಂಬನು ಮನದ ವೃತ್ತಿಗ ।**
**ಳನುಸರಿಸಿ ಭೋಗಗಳನೀವನು ತ್ರಿವಿಧ ಚೇತನಕೆ ॥**
**ಮನವನಿತ್ತರೆ ತನ್ನನೀವನು ।**
**ತನುವ ದಂಡಿಸಿ ದಿನದಿನದಿ ಸಾ ।**
**ಧನವ ಮಾಳ್ಪರಿಗಿತ್ತಪನು ಸ್ವರ್ಗಾದಿಭೋಗಗಳ ॥ ೬ ॥**

ಎಂಥಾ ಸಾಧನದಿಂದ ಎಂಥಾ ಫಲವಾಗತದೆ ಎಂದರೆ ಹೇಳಥಾರೆ.

ತಾನು–ಗುಣಪೂರ್ಣನಾದ, ಸರ್ವಸ್ವತಂತ್ರನಾದ, ಶ್ರೀಪರಮಾತ್ಮನಾದ ತಾನು, ಮನದೊಳಗೆ ಇಪ್ಪ–"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬ ವಚನರೀತ್ಯಾ ದಶೇಂದ್ರಿಯಗಳಿಗೆ ಮನಇಂದ್ರಿಯವು ಶ್ರೇಷ್ಠವಾದುದು. ಈ ಮನಸ್ಸು ಈಶ್ವರಾಧೀನದಿಂದಲೇ ಪ್ರವರ್ತಿಸಬೇಕು. ಅದಕ್ಕೆ ಸ್ವತಃ ಪ್ರವರ್ತನ ಶಕ್ತಿ ಇಲ್ಲ. ಆದ್ದರಿಂದ ಇಂಥಾ ಸ್ವರೂಪ ಬಾಹ್ಯಗತ ಮನಸ್ಸಿನಲ್ಲಿ ಇದ್ದು, ಮನವೆಂದೆನಿಸಿಕೊಂಬನು–ಮನಸ್ಸು ಎಂತ ಎನಿಸೋವನಾಗಥಾನೆ, ಮತ್ತು, ಮನದ–ಮನ–ಈ ಮನಸ್ಸಿನಲ್ಲಿ ವಿದ್ಯಮಾನನಾದ ಶ್ರೀ ಪರಮಾತ್ಮನು, ದ–ಅನಾದಿ ಕರ್ಮಪರಂಪರಾದಿಂದ ಬಂಧಕ ಕರ್ಮಗಳ ಅನುಸರಿಸಿದ ನಾನಾ ಭೋಗೇಚ್ಛಾದಿಗಳನ್ನ ಪ್ರಥಮತಃ ಮನದಲ್ಲಿ ಹುಟ್ಟಿಸಿಕೊಡಥಾನೆ. ಎಂದರೇ ಪ್ರಥಮದಲ್ಲಿ ತಾನು ಇಚ್ಛಾ ಮಾಡಿ ಅನಂತರ ತನ್ನ ಕ್ರಿಯಾದ್ವಾರಾ ಅಧಿಕಾರಿಗಳ ಮನಕ್ಕೆ ಇಚ್ಛಾ ಹುಟ್ಟಿಸಥಾನೆ, ಎಂತ ತಾತ್ಪರ್ಯ. ಮನದ ವೃತ್ತಿಗಳ–ಈ ಮನಸ್ಸಿನ ವೃತ್ತಿಗಳು ದಾವದೆಂದರೆ–ಬುದ್ಧಿ, ಚಿತ್ತ, ಅಹಂಕಾರ ಮತ್ತು ಅಂತಃಕರಣ ಎಂತ ನಾಲ್ಕು. ಆಯಾ ವ್ಯಕ್ತಿಗಳ ಕಾರ್ಯಗಳು ಭಿನ್ನಭಿನ್ನಗಳು. ತದ್ವತ್ ಭಿನ್ನಭಿನ್ನಗಳಾದ ಇಚ್ಛಾಗಳಿಗೆ

ಮನೋವೃತ್ತಿಗಳು ಬ್ಯಾರೆ. ಬ್ಯಾರೆ ಮನೋವೃತ್ತಿಗಳು ಎಂದರೇ ಮನಕ್ಕೆ ವಿಭಾಗವಿಶೇಷ ಗಳು, ಅಂಶ ವಿಶೇಷಗಳು. ಇಂಥಾ ಮನೋವೃತ್ತಿಗಳನ್ನ, ಅನುಸರಿಸಿ–ಆಶ್ರಯಿಸಿರತಕ್ಕ, ಭೋಗಗಳನ–ನಾನಾವಿಧ ಭೋಗಗಳನ್ನು, ಈವನು–ಕೊಡೋವನಾಗಥಾನೆ. ಕರ್ಮ ದಲ್ಲಿ ಕಾರ್ಯಕ್ಕೆ ಅನುಕೂಲ ಕರ್ಮವೂ, ಪ್ರತಿಕೂಲ ಕರ್ಮವೂ ಅದೆ. ಅದನ್ನನುಸರಿಸಿ ಸುಖ ದುಃಖ ಭೋಗಗಳನ್ನು ಸೃಷ್ಟಿಕಾಲದಲ್ಲಿ ತ್ರಿವಿಧ ಜೀವರಾಶಿಗಳಿಗೆ ಕೊಡಥಾನೆ. ಲಿಂಗಭಂಗಾನಂತರ, ತ್ರಿವಿಧ ಚೇತನಕೆ–ಮುಕ್ತಿಯೋಗ್ಯಾದಿ ತ್ರಿವಿಧ ಜೀವರಿಗೆ ಸ್ವರೂಪ ಭೂತವಾದ, ನಿತ್ಯವಾದ ಸ್ವರೂಪ ಸ್ವಭಾವವನ್ನ ಅನುಸರಿಸಿದ ಮನೋವೃತ್ತಿಗಳನುಸಾರ ಸುಖ ದುಃಖಗಳ ಕೊಡತಾನೆಂತ ತಾತ್ಪರ್ಯ. ಮನವನಿತ್ತರೆ–ಮನಸ್ಸನ್ನು ಇತರ ವಿಷಯಾದಿಗಳಿಗೆ ದತ್ತ ಮಾಡದೇ ತನ್ನಲ್ಲಿ ದತ್ತ ಮಾಡಿದರೇ, ತನ್ನನೀವನು–ತನ್ನ ಸಂದರ್ಶನಾಖ್ಯ ಅಪರೋಕ್ಷವನ್ನು ಕೊಡೋವನಾಗಥಾನೆ. ದಿನದಿನದಿ–ಪ್ರತಿದಿನದಲ್ಲೂ, ತನುವ ದಂಡಿಸಿ–ಮನಸ್ಸನ್ನ ಪರಮಾತ್ಮಗೆ ದತ್ತ ಮಾಡದೇ ದೇಹದಂಡನ ರೂಪವಾದ ಕೃಚ್ಛ್ರ ಚಾಂದ್ರಾಯಣಾದಿ ಪುಣ್ಯಕರಗಳಾದ ವ್ರತಗಳನ್ನು ಮಾಡಿ, ಸಾಧನವ ಮಾಳ್ಪ ರಿಗೆ–ಸಾಧನವ ಮಾಡತಕ್ಕವರಿಗೆ, ಸ್ವರ್ಗಾದಿಭೋಗವ–ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳಲ್ಲಿ ಭೋಗಗಳ, ಇತ್ತಪನು–ಕೊಡೋವನಾಗಥಾನೆ.

**ತಾ||** ಶ್ರೀಪರಮಾತ್ಮ ಸ್ವರೂಪ ಬಾಹ್ಯಗತ ಮನಸ್ಸಿನಲ್ಲಿದ್ದು, ಮನಸು ಎಂತ ಎನಿಸೋವ ನಾಗಥಾನೆ. ಈ ಮನಸ್ಸಿನಲ್ಲಿ ವಿದ್ಯಮಾನನಾದ, ಜ್ಞಾನರೂಪನಾದ ಪರಮಾತ್ಮನು ಅನಾದಿ ಕರ್ಮದಿಂದ ಪ್ರಾಪ್ತವಾದ ಕರ್ಮಗಳನ್ನ ಅನುಸರಿಸಿ ನಾನಾವಿಧ ಭೋಗೇಚ್ಛಾ ಗಳನ್ನು ಪ್ರಥಮತಃ ಹುಟ್ಟಿಸಿ ಮನೋವೃತ್ತಿಗಳೆಂಬ ಬುದ್ಧಿ, ಚಿತ್ತ, ಅಹಂಕಾರ, ಅಂತಃ ಕರಣ ಇವುಗಳ ಆಶ್ರಯ ಮಾಡಿ ಇರತಕ್ಕ ನಾನಾವಿಧ ಭೋಗಗಳನ್ನ ಸತ್ವ– ರಜಸ್ತಮೋ ಜೀವರಾಶಿಗಳಿಗೆ ಕೊಡೋವನಾಗಥಾನೆ. ಆದರೆ ಈ ಮನಸ್ಸನ್ನ ದತ್ತ ಮಾಡಿದರೆ ತನ್ನ ಅಪರೋಕ್ಷವನ್ನ ಕೊಡೋವನಾಗಥಾನೆ. ಪ್ರತಿದಿನದಲ್ಲೂ ದೇಹದಂಡನ ರೂಪವಾದ ಕೃಚ್ಛ್ರ ಚಾಂದ್ರಾಯಣಾದಿ ಪುಣ್ಯಕರವಾದ ವ್ರತಗಳು ಮಾಡಿ ಸಾಧನ ಮಾಡತಕ್ಕವರಿಗೆ, ಭೂಲೋಕ, ಭುವರ್ಲೋಕ, ಸ್ವರ್ಗಲೋಕ ಭೋಗಗಳ ಕೊಡೋವ ನಾಗಥಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–**

ಸರ್ವವ್ಯಾಪ್ತನಾದ ಪರಮಾತ್ಮ ತದಾಕಾರನಾಗಿ ತನ್ನಾಮದಿಂದ ಕರಿಸಿಕೊಳ್ಳ ಥಾನೆ ಎಂಬುದಕ್ಕೆ ಪ್ರಮಾಣ. "ತತ್ತದ್ವಸ್ತುಷು ಸರ್ವೇಷು ತತ್ತದಾಕಾರತಃ ಸ್ಥಿತಃ || ತತ್ತಚ್ಛಬ್ದೈಶ್ಚ ಭಗವಾನ್ ಪ್ರೋಚ್ಯತೇ ನಿಜಶಕ್ತಿತಃ ||" ಇತಿ. ವ್ರತಾದಿಗಳಿಂದ ಶರೀರ ದಂಡನ ಮಾಡೋಣದರಿಂದ ಮೋಕ್ಷವಾಗೋದಿಲ್ಲ ಎಂಬುದಕ್ಕೆ ಪ್ರಮಾಣ :– "ನ ಯಜ್ಞಾ ನ ಚ ತೀರ್ಥಾನಿ ನೋಪವಾಸವ್ರತಾನಿ ಚ | ದೈವತಾನಿ ಚ ಸರ್ವಾಣಿ ತ್ರಾತುಂ ತಂ ಶಕ್ನುಯುಃ ಕ್ವಚಿತ್ ||" ತಂತ್ರಸಾರ ರೀತ್ಯಾ ಮನಸ್ಸಿನಿಂದ ಹರಿಯಲ್ಲಿ

ಭಕ್ತಿ ಮಾಡದವನಿಗೆ ಮೋಕ್ಷವಿಲ್ಲ. ಆದ್ದರಿಂದ ಮನಃಪೂರ್ವಕ ಭಕ್ತಿಯಿಂದ ಸಾಧನ ಮಾಡಬೇಕು.

ಮೇಲೆ ಹೇಳಿದಂತೆ ಅನಾದಿ ಕರ್ಮವನ್ನನುಸರಿಸಿ ಶ್ರೀ ಪರಮಾತ್ಮನೇ ಜೀವರುಗಳಿಗೆ ಪ್ರಥಮತಃ ಇಚ್ಛಾ ಹುಟ್ಟಿಸಥಾನೆ ಎಂಬುವದನ್ನು ಈ ಗ್ರಂಥಕರ್ತೃಗಳಾದ ಶ್ರೀ ಜಗನ್ನಾಥ ದಾಸರಾಯರ ಗುರುಗಳಾದ ಶ್ರೀ ಭಾಗಣ್ಣದಾಸರು ತಾವು ಮಾಡಿದ ಪದದಲ್ಲಿ ಹೇಳಿದ್ದಾರೆ. "ನಾನೇ ಭ್ರಮಿಸಿದೆನೋ | ವಿಷಯಾದಿ ಮಮತೆ ನೀನೇ ಸೃಜಿಸಿದೆಯೋ ||ಪ|| ಅನಾದಿಯಿಂದ ನೀನೇ ತಿಳಿದು ನೋಡೋ"

**ಪರಮ ಸತ್ಪುರುಷಾರ್ಥರೂಪನು |**
**ಹರಿಯು ಲೋಕಕೆ ಎಂದು ಪರಮಾ |**
**ದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ ||**
**ಮರೆದು ಧರ್ಮಾರ್ಥಗಳ ಕಾಮಿಸು |**
**ವರಿಗೆ ನಗುತತಿಶೀಘ್ರದಿಂದಲಿ |**
**ಸುರಪತನಯ ಸುಯೋಧನರಿಗಿತ್ತಂತೆ ಕೊಡುತಿಪ್ಪ || ೭ ||**

ಶ್ರೀ ಪರಮಾತ್ಮನು ತನ್ನನ್ನು ಸ್ಮರಿಸುವವರಿಗೆ ಫಲ ಕೊಡತಕ್ಕ ಕ್ರಮವನ್ನ ಹೇಳಥಾರೆ.

ಪರಮ ಸತ್ಪುರುಷಾರ್ಥರೂಪನು—ಪರಮ—ಸರ್ವೋತ್ತಮನಾದ, ಸತ್—ನಿರ್ದುಷ್ಟನಾದ, ಪುರುಷ—ಪುರುಷರ ವಿಲಕ್ಷಣನಾದ, ಅರ್ಥ—ತ್ರಿವಿಧ ಜೀವರಿಗೆ ಸ್ವರೂಪಾಭಿವ್ಯಕ್ತಿಗೆ ಪ್ರಯೋಜಕನಾದ, ರೂಪನು—ರೂಪವುಳ್ಳ ಅಂದರೆ ಪ್ರತಿಬಿಂಬಾಕಾರದಂತೆ ರೂಪವುಳ್ಳ, ಹರಿಯು—ಈ ಹರಿನಾಮಕ ಪರಮಾತ್ಮನು, ಲೋಕಕೆ—ತ್ರಿವಿಧ ಪ್ರಾಣಿಗಳಿಗೆ, ಎಂದು—ತ್ರಿವಿಧ ಪ್ರಕಾರ ಬಿಂಬನೆಂದು, ಪರಮಾದರದಿ—ಅತ್ಯಂತ ಆದರದಿಂದ, ಸದುಪಾಸನೆಯ—ತಾರತಮ್ಯ ಪಂಚಭೇದ ಜ್ಞಾನದಿಂದ ಬಿಂಬೋಪಾಸನೆಯ, ಗೈವರಿಗೆ—ಮಾಡತಕ್ಕವರಿಗೆ, ಇತ್ತಪನು ತನ್ನ—ತನ್ನ ಸಂದರ್ಶನಾಖ್ಯವಾದ ಅಪರೋಕ್ಷವನ್ನು ಕೊಡೋವನಾಗಥಾನೆ. (ಇತರ ವಿಧವಾದ ಪ್ರತೋಪಾಸಗಳಿಂದ ಆಗೋದಿಲ್ಲ ಎಂತ ತಾತ್ಪರ್ಯ.) ಮರೆದು—ಸರ್ವೋತ್ತಮ ಶ್ರೀ ಪರಮಾತ್ಮನು ಸರ್ವಸ್ವತಂತ್ರ, ನಾನು ಅಸ್ವತಂತ್ರ, ಅವನ ಅಧೀನನಾದವ ಎಂಬ ಜ್ಞಾನಾನುಷ್ಠಾನ ಮರೆತು, ಅಹಂಮಮತಾಯುಕ್ತರಾಗಿ, ಧರ್ಮಾರ್ಥಗಳ—ಧರ್ಮಾರ್ಥ ಕಾಮ ಮೋಕ್ಷಗಳ, ಕಾಮಿಸುವರಿಗೆ—ಅಪೇಕ್ಷಿಸತಕ್ಕವರಿಗೆ, ಸುರಪತನಯ—ಇಂದ್ರದೇವರ ಮಗ ಅರ್ಜುನನು, ಸುಯೋಧನರಿಗೆ—ದುರ್ಯೋಧನನು (ಇವರಿಬ್ಬರಿಗೆ), ಇತ್ತಂತೆ—ಕೊಟ್ಟೋಪಾದಿಯಲಿ (ಅಂದರೇ, ದುರ್ಯೋಧನನು ದೇವರನ್ನು ಬಿಟ್ಟು ಸೈನ್ಯವನ್ನು ಅಪೇಕ್ಷಿಸಿದ. ಅದನ್ನು ಅವನಿಗೆ ಕೊಟ್ಟು ನಾಶ ಮಾಡಿದ. ಅರ್ಜುನ ದೇವರನ್ನು ಅಪೇಕ್ಷಿಸಿದ. ತಾನೇ ಅವನ ವಶವಾಗಿ ನಿಂತು ಸಂರಕ್ಷಣ ಮಾಡಿದ)

ಇದರಂತೆ ನಗುತ–ಅಪಮಾನಯುಕ್ತವಾದ ನಗೆಯಿಂದ ಯುಕ್ತವಾಗಿ (ಶ್ರೀ ಪರಮಾತ್ಮನ ಕುರಿತು ಧರ್ಮಾರ್ಥಕಾಮಾದಿಗಳು ಆಗಬೇಕೆಂದು ಅನೇಕವಾದ ಪೂಜಾದಿಗಳು, ವ್ರತಾದಿಗಳು ಮಾಡತಕ್ಕವರಿಗೆ), ಅತಿಶೀಘ್ರದಿಂದಲಿ–ಅತ್ಯಂತ ಶೀಘ್ರವಾಗಿ ದುರ್ಯೋಧನ ನಿಗೆ ಸೈನ್ಯ ಕೊಟ್ಟಂತೆ ವಿಹಿತಫಲಗಳ ಕೊಟ್ಟು ಕ್ಲೇಶಯುಕ್ತರನ್ನಾಗಿ ಮಾಡುತಾನೆ. ಶ್ರೀ ಪರಮಾತ್ಮನ ಸ್ಮೃತಿಯುಕ್ತರಾಗಿ ಭಕ್ತಿಯಿಂದ ಶ್ರೀವಿಷ್ಣು ಪ್ರೀತಿಪೂರ್ವಕವಾಗಿ ಸಾಧನ ಮಾಡತಕ್ಕವರಿಗೆ, ಕೊಡುತಿಪ್ಪ–ಅರ್ಜುನನಿಗೆ ವಶವಾಗಿ ಮಹಾಪುರುಷಾರ್ಥ ಗಳನ್ನು ಐಹಿಕ ಪಾರತ್ರಿಕದಲ್ಲಿ ಕೊಟ್ಟಂತೆ ಕೊಡುತಾನೆ. ಆದಕಡಿಯಿಂದ, ಫಲಾಪೇಕ್ಷೆ ಯಿಂದ ಶ್ರೀ ಪರಮಾತ್ಮನ ಪೂಜಾದಿಗಳನ್ನು ಮಾಡದೇ ನಿಷ್ಕಾಮುಕರಾಗಿ ಸರ್ವಸಾಧ ನಿಯ ಮಾಡಬೇಕೆಂತ ತಾತ್ಪರ್ಯ.

**ತಾ||** ಸರ್ವೋತ್ತಮನಾದ ಕ್ಷರಾಕ್ಷರ ವಿಲಕ್ಷಣನಾದ, ತ್ರಿವಿಧ ಜೀವರಿಗೆ ಸ್ವರೂಪಾಭಿ ವ್ಯಕ್ತಿಗೆ ಪ್ರಯೋಜಕನಾದ, ಪ್ರತಿಬಿಂಬಾಕಾರನಾದ, ಶ್ರೀ ಹರಿನಾಮಕನಾದ ಪರಮಾ ತ್ಮನು ತ್ರಿವಿಧ ಪ್ರಾಣಿಗಳಿಗೆ ತ್ರಿವಿಧ ಪ್ರಕಾರ ಬಿಂಬನೆಂದು ಅತ್ಯಂತ ಆದರದಿಂದ ತಾರ ತಮ್ಯ ಪಂಚಭೇದ ಜ್ಞಾನದಿಂದ ಬಿಂಬೋಪಾಸನೆಯು ಮಾಡತಕ್ಕ ಜೀವರಿಗೆ ತನ್ನ ಸಂದರ್ಶನಾಖ್ಯವಾದ ಅಪರೋಕ್ಷವನ್ನ ಕೊಡೋವನಾಗಥಾನೆ. ಇತರ ವಿಧವಾದ ವ್ರತೋಪವಾಸಗಳಿಂದ ಆಗೋದಿಲ್ಲ. ಮತ್ತು ಶ್ರೀ ಪರಮಾತ್ಮ ಸರ್ವೋತ್ತಮ, ಸರ್ವ ಸ್ವತಂತ್ರ, ಜೀವ ಅಸ್ವತಂತ್ರ, ಪರಮಾತ್ಮನ ಅಧೀನವಾದವ, ಎಂಬ ಜ್ಞಾನಾನುಷ್ಠಾನ ಮರೆತು ಅಹಂಮಮತಾಯುಕ್ತರಾಗಿ, ಧರ್ಮಾರ್ಥಕಾಮಮೋಕ್ಷಗಳ ಅಪೇಕ್ಷಿಸ ತಕ್ಕವರಿಗೆ ದುರ್ಯೋಧನನಿಗೆ ಯಾದವ ಸೈನ್ಯವನ್ನು ಕೊಟ್ಟು ನಾಶ ಐದಿಸಿದಂತೆಯೂ, ಅರ್ಜುನನಿಗೆ ವಶನಾಗಿ ಮಹಾಪುರುಷಾರ್ಥಗಳನ್ನು ಐಹಿಕಪಾರತ್ರಿಕದಲ್ಲಿ ಕೊಟ್ಟಂತೆಯೂ ಕೊಡುತಾನೆ, ಎಂದರೇ ಫಲಾಪೇಕ್ಷೆ ಇಲ್ಲದೇ ನಿಷ್ಕಾಮುಕರಾಗಿ ಸರ್ವಸಾಧನಿಯ ಮಾಡ ಬೇಕೆಂತ ತಾತ್ಪರ್ಯ.

**ವಿಶೇಷಾರ್ಥ :–**

ನಿಷ್ಕಾಮರಾಗಿ ಶ್ರೀಹರಿಯನ್ನ ಭಜಿಸಬೇಕು ಎಂಬುದಕ್ಕೆ ಪ್ರಮಾಣ ತಂತ್ರ ಸಾರೋಕ್ತಿ :– "ಸಕಾಮಾದ್ದ್ವಿಗುಣಾ ಪ್ರೋಕ್ತಾ ಅಕಾಮೈಸ್ತು ಕೃತಾ ಕ್ರಿಯಾ" ಮತ್ತು "ಮಯ್ಯರ್ಪಿತಚಿತ್ತವೃತ್ತಿಃ" ಇತಿ ವಿಷ್ಣುರಹಸ್ಯೇ

**ಜಗವನೆಲ್ಲವ ನಿರ್ಮಿಸುವ ನಾ |**
**ಲ್ಮೊಗನೊಳಗೆ ತಾನಿದ್ದು ಸಲಹುವ |**
**ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ ||**
**ಸ್ವಗತ ಭೇದ ವಿವರ್ಜಿತನು ಸ |**
**ರ್ವಗ ಸದಾನಂದೈಕ ದೇಹನು |**
**ಬಗೆಬಗೆಯ ನಾಮದಲಿ ಕರೆಸುತ ಭಕುತರನು ಪೊರೆವ || ೮ ||**

ಶ್ರೀ ಪರಮಾತ್ಮ ಇನ್ನೂ ಎಂಥಾವನೆಂದರೆ ಹೇಳಿಥಾರೆ.

ಸರ್ವಗ–ಸರ್ವತ್ರ ವ್ಯಾಪ್ತನಾಗಿ ಇರತಕ್ಕ ಪರಮಾತ್ಮನು, ಜಗವನೆಲ್ಲವ–ಜಗಚ್ಛಬ್ದ ಜೀವಪರ, ಸ್ಥಾವರ ಜೀವರು, ಜಂಗಮ ಜೀವರು, ಇನ್ನೂ ಶುದ್ಧ ಜಡಗಳು, ಇವು ಯಾವತ್ತರನ್ನು, ನಿರ್ಮಿಸುವ–ಸೃಷ್ಟಿಮಾಡುವ, ಎಲ್ಲಿ ಇಷ್ಟು ಎಂದರೆ, ನಾಲ್ಮೊಗನೊಳಗೆ–ತಾನಿದ್ದು–ಚತುರ್ಮುಖಬ್ರಹ್ಮಾಂತರ್ಯಾಮಿಯಾಗಿಷ್ಟು ಸೃಷ್ಟಿಸುವ ಅಂದರೆ ಸೃಷ್ಟಿ ಮಾಡುವನು. ಸಲಹುವ–ಸ್ವಯಂ ವಿಷ್ಣು ರೂಪದಿಂದ ಇವುಗಳನ್ನ ಪಾಲನೆ ಮಾಡುವನು. ಗಗನಕೇಶನೊಳಿದ್ದು–ಕೈಲಾಸ ಮಂದಿರನಾದ ರುದ್ರದೇವರ ಅಂತರ್ಗತನಾಗಿ ಇಷ್ಟವನಾಗಿ, ಲೋಕಗಳ–ಸ್ಥಾವರ ಜಂಗಮಾತ್ಮಕವಾದ ಸಮಸ್ತ ಲೋಕಗಳನ್ನ ಸಂಕರ್ಷಣ ರೂಪ ದಿಂದ, ಸಂಹರಿಸುವನು–ಸಂಹಾರ ಮಾಡತಾನೆ. ಸ್ವಗತಭೇದ ವಿವರ್ಜಿತನು–ಸ್ವ–ತನ್ನ ಶರೀರದಲ್ಲಿ, ಗತ–ವಿದ್ಯಮಾನಗಳಾದ ನಖರೋಮ ಅವಯವಗಳಿಗೂ, ತನಗೂ ಮತ್ತು ಪರಸ್ಪರ ಆದಷ್ಟಕ್ಕೂ ಅನಂತಾವತಾರಗಳಿಗೂ, ಅಂತರ್ಯಾಮಿ ರೂಪಗಳಿಗೂ, ಭೇದ–ಭೇದದಿಂದ, ವಿವರ್ಜಿತನು–ವಿಶೇಷಾಕಾರವಾಗಿ ಭೇದದಿಂದ ರಹಿತನಾದಂಥಾವನು. ಸರ್ವಗಳೂ ಪರಿಪೂರ್ಣವಾದಷ್ಟು ಎಂತ ತಾತ್ಪರ್ಯ. ಇನ್ನೂ, ಸದಾ–ನಿರಂತರ, ಆನಂದ–ಆನಂದಾತ್ಮಕವಾದ, ಏಕ–ಸಜಾತೀಯರಹಿತವಾದ, ದೇಹನು–ಶರೀರ ಉಳ್ಳವನು. (ಜೀವರೂ ಚಿದಾನಂದರೇ, ಆದ್ದರಿಂದ ಸಮರಾಗಬಹುದೇ, ಅಂದರೇ, ಜೀವರ ವ್ಯಾವರ್ತನ ಕ್ಕಾಗಿ ಏಕಶಬ್ದ ಪ್ರಯೋಗವು), ಬಗೆಬಗೆಯ–ಒಬ್ಬನೇ ಶ್ರೀ ಪರಮಾತ್ಮನು ನಾನಾ ಬಗೆ ಯಾದ, ನಾಮದಲಿ–ಆಯಾ ಅಧಿಷ್ಠಾನ ನಾಮಗಳಿಂದ, ಕರೆಸುತ–ಕರೆಸೋವನಾಗ ಥಾನೆ. (ಅಧಿಷ್ಠಾನ ಪ್ರಯುಕ್ತ ಪ್ರಾಪ್ತವಾದ ನಾಮಗಳಲ್ಲಿ ಅನಾದಿಸಿದ್ಧಗಳಾದಷ್ಟು ದಾವ ದಾವ ಅಧಿಷ್ಠಾನಗಳಲ್ಲಿ ದಾವ ದಾವ ನಾಮಗಳಿಂದ ಇರಬೇಕೋ, ಆ ರೀತ್ಯಾ ಇರೋಣದರಿಂದ ಪರಮಾತ್ಮನ ವಿವಕ್ಷಯಾ ಆಯಾ ಅಧಿಷ್ಠಾನಗಳಿಗೆ ಆಯಾ ನಾಮ ಗಳು ಬರೋದಾಯಿತು), ಭಕುತರನ–ಸ್ವರೂಪ ಸ್ವಭಾವದಲ್ಲಿ ಭಕ್ತಿಯುಳ್ಳ ಭಕ್ತರನ್ನ ಪರಿಯವಸಾನದಲ್ಲಿ, ಪೊರೆವ–ದುಃಖರಹಿತರನ್ನಾಗಿ ಮಾಡಿ ಕಾಪಾಡತಾನೆ.

**ವಿಶೇಷಾರ್ಥ :–**

ಸಾಕ್ಷಾತ್ ಶ್ರೀವಿಷ್ಣು ರೂಪಿಯಾದ ಪರಮಾತ್ಮನೇ ಸೃಷ್ಟಿಲಯಾದಿಗಳಿಗೆ ಮುಖ್ಯ ಕಾರಣ ಎಂಬುದಕ್ಕೆ ಪ್ರಮಾಣ. "ನಿಮಿತ್ತಮಾತ್ರೌ ತೌ ದೇವೌ ವಿಷ್ಣುಸ್ಸರ್ವಸ್ಯ ಕಾರಣಂ" ಇತಿ ಸ್ಕಾಂದೇ || ವಿಷ್ಣುರೇವ ಹರಿಃ ಸಾಕ್ಷಾತ್ತಾವುಭೌ ಸಹರೀ ಸ್ಮೃತೌ || ಅವಿಷ್ಣುರೂಪೌ ವಿಜ್ಞೇಯೌ ಬ್ರಹ್ಮರುದ್ರಾಭಿದಾಯಕೌ | ಸತ್ವೇನ ಲೋಕಾನ್ ಸರ್ಜ ಯಿತುಂ ಬ್ರಹ್ಮಣಿ ನ್ಯವಸದ್ಧರಿಃ|| ತಾರ್ತೀಯೇನ ಸಮಾಹರ್ತುಂ ರುದ್ರೇ ಚ ಪ್ರಾವಿ ಸದ್ಧರಿಃ || ಇತಿ ವಿಷ್ಣುರಹಸ್ಯೇ. ಶ್ರೀ ಪರಮಾತ್ಮನ ಗುಣರೂಪಗಳಿಗೂ, ಶ್ರೀ ಪರ ಮಾತ್ಮಗೂ ಭೇದವಿಲ್ಲ ಎಂಬುದಕ್ಕೆ ಪ್ರಮಾಣ. "ಸರ್ವತ್ರ ಚ ಸ್ವಗತಭೇದ ವಿವರ್ಜಿತಾತ್ಮಾ||" ಇತಿ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ. ಶ್ರೀ ಪರಮಾತ್ಮ

ಸರ್ವತ್ರವ್ಯಾಪ್ತ ಎಂಬುದಕ್ಕೆ ಪ್ರಮಾಣ. "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಇತಿ ಶ್ರುತಿವಚನವು. ಶ್ರೀ ಕನಕದಾಸರ ವಚನ (ಶ್ರೀ ಹರಿಭಕ್ತಸಾರ)

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ
ನಿಲ್ಲದಿನ್ನಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು |
ಬಲ್ಲರಿಳೆಯೊಳು ಭಾಗವತರಾ
ವೆಲ್ಲರಿಗೆ ವಂದಿಸದ ಕುಜನರಿ
ಗಿಲ್ಲ ಸದ್ಗತಿ ನೋಡಿ ರಕ್ಷಿಸು ನಮ್ಮನನವರತ || ೮ ||

**ಒಬ್ಬನಲಿ ನಿಂತಾಡುವನು ಮ |**
**ತ್ತೊಬ್ಬನಲಿ ನೋಡುವನು ಬೇಡುವ |**
**ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗಿ ||**
**ಅಬ್ಬರದ ಹೆದ್ದೈವನಿವ ಮ |**
**ತ್ತೊಬ್ಬರನು ಲೆಕ್ಕಿಸನು ಲೋಕದೊ |**
**ಳಬ್ಬನೇ ತಾ ಬಾಧ್ಯ ಬಾಧಕನಾಹ ನಿರ್ಭೀತ || ೯ ||**

ಇನ್ನೂ ಶ್ರೀ ಪರಮಾತ್ಮನ ಮಾಹಾತ್ಮ್ಯೆಯನ್ನೇ ಹೇಳಥಾರೆ.

ಒಬ್ಬನಲಿ–ದೇಹಗತ ಪಾದೇಂದ್ರಿಯಾಭಿಮಾನಿಯಾದ ಒಬ್ಬನಾದ ಜಯಂತ ನಾಮಕ ದೇವತಾ ಇವನಲ್ಲಿ, ನಿಂತು–ಅಂತರ್ಗತನಾಗಿ ದಾಮೋದರ ರೂಪದಿಂದ ಇದ್ದವನಾಗಿ, ಆಡುವನು–ಗಮನಾಗಮನಾದಿಗಳಿಂದ ಸಂಚಾರ ಮಾಡುವನು. ಅಂದರೇ ಶ್ರೀ ಪರಮಾತ್ಮನ ಕ್ರಿಯಾ ದ್ವಾರಾ ಜಯಂತನ ಕ್ರಿಯಾ. ತದ್ದ್ವಾರಾ ಜೀವಕ್ರಿಯಾ. ತದ್ದ್ವಾರಾ ಸ್ಥೂಲ ದೇಹಗತ ಪಾದದಿಂದ ಗಮನಾಗಮನ ಕ್ರಿಯಾ ಆಗತದೆ, ಎಂತ ತಾತ್ಪರ್ಯ. ಪುನಃ ಅದೇ ಪರಮಾತ್ಮ, ಮತ್ತು–ಮತ್ತೊಂದು ರೂಪದಿಂದ, ಒಬ್ಬನಲಿ–ನೇತ್ರಾಭಿಮಾನಿಯಾದ ಒಬ್ಬನಾದ ಸೂರ್ಯನಲಿದ್ದವನಾಗಿ, ನೋಡುವನು–ಪೂರ್ವೋಕ್ತ ಪ್ರಕಾರ ನೋಡಿ ನೋಡಿಸಥಾನೆ. ಅಂದರೇ (ಅಂತರ್ಗತನಾಗಿ ಮಧುಸೂದನ ರೂಪದಿಂದಿದ್ದು ನೋಡಿ ನೋಡಥಾನೆ). ಒಬ್ಬನಲಿ–ಹಸ್ತಕ್ಕೆ ಅಭಿಮಾನಿಯಾದ ದಕ್ಷ ಪ್ರಜೇಶ್ವರನಲ್ಲಿ ಪದ್ಮನಾಭ ರೂಪದಿಂದ ಇದ್ದು ಅಂದರೆ ಅಂತರ್ಗತನಾಗಿ ಇದ್ದು, ಬೇಡುವ–ಬೇಡೋವನಾಗತಾನೆ. ಮಾತಾಡುವವನು–ವಾಗೀಂದ್ರಿಯಾಭಿಮಾನಿಯಾದ ರುದ್ರನ ಅಂತರ್ಗತನಾಗಿ ಗೋವಿಂದ ರೂಪದಿಂದ ನಿರಂತರ ಆಶ್ಚರ್ಯಯುಕ್ತರನ್ನಾಗಿ ಮಾಡತಾನೆ, ಅಬ್ಬರ–ಈ ಪ್ರಕಾರ ಆಶ್ಚರ್ಯಕರನಾಗಿ ದೇಹೇಂದ್ರಿಯಾದಿಗಳಿಂದ ಕರ್ಮವಿಕರ್ಮಗಳ ಮಾಡಿ ಮಾಡಿಸಿ ತತ್ಫಲಗಳ ತಾನು ಉಣದೇ, ದ–ಜೀವರಿಗೆ ಕೊಟ್ಟು ಉಣಿಸತಕ್ಕ, ಹೆದ್ದೈವನು–ರಮಾಬ್ರಹ್ಮಾದಿಗಳಕಿಂತಲೂ ಶ್ರೇಷ್ಠನಾದ, ಇವ–ಶ್ರೀ ಪರಮಾತ್ಮನು,

ಲೆಕ್ಕಿಸನು–ಲಕ್ಷ್ಯ ಮಾಡನು (ಉಪೇಕ್ಷಾ ಮಾಡುತ್ತಾನೆ). ದಾರನ್ನು ಎಂದರೆ, ಮತ್ತೊಬ್ಬರನು–ತನ್ನ ವ್ಯತಿರಿಕ್ತ ಅನ್ಯರಾದ ಬ್ರಹ್ಮಾದಿ ದೇವತೆಗಳನ್ನು ಲೆಕ್ಕಿಸನು. ಲೋಕದೊಳು–ಸರ್ವ ಜೀವರ ಸ್ವರೂಪ ದೇಹದೊಳು, ಒಬ್ಬನೇ–ಒಬ್ಬನಾದ, ತಾ–ತಾನೇ, ಬಾಧ್ಯ–ತನಗೆ ಬಾಧ್ಯರಾದ ಮುಕ್ತಿಯೋಗ್ಯ ಜೀವರ ರಕ್ಷಣ ವಿಷಯದಲ್ಲಿ ಬಾಧ್ಯನಾಗಿ, ಬಾಧಕ–ತನಗೆ ಬಾಧ್ಯರಲ್ಲದೇ ಬಾಧಕರಾದ ತಮೋಯೋಗ್ಯರ ರಕ್ಷಣಾ ವಿಷಯದಲ್ಲಿ ಬಾಧಕನಾಗಿ, ಆಹ–ಆಗೋವನಾಗಿದ್ದಾನೆ, ನಿರ್ಭೀತ–ಸರ್ವ ಜೀವರಿಂದಲೂ ಭಯರಹಿತನಾಗಿ ಸ್ವೇಚ್ಛೆಯಿಂದ ಇರೋವನಾಗಿ ಇದ್ದಾನೆಂತ ತಾತ್ಪರ್ಯ.

**ತಾ||** ಪಾದೇಂದ್ರಿಯಾಭಿಮಾನಿಯಾದ ಒಬ್ಬನಾದ ಜಯಂತನಲ್ಲಿ ವಾಮನ ರೂಪದಿಂದ ಅಂತರ್ಗತನಾಗಿದ್ದವನಾಗಿ ಗಮನಾಗಮನಗಳಿಂದ ಸಂಚಾರ ಮಾಡುವನು. ಪುನಃ ಅದೇ ಪರಮಾತ್ಮ ನೇತ್ರಾಭಿಮಾನಿಯಾದ ಸೂರ್ಯನಲ್ಲಿ ಮಧುಸೂದನ ರೂಪದಿಂದ ಇದ್ದು ನೋಡಿ ನೋಡಿಸುತ್ತಾನೆ, ಮತ್ತು ಪಾಣೇಂದ್ರಿಯಾಭಿಮಾನಿಯಾದ ದಕ್ಷ ಪ್ರಜೇಶ್ವರನಲ್ಲಿ ಪದ್ಮನಾಭ ರೂಪದಿಂದ ಇದ್ದು ಯಾಚನೆ ಮೊದಲಾದ ಕ್ರಿಯೆಗಳನ್ನು ಮಾಡಿ ಮಾಡಿಸುತ್ತಾನೆ. ಮತ್ತು ಅದೇ ಪರಮಾತ್ಮ ವಾಗೀಂದ್ರಿಯಕ್ಕೆ ಅಭಿಮಾನಿಯಾದ ಅಗ್ನಿದೇವರಲ್ಲಿ ಹೃಷಿಕೇಶ ರೂಪದಿಂದ ಇದ್ದು ಮಾತುಗಳ ಆಡಿಸುತ್ತಾನೆ.

ಹೀಗೇವೇ ಮನೋಭಿಮಾನಿಯಾದ ರುದ್ರದೇವರಲ್ಲಿ ಗೋವಿಂದಾಖ್ಯ ರೂಪದಿಂದಿದ್ದು ನಿರಂತರ ಆಶ್ಚರ್ಯಯುಕ್ತರನ್ನಾಗಿ ಮಾಡುತ್ತಾನೆ. ಈ ಪ್ರಕಾರ ಶ್ರೀ ಪರಮಾತ್ಮನ ಕ್ರಿಯಾ ದ್ವಾರಾ ತತ್ವಾಭಿಮಾನಿ ದೇವತೆಗಳ ಕ್ರಿಯಾ, ತದ್ದ್ವಾರಾ ಜೀವನ ಕ್ರಿಯಾ ತದ್ದ್ವಾರಾ ದೇಹಗತ ಇಂದ್ರಿಯಗಳಿಂದ, ಕರ್ಮವಿಕರ್ಮಗಳನ್ನು ಮಾಡಿ ಮಾಡಿಸಿ ತತ್ಫಲಗಳನ್ನು ತಾನು ಉಣದೇ ಜೀವರಿಗೆ ಉಣಿಸುತಕ್ಕವನು. ರಮಾಬ್ರಹ್ಮಾದಿ ದೇವತೆಗಳಕ್ಕಿಂತಲೂ ಶ್ರೇಷ್ಠನಾದ ಈ ಪರಮಾತ್ಮ ತನಗೆ ವ್ಯತಿರಿಕ್ತರಾದ ದೇವತೆಗಳನ್ನ ಲಕ್ಷ್ಯ ಮಾಡದೇ ಸರ್ವಜೀವರ ಸ್ವರೂಪ ದೇಹದೊಳು ಒಬ್ಬನಾದ ತಾನೇ ತನಗೆ ಬಾಧ್ಯರಾದ ಮುಕ್ತಿಯೋಗ್ಯ ಜೀವರ ಸಂರಕ್ಷಣ ವಿಷಯದಲ್ಲಿ ಬಾಧ್ಯನಾಗಿ, ತನಗೆ ಬಾಧ್ಯರಲ್ಲದೇ ಬಾಧಕರಾದ ತಮೋಯೋಗ್ಯ ಜೀವರ ವಿಷಯದಲ್ಲಿ ಬಾಧಕನಾಗಿ ಭಯರಹಿತನಾಗಿ ಸ್ವೇಚ್ಛೆಯಿಂದ ಇರೋವನಾಗಿದ್ದಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–**

ಪರಮಾತ್ಮ ಬಾಧ್ಯ ಬಾಧಕನಾಗಿರುತ್ತಾನೆ ಎಂಬುದಕ್ಕೆ ಪ್ರಮಾಣ :–"ಸ್ವಮಾಯಾ–ಗುಣಮಾವಿಶ್ಯ ಬಾಧ್ಯಬಾಧಕತಾಂ ಗತಃ" || ಇತಿ ಭಾಗವತೇ "ಕರ್ತಾ ಕಾರಯಿತಾ ವಿಷ್ಣುಃ ಪ್ರೇರಕಃ ಸಾಕ್ಷಿ ಚೇತನಃ || ಶಿಕ್ಷಕಃ ಶಿಕ್ಷಣೀಯಶ್ಚ ||" ಇತಿ ಆಗ್ನೇಯೇ.

**ಶರಣಜನಮಂದಾರ ಶಾಶ್ವತ |**
**ಕರುಣಿ ಕಮಲಾಕಾಂತ ಕಾಮದ |**
**ಪರಮಪಾವನತರ ಸುಮಂಗಳಚರಿತ ಪಾರ್ಥಸಖ ||**

**ನಿರುಪಮಾನಂದಾತ್ಮ ನಿರ್ಗತ ।**
**ದುರಿತ ದೇವವರೇಣ್ಯನೆಂದಾ ।**
**ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ ॥ ೧೦ ॥**

ಇನ್ನೂ, ಪರಮಾತ್ಮ ಎಂಥಾವನೆಂದರೆ ಹೇಳಥಾರೆ.

ಶರಣಜನ–ಸ್ವಾಮಿಭೃತ್ಯ ನ್ಯಾಯದಿಂದ ಶರಣುಹೊಕ್ಕ ಸ್ವರೂಪ ಸ್ವಭಾವರಾದ ಜನರುಗಳಿಗೆ, ಮಂದಾರ–ಕಲ್ಪವೃಕ್ಷ ಸ್ಥಾನಾಪನ್ನನಾದವನು. (ಮೋಕ್ಷಾನಂತರ ಮುಕ್ತರು ತಮ್ಮ ಯೋಗ್ಯತಾನುಸಾರ ಅಪೇಕ್ಷಿಸಿದ್ದು ಯಾವತ್ತೂ ಲೋಪವಿಲ್ಲದಂತೆ ಕೊಡತಕ್ಕ ಕಲ್ಪವೃಕ್ಷನು. ಸ್ಥಿತಿಕಾಲದಲ್ಲಿ ಆ ನೇಮ ಕೊಡೋದಿಲ್ಲ. ಸ್ವರ್ಗಗತ ಕಲ್ಪ ವೃಕ್ಷವು ಪ್ರತ್ಯಕ್ಷೀಕರಿಸಿಕೊಂಡು ಅಪೇಕ್ಷಿಸಿದವರಿಗೆ ಫಲವನ್ನು ಕೊಡತದೆ. ತದ್ವತ್ ಶ್ರೀ ಪರಮಾತ್ಮನೆಂಬ ಕಲ್ಪವೃಕ್ಷವಾದದ್ದರಿಂದ ಅಪರೋಕ್ಷಿಗಳಾದ ಮುಕ್ತರಿಗೆ ಎಂತ ತಾತ್ಪರ್ಯ) ಶಾಶ್ವತ ಕರುಣಿ–ಭಕ್ತರಲ್ಲಿ ಶಾಶ್ವತವಾದ ಅಂತಃಕರಣ ಮಾಡತಕ್ಕವ, ಕಮಲಾಕಾಂತ–ರಮಾದೇವೇರಿಗೆ ಪತಿಯಾದವ, (ಆದರೆ, ಲಕ್ಷ್ಮೀ ವ್ಯತಿರಿಕ್ತ ಅನ್ಯ ಗೋಪ ಸ್ತ್ರೀಯರಿಗೆ ಪತಿ ಎನಿಸಿ ಕ್ರೀಡಾದಿಗಳನ್ನು ಮಾಡಿದ್ದಾನೆಂದರೆ, ರಮಾದೇವೇರ ಅಂಶ ವಿಶೇಷಗಳಿದ್ದುದರಿಂದ ಅವರಗಳಲ್ಲಿ ಕ್ರೀಡಾದಿಗಳ ಮಾಡಿದ್ದಾನೆ. ಅತ ಏವ ಶ್ರೀ ಪರಮಾತ್ಮ ರಮಾಪತಿಯೇ ಹೊರತು ಅನ್ಯರಿಗೆ ಪತಿ ಅಲ್ಲ ಎಂತ ತಾತ್ಪರ್ಯ), ಕಾಮದ–ತನ್ನ ಅಪರೋಕ್ಷವನ್ನು ಅಪೇಕ್ಷಿಸುವ ಭಕ್ತರಿಗೆ ತನ್ನ ಸಂದರ್ಶನ ಕೊಡತಕ್ಕವ, ಪರಮ ಪಾವನಕರ–ಪರಮ–ಉತ್ತಮವಾದ ಪಾವನ–ಪವಿತ್ರಕರಗಳಾದ ರಮಾದೇವೇರ ಕ್ಕಿಂತಲೂ, ತರ–ಅತ್ಯುತ್ತಮವಾದ ಪಾವನ ಶರೀರ ಉಳ್ಳವ. (ರಮಾ ನಾರಾಯಣರು ಅಕ್ಷರ ಶರೀರರು, ಆದ್ದರಿಂದ ಸಮರೆಂಬ ಶಂಕಾ ಪರಿಹಾರಾರ್ಥ 'ಪಾವನಕರ' ಶಬ್ದ ಪ್ರಯೋಗ ಮಾಡಿದ್ದಾರೆ) ಸುಮಂಗಳಚರಿತ–ಅನ್ಯಾಧೀನವಲ್ಲದ ಅಧಿಕಾರಿಗಳಿಗೆ, ಮಂಗಳ–ಶುಭವನ್ನು ಕೊಡತಕ್ಕ, ಚರಿತ–ಅವತಾರ ಚರಿತ್ರೆ ಉಳ್ಳವ, ಪಾರ್ಥಸಖ–ಅರ್ಜುನಗೆ ಸ್ನೇಹಿತನಾದವ (ಅಂದರೆ ಸತ್ಪಕ್ಷಪಾತಿ ಎಂತ ಅರ್ಥ) ನಿರುಪಮಾನಂದಾತ್ಮ–ನಿರುಪಮ–[ರಮಾದೇವಿಯೂ ಆನಂದ ಸ್ವರೂಪಳೇ. ಶ್ರೀ ಪರಮಾತ್ಮನೂ ಆನಂದ ಸ್ವರೂಪನೇ, ಆದ್ದರಿಂದ, ಅತಿವ್ಯಾಪ್ತಿ ಪರಿಹಾರಾರ್ಥ] ಉಪಮಾನರಹಿತವಾದ, ಆನಂದ–ಆನಂದವೇ, ಆತ್ಮ–ಸ್ವರೂಪವಾಗುಳ್ಳವ, (ಎಂದರೇ ತನ್ನ ಆನಂದಕ್ಕೆ ಸಮಾನರಹಿತ), ನಿರ್ಗತದುರಿತ–ಹೋಗಲ್ಪಟ್ಟ ದೋಷಗಳುಳ್ಳವ, ದೇವವರೇಣ್ಯ–ರಮಾ ಬ್ರಹ್ಮಾದಿ ದೇವತೆಗಳಿಗಿಂತಲೂ ಶ್ರೇಷ್ಠನಾದವ. (ಇವರು ಯಾವತ್ತು ಮಂದಿ ತಾರತಮ್ಯಾನುಸಾರ ಪರಿಚ್ಛಿನ್ನರು. ಶ್ರೀ ಪರಮಾತ್ಮ ಅಪರಿಚ್ಛಿನ್ನ ಎಂದರ್ಥ), ಎಂದು–ಇಂಥಾ ಶ್ರೀಹರಿ ಎಂದು, ಆದರದಿ–ಮನದಲ್ಲಿ ಆದರ ಸಹಿತನಾಗಿ, ಕರೆಯಲು–ಅದೃಶ್ಯನಾಗಿರತಕ್ಕ ಪರಮಾತ್ಮನ್ನ ಪ್ರತ್ಯಕ್ಷನಾಗೆಂದು ಕರೆಯಲು, ಬಂದೊದಗುವನು–ಆ ಪ್ರಾರ್ಥನೆಯನ್ನು ಚಿತ್ತಕ್ಕೆ ತಂದು, ಬಂದು ಪ್ರತ್ಯಕ್ಷನಾಗುವನು. ತನ್ನವರ ಬಳಿಗೆ–ತನ್ನ ಭಕ್ತರ ಬಳಿಗೆ ಎಂತ ತಾತ್ಪರ್ಯ.

**ತಾ||** ಶ್ರೀ ಪರಮಾತ್ಮ ಎಂಥಾವನೆಂದರೇ ಸ್ವಾಮಿಭೃತ್ಯನ್ಯಾಯದಿಂದ ಶರಣು ಹೊಕ್ಕ ಸ್ವರೂಪಸ್ವಭಾವರಾದ ಜನರುಗಳಿಗೆ ಮೋಕ್ಷಾನಂತರ ಮುಕ್ತರ ಯೋಗ್ಯತಾನು ಸಾರ ಅಪೇಕ್ಷಿಸಿದ್ದನ್ನು ಲೋಪವಿಲ್ಲದೇ, ಸ್ವರ್ಗಗತ ಕಲ್ಪವೃಕ್ಷವು ಪ್ರತ್ಯಕ್ಷೀಕರಿಸಿಕೊಂಡು ಅಪೇಕ್ಷಿಸಿದವರಿಗೆ ಹ್ಯಾಂಗೆ ಫಲಗಳನ್ನ ಕೊಡುವದೋ ತದ್ವತ್ ಅಪರೋಕ್ಷಿಗಳಾದ ಮುಕ್ತರಿಗೆ ಅವರವರ ಯೋಗ್ಯತಾನುಸಾರ ಫಲಗಳ ಕೊಡತಕ್ಕವ. ಭಕ್ತರಲ್ಲಿ ಶಾಶ್ವತವಾದ ಅಂತಃಕರುಣ ಉಳ್ಳವ. ಲಕ್ಷ್ಮಿವ್ಯತಿರಿಕ್ತ ಅನ್ಯಗೋಪ ಸ್ತ್ರೀಯರಲ್ಲಿ ರಮಾದೇವೇರ ಅಂಶವಿಶೇಷವಿದ್ದು ಅವರುಗಳಲ್ಲಿ ಕ್ರೀಡಾದಿಗಳ ಮಾಡಿದ ಕಾರಣ ಶ್ರೀ ಪರಮಾತ್ಮನು ರಮಾಪತಿಯೇ ಹೊರತು ಅನ್ಯರಿಗೆ ಪತಿಯಾಗದಿರುವವ. ಅನ್ಯ ಫಲಗಳನ್ನ ಅಪೇಕ್ಷಿಸದೇ ತನ್ನ ಅಂದರೆ ಶ್ರೀ ಪರಮಾತ್ಮನ ಅಪೇಕ್ಷಿಸುವ ಭಕ್ತರಿಗೆ ತನ್ನ ಸಂದರ್ಶನ ಕೊಡುವವನು. ರಮಾದೇವೇರಕ್ಕಿಂತಲೂ ಅತ್ಯುತ್ತಮವಾದ ಪಾವನ ಶರೀರ ಉಳ್ಳವ. ಅನ್ಯಾಧೀನವಲ್ಲದ, ಅಧಿಕಾರಿಗಳಿಗೆ ಶುಭವನ್ನ ಕೊಡತಕ್ಕ ಅವತಾರ ಚರಿತ್ರೆ ಉಳ್ಳವ. ದೋಷರಹಿತ. ರಮಾ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನಾದವ. ಮೇಲೆ ಹೇಳಿದ ಮಹಿಮೆಗಳುಳ್ಳವ ಎಂದು ಭಕ್ತಜನರುಗಳು ಮನದಲ್ಲಿ ಆದರಪೂರ್ವಕ ಪ್ರತ್ಯಕ್ಷನಾಗಬೇಕೆಂದು ಶ್ರೀ ಪರಮಾತ್ಮನ ಕರೆಯಲು ತನ್ನ ಭಕ್ತರಲಿ ಬಂದು ಪ್ರತ್ಯಕ್ಷನಾಗುವನು ಎಂತ ತಾತ್ಪರ್ಯ.

**ಇಟ್ಟಿಕಲ್ಲನು ಭಕುತಿಯಿಂದಲಿ ।**
**ಕೊಟ್ಟ ಭಕುತಗೆ ಮೆಚ್ಚಿ ತನ್ನನೆ ।**
**ಕೊಟ್ಟ ಬಡಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ ॥**
**ಕೆಟ್ಟ ಮಾತುಗಳೆನದೆ ಚೈದ್ಯನ ।**
**ಹೊಟ್ಟೆಯೊಳಗಿಂಬಿಟ್ಟ ಬಾಣದ ।**
**ಲಿಟ್ಟ ಭೀಷ್ಮನವಗುಣಗಳೆಣಿಸಿದನೇನೊ ಕರುಣಾಳು ॥ ೧೧ ॥**

ಇನ್ನೂ ಪರಮಾತ್ಮನ ಮಹಿಮಾ ಹೇಳತಾರೆ.

ಇಟ್ಟಿಕಲ್ಲನು–ಒಂದು ಇಟ್ಟಿಗೆಕಲ್ಲನ್ನು, ಭಕುತಿಯಿಂದಲಿ–ಭಕ್ತಿಪೂರ್ವಕವಾಗಿ, ಕೊಟ್ಟ–ಕೊಟ್ಟಂಥಾ, ಭಕುತಗೆ–ಪುಂಡರೀಕನೆಂಬ ಭಕ್ತಗೆ, ಮೆಚ್ಚಿ–ಅವನಲ್ಲಿ ಇರತಕ್ಕ ಭಕ್ತಿಗೆ ಮೆಚ್ಚಿ, ತನ್ನನೆ ಕೊಟ್ಟ–ಅವನಿಗೆ ಅನುಗುಣವಾದ ಫಲವು ದಾವುದು ಕೊಡಲಿ ಎಂತ ಆಲೋಚನೆ ಮಾಡಿ ತಾನೇ ಅವನ ವಶವಾದ. ಬಡಬ್ರಾಹ್ಮಣನ–ಅತ್ಯಂತವಾಗಿ ಮಾನುಷವಿತ್ತದಿಂದ ಬಡವನಾದರೂ ದೇವತಾವಿತ್ತವಾದ ಜ್ಞಾನವಿತ್ತದಿಂದ ಭಾಗ್ಯವಂತ ನಾದ, ಬ್ರಹ್ಮಜ್ಞಾನಿಯಾದ, ಸುಧಾಮನ, ಒಪ್ಪಿಡಿ–ಒಂದು ಹಿಡಿಕೆ, ಅವಲಿಗೆ–ಅವಲಕ್ಕಿಗೆ, ಅಖಿಳಾರ್ಥ–ಸಮಸ್ತವಾದ ಐಹಿಕ ಪಾರತ್ರಿಕಪ್ರಯೋಜನಗಳನ್ನ ಕೊಟ್ಟು, ಇನ್ನು ಐಹಿಕ ದಲ್ಲಿ ಜ್ಞಾನಪೂರ್ವಕವಾದ ಮಹದೈಶ್ವರ್ಯವನ್ನು ಕೊಟ್ಟು ಉದ್ಧಾರಮಾಡಿದನು. ಕೆಟ್ಟ ಮಾತುಗಳೆನದೆ– "ಅಗ್ರ್ಯೋಪಹಾರ ಉಪಯಾತಿ ತವೈವ ಕೃಷ್ಣೋ ಕೋಪಾದನಿಂದ–ದನುಮಾಶು ಚ ಚೇದಿರಾಜಃ ||" ಎಂತ ನಿರ್ಣಯೋಕ್ತಿ ಇರುವದರಿಂದ ಈ ಪ್ರಕಾರ

ನಿಂದಾಮಾಡಿದ, ಚೈದ್ಯನ–ಶಿಶುಪಾಲನ್ನ ಚಕ್ರದಿಂದ ಸಂಹರಿಸಿ ಅವನ ತೇಜಸ್ಸನ್ನ, ಹೊಟ್ಟೆಯೊಳು–ತನ್ನ ಉದರದಲ್ಲಿ, ಇಂಬಿಟ್ಟ–ಘಂಡಾಗಿ ಇಡೋವನಾದ. ಬಾಣದಲಿಟ್ಟ–ಶ್ರೀ ಪರಮಾತ್ಮನಾದ ಶ್ರೀಕೃಷ್ಣ ಆಯುಧ ಹಿಡಿಯೋದಿಲ್ಲ ಎಂತ ಮಾಡಿದ ಶಪಥಕ್ಕೆ ಆಯುಧ ಹಿಡಿಸೋ ನಿಮಿತ್ತ ಅರ್ಜುನನ ಬಾಣದಲ್ಲಿ ಇಡೋವನಾದ, (ಅದರ ಪರಿಹಾರಕ್ಕೆ ದೇವರು ಚಕ್ರಾಯುಧ ಹಿಡಿದ) ಈ ಪ್ರಕಾರ ಆಯುಧ ಹಿಡಿಸಿದ, ಭೀಷ್ಮನ–ಭೀಷ್ಮಾಚಾರ್ಯರ, ಅವಗುಣಗಳ–ದೋಷಗಳ, ಎಣಿಸಿದನೇ–ಎಣಿಸಿದನೇ ಎಂದರೆ ಎಣಿಸಲಿಲ್ಲ. ಯಾಕೆಂದರೆ, ಕರುಣಾಳು–ಅಂತಃಕರುಣ ಉಳ್ಳವನು.

**ತಾ||** ಪುಂಡರೀಕನೆಂಬ ಭಕ್ತನು ಮಾತಾಪಿತೃಗಳ ಸೇವಾದಲ್ಲಿ ದೀಕ್ಷಿತನಾಗಿರುವುದನ್ನ ಶ್ರೀ ಪರಮಾತ್ಮ ಪರೀಕ್ಷೆಮಾಡಲೋಸುಗ ಸೇವಾಕಾಲದಲ್ಲಿ ಪುಂಡರೀಕನ ಹಿಂದೆ ಬಂದ ಕೂಡಲೆ ಭಕ್ತಿಯಿಂದ ಒಂದು ಇಟ್ಟಿಗೆಕಲ್ಲನ್ನು ಬಿಸಾಟ ಕಾಲಕ್ಕೂ, ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದ. ನಶ್ವರವಾದ ಐಶ್ವರ್ಯದಿಂದ ರಹಿತನಾಗಿ ಬಡವನಾದ ಸುಧಾಮ ಆರ್ಜನಮಾಡಿಕೊಂಡಿದ್ದ ಬ್ರಹ್ಮಜ್ಞಾನದಿಂದ ಪರಮಭಕ್ತಿಪೂರ್ವಕವಾಗಿ ಒಂದು ಹಿಡಿ ಅವಲಕ್ಕಿ ದೇವರಿಗೆ ಸಮರ್ಪಿಸಿದ್ದಕ್ಕೆ ಸಮಸ್ತವಾದ ಐಹಿಕ ಪಾರತ್ರಿಕ ಪ್ರಯೋಜನವೂ, ಜ್ಞಾನಪೂರಿತವಾದ ಮಹದೈಶ್ವರ್ಯವೂ ಕೊಟ್ಟು ಉದ್ಧಾರಮಾಡಿದ. ಶಿಶುಪಾಲನ್ನ ಸಂಹಾರಮಾಡಿ ಅವನ ತೇಜಸ್ಸನ್ನ ತನ್ನ ಉದರದಲ್ಲೇ ಇಟ್ಟುಕೊಂಡ. ಇನ್ನು ಶ್ರೀಕೃಷ್ಣ ಪರಮಾತ್ಮ ಭಾರತಯುದ್ಧದಲ್ಲಿ ಆಯುಧವನ್ನ ಹಿಡಿಯುವುದಿಲ್ಲ ಎಂತ ಮಾಡಿದ ಶಪಥ ವನ್ನ ಭಂಗಮಾಡುವ ಪ್ರಯತ್ನದಿಂದ ಗಂಗಾಪುತ್ರರಾದ ಭೀಷ್ಮಾಚಾರ್ಯರು, ಭಗವದ್ಭಕ್ತನಾದ ಅರ್ಜುನನ ಮ್ಯಾಲೆ ಬಾಣಪ್ರಯೋಗಮಾಡಿ, ಪರಮಾತ್ಮ ಚಕ್ರ ಹಿಡಿಯುವ ಹಾಗೆ ಮಾಡಿದರೂ, ಭೀಷ್ಮಾಚಾರ್ಯರ ದುರ್ಗುಣವನ್ನ ಎಣಿಸಲಿಲ್ಲ. ಯದ್ಯಪಿ ಭಗವದ್ಭಕ್ತರು ಅಸುರಾವೇಶವಶಾತ್ತಾಗಿ ಅಪರಾಧಗಳನ್ನ ಮಾಡಿದಾಗ್ಯೂ ಅವರಿಗೆ ದೇವರಲ್ಲಿ ದ್ವೇಷವಿಲ್ಲದ ಕಾರಣ ತನ್ನ ಭಕ್ತರಲ್ಲಿ ಕರುಣಾಳು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಶಿಶುಪಾಲ ದೈತ್ಯನಲ್ಲ. ಯಾಕೆಂದರೆ ಅವನ ತೇಜಸ್ಸನ್ನ ಉದರದಲ್ಲಿ ಇಟ್ಟುಕೊಂಡ ಎಂದರೆ "ನಿಕೃಂತಮಾನಕಂಧರಃ ಸ ಭಕ್ತಿಮಾನಭೂದ್ಧರೌ | ತಮಾಶ್ರಿತಶ್ಚ ಯೋಽಸುರೋ ಮಹಾತಮಃ ಪ್ರಪೇದಿವಾನ್ || ಜಯಃ ಪ್ರವಿಶ್ಯ ಕೇಶವಂ ಪುನಶ್ಚ ಪಾರ್ಷದೋಽಭವತ್ ||" ಎಂತ ಶ್ರೀಮದಾಚಾರ್ಯರ ಉಕ್ತಿ ನಿರ್ಣಯದಲ್ಲಿರುವ ಪ್ರಯುಕ್ತ ಶಿಶುಪಾಲನ ದೇಹದಲ್ಲಿದ್ದ ಜಯನಾಮಕನ್ನ ಸಂರಕ್ಷಣೆಮಾಡಿದ ಎಂತ ತಿಳಿಯಬೇಕು ಎಂತ ತಾತ್ಪರ್ಯ.

**ಧನವ ಸಂರಕ್ಷಿಸುವ ಫಣಿ ತಾ |**
**ನುಣದೆ ಮತ್ತೊಬ್ಬರಿಗೆ ಕೊಡದನು |**
**ದಿನದಿ ನೋಡುತ ಸುಖಿಸುವಂದದಿ ಲಕುಮಿವಲ್ಲಭನು ||**

ಪ್ರಣತರನು ಕಾದಿಹನು ನಿಷ್ಕಾ ।
ಮನದಿ ನಿತ್ಯಾನಂದಮಯ ದು ।
ರ್ಜನರ ಸೇವೆಯನೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೧೨ ॥

ಲಕುಮಿಯವಲ್ಲಭನು–ಲಕ್ಷ್ಮೀಪತಿಯಾದ ಶ್ರೀನಾರಾಯಣದೇವರು, ಧನವ ಸಂರಕ್ಷಿಸುವ–ಭೂಮಿಯಲ್ಲಿ ಸ್ಥಾಪನಮಾಡಿರುವಂಥ ಧನವನ್ನ ಸಂರಕ್ಷಣೆ ಮಾಡುವ, ಫಣಿ–ಸರ್ಪವು, ತಾನುಣದೆ–ತಾನು ಉಪಯೋಗಿಸಿಕೊಳ್ಳದೇ, ಮತ್ತೊಬ್ಬರಿಗೆ ಕೊಡದೇ–ಇನ್ನು ದಾರಿಗೂ ಕೊಡದೇ, ಅನುದಿನದಿ ನೋಡುತ–ದಿನದಿನದಲ್ಲಿ ಆ ದ್ರವ್ಯವನ್ನ ನೋಡುತ್ತಾ, ಸುಖಿಸುವಂದದಿ–ಸುಖಪಡುತ್ತಾ ಇರೋಪಾದಿಯಲಿ, ಪ್ರಣತರನ–ತನ್ನ ನಂಬಿ ವಂದನಾದಿಗಳನ್ನು ಮಾಡತಕ್ಕ ಭಕ್ತರನ್ನ, ಕಾದಿಹನು–ಕಾಯುಕೊಂಡು ಇರೋವನಾಗಿದ್ದಾನೆ, ಶ್ರೀಪರಮಾತ್ಮ, ನಿಷ್ಕಾಮನದಿ–ಸರ್ಪವು ಕಾಮನಾ ಇಲ್ಲದೇ ಹ್ಯಾಂಗೆ ಕಾದಿರುತ್ತದೋ ತದ್ವತ್ ನಿಷ್ಕಾಮದಿಂದ ಭಕ್ತರನ್ನ ಕಾಯಿರುತ್ತಾನೆ. ನಿತ್ಯಾನಂದಮಯ–ಸರ್ವಕಾಲದಲ್ಲಿ ಸಂತೋಷಯುಕ್ತನಾದವ (ನಿತ್ಯಾನಂದಮಯನಾದ್ದರಿಂದ ಕಾಮನಾ ಇಲ್ಲ). ದುರ್ಜನರ–ಭಕ್ತಿಹೀನರಾದ ಜನರ, ಸೇವೆಯನೊಲ್ಲ–ಸೇವಾದಿಗಳನ್ನ ಸ್ವೀಕರಿಸೋದಿಲ್ಲ. ಅಪ್ರತಿಮಲ್ಲ–ಅಸದೃಶ ಶೂರನಾದುದರಿಂದ, ಜಗಕೆಲ್ಲ–ಸ್ಥಾವರಜಂಗಮಾತ್ಮಕ ಜೀವರಿಗೆ, ಜಗದುಪಾದಾನಮೂಲ ಜಡಪ್ರಕೃತಿಗೆ, ಇವಕ್ಕೆಲ್ಲಾ ಸ್ವಾಮಿಯಾದವ ಒಬ್ಬನೇ ಎಂತ ತಾತ್ಪರ್ಯ.

**ತಾ॥** ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣದೇವರು, ಸರ್ಪ ಹ್ಯಾಂಗೆ ಭೂಸ್ಥಾಪಿತವಾದ ದ್ರವ್ಯವನ್ನ ತಾನು ಉಪಯೋಗಿಸಿಕೊಳ್ಳದೇ, ಒಬ್ಬರಿಗೂ ಕೊಡದೆ, ಕಾಯುಕೊಂಡು ಸಂರಕ್ಷಣೆಮಾಡಿಕೊಂಡು ನೋಡುತ್ತಾ ಇರುತ್ತದೋ ತದ್ವತ್ ತನ್ನ ಭಕ್ತರನ್ನ ನಿಷ್ಕಾಮನಾಗಿ ಭಕ್ತರಿಂದ ಯಾವುದನ್ನೂ ಅಪೇಕ್ಷಿಸದೆ ಕಾಯುಕೊಂಡು ಸಂರಕ್ಷಣೆ ಮಾಡತಾ ಇರತಾನೆ. ಪರಮಾತ್ಮ ನಿತ್ಯಾನಂದಮಯ. ಭಕ್ತಿಹೀನರಾದವರ ಸೇವಾದಿಗಳ ಸ್ವೀಕರಿಸೋದಿಲ್ಲ. ಪರಮಾತ್ಮ ಅಸದೃಶ ಶೂರನಾದವನು. ಸ್ಥಾವರಜಂಗಮಾತ್ಮಕವಾದಂಥಾ ಪ್ರಪಂಚಕ್ಕೆ ಕಾರಣನಾದವನು.

**ವಿಶೇಷಾರ್ಥ :–** ಸರ್ಪಸದೃಶ ಶ್ರೀಪರಮಾತ್ಮ. ದ್ರವ್ಯಸದೃಶ ಭಗವದ್ಭಕ್ತರು. ಅನ್ಯರಿಗೆ ಸದೃಶರಾದ, ಅಹಂಮಮತಾದಿಗಳಿಂದ ಯುಕ್ತರಾದ ಭಕ್ತಿಹೀನರಿಗೆ ಕೊಡೋದಿಲ್ಲ. ಪರಮಾತ್ಮ ಪೂರ್ಣನಾದ ಪ್ರಯುಕ್ತ ಇಂಥಾ ದ್ರವ್ಯದಿಂದ ಸರ್ಪದೋಪಾದಿಯಲಿ ತನಗೇನೂ ಪ್ರಯೋಜನವಿಲ್ಲವಾದ್ದರಿಂದ ಉಪಯೋಗಿಸಿಕೊಂಬೋದಿಲ್ಲ. ದುರ್ಜನರು ಅಂದರೆ ಸ್ವರೂಪತಃ ದುರ್ಜನರು, ಸ್ವರೂಪತಃ ಸಜ್ಜನರು ಎಂತ ಎರಡು ವಿಧ ಜೀವರು ಇರತಾರೆ. ಅಪಕ್ವದಶಾದಲ್ಲಿ ಉಭಯರೂ ಸೇವಾದಿಗಳ ಮಾಡತಾರೆ. ಈ ಉಭಯರಿಗೂ ಪರಮಾತ್ಮ ಒಲಿಯೋದಿಲ್ಲ. ನಿಷ್ಕಾಮರಾಗಿ ಭಕ್ತಿಯುಕ್ತರಾದವರಿಗೆ ಮಾತ್ರ ಪ್ರಸನ್ನನಾಗತಾನೆ. ನಿಷ್ಕಾಮಗೆ ಸೇವಾ ಯಾಕೆಂದರೆ ಅನಾದಿಯಿಂದ ಸ್ವಾಮಿ

ಭೃತ್ಯಗಳೆಂಬೋದು ಹ್ಯಾಂಗೆ ನೈಜವೋ ತದ್ವತ್ ಸೇವಾ ಮಾಡೋದು ಭೃತ್ಯನಿಗೆ ನೈಜ. ಅವ್ಯಾಜದಿಂದ ಭಕ್ತಗೆ ಫಲಗಳ ಕೊಡೋದು ಸ್ವಾಮಿಗೆ ನೈಜ. ಆದ ಪ್ರಯುಕ್ತ ನಿಷ್ಕಾಮುರಾಗಿ ಪರಮಾತ್ಮನ ಸೇವಾ ಮಾಡೋವರಾಗಬೇಕೂ ಎಂತ ತಾತ್ಪರ್ಯ.

**ಜನನಿಯನು ಕಾಣದಿಹ ಬಾಲಕ ।**
**ನೆನೆನೆನೆದು ಹಲುಬುತಿರೆ ಕತ್ತಲೆ ।**
**ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ ॥**
**ತನಯನಂ ಬಿಗಿದಪ್ಪಿ ರಂಬಿಸಿ ।**
**ಕನಲಿಕೆಯ ಕಳೆವಂತೆ ಮಧುಸೂ**
**ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ॥ ೧೩ ॥**

ಇಹ–ಕತ್ತಲೆಮನಿಯೊಳಗೆ ಇರತಕ್ಕ, ಬಾಲಕ–ಶಿಶುವು, ಜನನಿಯನು ಕಾಣದೆ–ತಾಯಿಯನ್ನು ನೋಡದೇ, ನೆನೆನೆನೆದು–ಬಾರಿಬಾರಿಗೂ ತಾಯಿಯಾದವಳನ್ನ ಸ್ಮರಣೆ ಮಾಡಿ, ಹಲುಬುತಿರೆ–ಹಂಬಲಿಸುತ್ತಾ ಇರುತಿರೆ, ಕತ್ತಲೆಮನೆಯೊಳು–ಅಂಧಕಾರಯುಕ್ತವಾದ ಮನಿಯೊಳಗೆ, ಅಡಗಿದ್ದವನ–ಆಶ್ರಯಮಾಡಿಕೊಂಡಿದ್ದ ಪುತ್ರನ್ನ, ನೋಡುತ–ಅವನ ಹಂಬಲವನ್ನ ನೋಡಿ, ನಗುತ ಹರುಷದಲಿ–ಸಂತೋಷದಿಂದಲಿ, ತನಯನಂ–ಮಗನಾದ ಬಾಲಕನ್ನ, ಬಿಗಿದಪ್ಪಿ–ತನ್ನ ಕರದಿಂದ ಎತ್ತಿ ಉದರದಲ್ಲಿಟ್ಟುಕೊಂಡು ಅಲ್ಲದೆ ಆಲಿಂಗನಮಾಡಿಕೊಂಡು, ರಂಬಿಸಿ–ಪ್ರೇಮಯುಕ್ತವಾದ ಲಾಲನೆಮಾತುಗಳಿಂದ ಸಮಾಧಾನಮಾಡಿ, ಕನಲಿಕೆಯ–ತಾಯಿವಿಷಯಕವಾದ ಕಳವಳವನ್ನ, ಕಳೆವಂತೆ–ಪರಿಹಾರ ಮಾಡುವಂತೆ, ಮಧುಸೂದನನು–ಮಧುನಾಮಕ ದೈತ್ಯನ ಸಂಹಾರಮಾಡಿದ ಶ್ರೀ ಪರಮಾತ್ಮನು, ತನ್ನವರು–ತನ್ನ ಭಕ್ತರು, ಇದ್ದೆಡೆಗೆ–ಇದ್ದ ಸ್ಥಳಕ್ಕೆ, ಬಂದೊದಗಿ–ಬಂದು ಒದಗಿದವನಾಗಿ, ಸಲಹುವನು–ಸಂರಕ್ಷಣೆ ಮಾಡುವನು.

**ತಾ॥** ಕತ್ತಲೆಮನಿಯೊಳಗೆ ಇರತಕ್ಕ ಶಿಶುವು ತಾಯಿಯನ್ನು ನೋಡದೆ ಬಾರಿ ಬಾರಿಗೂ ತಾಯಿಯನ್ನ ಸ್ಮರಣೆ ಮಾಡಿ ಹಂಬಲಿಸುತ್ತಾ ಇದ್ದ ಕಾಲದಲ್ಲಿ ಅವನ ಹಂಬಲ ನೋಡಿ ನಗುತ ಸಂತೋಷದಿಂದ ಮಗನಾದ ಶಿಶುವನ್ನ ತನ್ನ ಕರದಿಂದ ಎತ್ತಿ ಉದರದಲ್ಲಿ ಇಟ್ಟುಕೊಂಡು ಪ್ರೇಮಯುಕ್ತವಾದ ಲಾಲನಿಮಾತುಗಳಿಂದ ಅವನ, ತನ್ನ ವಿಷಯಕವಾದ ಕಳವಳವನ್ನ ಹ್ಯಾಂಗೆ ಪರಿಹಾರ ಮಾಡತಾಳೋ, ತದ್ವತ್ ಮಧುನಾಮಕ ದೈತ್ಯನ ಸಂಹಾರಮಾಡಿದ ಶ್ರೀ ಪರಮಾತ್ಮ ತನ್ನ ಭಕ್ತರು ಇದ್ದ ಸ್ಥಳಕ್ಕೆ ತಾಯಿಯೋಪಾದಿಯಲಿ ಬಂದು ಸಂರಕ್ಷಣೆ ಮಾಡತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ** :– ೧) ತಾಯಿಸದೃಶ ಪರಮಾತ್ಮ, ೨) ಕತ್ತಲುಮನೆ–ಲಿಂಗ ದೇಹ, ೩) ತಾಯಿ ಕಾಣದೇ ಹಂಬಲಿಸೋಣ ಎಂದರೆ, ವೇದಶಾಸ್ತ್ರಗಳಲ್ಲಿ ಹೇಳುವ ಪ್ರಕಾರ ಶ್ರೀಪರಮಾತ್ಮನ ನಾಮರೂಪಗಳನ್ನ ಹುಡುಕಿ ಧ್ಯಾನಮಾಡೋಣವೇ ೪) ಹಂಬಲಿಕೆಯನ್ನ

ಪರಿಹಾರವಮಾಡೋಣ ಎಂದರೇ, ಪರಮಾತ್ಮ ಪ್ರತ್ಯಕ್ಷನಾಗಿ ಮೋಕ್ಷ ಕೊಡೋಣವೇ. ಚರಾಚರಾತ್ಮಕ ಜಗತ್ತನ್ನ ಉದರದಲ್ಲಿ ಧರಿಸಿ ಪ್ರಳಯಾನಂತರ ಸೃಷ್ಟಿಕಾಲವಲ್ಲಿ ಯಾವತ್ತು ಜೀವರ ಉದರದಿಂದ ಹೊರಗೆ ಸೃಷ್ಟಿ ಮಾಡುವವನಾದ್ದರಿಂದ ಜಗತ್ತಿಗೆ ತಾಯಿಯಾದ ಶ್ರೀ ಪರಮಾತ್ಮನ ಪ್ರಾಣಿಗಳಾದ ಮಕ್ಕಳು ಲಿಂಗದೇಹಾಖ್ಯ ಅಂಧಕಾರ ಮನೆಯಲ್ಲಿ ಅಡಗಿದ್ದಾರೆ. ಈ ಜೀವರು ತಾಯಿಯು ಸದೃಶ ಪರಮಾತ್ಮನ್ನ ಕಾಣದೇ ವೇದಶಾಸ್ತ್ರೋಕ್ತಾನುಸಾರ ಮಾಡುವ ಪ್ರಾರ್ಥನಾರೂಪವಾದ ಹಂಬಲಯುಕ್ತರಾದ ಪುತ್ರರನ್ನ ನೋಡಿ ನಕ್ಕವನಾಗಿ ಅಂತಃಕರಣದಿಂದ ತಾಯಿಯೋಪಾದಿಯಲಿ ಪ್ರತ್ಯಕ್ಷನಾಗಿ ಕತ್ತಲೆಮನೆ ಎಂಬ ಅಂಧಕಾರಸಹಿತವಾದ ಲಿಂಗದೇಹಾಖ್ಯ ಮನೆಯನ್ನ ಬಿಡಿಸಿ ಆಲಿಂಗನಾದಿಗಳಿಂದ ಸಮಾಧಾನಮಾಡಿ ಮೋಕ್ಷವನ್ನ ಕೊಡತಾನೆ. ಶ್ರೀಹರಿ ಈ ಪ್ರಕಾರ ಯಾರನ್ನ ಸಂರಕ್ಷಣೆ ಮಾಡತಾನೆ ಎಂದರೇ ತನ್ನ ಹಂಬಲಿಸತಕ್ಕವರು ಯಾರೋ ಅಂಥವರನ್ನ ಎಂತ ತಾತ್ಪರ್ಯ.

**ಬಾಲಕನ ಕಲಭಾಷೆ ಜನನಿಯು ।**
**ಕೇಳಿ ಸುಖಪಡುವಂತೆ ಲಕುಮಿಲೋ ।**
**ಲೋಲ ಭಕುತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು ॥**
**ತಾಳ ತನ್ನವರಲ್ಲಿ ಮಾಡುವ ।**
**ಹೇಳನವ ಹೆದ್ದೈವ ವಿದುರನ ।**
**ಆಲಯದಿ ಪಾಲುಂಡು ಕುರುಪನ ಮಾನವನೆ ಕೊಂಡ ॥ ೧೪ ॥**

ಬಾಲಕನ–ಅತಿಹೀನ ವಯಸ್ಸುಳ್ಳ ಬಾಲಕನಾದ ಪುತ್ರನ, ಕಲಭಾಷೆ–ಅಸ್ಪಷ್ಟವಾದ ಮಾತುಗಳ, ಜನನಿಯು ಕೇಳಿ–ತಾಯಿಯಾದವಳು ಕೇಳಿದವಳಾಗಿ, ಸುಖಪಡುವಂತೆ–ಸುಖಪಡೋಪಾದಿಯಲಿ, ಲ ಕು ಮಿ ಲೋ ಲ – ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನು ತನಗೆ ಪುತ್ರರಾದಂಥಾ, ಭಕುತರು–ಭಕ್ತರಾದಂಥಾವರು, ಮಾಡುತಿಹ–ಅಸ್ಪಷ್ಟವಾಗಿ ಕಲಭಾಷಾಕ್ಕೆ ಸದೃಶವಾದ ವಾಕ್ಯಗಳಿಂದ ಮಾತನಾಡುತ್ತಾ ಇರತಕ್ಕ, ಎಂದರೇ ಬ್ರಹ್ಮಾದಿಗಳ ವಿವಕ್ಷಯಾ ಅಸ್ಪಷ್ಟವಾದ ವಾಕ್ಯಗಳಿಂದ ಮಾಡತಾ ಇರತಕ್ಕ, ಸಂಸ್ತುತಿಗೆ–ಸಮೀಚೀನ ಜ್ಞಾನಭಕ್ತಿ ಸಹಿತವಾದ ಸ್ತೋತ್ರಗಳಿಗೆ, ಹಿಗ್ಗುವನು–ಅತ್ಯಂತ ಹರುಷಪಡುವನು. ತ ನ್ನ ವ ರ ಲ್ಲಿ – ಮಕ್ಕಳೋಪಾದಿಯಲಿ ಇರುವ ತನ್ನ ಭಕ್ತರಲಿ, ಮಾಡುವ ಹೇಳನವ–ಮಾಡತಕ್ಕ ಅವಮಾನವನ್ನ, ತಾಳ–ಮಾಡಿದ ಅವಮಾನವನ್ನ ಸಹಿಸನು, (ಎಂದರೇ ತಾಯಿಯೋಪಾದಿಯಲಿ ಸಹನರಹಿತನಾಗಿ, ಅವಹೇಳನ ಮಾಡುವರನ್ನ ಮಾನರಹಿತನ್ನಾಗಿ ಮಾಡತಾನೆ. ಯಾರಿಗೆ ಹೀಗೆ ಮಾಡಿದ ಎಂದರೆ, ತನ್ನ ಭಕ್ತರಾದ ಪಾಂಡವರಿಗೆ ಅವಮಾನ ಮಾಡಿದ ದುರ್ಯೋಧನನಿಗೆ ಅವಮಾನ ಮಾಡಿದ.) ಹೆದ್ದೈವ–ಸರ್ವೋತ್ತಮನಾದ ಶ್ರೀ ಪರಮಾತ್ಮನು, ವಿದುರನ ಆಲಯದಿ–ವಿದುರನ ಮನೆಯಲ್ಲಿ, ಪಾಲುಂಡು–ಕ್ಷೀರವನ್ನು ಭೋಜನ ಮಾಡಿ, ಕುರುಪನ–ದುರ್ಯೋಧನನ,

ಮಾನವನೆ ಕೊಂಡ–ಅವನಿಗೆ ತನ್ನಿಂದ ಆಗತಕ್ಕ ಮಾನವನ್ನು ತಾನು ತೆಗೆದುಕೊಂಡು ಅವನಿಗೆ ಅವಮಾನವನ್ನು ಮಾಡೋವನಾದ.

**ತಾ||** ತಾಯಿಯಾದವಳು ತನ್ನ ಪುತ್ರನು ಅಸ್ಪಷ್ಟ ವಾಕ್ಕುಗಳು ಆಡಿದರೂ, ಕೇಳಿ ಸಂತೋಷಪಡುವ ರೀತಿಯಾಗಿ ಸೃಷ್ಟಿಕಾರಣದಿಂದ ತಾಯಿಯೋಪಾದಿಯಲಿ ಇರತಕ್ಕಂಥಾ ಶ್ರೀ ಪರಮಾತ್ಮ, ತನಗೆ ಪುತ್ರರಾದಂಥ ಭಕ್ತರು ಅಸ್ಪಷ್ಟವಾದಂಥಾ ವಚನಗಳಿಂದ ಸ್ತೋತ್ರ ಮಾಡಿದರೂ, ಅವುಗಳನ್ನ ಸಮೀಚೀನ, ಜ್ಞಾನಭಕ್ತಿಯುಕ್ತವಾದ ಸ್ತೋತ್ರ ಗಳನ್ನಾಗಿ ಪರಿಗ್ರಹಿಸಿ ಸಂತೋಷಪಡುವನು. ಮತ್ತು ಇಂಥಾ ಭಕ್ತರನ್ನ ಅವಮಾನ ಮಾಡತಕ್ಕವರನ್ನ, ಸ್ವಾಮಿಯಾದ ತಾನು ತನ್ನ ಭಕ್ತರಾದ ಪಾಂಡವರಲ್ಲಿ ದುರ್ಯೋಧನನು ಮಾಡಿದ ಅವಮಾನವನ್ನು ಸಹಿಸದೆ, ಅವ (ದುರ್ಯೋಧನನು) ತನಗೆ ಔತಣ ಸಿದ್ಧಮಾಡಿಕೊಂಡು ಮಹಾವೈಭವದಿಂದ ಕರತರುವುದಕ್ಕೆ ಕಾದಿದ್ದರೂ, ತನ್ನ ಭಕ್ತನಾದ ವಿದುರನ ಮನೆಗೇ ಹೋಗಿ ಅವನಲ್ಲಿದ್ದ ಕ್ಷೀರವನ್ನು ಪರಿಗ್ರಹ ಮಾಡಿ, ಅವಗೆ (ದುರ್ಯೋಧನಗೆ) ಹ್ಯಾಂಗೆ ಅವಮಾನ ಮಾಡಿದನೋ, ಅದೇ ಪ್ರಕಾರ ತನ್ನ ಭಕ್ತರಾದವರಿಗೆ ಯಾರಾದರೂ ಅವಮಾನ ಮಾಡಿದ ಪಕ್ಷಕ್ಕೆ ಐಹಿಕ ಪರದಲ್ಲಿ ಮಾನಿತರಾಗದೇ ಅನರ್ಥ ಹೊಂದುವಂತೆ ಮಾಡತಾನೆ ಎಂತ ತಾತ್ಪರ್ಯ.

**ಸ್ಮರಿಸುವವರಪರಾಧಗಳ ತಾ ।**
**ಸ್ಮರಿಸ ಸಕಲೇಷ್ಟಪ್ರದಾಯಕ ।**
**ಮರಳಿ ತನಗರ್ಪಿಸಲು ಕೊಟ್ಟುದನಂತನುಡಿ ಮಾಡಿ ॥**
**ಪರಿಪರಿಯಲಿಂದುಣಿಸಿ ಸುಖಸಾ ।**
**ಗರದಿ ಲೋಲಾಡಿಸುವ ಮಂಗಳ ।**
**ಚರಿತ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ॥ ೧೫ ॥**

ಇನ್ನೂ ಶ್ರೀ ಪರಮಾತ್ಮನ ಮಹಿಮೆಯನ್ನ ಹೇಳತಾರೆ.

ಸ್ಮರಿಸುವವರ–ಏಕಾದಶೇಂದ್ರಿಯಗಳಲ್ಲಿ ಅಂತರ್ಗತನಾದ ಶ್ರೀ ಪರಮಾತ್ಮನ ಬಿಂಬ ಕ್ರಿಯಾದ್ವಾರಾ ಪ್ರತಿಬಿಂಬ ಕ್ರಿಯಾವನ್ನ ಮರೆಯದೇ ದ್ವಂದ್ವಕರ್ಮಗಳ ಮಾಡತಾ ಸ್ಮರಣೆ ಮಾಡತಕ್ಕವರ, ಅಪರಾಧಗಳ–ತಪ್ಪಿತಗಳ, ತಾ ಸ್ಮರಿಸ–ಶ್ರೀ ಪರಮಾತ್ಮನಾದ ತಾನು ಅಪರಾಧಗಳೆಂದು ಸ್ಮರಿಸನು. (ಅಪರಾಧಗಳು ದೋಷವಾಗೋದಿಲ್ಲವಾದ ಕಾರಣ ಅಪರಾಧತ್ವೇನ ಸ್ಮರಿಸನು) ಸಕಲೇಷ್ಟ ಪ್ರದಾಯಕ–ಸಮಸ್ತವಾದ ಅಭೀಷ್ಟಗಳ ಅವರವರ ಕರ್ಮಾನುಸಾರ, ಸ್ವರೂಪ ಯೋಗ್ಯತಾನುಸಾರ ಕೊಡತಕ್ಕ ಶ್ರೀ ಬಿಂಬರೂಪಿ ಪರಮಾತ್ಮ, ಮರಳಿ ತನಗರ್ಪಿಸಲು–ಅನುಸಂಧಾನಯುಕ್ತನಾಗಿ ಮಾಡಿದ ಸರ್ವಕರ್ಮಗಳು ತನಗೆ ಅರ್ಪಿತ ಮಾಡಲು (ಎಂದರೇ ಕರ್ಮಾಂತರ್ಗತನ ದೇವಾಂತರ್ಗತನಲ್ಲಿ ಐಕ್ಯಚಿಂತನದಿಂದ ಅರ್ಪಿಸಲು, ಕೊಟ್ಟುದ–ಈ ಪ್ರಕಾರ ಕೊಟ್ಟಂಥಾ, ಪುಣ್ಯವೆಂಬ ಬೀಜವನ್ನ

ಅನಂತ–ಅನಂತ ಪ್ರಕಾರ ಶಾಖೋಪಶಾಖೆ, ಪತ್ರಪುಷ್ಪಗಳಿಂದ, ಮೊದಲಾದ–ವಿಭಾಗದಿಂದ ವೃಕ್ಷವ ಮಾಡಿ, ಪರಿಪರಿಯಲಿಂದ–ನಾನಾ ಪ್ರಕಾರದಿಂದ, ಉಣಿಸಿ–ಅಂಥಾ ವೃಕ್ಷಗತ ಫಲಗಳ ಉಣಿಸಿ, ಪರಮಾತ್ಮನ ವಿಷಯಕವಾದ ಜ್ಞಾನಾನಂದಾದಿ ಫಲಗಳ ಉಣಿಸಿ, ಸುಖಸಾಗರದಿ–ಸುಖಸಮುದ್ರನಾದ ಶ್ರೀ ಪರಮಾತ್ಮ ತನ್ನ ಧ್ಯಾನಾನಂದಾದಿ ಸಮುದ್ರ ದಲ್ಲಿ, ಲೋಲಾಡಿಸುವ–ಆಸಕ್ತರನ್ನಾಗಿ ಶ್ರೀಹರಿಯ ಧ್ಯಾನಾನಂದಾದಿ ರೂಪವಾದ ಸುಖ ಸಮುದ್ರದಲ್ಲಿ ಸಂಚಾರ ಮಾಡಿಸುತ್ತಾನೆ. ಮಂಗಳಚರಿತ–ಮೋಕ್ಷಾಖ್ಯ ಮಂಗಳ ಕೊಡ ತಕ್ಕ ಚರಿತ ಉಳ್ಳವ, ಚಿನ್ಮಯಗಾತ್ರ–ಚಿತ್–ಜ್ಞಾನ, ಉಪಲಕ್ಷಣಯಾ ಸಚ್ಚಿದಾನಂದ ರೂಪದಿಂದ ಪ್ರಚುರವಾದ ಶರೀರ ಉಳ್ಳವ. ಲೋಕಪವಿತ್ರ–ಜೀವರಿಗೆ ಅಪವಿತ್ರವಾದ ಲಿಂಗದೇಹವನ್ನ ದೂರಮಾಡಿ ಪವಿತ್ರರನ್ನಾಗಿ ಮಾಡೋದಕ್ಕೆ ಕಾರಣನಾದವ, ಸುಚರಿತ್ರ–ಸರ್ವೋತ್ತಮನಾದ ಶ್ರೀಹರಿಯ ಚರಿತ್ರೆ ಯಾವದಿದೆ ಅದೇ ಸುಚರಿತ್ರೆ ಎಂತ ತಾತ್ಪರ್ಯ.

**ತಾ||** ಇನ್ನೂ ಶ್ರೀ ಪರಮಾತ್ಮ ಎಂಥಾವನೆಂದರೆ, ಶ್ರೀ ಪರಮಾತ್ಮನು ಬಿಂಬೋ ಪಾಸನಾ ಕ್ರಮದಿಂದ ಸ್ಮರಣೆ ಮಾಡತಕ್ಕವರು ಅಪರಾಧಗಳು ಎಂತ ಎಣಿಸತಕ್ಕ ದುಷ್ಕರ್ಮಗಳ ಮಾಡಿದಾಗ್ಯೂ ನಿರಪರಾಧಿಗಳನ್ನಾಗಿ ಎಣಿಸತಕ್ಕವ ಮತ್ತು ಜೀವರ ಕರ್ಮಾನುಸಾರ, ಸ್ವರೂಪ ಯೋಗ್ಯತಾನುಸಾರ ಸಮಸ್ತವಾದ ಅಭೀಷ್ಟಗಳನ್ನ ಕೊಡ ತಕ್ಕವ. ಈ ಪ್ರಕಾರ ಪರಮಾತ್ಮನಿಂದ ಕೊಡಲ್ಪಟ್ಟಂಥಾ ಅಭೀಷ್ಟಗಳನ್ನು ಅನುಸಂಧಾನ ಪೂರ್ವಕವಾಗಿ ಐಕ್ಯಚಿಂತನೆಯಿಂದ ಪರಮಾತ್ಮನಿಗೇ ಅರ್ಪಿಸಲು, ಆ ಪ್ರಕಾರ ಕೊಟ್ಟಂಥ ಪುಣ್ಯವೆಂಬ ಬೀಜವನ್ನು ಅನಂತಾನಂತ ಪ್ರಕಾರ, ಶಾಖೋಪಶಾಖೆ ಪತ್ರಪುಷ್ಪ ಫಲಗಳಿಂದ ಪೂರಿತವಾದ ವೃಕ್ಷವನ್ನ ಮಾಡಿ ತಜ್ಜನಿತವಾದ ಸ್ವವಿಷಯಕವಾದ ಜ್ಞಾನಾನಂದಾದಿ ಫಲಗಳನ್ನುಂಟು ಮಾಡಿ ತಿರುಗಿ ನಾನಾ ಪ್ರಕಾರವಾಗಿ ಜೀವರಿಗೆ ಆ ಫಲಗಳನ್ನ ಉಣಿಸಿ ಸ್ಮೃತಿಯುಕ್ತರನ್ನಾಗಿ ಮಾಡಿ ಶ್ರೀಹರಿಯ ಧ್ಯಾನಾನಂದಾದಿ ರೂಪವಾದ ಸುಖಸಮುದ್ರ ದಲ್ಲಿ ಸಂಚಾರ ಮಾಡಿಸತಕ್ಕವ ಮತ್ತು ಮೋಕ್ಷಾಖ್ಯವಾದ ಮಂಗಳವನ್ನು ಕೊಡತಕ್ಕ ವ್ಯಾಪಾರಗಳು, ಉಪಲಕ್ಷಣಯಾ, ಸಚ್ಚಿದಾನಂದ ರೂಪದಿಂದ ಪ್ರಚುರವಾದ ಶರೀರ ಉಳ್ಳವ. ಜೀವರಿಗೆ ಅಪವಿತ್ರವಾದ ಲಿಂಗದೇಹವನ್ನ ದೂರಮಾಡಿ ಪವಿತ್ರರನ್ನಾಗಿ ಮಾಡೋದಕ್ಕೆ ಕಾರಣವಾದ ಚರಿತ್ರೆಗಳು ಯಾವದದೆ ಅಂಥಾ ಸಮೀಚೀನವಾದ ಚರಿತ್ರೆ ಗಳು ಉಳ್ಳವ ಎಂತ ತಾತ್ಪರ್ಯ.

**ಏನು ಕರುಣಾನಿಧಿಯೋ ಹರಿ ಮ |**
**ತ್ತೇನು ಭಕ್ತಾಧೀನನೋ ಇ |**
**ನ್ನೇನು ಈತನ ಲೀಲೆ ಇಚ್ಛಾಮಾತ್ರದಲಿ ಜಗವ ||**
**ತಾನೆ ಸೃಜಿಸುವ ಪಾಲಿಸುವ ನಿ |**
**ರ್ವಾಣ ಮೊದಲಾದಖಿಳ ಲೋಕ |**
**ಸ್ಥಾನದಲಿ ಮತ್ತವರನಿಟ್ಟಾನಂದಬಡಿಸುವನು || ೧೬ ||**

ಹರಿ—ದುರಿತಪರಿಹಾರಕನಾದ ಶ್ರೀಪರಮಾತ್ಮ, ಏನು ಕರುಣಾನಿಧಿಯೋ—ಅಂತಃ ಕರುಣವೆಂಬ ಸಮುದ್ರವುಳ್ಳವನೋ ಎಂತ ಸಂಬೋಧನೆ, ಮತ್ತೇನು—ಇನ್ನೂ ಶ್ರೀಹರಿಯ ಮಹಿಮಾ ಏನೆಂದರೆ, ಭಕ್ತಾಧೀನನೋ—ಭಕ್ತನ ವಶನೋ (ಎಂತ ಸಂಬೋಧನ), ಇನ್ನೇನು—ಇನ್ನು ಏನಂತ ಹೇಳಲಿ, ಈತನ ಲೀಲೆ—ಶ್ರೀಹರಿಯ ವ್ಯಾಪಾರಗಳು, ಇಚ್ಛಾ ಮಾತ್ರದಲಿ—ತಾನು ಇಚ್ಛಾ ಮಾಡೋಮಾತ್ರದಿಂದ, ಜಗವ—ಚರಾಚರಾತ್ಮಕವಾದ ಜಗತ್ತನ್ನು, ತಾನೇ ಸೃಜಿಸುವ—ತಾನೇ ಸೃಷ್ಟಿಮಾಡುವ, ಪಾಲಿಸುವ—ಸಂರಕ್ಷಣೆಮಾಡುವ, (ಈ ಪ್ರಕಾರ ಸೃಷ್ಟಿಮಾಡಿ ಪಾಲಿಸಿದ ನಂತರ ಪ್ರಳಯಕಾಲದಲ್ಲಿ ಲಿಂಗಭಂಗರಾದವರ) ನಿರ್ವಾಣ—ವೈಕುಂಠ, ಮೊದಲಾದ—ಶ್ವೇತದ್ವೀಪ, ಅನಂತಾಸನ ಮೊದಲಾದ, ಅಖಿಳ ಲೋಕಸ್ಥಾನದಲಿ—ಇನ್ನೂ ಸಾಧನಾವಶೇಷ ಉಳ್ಳವರ ಪುಣ್ಯಸ್ಥಾನಗಳಾದ ಮಹರಾದಿ ಲೋಕಸ್ಥಾನಗಳಲ್ಲಿ ಮತ್ತು ಇನ್ನೂ ಕೆಲವು ಪುಣ್ಯತರಗಳಾದ ಸ್ವರ್ಗಾದಿಲೋಕಗಳಲ್ಲಿ, ಅವರನಿಟ್ಟು—ಅವರನ್ನ ಆವಾಸರನ್ನಾಗಿ ಮಾಡಿ, ಆನಂದಪಡಿಸುವನು—ಸ್ವರೂಪಾನಂದ ಬಡಿಸುವನು.

**ತಾ||** ಇನ್ನೂ ಶ್ರೀ ಪರಮಾತ್ಮನ ಮಹಿಮಾ ಎಂಥಾದ್ದು ಎಂದರೇ, ಅಂತಃಕರುಣವೆಂಬ ಸಮುದ್ರ ಉಳ್ಳವ ಅಂದರೆ ಅಪಾರ ಕರುಣ ಉಳ್ಳವ, ಇನ್ನೂ ಭಕ್ತರ ವಶನಾಗುವ, ಇನ್ನು ತಾನು ಇಚ್ಛಾ ಮಾಡೋಮಾತ್ರದಿಂದ ಚರಾಚರಾತ್ಮಕವಾದಂಥಾ ಜಗತ್ತನ್ನು ತಾನೇ ಸೃಷ್ಟಿಮಾಡುವ, ಸಂರಕ್ಷಣೆಮಾಡುವ, ಪ್ರಳಯಕಾಲದಲ್ಲಿ ಲಿಂಗಭಂಗ ಉಂಟಾದ ಜೀವರನ್ನು ಶ್ವೇತದ್ವೀಪ, ಅನಂತಾಸನ, ವೈಕುಂಠಾದಿ ಲೋಕಗಳಲ್ಲಿಯೂ, ಇನ್ನೂ ಸಾಧನಾವಶಿಷ್ಟರಾದ ಜೀವರನ್ನು ಮಹರಾದಿ ಪುಣ್ಯಲೋಕಗಳಲ್ಲಿಯೂ ಆವಾಸರನ್ನಾಗಿ ಮಾಡಿ ಸ್ವರೂಪಾನಂದಬಡಿಸುವನೆಂತ ತಾತ್ಪರ್ಯ.

**ವಿಶೇಷಾರ್ಥ :—** ಶ್ರೀ ಪರಮಾತ್ಮ ಭಕ್ತಾಧೀನನು ಎಂತಲೂ, ಕರುಣಾಳು ಎಂತಲೂ ನಿರೂಪಿಸಿದರು. ಯಾವಾಗ ತನ್ನ ಕರುಣೆಯ ಅಧೀನತ್ವವು ತೋರಿಸಲಾಪವು ಎಂದರೇ ಅನುಸಂಧಾನಪೂರ್ವಕ ಕರ್ಮಗಳ ಮಾಡಿದರೆ (ಅನುಸಂಧಾನಕ್ರಮ ಮುಂದಿನ ಚರಣದ ಆದಿಯಲ್ಲಿ ಹೇಳಿಯದೆ). ಆ ಪ್ರಕಾರ ಮಾಡುವ ತನ್ನ ಭಕ್ತರುಗಳು ಏನು ಪಾಪಕರ್ಮಗಳ ಮಾಡಿದಾಗ್ಯೂ ತಜ್ಜನಿತವಾದ ಪಾಪಫಲಗಳನ್ನ ದೈತ್ಯರಿಗೆ ವಿಭಾಗ ಮಾಡಿಕೊಟ್ಟು ದೈತ್ಯರು ಮಾಡಿದ ಪುಣ್ಯಫಲಕರ್ಮಗಳನ್ನು ತನ್ನ ಭಕ್ತರಿಗೆ ಕೊಡತಾನೆ ಎಂತ ತಾತ್ಪರ್ಯ.

**ಜನಪ ಮೆಚ್ಚಿದರೀವ ಧನ ವಾ ।**
**ಹನ ವಿಭೂಷಣ ವಸನ ಭೂಮಿಯ ।**
**ತನುಮನಗಳಿತ್ತಾದರಿಪರುಂಟೇನೋ ಲೋಕದೊಳು ॥**

**ಅನವರತ ನೆನೆವವರನಂತಾ |**
**ಸನವೆ ಮೊದಲಾದಾಲಯದೊಳಿ |**
**ಟ್ಟಣುಗನಂದದಲವರ ವಶನಾಗುವ ಮಹಾಮಹಿಮ ॥ ೧೭ ॥**

ಜನಪ–ಪ್ರಜೆಗಳ ಪಾಲಕನಾದ ರಾಜ, ಮೆಚ್ಚಿದರೆ–ತನ್ನ ಸೇವಾ ಸರಿಯಾಗಿ ಮಾಡಿದವನೆಂದು ಸಂತೋಷಪಟ್ಟರೆ, ಮೆಚ್ಚಿದರೆ, ಧನ–(ನಶ್ವರಗಳಾದ) ಐಶ್ವರ್ಯ, ವಾಹನ–ಗಜ ತುರಗಾದಿಗಳು, ವಿಭೂಷಣ–ಅನೇಕ ಆಭರಣಗಳು, ವಸನ–ದಿವ್ಯವಸ್ತ್ರಗಳು, ಭೂಮಿಯ–ಗ್ರಾಮಭೂಮಿಗಳು, ಈವ–ಕೊಡುವ, ಯಾರಿಗೆ ಎಂದರೆ ತನ್ನ ಸೇವಕರಿಗೆ, ತನು–ದೇಹ, ನಶ್ವರವಾದ ಪ್ರಾಕೃತದೇಹವನ್ನ ಜಾರದಂತೆ ಮರೆಮಾಡಿ ಸ್ವರೂಪದೇಹವನ್ನು, ಇತ್ತು–ತೋರಿಸಿಕೊಟ್ಟು, ಇನ್ನೂ ಮನ–ಮನಸ್ಸು (ಅಹಂಮಮತಾದಿಗಳಿಂದ ಶೋಕಬಡತಕ್ಕ ಮನಸ್ಸಿಗೆ ದುಃಖಾದಿಗಳ ಬಿಡಿಸಿ ನಿರ್ಮಲಮನಸ್ಸನ್ನು, ಇತ್ತು–ಇವು ಗಳನ್ನು ಕೊಟ್ಟವರಾಗಿ, ಆದರಿಪರು–ಸೇವಾಮಾಡತಕ್ಕವರಿಗೆ ಆದರಿಸತಕ್ಕ ಪ್ರಭುಗಳು, ಉಂಟೇನೋ–ಇದ್ದಾರೇನೋ (ಆಲೋಚಿಸಿ ನೋಡೆಂದು ಸಂಬೋಧನ), ಲೋಕದೊಳು–ಲೋಕದಲ್ಲಿ ವಿದ್ಯಮಾನರಾದ ಮಾನುಷರಾಜರೇನು, ದೇವತೆಗಳ ಒಳಗೇನು, ದಾರಾದರೂ ಇದ್ದಾರಾ ಎಂದರೆ ದಾರೂ ಇಲ್ಲ ಎಂತ ಶೇಷಪೂರ್ತಿ. ಅನವರತ–ಸರ್ವಕಾಲದಲ್ಲಿ, ನೆನೆವರ–ಪೂರ್ವೋಕ್ತ ರಾಜರುಗಳ ಸೇವಾದಿಗಳ ಮಾಡದೆ ಸರ್ವಾಂತರ್ಗತನಾಗಿ ಸರ್ವರಿಗೆ, ಐಹಿಕ ಪಾರತ್ರಿಕ ಫಲಗಳ ಯೋಗ್ಯತಾನುಸಾರ ಕರ್ಮಾನುಸಾರ ಕೊಡತಕ್ಕವ ಶ್ರೀಹರಿ ಎಂತ ಶ್ರೀಪರಮಾತ್ಮನ್ನ ಸದಾ ಧ್ಯಾನೋಪಾಸನ ಮಾಡತಕ್ಕವರ, ಅನಂತಾಸನವೇ–ಮುಕ್ತಿಸ್ಥಾನವಾದ ನಾಶರಹಿತವಾದ ಅನಂತಾಸನವೇ, ಮೊದಲಾದ–ಶ್ವೇತದ್ವೀಪ, ವೈಕುಂಠ ಮೊದಲಾದವುಗಳಲ್ಲಿರುವ, ಆಲಯದಲಿ–ದಿವ್ಯಮಂದಿರಗಳಲ್ಲಿ, ಇಟ್ಟು–ಇಂಥಾ ಮನೆಗಳ ಕೊಟ್ಟು ಆದರಿಸಿ, ಅಣುಗನಂದದಲಿ–ಮಕ್ಕಳೋಪಾದಿಯಲಿ, ಅವರ–ಮುಕ್ತರಾದ ಭಕ್ತರ, ವಶವಾಗುವನು–ಅಧೀನನಾಗುವನು, ಮಹಾಮಹಿಮಾ–ಅಸದೃಶವಾದ ಮಹಾಪರಾಕ್ರಮ ಉಳ್ಳವನು.

**ತಾ॥** ಸಾಧಾರಣ ಮನುಷ್ಯರಾಜನು, ತನ್ನ ಸೇವಕನಾದಂಥವ ತನಗೆ ಮಾಡುವ, ಭಯ, ಭಕ್ತಿ, ವಿನಯಾನ್ವಿತವಾದ ಸೇವಾವೃತ್ತಿಯನ್ನು ಅನುಭವಿಸಿ ಸಂತೋಷಪಟ್ಟರೆ, ಅವಗೆ (ಸೇವಕಗೆ) ನಶ್ವರವಾದ ಐಶ್ವರ್ಯವನ್ನ ಕೊಡಲಿಕ್ಕೆ ಶಕ್ತನಾದವನೇ ಹೊರ್ತು ಬ್ಯಾರೆ ಅಲ್ಲ. ಆದರೆ ಚತುರ್ಭುವನಕ್ಕೆ ಅರಸಾದಂಥಾ ಶ್ರೀಪರಮಾತ್ಮನೋ, ಭಯ, ಭಕ್ತಿ ವಿನಯಪೂರ್ವಕವಾಗಿ, ನಿಷ್ಕಾಮನಾಗಿ ಯಾವ ಭಕ್ತನು ತನ್ನ ಸೇವಾ ಮಾಡುತ್ತಾನೋ, ಅವನಿಗೆ ಶಾಶ್ವತವಾದ ಮಹದಾದಿ ಲೋಕಗಳು ಅಂದರೆ ಅನಂತಾಸನ, ವೈಕುಂಠ, ಶ್ವೇತದ್ವೀಪವೇ ಮೊದಲಾದ ಮನೆಗಳಲ್ಲಿಟ್ಟು ಹಸುಮಕ್ಕಳಿಗೆ ಹ್ಯಾಂಗೆ ತಾಯಿ ತಂದೆಗಳು ಇಚ್ಛಾಮಾತ್ರದಿಂದ ಆವರವರ ಇಷ್ಟಗಳನ್ನು ಪೂರೈಸುತ್ತಾರೋ, ಆ ಪ್ರಕಾರ ಭಕ್ತರನ್ನ ಆದರಿಸಿ ಇಷ್ಟಗಳನ್ನ ಪೂರೈಸಿಕೊಟ್ಟು ಸುಖಪಡಿಸುತ್ತಾನೆ, ಎಂತ ತಾತ್ಪರ್ಯ.

**ಭುವನಪಾವನಚರಿತ ಪುಣ್ಯ ।**
**ಶ್ರವಣಕೀರ್ತನ ಪಾಪನಾಶನ ।**
**ಕವಿಭಿರೀಡಿತ ಕೈರವದಳಶ್ಯಾಮ ನಿಸ್ಸೀಮ ॥**
**ಯುವತಿವೇಷದಿ ಹಿಂದೆ ಗೌರೀ ।**
**ಧವನ ಮೋಹಿಸಿ ಕೆಡಿಸಿ ಉಳಿಸಿದ ।**
**ಇವನ ಮಾಯವ ಗೆಲುವನಾವನು ಈ ಜಗತ್ರಯದಿ ॥ ೧೮ ॥**

ಭುವನ–ಈ ಚತುರ್ದಶ ಲೋಕಗಳಲ್ಲಿ, ಪಾವನ–ಪವಿತ್ರತರವಾದ, ಚರಿತ–ಚರಿತ್ರೆಗಳುಳ್ಳ, ಪುಣ್ಯಶ್ರವಣಕೀರ್ತನ, ಪುಣ್ಯ–ಮೋಕ್ಷಕ್ಕಾಗಿ (ಜೀವರುಗಳು), ಶ್ರವಣ–ಸಚ್ಛಾಸ್ತ್ರಗಳ ಕೇಳೋಣದರಿಂದ, ಕೀರ್ತನ–ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವ, ಪಾಪನಾಶನ–ಇಂಥಾ ಸುಜೀವರ ಸ್ಥಾನಕ್ಕೆ ತಿರೋಧಾನಗಳಾದ ಪಾಪಗಳ ನಾಶಮಾಡತಕ್ಕವ, ಕವಿಭಿರೀಡಿತ–ಬ್ರಹ್ಮಜ್ಞಾನಿಗಳಿಂದ ಸ್ತುತ್ಯನಾದವ, ಕೈರವದಳಶ್ಯಾಮ–ನೈದಿಲೆಹೂವಿನ ವರ್ಣದಂತೆ ದೇಹಬಣ್ಣವುಳ್ಳವ, ನಿಸ್ಸೀಮ–ಅತ್ಯಂತ ಪರಾಕ್ರಮಿಯಾದವ, ಇಂಥಾ ಮಹಿಮೆಗಳುಳ್ಳ ಪರಮಾತ್ಮ, ಯುವತಿವೇಷದಿ–ಹೆಂಗಸಿನ ವೇಶದಿಂದ ಯುಕ್ತನಾಗಿ, ಹಿಂದೆ–ಪೂರ್ವದಲ್ಲಿ, ಗೌರೀಧವನ–ಪಾರ್ವತೀಪತಿಯಾದ ರುದ್ರದೇವರನ್ನ, ಮೋಹಿಸಿ–ತನ್ನ ಸ್ತ್ರೀರೂಪದಲ್ಲಿ ಮೋಹಯುಕ್ತನ್ನಾಗಿ ಮಾಡಿ, ಕೆಡಿಸಿ–(ರುದ್ರದೇವರಿಗೆ) ವಿಪರೀತ ಜ್ಞಾನಕೊಟ್ಟು, ಉಳಿಸಿದ–ಸಂರಕ್ಷಿಸಿದ, ಇವನ ಮಾಯವ–ಇವನ ಸಾಮರ್ಥ್ಯವನ್ನ, ಗೆಲುವನು–ಜಯಿಸತಕ್ಕವನು, ಆವನು–ದಾರು, ಈ ಜಗತ್ರಯದಿ–ವಿದ್ಯಮಾನವಾದ ಈ ಚತುರ್ದಶಲೋಕಗತ ತ್ರಿವಿಧರೊಳಗೆ, ದಾರೂ ಇಲ್ಲ. ರಮಾದೇವೇರಿಂದಲೂ ಆಗಲಾರದು. ಈ ದಿಕ್ಪ್ರದರ್ಶನದಿಂದ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ದಾರೂನೂ ಇಲ್ಲ ಎಂತ ತಾತ್ಪರ್ಯ.

**ತಾ॥** ಇನ್ನೂ ಪರಮಾತ್ಮ ಎಂಥಾವನೆಂದರೆ ಈ ಚತುರ್ದಶಲೋಕಗಳಲ್ಲಿ ಪವಿತ್ರ ತರವಾದ ಚರಿತ್ರೆಗಳುಳ್ಳ ಜೀವರುಗಳು ಮೋಕ್ಷಕ್ಕಾಗಿ ಸಚ್ಛಾಸ್ತ್ರಗಳ ಪಠಣಮಾಡೋಣದರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವ. ಇಂಥಾ ಸುಜೀವರ ಸ್ಥಾನಕ್ಕೆ ತಿರೋಧಾನಗಳಾದ ಪಾಪಗಳ ನಾಶಮಾಡತಕ್ಕವ. ಬ್ರಹ್ಮಜ್ಞಾನಿಗಳಿಂದ ಸ್ತುತ್ಯನಾದವ. ನೈದಿಲೆ ಹೂವಿನ ವರ್ಣದಂತೆ ದೇಹಬಣ್ಣವುಳ್ಳವ. ಅತ್ಯಂತ ಪರಾಕ್ರಮಿಯಾದವ. ಇಂಥಾ ಮಹಿಮೆಗಳುಳ್ಳ ಪರಮಾತ್ಮ ಸ್ತ್ರೀರೂಪ ಧರಿಸಿ ಪೂರ್ವದಲ್ಲಿ ಪಾರ್ವತೀಪತಿಯಾದ ರುದ್ರದೇವರನ್ನ ಮೋಹಿತರನ್ನಾಗಿ ಮಾಡಿ ಅಜ್ಞಾನವನ್ನು ಕೊಟ್ಟು ಕೆಡಿಸಿ ಮತ್ತು ಜ್ಞಾನವನ್ನು ಕೊಟ್ಟು ಸಂರಕ್ಷಣೆಮಾಡಿದ್ದಾನೆ. ಇಂಥಾ ಮಹಿಮೆಯುಳ್ಳ ಪರಮಾತ್ಮನ ಸಾಮರ್ಥ್ಯವನ್ನ ಜಯಿಸುವರು ಹದಿನಾಲ್ಕು ಲೋಕಗಳಲ್ಲಿಯೂ ದಾರಾದರೂ ಉಂಟೇ ? ಅಂದರೆ ದಾರೂ ಇಲ್ಲ ಎಂತ ತಾತ್ಪರ್ಯ.

**ಪಾಪಕರ್ಮವ ಸಹಿಸುವರೆ ಲ ।**
**ಕ್ಷ್ಮೀಪತಿಗೆ ಸಮರಾದ ದಿವಿಜರ ।**
**ನೀ ಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ ॥**
**ಗೋಪ ಗುರುವಿನ ಮಡದಿ ಭೃಗು ನಗ ।**
**ಚಾಪ ಮೊದಲಾದವರು ಮಾಡಿದ ಮ ।**
**ಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರಿ ॥ ೧೯ ॥**

ಕರುಣಾಸಮುದ್ರ ಹರಿ–ಭಕ್ತರಲ್ಲಿ ಬಹು ಅಂತಃಕರುಣಮಾಡತಕ್ಕ ಶ್ರೀಪರಮಾತ್ಮ, ಪಾಪಕರ್ಮವ–ತನ್ನ ಭಕ್ತರು ಅವಿದ್ಯಾವಶಾತ್, ಅಸುರಾವೇಶವಶಾತ್ ಮಾಡಿದ ಪಾಪ ಕರ್ಮ ದಾವದದೆ ಅದರನ್ನ, ಸಹಿಸುವರೆ–ದೋಷತ್ವೇನ ಗಣನೆಮಾಡವೆ ಸಹನಮಾಡು ವದರಲ್ಲಿ, ಲಕ್ಷ್ಮೀಪತಿಗೆ–ಬ್ರಹ್ಮಾದಿಗಳಿಗಿಂತಲೂ ಉತ್ತಮಳಾದ ಲಕ್ಷ್ಮೀದೇವೇರಿಗೆ ಪತಿ ಯಾದ ಶ್ರೀನಾರಾಯಣದೇವರಿಗೆ, ಸಮರಾದ ದಿವಿಜರನು–ಸಮಾನರಾದ ದೇವತೆಗಳನ್ನು, ಈ ಪಯೋಜಭವಾಂಡದೊಳು— ಈ–ವಿದ್ಯಮಾನವಾದ, ಪಯೋಜ–ಪದ್ಮನಾಭದೇವರ ನಾಭಿಯಿಂದ ಉತ್ಪನ್ನವಾದ ಲೋಕಾತ್ಮಕಪದ್ಮದಲ್ಲಿ, ಭವ–ಉತ್ಪನ್ನನಾದ ಚತುರ್ಮುಖ ಬ್ರಹ್ಮಾಭಿಮನ್ಯಮಾನವಾದ, ಅಂಡ–ಬ್ರಹ್ಮಾಂಡದೊಳು, ಆವಲ್ಲಿ–ವೇದಶಾಸ್ತ್ರಗಳಲ್ಲಿ ಹೇಳ ತಕ್ಕ, ಭೂತ ಭವಿಷ್ಯದ ಬ್ರಹ್ಮಾಂಡಗಳೊಳು ಹೇಳೋ ವಿಚಾರದಲ್ಲೂ, ದೇವತೆಗಳಲ್ಲೂ, ನಾ ಕಾಣೆ–ನಾನು ಕಾಣಲಿಲ್ಲ (ಇನ್ನು ಅನ್ಯರೂ ದಾರೂ ಕಾಣಲಿಲ್ಲ ಎಂಬುವದೇ ಸಿದ್ಧವು), ಗೋಪ–ಗೋ–ಕಿರಣಗಳಿಂದ, ಪ–ಪಾಲನೆಮಾಡತಕ್ಕ ಚಂದ್ರ (ತನ್ನ ಕಿರಣಗಳಿಂದ ಸಸ್ಯಾದಿಗಳ ಪಾಲನೆಮಾಡತಕ್ಕವ ಚಂದ್ರ), ಗುರುವಿನ ಮಡದಿ–ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರಾದೇವಿ, ಭೃಗು–ಭೃಗುಋಷಿಗಳು, ನಗಚಾಪ–ತ್ರಿಪುರಾಸುರನ ಸಂಹಾರ ಕಾಲಕ್ಕೆ ಮೇರುಪರ್ವತಾಭಿಮಾನಿಯಾದ ನಗಸಾಂಕೇತನಾದ ದೇವತೆಯೇ ಚಾಪವಾಗಿ ಉಳ್ಳ ರುದ್ರದೇವರು, ಮೊದಲಾದವರು–ಇವರೇ ಮೊದಲಾದ ಅನೇಕಮಂದಿ, ಮಾಡಿದ– ಮಾಡಿದಂಥಾ, ಮಹಾಪರಾಧಗಳ–ದೊಡ್ಡ ತಪ್ಪುಗಳ, ಎಣಿಸಿದನೆ–ಮಾಡಿದವರೆಂದು ಗಣನೆಮಾಡಲಿಲ್ಲ ಎಂದು ತಾತ್ಪರ್ಯ.

**ತಾ॥** ಈ ಪರಮಾತ್ಮ, ತನ್ನ ಭಕ್ತರು, ಅವಿದ್ಯಾವಶಾತ್, ಅಸುರಾವೇಶದಿಂದ ಪಾಪಕರ್ಮ ಮಾಡಿದರೂ, ದೋಷತ್ವೇನ ಅವುಗಳನ್ನ ಗಣನೆಮಾಡವೆ, ಸಹನಮಾಡುವ. ಯಾಕೆಂದರೆ, ಅಸುರಾವೇಶಾದಿಗಳು ಪರಿಹಾರವಾದ ಉತ್ತರಕ್ಷಣದಲ್ಲಿ, ಅನುಸಂಧಾನ ಪೂರ್ವಕ, ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾದಿಂದ ಆದದ್ದೆಂದು ತಿಳಿದು ದೇವರನ್ನ ಪ್ರಾರ್ಥಿಸೋಣದರಿಂದ ಸಹನಮಾಡತಾನೆ. ಇಂಥಾ ಸಹನಶಕ್ತಿಯುಳ್ಳ ಸ್ವಾಮಿಸದೃಶ ಈ ಹದಿನಾಲ್ಕು ಲೋಕಗಳಲ್ಲಿ ನಾನೆಲ್ಲೂ ಕಾಣಲಿಲ್ಲ. ಈ ಪ್ರಕಾರ ಯಾರನ್ನಾದರೂ ಸಂರಕ್ಷಣೆ ಮಾಡಿದ್ದಾನೆಯೋ ಎಂದರೆ ಮಾಡಿದ್ದಾನೆ. ಚಂದ್ರನು, ಬೃಹಸ್ಪತ್ಯಾಚಾರ್ಯರ ಹೆಂಡತಿಯಾದ ತಾರಾದೇವಿ, ಭೃಗುಋಷಿ, ರುದ್ರದೇವರು, ಇವರುಗಳು ಮಾಡಿದ

ಮಹಾಪರಾಧಗಳನ್ನು ಕ್ಷಮಿಸಿದ್ದಾನೆ. ಆದ್ದರಿಂದ ಶ್ರೀಮನ್ನಾರಾಯಣಗೆ ಸಮನಾದವರು ಯಾರೂ ಇಲ್ಲದ ಕಾರಣ ಭಕ್ತರಲ್ಲಿ ಬಹು ಕರುಣ ಉಳ್ಳವನು ಎಂತ ತಾತ್ಪರ್ಯ.

**ವಿಶೇಷಾರ್ಥ :—** ದೇವತೆಗಳು ಮಾಡಿದ ಪಾಪಕರ್ಮಗಳನ್ನ ಸಹಿಸುವ ರೀತಿ, ಪರಮಾತ್ಮ ದೈತ್ಯರು ಮಾಡಿದ ಪಾಪಕರ್ಮಗಳನ್ನ ಸಹಿಸುವನೇ ಎಂದರೆ ಇಲ್ಲ. ಯಾಕೆಂದರೆ, ದೇವತೆಗಳು ಸ್ವಾಮಿಭೃತ್ಯನ್ಯಾಯದಿಂದ ಶ್ರೀಹರಿಯಲ್ಲಿ ಭಕ್ತಿಮಾಡತಾರೆ. ದೈತ್ಯರು ಆ ಪ್ರಕಾರ ಮಾಡೋದಿಲ್ಲ. ಶಕ್ತಿರಹಿತನಾಗಿ ದೈತ್ಯರ ಪಾಪಕರ್ಮಗಳನ್ನ ಸಹಿಸೋದಿಲ್ಲ ಎಂತ ತಿಳಿಕೋಬಾರದು.

**ಅಂಗುಟಾಗ್ರದಿ ಜನಿಸಿದಮರತ ।**
**ರಂಗಿಣಿಯು ಲೋಕತ್ರಯಗಳಘ ।**
**ಹಿಂಗಿಸುವಳವ್ಯಾಕೃತಾಕಾಶಾಂತ ವ್ಯಾಪಿಸಿದ ॥**
**ಇಂಗಡಲ ಮಗಳೊಡೆಯನಂಗೋ ।**
**ಪಾಂಗಗಳಲಿಪ್ಪಮಲನಂತ ಸು ।**
**ಮಂಗಳಪ್ರದನಾಮ ಪಾವನಮಾಳ್ಪದೇನರಿದು ॥ ೨೦ ॥**

ಅಂಗುಟಾಗ್ರದಿ—ತ್ರಿವಿಕ್ರಮದೇವರ ಎಡಪಾದದ ಅಂಗುಷ್ಠದ ಕೊನೆಭಾಗ ಉಗುರಿನಿಂದ, ಬ್ರಹ್ಮಾಂಡಖರ್ಪರದ ಸೀಳಿಕೆಯಿಂದ, ಜನಿಸಿದ—ಅಷ್ಟಆವರಣಗತವಾದ ಎಂದರೇ ಅಂಡೋಪಾದಾನತತ್ವಗಳು ಶ್ರೀದೇವೇರಲ್ಲಿ ವೀರ್ಯತ್ವೇನ ಇಡೋಕಾಲದಲ್ಲಿ ಉತ್ಪನ್ನವಾದ ಶ್ವೇತರೂಪವಾದ ಜಡೋದಕವು ಆವರಣೋದಕದಲ್ಲಿ ಇಟ್ಟು ಜನಿಸಿದ, ಅಮರತರಂಗಿಣಿಯು—ದೇವತಾನದಿಯು (ಅಂದರೆ ಸತ್ಯಲೋಕ ಆರಂಭಮಾಡಿ, ಭುವರ್ಲೋಕದವರಿಗೂ ಲೋಕಗಳಲ್ಲಿ ವಿದ್ಯಮಾನರಾದ ದೇವತೆಗಳಿಗೆ ಆಯಾ ಲೋಕಗಳಲ್ಲಿ ನಾಮಾಂತರದಿಂದ ಇದ್ದು ಉಪಯೋಗಿಸಲ್ಪಡತಕ್ಕ ನದಿಯು), ಅಂದರೆ ಭಾಗೀರಥೀನದಿಯು, ಲೋಕತ್ರಯಗಳ—ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳಲ್ಲಿ ಸಂಚಾರಮಾಡತಕ್ಕ ಪ್ರಾಣಿಗಳ, ಅಘ ಹಿಂಗಿಸುವಳು—ಅಘ—ಪಾಪಗಳ, ಹಿಂಗಿಸುವಳು—ಶೋಷಣಮಾಡುವಳು. ಅವ್ಯಾಕೃತಾಕಾಶ—ಅಂಡದ ಹೊರಗೆ ಮಹತ್ತತ್ವಕ್ಕೆ ಆಚೇಲಿ ವಿದ್ಯಮಾನವಾದ ರಮಾಭಿಮನ್ಯವಾದ, ಅವ್ಯಾಕೃತಸಾಂಕೇತವಾದ ಆಕಾಶದ, ಅಂತ—ಕೊನಿಭಾಗದಲ್ಲಿ (ಅಂದರೆ ಕೊನಿ ಆವರಣವಾದ ವಾಸುದೇವಾವರಣದಲ್ಲಿ), ವ್ಯಾಪಿಸಿದ—ವ್ಯಾಪ್ತಳಾದ, (ವಿರಜಾಖ್ಯ ಜಲರೂಪದಿಂದ ಇದ್ದು ಮುಕ್ತಿಯೋಗ್ಯರಿಗೆ ಲಿಂಗಭಂಗಕ್ಕೆ ಕಾರಣಳಾದ), ಇಂಗಡಲ—ಸಮುದ್ರರಾಜನಾದ ವರುಣದೇವರ, ಮಗಳ—ಮಗಳಾದ ಲಕ್ಷ್ಮೀದೇವಿಯ, ಒಡೆಯನ—ಪತಿಯಾದ ಶ್ರೀ ನಾರಾಯಣದೇವರ, ಅಂಗೋಪಾಂಗಗಳಲಿಪ್ಪ—ದೇಹದಲ್ಲಿ ಮತ್ತು ಕರಚರಣಾದಿ ಏಕಾದಶೇಂದ್ರಿಯಗಳಲ್ಲಿರತಕ್ಕ ನಿಯಾಮಕನಾದ ಪರಮಾತ್ಮನ, ಅಮಲ—ಪಾರತಂತ್ರ್ಯಾದಿ ದೋಷಗಳಿಂದ ನಿರ್ಮಲನಾದ, ಅನಂತ—ಆದ್ಯಂತಶೂನ್ಯನಾದ,

ಮಹಿಮೋಪೇತನಾದ, ಸುಮಂಗಳಪ್ರದ–ಸು–ಸಜ್ಜನರಿಗೆ, ಮಂಗಳಪ್ರದ–ಮೋಕ್ಷ ಕೊಡೋವನಾದ, ಆ ಪರಮಾತ್ಮನ, ನಾಮ–ಧ್ಯಾನಾನುಸಂಧಾನದಿಂದ, ಉಚ್ಚರಿಸತಕ್ಕ ನಾಮವು, ಪಾವನಮಾಳ್ಪುದು–ಸರ್ವದೋಷಗಳಿಂದ ಪವಿತ್ರರನ್ನಾಗಿ ಮಾಡಿ ಮೋಕ್ಷ ಕೊಡತದೆ ಎಂಬುದು, ಏನರಿದು–ಏನು ಆಶ್ಚರ್ಯವು ? ಆಶ್ಚರ್ಯವೇನೂ ಇಲ್ಲ.

**ತಾ||** ಶ್ರೀ ಪರಮಾತ್ಮನಾದ ತ್ರಿವಿಕ್ರಮದೇವರ ಎಡಪಾದದ ಉಗುರಿನಿಂದ ಜನಿಸಿದ ದೇವತಾನದಿ, ಸತ್ಯಲೋಕ ಆರಂಭಮಾಡಿ, ಭುವರ್ಲೋಕದವರಿಗೂ ಇರುವ ಆಯಾ ಲೋಕಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಸಿಕೊಂಡು ಆಯಾ ಲೋಕಗಳಲ್ಲಿ ವಿದ್ಯಮಾನ ರಾದ ದೇವತೆಗಳನ್ನ ಪವಿತ್ರರನ್ನಾಗಿ ಮಾಡತಾ ಭೂಲೋಕಕ್ಕೆ ಬಂದು ಭಾಗೀರಥೀ ಎಂತ ಹೆಸರುಗೊಂಡು ಹರಿಯುವ ನದೀಗೇ ಮೂರು ಲೋಕಗಳಲ್ಲಿ ಇರುವ ಪ್ರಾಣಿಗಳ ಪಾಪಗಳನ್ನು ನಿಶ್ಶೇಷವಾಗಿ ಶೋಷಣಮಾಡತಕ್ಕ ಸಾಮರ್ಥ್ಯವು ಇರಲಾಗಿ, ಅಂಡದ ಹೊರಗೆ ಮಹತ್ತತ್ವಕ್ಕೆಆಚೇಲಿ ವಿದ್ಯಮಾನವಾದ ರಮಾಭಿಮನ್ಯಮಾನವಾದ 'ಅವ್ಯಾಕೃತ' ಸಾಂಕೇತವಾದ ಆಕಾಶದ ಕೊನಿ ಆವರಣವಾದ ವಾಸುದೇವಾವರಣದಲ್ಲಿ ವ್ಯಾಪ್ತಳಾದ ವಿರಜಾಖ್ಯಳಾದ ಮುಕ್ತಿಯೋಗ್ಯರಿಗೆ, ಲಿಂಗಭಂಗಕ್ಕೆ ಕಾರಣಳಾದ ವೈಕುಂಠಾದಿ ಲೋಕ ತ್ರಯದಲ್ಲಿ ಉದಕರೂಪದಿಂದ ವಿದ್ಯಮಾನಳಾದ ಸಮುದ್ರರಾಜನಾದ ವರುಣದೇವರ ಮಗಳಾದ ಲಕ್ಷ್ಮೀದೇವೇರ ಪತಿಯಾದ ಕರಚರಣಾದಿ ಏಕಾದಶೇಂದ್ರಿಯಗಳಿಗೆ ನಿಯಾಮಕ ನಾದ, ಪಾರತಂತ್ರ್ಯಾದಿ ದೋಷಗಳಿಂದ ನಿರ್ಮಲನಾದ, ಆದ್ಯಂತಶೂನ್ಯನಾದ, ಮಹಿಮೋಪೇತನಾದ, ಸಜ್ಜನರಿಗೆ ಮೋಕ್ಷಕೊಡೋವನಾದ ಆ ಪರಮಾತ್ಮನ ಧ್ಯಾನಾನು ಸಂಧಾನದಿಂದ ಉಚ್ಚರಿಸತಕ್ಕ ನಾಮವು ಸರ್ವದೋಷಗಳಿಂದ ಪವಿತ್ರರನ್ನ ಮಾಡಿ, ಮೋಕ್ಷಕೊಡತದೆ ಎಂಬುದು ಏನೂ ಆಶ್ಚರ್ಯವಲ್ಲ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಅಮರತರಂಗಿಣೀ ಎಂದರೇ ದೇವನದಿ. ಯಾಕೆ ಈ ನಾಮಧೇಯ ಬಂತು ಎಂದರೆ ಮಹರಾದಿ ಲೋಕಗಳಲ್ಲಿ ಪ್ರತ್ಯೇಕ ಪ್ರತ್ಯೇಕ ನಾಮಗಳಿಂದ ಪ್ರವಹಿಸಿ ಭೂಲೋಕಕ್ಕೆ ಬಂದ ಕಾರಣ ಈ ನಾಮಧೇಯ ಬಂತು. ಇಂಥಾ ಅಮರತರಂಗಿಣೀ, ಸಾಂಕೇತವಾದ ನದಿ ಭಗೀರಥನ ದೆಶೆಯಿಂದ ಭಾಗೀರಥೀ ಎಂತ ಭೂಲೋಕಕ್ಕೆ ಬಂದಳು. ಮತ್ತು ಪಾಪಪುಣ್ಯಲೇಪವಾಗತಕ್ಕದ್ದು ಭೂಲೋಕವು. ಸ್ವರ್ಗಾದಿ ಲೋಕದಿಂದ ಭೂಲೋಕಕ್ಕೆ ಪುನಶ್ಚ ಬರೋಣ ಎಂಬುದು ಪಾಪವಿಶೇಷವೇ. ತದನ್ಯಲೋಕಗಳು ಪುನರಾವರ್ತಿಲೋಕಗಳಲ್ಲ. ಅತ ಏವ ಲೋಕತ್ರಯ ಗ್ರಾಹ್ಯ. ಪಾಪಪುಣ್ಯಗಳಿಂದ ಲೋಕತ್ರಯ ಸಂಚಾರ ಉಳ್ಳ ಭಗವದ್ಭಕ್ತರ ಜ್ಞಾನಕ್ಕೆ ಪ್ರತಿಬಂಧಕವಾದ ಪಾಪಗಳ ಇತರ ನದಿಗಳ ವಿವಕ್ಷಯಾ ಅತಿಶಯವಾಗಿ ಶೋಷಿಸತಕ್ಕವಳು. ಎಂದರೇ ಕೆಲವು ಪಾಪಗಳ ನಾಶಮಾಡತಕ್ಕವಳು. ಭಗವಂತನ ಅಂಗುಷ್ಠ ಸೋಕಿದ ಭಾಗೀರಥಿಗೇ ಇಂಥಾ ಸಾಮರ್ಥ್ಯ ಇದ್ದ ಮ್ಯಾಲೆ ಭಾಗೀರಥಿಯ ಒಡೆಯ ಪರಮಾತ್ಮಗೆ ಎಷ್ಟು ಸಾಮರ್ಥ್ಯವಿರ ಬೇಕು ? ಎಂತ ಭಾವ.

**ಕಾಮಧೇನು ಸುಕಲ್ಪತರು ಚಿಂ ।**
**ತಾಮಣಿಗಳಮರೇಂದ್ರಲೋಕದಿ ।**
**ಕಾಮಿತಾರ್ಥಗಳೀವವಲ್ಲದೆ ಸೇವೆ ಮಾಳ್ಪರಿಗೆ ॥**
**ಶ್ರೀಮುಕುಂದನ ಪರಮಮಂಗಳ ।**
**ನಾಮ ನರಕಸ್ಥರನು ಸಲಹಿತು ।**
**ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ॥ ೨೧ ॥**

ಕಾಮಧೇನು ಸುಕಲ್ಪತರು ಚಿಂತಾಮಣಿಗಳು — ಕಾಮಧೇನು – ಬೇಡಿದ ಇಷ್ಟಗಳ ಪೂರ್ತಿಮಾಡತಕ್ಕ ಗೋವು ದಾವುದೋ ಅದೇ ಕಾಮಧೇನು, ಸುಕಲ್ಪತರು – ಸಮಿಾಚೀನವಾದ ಇಷ್ಟಾರ್ಥಗಳ ಕಲ್ಪನಾ ಮಾಡಿಕೊಡತಕ್ಕ ವೃಕ್ಷ ದಾವುದೋ ಅದೇ ಕಲ್ಪವೃಕ್ಷ, ಅಂದರೆ ಕಲ್ಪತರು, ಚಿಂತಾಮಣಿ – ಚಿಂತಿಸಿದ್ದು ಕೊಡತಕ್ಕ ತೇಜೋಬಾಹುಳ್ಯ ಶಿಲಾ ದಾವದದೋ ಅದೇ ಚಿಂತಾಮಣಿ, (ಒಂದೇ ಸರ್ವಸ್ವವೂ ಕೊಡೋದಿಲ್ಲ. ಅದದು ಕೊಡತಕ್ಕ ಫಲಗಳು ಬ್ಯಾರೆ ಬ್ಯಾರೆ, ಆದ್ದರಿಂದ ಮೂರು ಪ್ರಕಾರ ಇರೋದಾಗಿ ಅದೆ. ಇವು ಮೂರು ಎಲ್ಲಿ ಅದೆ ಎಂದರೆ, ಅಮರೇಂದ್ರ ಲೋಕದಿ–ಸೂರ್ಯಾದಿ ದೇವತೆಗಳಕಿಂತಲೂ ಶ್ರೇಷ್ಠವಾದ ಇಂದ್ರದೇವರ ಲೋಕ ಸ್ವರ್ಗ ಲೋಕದಲ್ಲಿದ್ದು, ಸೇವೆಮಾಳ್ಪರಿಗೆ–ಸೇವಾದಿಗಳು ಮಾಡತಕ್ಕವರಿಗೆ, ಕಾಮಿತಾರ್ಥಗಳ– ಅಪೇಕ್ಷಿತಗಳಾದ, ನಶ್ವರಗಳಾದ, ಪ್ರಯೋಜನಗಳ ಅಥವಾ ಸುಖಗಳ, ಈವುವಲ್ಲದೆ– ಕೊಡುವುದಲ್ಲದೆ, ಇನ್ನು ಮತ್ತೊಂದು ಕೊಡಲಾರವು. (ಅದದು ಕೊಡಬೇಕಾದ್ದು ದಾವುದಿದೆ ಅದದು ಅದದನ್ನೇ ಕೊಡತದೆ. ಶಾಶ್ವತ ಸ್ವರ್ಗಸುಖ ಬೇಕೆಂದರೂ ಇಂದ್ರ ನಾಗಬೇಕೆಂದರೂ ನರಕಾದಿಗಳು ಇಲ್ಲದಿರಬೇಕೆಂದರೂ ಬಿಂಬಾಪರೋಕ್ಷವಾಗಬೇಕೆಂದರೂ ಇತ್ಯಾದಿ ಕಾಮನಾಪೂರ್ತಿ ಮಾಡೋ ಯೋಗ್ಯತಾ ಇಲ್ಲ. (ಈ ಫಲಗಳು ಕೊಡೋಣ ಎಂಬುದು ಅಧಿಷ್ಠಾನದ ಯೋಗ್ಯತಾನುಸಾರ ಹರಿ ಕೊಡತಕ್ಕದ್ದೇವೆ.) ಶ್ರೀಮುಕುಂದನ– ಮೋಕ್ಷಪ್ರದನಾದ ಶ್ರೀನಾರಾಯಣದೇವರ, ಪರಮ–ಅತ್ಯುತ್ತಮವಾದ, ಮಂಗಳನಾಮ– ಶುಭಕರಗಳಾದ ಭಗವನ್ನಾಮಗಳು, ನರಕಸ್ಥರನ–ನರಕಾನುಭೋಗಮಾಡತಾ ಅಲ್ಲಿರ ತಕ್ಕವರನ್ನ, ಸಲಹಿತು–ನರಕದಿಂದ ದೂರಮಾಡಿ, ಸ್ವರ್ಗಲೋಕ ಸೇರಿಸಿ ಸುಖಪಡಿಸಿತು. ಪಾಮರರ–ವಿಷಯಾಸಕ್ತರಾದ ಸಾಧಾರಣ ಜನರನ್ನ, ಪಂಡಿತರೆನಿಸಿ–ಮಹಾಜ್ಞಾನವಂತ ರನ್ನಾಗಿಯೂ, ಮಹಾವೇದಶಾಸ್ತ್ರಗಳ ತಿಳಿದವರೆಂತಲೂ ಎಣಿಸಿ, ಪುರುಷಾರ್ಥ–ಧರ್ಮ, ಅರ್ಥ, ಕಾಮ ಈ ಮೂರು ವಿಧಗಳಾದ ಪ್ರಯೋಜನಗಳನ್ನ, ಕೊಡುತಿಹುದು–ಕೊಡೋ ದಾಗತದೆ. (ಅನಂತಕಾಲದಲ್ಲಿ, ಅನಂತ ಬ್ರಹ್ಮಾಂಡದಲ್ಲಿ ಸೃಷ್ಟಿಗೆ ಬರುವ ಭಕ್ತಜೀವರಿಗೂ ಕೊಡತಾ ಇರತದೆ. ಭಗವನ್ನಾಮ ಏತಾದೃಶವಾದದ್ದು ಎಂತ ತಾತ್ಪರ್ಯ.

**ತಾ॥** ಕಾಮಧೇನು, ಕಲ್ಪತರು, ಚಿಂತಾಮಣಿ ಈ ಮೂರೂ ಇಂದ್ರಲೋಕ, ಸ್ವರ್ಗಲೋಕಗಳಲ್ಲಿದ್ದು, ತಮ್ಮಗಳನ್ನ ಸೇವೆಮಾಳ್ಪರಿಗೆ ನಶ್ವರವಾದ ಇಷ್ಟಾರ್ಥಗಳು

ಶಕ್ತ್ಯನುಸಾರ ಕೊಡತಕ್ಕ ಸಾಮರ್ಥ್ಯ ಉಳ್ಳವ್ಟೇ ಹೊರತು, ಶಾಶ್ವತವಾದ ಸ್ವರ್ಗಲೋಕ, ಮೋಕ್ಷ, ಬಿಂಬಾಪರೋಕ್ಷ ಇವು ಮೊದಲಾದವುಗಳನ್ನ ಕೊಡತಕ್ಕವಲ್ಲ. ಆದರೆ ಮೋಕ್ಷಪ್ರದವಾದ ಶ್ರೀಮನ್ನಾರಾಯಣದೇವರ ಶುಭಕರಗಳಾದ ನಾಮಗಳು ಉಚ್ಚಾರಣ ಮಾತ್ರದಿಂದ ಘೋರವಾದ ನರಕದಲ್ಲಿ ಬಿದ್ದಂತಹ ಜೀವರುಗಳನ್ನ ಪಾಪಗಳಿಂದ ಮುಕ್ತ ರನ್ನಾಗಿ ಮಾಡಿ ಮೋಕ್ಷದಲ್ಲಿಟ್ಟಿತು. ಇನ್ನು ವಿಷಯಾಸಕ್ತರಾದ ಸಾಧಾರಣ ಜೀವರು ಗಳನ್ನ ಮಹಾಜ್ಞಾನವಂತರನ್ನಾಗಿ ಮಾಡಿ, ಧರ್ಮಾರ್ಥಕಾಮಗಳನ್ನ ಕೊಟ್ಟು ಸಂರಕ್ಷಣೆ ಮಾಡುವುದು. ಅನಂತಾನಂತಕಾಲಗಳಲ್ಲಿ ಬ್ರಹ್ಮಾಂಡದಲ್ಲಿ ಸೃಷ್ಟಿಗೆ ಬರತಕ್ಕ ಭಕ್ತಜನ ರಿಗೂ ಪುರುಷಾರ್ಥಗಳನ್ನು ಕೊಡತಾ ಇರತದೆ. ಭಗವನ್ನಾಮೋಚ್ಚಾರಣೆ ಏತಾದೃಶ ವಾದದ್ದು ಎಂತ ತಾತ್ಪರ್ಯ.

**ವಿಶೇಷಾರ್ಥ :**— ಮಂಗಳನಾಮವು ನರಕಸ್ಥರನ್ನ ಸಲಹಿತು. ಇದರ ಪ್ರಮೇಯ ಏನೆಂದರೆ, ನಾರದರು ನರಕಗಳ ನೋಡೋದಕ್ಕೆ ಹೋದ ಕಾಲದಲ್ಲಿ, ಆ ನರಕಗತ ಜನರುಗಳ ಕಷ್ಟದುಃಖಗಳ ನೋಡಲಾರದೇ ದಯಾಳುಗಳಾಗಿ ನಾರಾಯಣಶಬ್ದ ಗಾನ ಮಾಡಲು, " ತಚ್ಛ್ರುತ್ವಾ ನರಕಸ್ಥಾಃ ತೇ ಹರೇರ್ನಾಮಾಮೃತಂ ಶುಭಂ । ಮುಕ್ತಾಸ್ತು ಯಾತನಾಸ್ಥಾನಾತ್ ಮೃತ್ಯುಪಾಶಾಚ್ಚ ಸರ್ವಶಃ ॥ ತತ್ಕ್ಷಣಾತ್ಸ್ವಪ್ರಕಾರೂಢಾಃ ದಿವ್ಯ ರೂಪಧರಾಭವನ್ । ದಿವಂ ಜಗ್ಮುಃ ಪ್ರಾಂಜಲಯಃ ಸ್ತುವಂತೋ ನಾರದಂ ಮುನಿಂ ॥ " ಎಂತ ಪ್ರಮಾಣಗಳು ಇರುವುದರಿಂದಲೂ ಈ ಪ್ರಕಾರ ಭಕ್ತರನ್ನ ಉದ್ಧಾರಮಾಡಿತು. ಆದರೆ ದೈತ್ಯರಿಗೆ ಶ್ರವಣವಾಗಿ ಅವರಿಗೆ ಆ ನಾಮದಲ್ಲಿ ದ್ವೇಷ ಅಧಿಕವಾಗಿ ನರಕದಲ್ಲೇ ಉಳಿದರು. ಈ ಪ್ರಕಾರ ಭಗವನ್ನಾಮಮಾಹಾತ್ಮ್ಯವೆಂತ ತಿಳಕೊಂಡು ಸದಾ ಭಗವದ್ಧ್ಯಾನಮಾಡಬೇಕು.

**ಮನದೊಳಗೆ ಸುಂದರ ಪದಾರ್ಥವ ।**
**ನೆನೆದು ಕೊಡೆ ಕೈಕೊಂಡು ಬಲುನೂ ।**
**ತನ ಸುಶೋಭಿತಗಂಧಸುರಸೋಪೇತ ಫಲರಾಶಿ ॥**
**ದ್ಯುನದಿನಿವಹಗಳಂತೆ ಕೊಟ್ಟವ ।**
**ರನು ಸದಾ ಸಂತೈಸುವನು ಸ ।**
**ದ್ಗುಣವ ಕದ್ದವರಘುವ ಕದಿವನು ಅನಘನೆಂದೆನಿಸಿ ॥ ೨೨ ॥**

ಮನದೊಳಗೆ—ತನ್ನ ಮನಸ್ಸಿನಲ್ಲಿ, ಸುಂದರ—ಮನೋಹರವಾದ, ಸುಲಕ್ಷಣವಾದ, ಶ್ರೀಪರಮಾತ್ಮನ ರೂಪ ನಿಲ್ಲಿಸಿ, ಪದಾರ್ಥವ—ಪೂಜೋಪಯೋಗ್ಯವಾದ ಪದಾರ್ಥಗಳ, ನೆನೆದು ಕೊಡೆ—ಮನಸಾ ನಿರ್ಮಾಣಮಾಡಿಕೊಟ್ಟರೆ, ಎಂದರೆ, ಜಡಪದಾರ್ಥಗಳು ಶ್ರೀಪರ ಮಾತ್ಮಗೆ ಅಶುಭವಾದ್ದರಿಂದ, ಪ್ರತಿಮಾಕಾರನಾದ ಶ್ರೀಪರಮಾತ್ಮನು ಪೂಜಾಸಾಧನಗಳಲ್ಲಿ

ತದ್ವಾಚ್ಯ, ತದಾಕಾರನಾಗಿ ಇದ್ದಾನಾದ್ದರಿಂದ ಪರಮಾತ್ಮಗೆ ಪರಮಾತ್ಮನಿಂದಲೇ ಪೂಜಾತ್ವೇವ ಅನುಸಂಧಾನಮಾಡಿಕೊಟ್ಟರೆ, ಕೈಕೊಂಡು–ಸ್ವೀಕಾರಮಾಡಿ, ಇನ್ನೂ, ಬಲುನೂತನ–ಇದುವರೆಗೂ ಎಂದೂ ಭೋಗಮಾಡದಂಥಾ ನೂತನವಾದ, ಸುಶೋಭಿತ–ಛಂದಾಗಿ ಶೋಭಾಯಮಾನವಾದ, ಗಂಧ–ದಿವ್ಯಸುವಾಸನೆಯುಕ್ತವಾದ, ಸುರಸೋಪೇತ–ಸಮೀಚೀನವಾದ ಶ್ರೀಪರಮಾತ್ಮನ ಸ್ವಾಖ್ಯರಸದಿಂದ ಯುಕ್ತವಾದ, ಫಲರಾಶಿ–ಫಲ ಸಮೂಹಗಳನ್ನ, ದ್ಯುನದಿನಿವಹಗಳಂತೆ–ದ್ಯುನದಿ–ಭಾಗೀರಥಿ ಉದಕವೇ ತರಂಗತ್ವೇನ ಪರಿಣಾಮವನ್ನು ಹೊಂದಿದೆ. ತರಂಗಕ್ಕೂ ಉದಕಕ್ಕೂ ಅಭೇದವದೆ. ತದ್ವತ್, ಶ್ರೀ ಪರಮಾತ್ಮನ ರೂಪಕ್ಕೂ ಪದಾರ್ಥಾಂತರ್ಗತ ರೂಪಕ್ಕೂ ಐಕ್ಯಚಿಂತನಾರೂಪದಿಂದ, ಕೊಟ್ಟವರನು–ಕೊಟ್ಟಂಥಾ ಭಕ್ತರನ್ನ, ಸದಾ ಸಂತೈಸುವನು–ನಿರಂತರದಲ್ಲೂ ಕಾಪಾಡುವನು, ಸದ್ಗುಣವ–ಪರಮಾತ್ಮನಾದ ತನ್ನಲ್ಲಿರುವ ಗುಣಪೂರ್ಣತ್ವ, ನಿರ್ದೋಷತ್ವ, ಸರ್ವಸ್ವತಂತ್ರತ್ವ ಇತ್ಯಾದಿ ಸಮೀಚೀನವಾದ ಗುಣಗಳ, ಕದ್ದವರ–ಚೌರ್ಯಮಾಡಿದವರ (ಎಂದರೇ ಆ ಗುಣಗಳ ಉಪಾಸನಕ್ಕಾಗಿ ಹೃದಯಾಖ್ಯಮಂದಿರದಲ್ಲಿ ಭದ್ರಮಾಡಿ ಸದಾ ಸ್ಮರಣೆಮಾಡತಾ ಇರತಕ್ಕ ತನ್ನ ಭಕ್ತರ), ಅಘವ–ಈ ಭಕ್ತರು ಕರ್ಮವಶಾತ್ತಾಗಿ ಮಾಡುವ ದುರ್ವ್ಯಾಪಾರರೂಪವಾದ ಪಾಪಗಳ, ತಾನು, ಕದಿವನು-ಕದ್ದುಕೊಂಡು ಹೋಗತಾನೆ. (ಎಂದರೆ ಅವರಿಗೆ ಅಹಂಮಮತಾದಿಗಳ ಬಿಡಿಸಿ, ದಿವ್ಯಜ್ಞಾನವನ್ನ ಕೊಡತಾನೆ.) ಹೀಗೆ ಮಾಡೋದರಿಂದ ಶ್ರೀಪರಮಾತ್ಮನು, ಅನಘನೆಂದೆನಿಸಿ–ತಾನು ಭಕ್ತರಿಂದ ನಿರ್ದೋಷಿ ಎಂತ ಕರೆಸಿಕೊಳ್ಳಲ್ಪಡತಾನೆ, ಎಂತ ತಾತ್ಪರ್ಯ.

**ತಾ||** ಮನಸ್ಸಿನಲ್ಲಿ ಸುಲಕ್ಷಣವಾದ ಶ್ರೀ ಪರಮಾತ್ಮನ ರೂಪವ ನಿಲ್ಲಿಸಿ ದಿವ್ಯವಾದ ಪೂಜೋಪಯೋಗ್ಯವಾದ ಜಡಪದಾರ್ಥಗಳು ಶ್ರೀ ಪರಮಾತ್ಮಗೆ ಅಶುಭಗಳಾದ್ದರಿಂದ ಪ್ರತಿಮಾಕಾರನಾದ ಪರಮಾತ್ಮನು ಪೂಜಾಸಾಧನದ್ರವ್ಯಗಳಲ್ಲಿ ತದ್ವಾಚ್ಯ ತದಾಕಾರನಾಗಿ ಇದ್ದಾನೆಂದು ಅನುಸಂಧಾನಮಾಡಿಕೊಟ್ಟರೆ (ಪೂಜಾಮಾಡಿದರೆ) ಅವುಗಳನ್ನ ಸ್ವೀಕಾರ ಮಾಡಿ, ಎಂದೂ ಭೋಗಮಾಡದಂಥಾ ನವೀನವಾದ ದಿವ್ಯ ಸುವಾಸನೆಯಿಂದಲೂ, ಪರಮಾತ್ಮನ ಸ್ವಾಖ್ಯರಸದಿಂದಲೂ ಯುಕ್ತವಾದ ಫಲಸಮೂಹಗಳನ್ನು ಉದಕಕ್ಕೂ ಅಲೆಗಳಿಗೂ ಹ್ಯಾಂಗೆ ಅಭೇದವೋ, ಹಾಂಗೆ ಪರಮಾತ್ಮನ ರೂಪಕ್ಕೂ ಪದಾರ್ಥಾಂತರ್ಗತ ರೂಪಕ್ಕೂ ಅಭೇದ ಎಂತ ಐಕ್ಯಚಿಂತನಿಯಿಂದ ಕೊಟ್ಟಂಥಾ ಭಕ್ತರನ್ನ ನಿರಂತರದಲ್ಲೂ ಕಾಪಾಡುವನು. ಪರಮಾತ್ಮ ಗುಣಪೂರ್ಣ, ನಿರ್ದೋಷಿ, ಸರ್ವಸ್ವತಂತ್ರ ಎಂಬ ಈ ಗುಣಗಳನ್ನ ಸದಾ ಹೃದಯಾಖ್ಯಮಂದಿರದಲ್ಲಿಟ್ಟುಕೊಂಡು ಸ್ಮರಣೆಮಾಡತಕ್ಕ ಭಕ್ತರು ಕರ್ಮವಶಾತ್ ಮಾಡಿದಂಥಾ ದುರ್ವ್ಯಾಪಾರರೂಪವಾದ ಪಾಪಗಳ, ನಿರ್ದೋಷಿ ಎಂತ ಕರೆಸಿಕೊಳ್ಳುವ ಪರಮಾತ್ಮನಾದ ತಾನು ಕದ್ದುಕೊಂಡು ಹೋಗಿ ಅಹಂಮಮತಾದಿಗಳಿಂದ ಬಿಡಿಸಿ ದಿವ್ಯಜ್ಞಾನವನ್ನು ಕೊಟ್ಟು ಕಾಪಾಡತಾನೆ ಎಂತ ತಾತ್ಪರ್ಯ.

**ಚೇತನಾಚೇತನವಿಲಕ್ಷಣ ।**
**ನೂತನ ಪದಾರ್ಥಗಳೊಳಗೆ ಬಲು ।**
**ನೂತನತಿಸುಂದರಕೆ ಸುಂದರ ರಸಕೆ ರಸರೂಪ ॥**
**ಜಾತರೂಪೋದರ ಭವಾದ್ಯರೊ ।**
**ಳಾತತ ಪ್ರತಿಮಪ್ರಭಾವ ಧ ।**
**ರಾತಳದೊಳಿಮ್ಮೊಡನೆಯಾಡುತಲಿಪ್ಪ ನಮ್ಮಪ್ಪ ॥ ೨೩ ॥**

ನಮ್ಮಪ್ಪ–ಪ್ರಾಣಿಗಳಾದ ನಮಗೆ ಸೃಷ್ಟಿಕರ್ತನಾದ್ದರಿಂದ ತಂದೆಯಾದ ಶ್ರೀಪರಮಾತ್ಮ, ಚೇತನ–ಸಂಚಾರಿಗಳಾದ ಜೀವರು, ಅಚೇತನ–ಜಡಜೀವರು ಹಾಗೆ ಶುದ್ಧ ಜಡಗಳು ಎಂಬೋಣದರಿಂದ ಸರ್ವಜಗತ್ತುಗಳು ಒಂದಂತಾಯಿತು. ಇದರಿಂದ, ವಿಲಕ್ಷಣ–ವಿಲಕ್ಷಣನಾಗಿ ಇರತಕ್ಕವ, (ಎಂದರೇ ಪದಾರ್ಥಗಳು, ಜೀವರು ದೋಷಯುಕ್ತರಾದವರು. ಇವರಂತರ್ಗತನಾದ ಶ್ರೀಹರಿ ತಾನು ಸುಲಕ್ಷಣನಾಗಿ ಪೂರ್ಣನಾಗಿ ಇದ್ದಾನೆ.) ಇನ್ನೂ, ನೂತನಪದಾರ್ಥಗಳೊಳಗೆ–ಹೊಸಹೊಸದಾಗಿ ನಿರ್ಮಾಣವಾಗತಕ್ಕ ಅನೇಕ ಪದಾರ್ಥಗಳೊಳಗೆ, ಬಲುನೂತನ–ಅತ್ಯಂತವಾಗಿ ಸರ್ವಶಬ್ದವಾಚ್ಯನಾದ್ದರಿಂದ ನೂತನ ಪದಾರ್ಥಗಳ ಆಕಾರದಿಂದಲೂ, ನಾಮಗಳಿಂದಲೂ ಅಂತರ್ಯಾಮಿಯಾಗಿಯೂ, ಇನ್ನು, ಅತಿಸುಂದರಕೆ–ಅತ್ಯಂತವಾಗಿ ಅದೃಷ್ಟವಾದ ಸುಂದರಪದಾರ್ಥಗಳಲ್ಲಿ ತಾನು ಅಂತರ್ಗತನಾಗಿ, ಸುಂದರ–ಅತಿಸೌಂದರ್ಯಯುಕ್ತರೂಪದಿಂದ, ರಸಕೆ ರಸರೂಪ – ಲವಣಾದಿ ರಸಗಳ ಅಂತರ್ಗತನಾಗಿ, ರಸರೂಪನಾಗಿ, ರಸನಾಮಧೇಯದಿಂದಲೂ ಇರತಾನೆ. ಜಾತರೂಪೋದರ–ಭಂಗಾರದೋಪಾದಿಯಲಿ ಉದರವುಳ್ಳ ಬ್ರಹ್ಮದೇವರು, ಭವ–ರುದ್ರದೇವರು, ಆದ್ಯರೊಳು–ಇವರೇ ಮೊದಲಾದ ಯಾವತ್ತು ದೇವತೆಗಳೊಳು, ಆತತ–ವ್ಯಾಪ್ತನಾಗಿ, ಪ್ರತಿಮ–ಅಧಿಷ್ಠಾನ ಸದೃಶವಾದ ಆಕಾರ ಉಳ್ಳವನು, ಪ್ರಭಾವ–ಹೀಗಿದ್ದ ಕಾಲಕ್ಕೂ ಅಧಿಷ್ಠಾನ ಸದೃಶ ದುರ್ಬಲನಲ್ಲ. ಪೂರ್ಣ ಪ್ರಭಾವ ಉಳ್ಳವನಾಗೇ ಇರುವನು. ಧರಾತಳದೊಳು–ಭೂತಳದಲ್ಲಿ, ಎಮ್ಮೊಡನೆ–ಅವಿಯುಕ್ತನಾಗಿ, ನಮ್ಮ ಸಂಗಡವೇ ದೇಹ ಜೀವಾಂತರ್ಗತನಾಗಿದ್ದು, ಆಡುತಲಿಪ್ಪ–ಇಂದ್ರಿಯ ವ್ಯಾಪಾರ ರೂಪವಾದ ಆಟಗಳ ಆಡುತ್ತ ಬಿಂಬಕ್ರಿಯಾದ್ವಾರಾ ಆಟಗಳ ಆಡಿಸುತ್ತಾ ಇರೋದನಾಗಿದ್ದಾನೆ.

**ತಾ॥** ಸರ್ವ ಜಗತ್ತಿಗೆ ಸೃಷ್ಟಿಕರ್ತನಾದ ಶ್ರೀ ಪರಮಾತ್ಮ, ತಾನು ಸೃಷ್ಟಿಮಾಡಿದ ಜೀವರುಗಳು, ಜಡಪದಾರ್ಥಗಳು, ದೋಷಯುಕ್ತಗಳಾದಾಗ್ಯೂ ತಾನು ಸುಲಕ್ಷಣನಾಗಿಯೂ, ಪೂರ್ಣನಾಗಿಯೂ ಇರತಾನೆ. ಇನ್ನೂ ಹೊಸ ಹೊಸದಾಗಿ ನಿರ್ಮಾಣವಾಗತಕ್ಕ ಪದಾರ್ಥಗಳೊಳಗೆ ಅತ್ಯಂತವಾಗಿ ಸರ್ವಶಬ್ದವಾಚ್ಯನಾದ್ದರಿಂದ ನೂತನ ನಾಮಗಳಿಂದಲೂ, ತತ್ತದಾಕಾರದಿಂದಲೂ ಇರತಾನೆ. ಸುಂದರ ಪದಾರ್ಥಗಳಲ್ಲಿ ಅತ್ಯಂತ ಸುಂದರ ರೂಪದಿಂದಲೂ, ಲವಣಾದಿ ರಸಪದಾರ್ಥಗಳಲ್ಲಿ ರಸರೂಪನಾಗಿಯೂ, ಬ್ರಹ್ಮರುದ್ರಾದಿ ದೇವತೆಗಳೊಳು ವ್ಯಾಪ್ತನಾಗಿಯೂ ಅಧಿಷ್ಠಾನ ಸದೃಶವಾದ ಆಕಾರನಾಗಿರತಾನೆ.

ಹೀಗಿದ್ದಕಾಲಕ್ಕೂ ಪದಾರ್ಥಗಳ ಹಾಗೆ ದುರ್ಬಲನಲ್ಲ. ಪೂರ್ಣ ಪರಾಕ್ರಮ ಉಳ್ಳವನು. ಈ ಜಗತ್ತಿನಲ್ಲಿ, ಸಮಸ್ತ ಜೀವರಲ್ಲಿಯೂ ಅಂತರ್ಗತನಾಗಿದ್ದು ಬಿಂಬ ಕ್ರಿಯಾದ್ವಾರಾ ಇಂದ್ರಿಯ ವ್ಯಾಪಾರಗಳನ್ನ ನಡೆಸತಾ ಆಟಗಳ ಆಡತಾ ಇರತಾನೆ ಎಂತ ತಾತ್ಪರ್ಯ.

**ತಂದೆತಾಯ್ಗಳು ತಮ್ಮ ಶಿಶುವಿಗೆ ।**
**ಬಂದ ಭಯಗಳ ಪರಿಹರಿಸಿ ನಿಜ ।**
**ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ ॥**
**ಹಿಂದೆ ಮುಂದೆಡಬಲದಿ ಒಳ ಹೊರ**
**ಗಿಂದಿರೇಶನು ತನ್ನವರನೆಂ ।**
**ದೆಂದು ಸಲಹುವನಾಗಸದವೋಲೆತ್ತ ನೋಡಿದರು ॥ ೨೪ ॥**

ತಂದೆತಾಯ್ಗಳು–ಜನನೀಜನಕರು, ತಮ್ಮ ಶಿಶುವಿಗೆ–ತಮ್ಮ ಮಗನಾದ ಬಾಲಕನಿಗೆ, ಬಂದ ಭಯಗಳ ಪರಿಹರಿಸಿ–ಗೃಹದ ಹೊರಗೆ ಆಡೋ ಕಾಲವಲ್ಲಿ ಪ್ರಾಪ್ತವಾದ ಭಯಗಳನ್ನು, ನಾನಾ ಪ್ರಕಾರವಾದ ಸಮಾಧಾನದಿಂದಲೂ, ಮಂತ್ರ ತಂತ್ರಗಳಿಂದಲೂ ಪರಿಹಾರ ಮಾಡಿ, ನಿಜಮಂದಿರದಿ–ತಮ್ಮ ಸ್ವಂತ ಮನೆಯಲ್ಲಿಟ್ಟವರಾಗಿ, ಬೇಡಿದುದನು–ದಾವದಾದರೆ ಬೇಡತಾನೋ ಅದರನ್ನ, ಇತ್ತು–ಕೊಟ್ಟು, ಆದರಿಸುವಂದದಲಿ–ಆದರಿಸುವ ರೀತಿಯಲ್ಲಿ, ಹಿಂದೆ–ವರ್ತಮಾನ ಜನ್ಮಕ್ಕೆ ಹಿಂದೆ ಕಳೆದ ಜನ್ಮಗಳಲ್ಲೇನು, ಮುಂದೆ–ಇನ್ನು ಮುಂದೆ ಬರತಕ್ಕ ಜನ್ಮಗಳಲ್ಲೇನು (ಉಪಲಕ್ಷಣಯಾ ವರ್ತಮಾನ ಜನ್ಮಗಳಲ್ಲೇನು), ಎಡಬಲದಿ–ದೇಹದಲ್ಲಿಯ ಎಡಬಲ ಭಾಗಗತ (೩೬೦೦೦) ಮೂವತ್ತಾರು ಸಾವಿರ ದಂಪತಿ ನಾಡಿಗಳಲ್ಲಿ, ತತ್ವೇಶರ ಸಹಿತನಾಗಿ, ಇನ್ನೂ, ಒಳ ಹೊರಗೆ–ಪ್ರಳಯ ಕಾಲದಲ್ಲಿ ಗರ್ಭದಲ್ಲಿರುವಾಗ್ಯೂ, ಸೃಷ್ಟಿಕಾಲದಲ್ಲಿ ಉದರದಿಂದ ಹೊರಗೆ ಬಂದ ಕಾಲದಲ್ಲೂ, ಇಂದಿರೇಶನು–ಲಕ್ಷ್ಮೀಪತಿಯಾದ, ಶ್ರೀ ನಾರಾಯಣ ದೇವರು, ತನ್ನವರ–ತನ್ನ ಭಕ್ತರ, ಎಂದೆಂದು–ಎಲ್ಲೆಲ್ಲಿ ಜನಿಸಿ ಎಲ್ಲೆಲ್ಲಿ ಇದ್ದ ಕಾಲಕ್ಕೂ (ಯಾವಾಗ್ಯೂ), ಸಲಹುವನು–ಸಂರಕ್ಷಣೆ ಮಾಡುವನು. ಆಗಸದವೋಲ್–ಆಕಾಶದೋಪಾದಿಯಲಿ, ಎತ್ತ ನೋಡಿದರೂ–ಎಲ್ಲಿ ನೋಡಿದ ಕಾಲಕ್ಕೂ ವ್ಯಾಪ್ತನಾಗಿದ್ದು, ಭಕ್ತರನ್ನ ರಕ್ಷಿಸತಾನೆ.

**ತಾ॥** ತಂದೆ ತಾಯಿಗಳು, ತಮ್ಮ ಮಕ್ಕಳು ಹೊರಗೆ ಆಡಿಕೊಂಬೋ ಕಾಲದಲ್ಲಿ, ದುಷ್ಟಗ್ರಹ ಸೋಕಿ ಅಂಜಿದರೆ, ಮನೆಗೆ ಕರೆತಂದು, ಭಯಪರಿಹಾರಾರ್ಥವಾಗಿ ಮಂತ್ರ ತಂತ್ರಗಳಿಂದ ಉಪಚರಿಸಿ, ಸ್ವಗೃಹವನ್ನು ಬಿಟ್ಟು ಹೋಗದೇ ಇರತಕ್ಕ ಮಾರ್ಗವನ್ನು ಹ್ಯಾಂಗೆ ಕಲ್ಪಿಸುತ್ತಾರೋ ತದ್ವತ್ ಶ್ರೀ ಪರಮಾತ್ಮ ತನ್ನ ಭಕ್ತರನ್ನ ಸರ್ವಕಾಲದಲ್ಲಿಯೂ, ಸರ್ವ ದೇಶದಲ್ಲಿಯೂ ಸಂರಕ್ಷಣೆ ಮಾಡುವನು ಎಂತ ತಾತ್ಪರ್ಯ.

**ವಿಶೇಷಾರ್ಥ :**— ಭಕ್ತರಿಗೆ ಆಟ ಆಡೋ ಸ್ಥಳ ದಾವದು. ದುಷ್ಟ ಗ್ರಹಗಳು ದಾವದು. ಭಯ ದಾವದು. ನಿಜಮಂದಿರ ದಾವದು. ಮಂತ್ರ ತಂತ್ರಗಳು ದಾವದು ಎಂದರೇ,

೧. ಅಸೃಜ್ಯ ರಾಶಿಯಿಂದ ಸೃಷ್ಟಿಗೆ ಬರುವ ಪ್ರವೇಶವೇ ಆಡೋಂಥಾ ಸ್ಥಳ.

೨. ದುಷ್ಟ ಸಹವಾಸ ದಾವುದು ಎಂದರೆ ಲಿಂಗದೇಹ.

೩. ದುಷ್ಟ ಗ್ರಹಗಳು ದಾವದೆಂದರೆ ಅಹಂಮಮತಾದಿಗಳು.

೪. ಭಯ ದಾವುದೆಂದರೆ, ಅಹಂಮಮತಾದಿಗಳಿಂದ ಜನ್ಯವಾಗುವ ಪಾಪ ಕರ್ಮಗಳ ಮಾಡುವುದಕ್ಕೆ ಭಯಪಡೋಣ.

೫. ಮಂತ್ರ ತಂತ್ರಗಳು ದಾವುದು ಎಂದರೇ, ಜ್ಞಾನ, ಭಕ್ತಿ, ವೈರಾಗ್ಯ ಹುಟ್ಟಿಸೋಣವೇ.

೬. ನಿಜಮಂದಿರ ದಾವದೆಂದರೆ, ವೈಕುಂಠ.

ಈ ಪ್ರಕಾರ ಅಸೃಜ್ಯರಾಶಿಯಿಂದ ಸೃಷ್ಟಿಗೆ ಬಂದ ಕೂಡಲೇ ದುಷ್ಟ ಗ್ರಹಗಳಾದ, ಅಹಂಮಮತಾದಿಗಳು ಸೋಕಿ, ಅವುಗಳಿಂದ ಜನ್ಯವಾಗುವ ಪಾಪ ಕರ್ಮಗಳ ಮಾಡಿ ಭಯಪಟ್ಟ ತನ್ನ ಪುತ್ರರಾದ ಭಕ್ತರಿಗೆ, ಜ್ಞಾನ, ಭಕ್ತಿ, ವೈರಾಗ್ಯಗಳೆಂಬ ಮಂತ್ರಗಳನ್ನು ಅವರ ದೇಹದಲ್ಲಿ ಪ್ರವೇಶ ಮಾಡಿಸಿ, ಆ ಭಯವನ್ನು ಬಿಡಿಸಿ, ಬಹಿಃಸಂಚಾರ ಮಾಡುವುದಕ್ಕೆ ಕಾರಣವಾದ ಲಿಂಗದೇಹಾಖ್ಯ ದುಷ್ಟ ಸ್ನೇಹಿತನ್ನ ಬಿಡಿಸಿ ನಿಜಮಂದಿರವಾದ ವೈಕುಂಠ ಲೋಕಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಇಟ್ಟು ಸ್ವರೂಪ ಯೋಗ್ಯತಾನುಸಾರ ಬೇಡಿದ್ದಕ್ಕೆ ಭಂಗಬಾರದಂತೆ ಫಲಾನುಭವ ಕೊಟ್ಟು ಸಂರಕ್ಷಣೆ ಮಾಡುವನು.

**ಒಡಲ ನೆಳಲಂದದಲಿ ಹರಿ ನ ।**
**ಮ್ಮೊಡನೆ ತಿರುಗುವ ಒಂದರಕ್ಷಣ ।**
**ಬಿಡದೆ ಬೆಂಬಲನಾಗಿ ಭಕ್ತಾಧೀನನೆಂದೆನಿಸಿ ॥**
**ತಡೆವ ದುರಿತೌಘಗಳ ಕಾಮದ ।**
**ಕೊಡುವ ಸಕಲೇಷ್ಟಗಳ ಸಂತತ ।**
**ನಡೆವ ನಮ್ಮಂದದಲಿ ನವಸುವಿಶೇಷ ಸನ್ಮಹಿಮ ॥ ೨೫ ॥**

ಒಡಲ ನೆಳಲಂದದಲಿ—ನಮ್ಮ ದೇಹದ ನೆರಳು ನಮ್ಮನ್ನ ಬಿಡದೆ ಹ್ಯಾಂಗಿರತದೋ, ಹಾಂಗೆ, ಹರಿ—ಬಿಂಬರೂಪಿಯಾದ ಶ್ರೀ ಪರಮಾತ್ಮ, ನಮ್ಮೊಡನೆ—ನಮ್ಮ ಸಂಗಾತಲೇ, ತಿರುಗುವನು—ಸಂಚಾರ ಮಾಡುವನು, ಒಂದರಕ್ಷಣ ಬಿಡದೆ—ಒಂದು ಲವ ಕಾಲವಾದರೂ ಬಿಡದೆ, ಬೆಂಬಲನಾಗಿ—ಬೆಂಬಲನಾಗಿರತಾನೆ. ಭಕ್ತಾಧೀನನೆಂದೆನಿಸಿ—ಭಕ್ತರ ಅಧೀನ

ಎಂತ ಎಣಿಸಿ, ದುರಿತೌಘಗಳ_ದುರಿತ_ಭಕ್ತರ ಸತ್ಸಾಧನಿಗೆ ಪ್ರತಿಬಂಧಕವಾದ, ದುಷ್ಟವಾದ, ಓಘಗಳ_ಪಾಪಕರ್ಮ ಸಮೂಹಗಳನ್ನ , ತಡೆವ_ತಡೆಮಾಡುವ, ಕಾಮದ_ಭಕ್ತರ ಇಷ್ಟಗಳ ಪೂರ್ತಿ ಮಾಡತಕ್ಕ ಶ್ರೀ ಪರಮಾತ್ಮ , ಸಂತತ_ಸರ್ವ ಕಾಲದಲ್ಲೂ, ಸಕಲೇಷ್ಟಗಳ – ಸಕಲ ಇಷ್ಟಗಳ, ಕೊಡುವ_ಕೊಡುವನು. ನಮ್ಮಂದದಲಿ – ನಮ್ಮ ಸ್ವರೂಪ ಯೋಗ್ಯತಾನುಸಾರ, ನಡೆವ_ನಡೆಯುವನು, ನವಸುವಿಶೇಷಸನ್ಮಹಿಮ_ನವ_ನೂತನವಾದ, ಸು_ಸಮೀಚೀನವಾದ, ವಿಶೇಷ_ವಿಶೇಷಗಳಾದ, ಸತ್_ನಿರ್ದುಷ್ಟಗಳಾದ, ಮಹಿಮ_ಮಹಿಮಾ ಉಳ್ಳವನು.

**ತಾ||** ನಮ್ಮ ದೇಹದ ನೆರಳು ನಮ್ಮನ್ನು ಅನುಸರಿಸಿಕೊಂಡು ಇರುವ ರೀತಿಯಾಗಿ, ಪರಮಾತ್ಮ ಬೆಂಬಲನಾಗೆ ಭಕ್ತಾಧೀನನು ಎಂದು ಎಣಿಸುವುದಕ್ಕಾಗಿ ಲವಕಾಲವಾದರೂ ಬಿಡದೇ ಭಕ್ತರ ಸಂಗಡ ನಿರ್ಬಂಧವಿಲ್ಲದೇ ತಿರುಗುತಾನೆ. ಇನ್ನು ಭಕ್ತರ ಸತ್ಸಾಧನಿಗೆ ಪ್ರತಿಬಂಧಕವಾದ, ದುಷ್ಟವಾದ ಪಾಪಕರ್ಮಗಳು ಒದಗುವ ಕಾಲದಲ್ಲಿ, ಆವುಗಳನ್ನು ತಡೆದುಬಿಡುವನು. ಇನ್ನೂ ಶ್ರೀ ಪರಮಾತ್ಮನು ತನ್ನ ಭಕ್ತರ ಇಷ್ಟಗಳ ಪೂರೈಸಿ ಸ್ವರೂಪ ಯೋಗ್ಯತಾನುಸಾರ ನಡೆಯುವನು. ಇನ್ನೂ ಪರಮಾತ್ಮ ಎಂಥಾವನೆಂದರೆ, ಹೊಸ ಹೊಸದಾದ ನಿರ್ದುಷ್ಟಗಳಾದ ಸಮೀಚೀನಗಳಾದ ಮಹಿಮೆಗಳುಳ್ಳವನು ಎಂತ ತಾತ್ಪರ್ಯ.

**ವಿಶೇಷಾರ್ಥ :**_ಬಿಂಬರೂಪೀ ಪರಮಾತ್ಮ :_ ದೇಹ ಎಂಬುದೇ ಬಿಂಬ ಸದೃಶ. ನೆರಳು ಎಂಬುದೇ ಪ್ರತಿಬಿಂಬ. ಹಾಗೆಯೇ ಪ್ರತಿಬಿಂಬನೇ ಜೀವ. ಬಿಂಬಸದೃಶ, ಬಿಂಬ ರೂಪೀ ಹರಿ ಎಂತ ಅರ್ಥ. ಬಿಂಬರೂಪಿಯಾದ ಪರಮಾತ್ಮಗ್ರೂ, ಪ್ರತಿಬಿಂಬನಾದ ಜೀವಗೂ ಅನಾದ್ಯನಂತ ಕಾಲಕ್ಕೂ ಅವಿಯೋಗವಿರುವುದರಿಂದ ಬಿಂಬನಾದ ಪರಮಾತ್ಮ ಎಂತ ಅಂದರು.

ಪರಮಾತ್ಮ ಸಂಚಾರ ಮಾಡುವನು ಎಂದರೇ, ದೇಹದ ನೆರಳಿಗೆ, ದೇಹದ ಕ್ರಿಯಾ ಹೊರತು ಕ್ರಿಯಾ ಹ್ಯಾಂಗಿಲ್ಲವೋ (ಅಂದರೆ ದೇಹಕ್ಕೆ ಅವಯವಗಳು ಆಡಿದ ಹಾಂಗೆ ನೆರಳಲ್ಲಿ ಅವಯವಗಳು ಹ್ಯಾಂಗೆ ಆಡತದೊ) ಹಾಗೆಯೇ ಬಿಂಬ ಕ್ರಿಯಾ ಹೊರತು ಪ್ರತಿಬಿಂಬ ಕ್ರಿಯಾ ಇಲ್ಲ. ತದ್ವತ್ ಬಿಂಬರೂಪಿ ಪರಮಾತ್ಮ ಸ್ವರೂಪ ಯೋಗ್ಯತಾನುಸಾರ ವ್ಯಾಪಾರಗಳ ಮಾಡಿದರೆ ಜೀವನಾದ ಪ್ರತಿಬಿಂಬನೂ ಮಾಡತಾನೆ. ಮತ್ತು ಭಕ್ತಾಧೀನನು ಎಂತ ಅಂದರು. ಹ್ಯಾಂಗೆಂದರೆ, ತನ್ನ ಸರ್ವೋತ್ತಮತ್ವಾದಿ ಮಹಾತ್ಮೆಯ ಭಕ್ತರಲ್ಲದೇ ಅನ್ಯರಿಂದ ಆಚ್ಛಾದಿತವಾದಾಗ ಭಕ್ತರ ದ್ವಾರಾ ಪ್ರಚುರ ಮಾಡಿಸಿದವನಾದ್ದರಿಂದ ಈ ವಿವಕ್ಷಯಾ ಭಕ್ತರಾಧೀನ ಎಂತ ಎನಿಸತಾನೆ. ಈ ವಿಷಯವಾಗಿ ಶ್ರೀ ಜಗನ್ನಾಥದಾಸರಾಯರ ಗುರುಗಳಾದ ಶ್ರೀ ಭಾಗಣ್ಣದಾಸರು ಮಾಡಿದ ಪದದಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ. ಅದು ಯಾವುದು ಎಂದರೆ,

ರಾಗ ಭೈರವಿ, ಛಾಪತಾಳ

ಇದೆ ಪಾಲಿಸು, ಇದೆ ಪಾಲಿಸು, ಇದೆ ಪಾಲಿಸಯ್ಯಾ ॥ ಪ ॥
ಬಿಂಬ ಚಲಿಸೆ ಪ್ರತಿಬಿಂಬ ಚಲಿಸುವನು
ಬಿಂಬ ಪೂರ್ಣನು ಪ್ರತಿಬಿಂಬ ಅಪೂರ್ಣ
ಉಂಬುದುಪ್ರೋ ಕ್ರಿಯಾ ಬಿಂಬ ಮಾಡಿಸೆ ಪ್ರತಿ
ಬಿಂಬಕ್ಕುಂಟೆಂಬುವ ಬಿಂಬಕ್ರಿಯವನೆನಗೆ ॥ ೨ ॥

**ಬಿಟ್ಟವರ ಭವಪಾಶದಿಂದಲಿ ।**
**ಕಟ್ಟುವನು ಬಹುಕಠಿಣನಿವ ಶಿ ।**
**ಷ್ಟೇಷ್ಟನೆಂದರಿದನವರತ ಸದ್ಭಕ್ತಿಪಾಶದಲಿ ॥**
**ಕಟ್ಟುವರ ಭವಕಟ್ಟು ಬಿಡಿಸುವ ।**
**ಸಿಟ್ಟನವನಿವನಲ್ಲ ಕಾಮದ ।**
**ಕೊಟ್ಟು ಕಾವನು ಸಕಲ ಸೌಖ್ಯವನಿಹಪರಂಗಳಲಿ ॥ ೨೬ ॥**

ಬಿಟ್ಟವರ–ಶ್ರೀಪರಮಾತ್ಮನು ಸರ್ವೋತ್ತಮನೆಂದು ತಿಳಿಯದೆ ವಿಷಯಾಸಕ್ತರಾಗಿ ಸತ್ಕರ್ಮಾನುಷ್ಠಾನಮಾರ್ಗಗಳು ಆಚರಣೆಮಾಡದೆ, ಐಶ್ವರ್ಯಮದಾಂಧರಾಗಿ, ಶ್ರೀಹರಿ ವ್ಯಾಪಾರಗಳ ತಿಳಿಯದೆ ದುರ್ವ್ಯಾಪಾರದಿಂದಿರತಕ್ಕ ಪ್ರಾಣಿಗಳನ್ನು, ಭವಪಾಶದಿಂದಲಿ–ಜನನಮರಣಾಖ್ಯ ಸುಖದುಃಖಾತ್ಮಕವೆಂಬ ಸಂಸಾರಸಾಂಕೇತವಾದ ಹಗ್ಗದಿಂದ, ಕಟ್ಟುವನು–ಬಿಗಿಸುವನು. ಇನ್ನು, ಬಹುಕಠಿಣನಿವ–ನರಕಾದಿಗಳಲ್ಲಿ ಇವರು ಇದ್ದ ಕಾಲದಲ್ಲಿ ದಯಾರಹಿತನಾಗಿ ಬಹುದುಃಖಪಡಿಸತಕ್ಕ ಈ ಪರಮಾತ್ಮನು, ಶಿಷ್ಟೇಷ್ಟನೆಂದರಿತು–ಗುಣಪೂರ್ಣನೆಂತಲೂ, ಸರ್ವೋತ್ತಮನೆಂತಲೂ, ಸೃಷ್ಟ್ಯಾದ್ಯಷ್ಟಕರ್ತೃ ಎಂತಲೂ, ಭಕ್ತರ ಉದ್ಧಾರಮಾಡತಕ್ಕವನೆಂತಲೂ, ಇನ್ನೂ, ಅರಿದು–ಅನೇಕಪ್ರಕಾರವಾಗಿ ಭಗವಂತನ ಗುಣಗಳನ್ನು ತಿಳಿದು ಜ್ಞಾನಾನುಷ್ಠಾನನಾಗಿ, ಅನವರತ–ನಿರಂತರವಾಗಿ, ಸದ್ಭಕ್ತಿಪಾಶದಲಿ–ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹಯುಕ್ತವಾದ ಪಾಶದಿಂದ, ಕಟ್ಟುವರ–ಹೃದಯಾಕಾಶದಲ್ಲಿ ಶ್ರೀಪರಮಾತ್ಮನ ಪ್ರತೀಕ ನಿಲ್ಲಿಸಿ ಧ್ಯಾನೋಪಾಸನದಿಂದ ಏಕಮನಸ್ಕರಾಗಿ ನಿಲ್ಲಿಸತಕ್ಕವರ, ಭವಕಟ್ಟು–ಸಂಸಾರಕ್ಕೆ ಕಾರಣವಾದ ಲಿಂಗದೇಹಾಖ್ಯ ಕಟ್ಟು, ಇನ್ನು ಐಹಿಕದಲ್ಲಿ ಅನೇಕವಾದ ಪ್ರತಿಬಂಧಕಗಳ, ಬಿಡಿಸುವ–ವಿರಜಾನದೀ ಸ್ನಾನದಿಂದ ಬಿಡಿಸಿ ದಿವ್ಯಲೋಕಗಳಲ್ಲಿ ಸೇರಿಸುವ (ಐಹಿಕದಲ್ಲಿ ದುಃಖನಿವಾರಣೆಮಾಡಿ ಪರಮೈಶ್ವರ್ಯದಿಂದ ಸುಖಪಡಿಸತಾನೆ), ಸಿಟ್ಟನವನಿವನಲ್ಲ–ಈ ಪರಮಾತ್ಮನು ತ್ರಿಗುಣೋಪಾಧಿಯಿಂದ ಮಾಡತಕ್ಕ ದೋಷಕಾರ್ಯಗಳಲ್ಲಿ ತನ್ನ ಅನುಸಂಧಾನ ಇಟ್ಟಿರೋಣದರಿಂದ ಅವರಲ್ಲಿ ಕೋಪಮಾಡೋವನಾಗೋದಿಲ್ಲ. ಕಾಮದ ಕೊಟ್ಟು–ಬೇಡಿದ ಇಷ್ಟಾರ್ಥವನ್ನ ಕೊಟ್ಟವನಾಗಿ, ಕಾವನು–ತನ್ನ ಅಪರೋಕ್ಷವನ್ನು ಕೊಟ್ಟು, ಆಗಾಮಿಸಂಚಿತಕರ್ಮಗಳಿಂದ

ನಿರ್ಲಿಪ್ತನ್ನಾಗಿ ಮಾಡಿ ಸಂರಕ್ಷಣೆಮಾಡುವನು. ಇಹ–ಈ ಭೂಲೋಕದಲ್ಲಿ, ಇನ್ನು, ಪರಂಗಳಲಿ–ಅನ್ಯಲೋಕಗಳಾದ ಪುನರಾವೃತ್ತಿವರ್ಜಿತಗಳಾದ ಮಹರಾದಿ ಲೋಕಗಳಲ್ಲಿ ಇಟ್ಟು ಜೀವನ್ಮುಕ್ತರನ್ನಾಗಿ ಮಾಡಿ ಪ್ರಳಯಾಂತಕ್ಕೆ ಮೋಕ್ಷ ಕೊಡುವನು.

**ತಾ||** ದಾನವನಾದರೂ ನಶ್ವರವಾದ ಐಶ್ವರ್ಯದಿಂದ ಮದಿಸಿ ವಿಷ್ಣು ಸರ್ವೋತ್ತಮತ್ವ ಜ್ಞಾನವನ್ನು ಸಂಪಾದಿಸದೆ ದುರ್ವ್ಯಾಪಾರರತನಾಗಿರುತ್ತಾನೋ ಅವನನ್ನ ಪರಮಾತ್ಮನು ಜನನಮರಣಾಖ್ಯರೂಪವಾದ ಸಂಸಾರವೆಂಬ ಹಗ್ಗದಿಂದ ಕಟ್ಟಿ ನರಕ ಅನುಭವಿಸುವಾಗ್ಗೆ, ದಯಾರಹಿತನಾಗಿ ಬಹುದುಃಖಗಳ ಬಡಿಸತಕ್ಕವನು. ದಾನವನಾದರೂ ಸ್ವಾಮಿ, ಗುಣ ಪೂರ್ಣ, ಸರ್ವೋತ್ತಮ, ಸೃಷ್ಟ್ಯಾದ್ಯಷ್ಟಕರ್ತೃ ಎಂತ ತಿಳಿದುಕೊಂಡು ಯಾವಾಗಲೂ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹದಿಂದ ಪರಮಾತ್ಮನ ಪ್ರತೀಕವನ್ನ ಹೃದಯಾ ಕಾಶದಲ್ಲಿ ನಿಲ್ಲಿಸಿ ಧ್ಯಾನಪರನಾಗಿರತಾನೋ ಅವನನ್ನ ಸಂಸಾರಕ್ಕೆ ಕಾರಣವಾದ ಲಿಂಗದೇಹ ವೆಂಬ ಹಗ್ಗದ ಕಟ್ಟನ್ನ ವಿರಜಾಸ್ನಾನದಿಂದ ಛೇದಿಸಿ, ದಿವ್ಯಲೋಕಗಳನ್ನ ಕೊಟ್ಟು ಸಂರಕ್ಷಣೆ ಮಾಡತಾನಾದ್ದರಿಂದ ತನ್ನ ಭಕ್ತರಲ್ಲಿ ಕೋಪಮಾಡೋದಿಲ್ಲ. ಇನ್ನು ಈ ಪ್ರಕಾರ ನಡೆಯುವ ಭಕ್ತಜನರನ್ನ ಸಂಚಿತಾಗಾಮಿ ಕರ್ಮಗಳಿಂದ ಬರತಕ್ಕ ಪಾಪಕರ್ಮಗಳಿಂದ ನಿರ್ಲಿಪ್ತರನ್ನಾಗಿ ಮಾಡಿ, ಈ ಲೋಕದಲ್ಲಿಯೂ ಮಹರಾದಿಲೋಕಗಳಲ್ಲಿಯೂ ಇಟ್ಟು ಜೀವನ್ಮುಕ್ತರನ್ನಾಗಿ ಮಾಡಿ, ಪ್ರಳಯಾಂತಕ್ಕೆ ಮೋಕ್ಷವನ್ನು ಕೊಟ್ಟು, ಸಂರಕ್ಷಣೆ ಮಾಡತಾನೆ.

**ಕಣ್ಣಿಗೆವೆಯಂದದಲಿ ಕೈ ಮೈ |**
**ತಿಣ್ಣಿಗೊದಗುವ ತೆರದಿ ಪಲ್ಗಳು |**
**ಪಣ್ಣುಫಲಗಳನಗಿದು ಜಿಹ್ವೆಗೆ ರಸವನೀವಂತೆ ||**
**ಪುಣ್ಯಫಲವೀವಂದದಲಿ ನುಡಿ |**
**ವೆಣ್ಣಿನಾಳ್ವಾಂಡದೊಳು ಲಕ್ಷ್ಮಣ |**
**ನಣ್ಣನೊದಗುವ ಭಕ್ತರವಸರಕಮರಗಣಸಹಿತ || ೨೭ ||**

ಶ್ರೀಪರಮಾತ್ಮ ಭಕ್ತರನ್ನ ನಿಷ್ಕಾಮನೆಯಿಂದ ರಕ್ಷಿಸತಾನೆ ಎಂತ ಸದೃಷ್ಟಾಂತ ವಾಗಿ ಹೇಳತಾರೆ.

ಕಣ್ಣಿಗೆ–ನೇತ್ರದ್ವಯಗಳಿಗೆ, ಎವೆಯಂದದಲಿ–ರೆಪ್ಪೆಗಳೋಪಾದಿಯಲಿ, ಕೈ–ಕೈಗಳು ಎರಡು, ಮೈ–ಈ ದೇಹಕ್ಕೆ ಪ್ರಾಪ್ತವಾಗುವ, ತಿಣ್ಣಿಗೆ–ತಿನಸಿಗೆ (ಕಡಿತಕ್ಕೆ), ಒದಗುವ ತೆರದಿ–ಒದಗುವ ರೀತಿಯಲ್ಲಿ, ಪಲ್ಗಳು–ಬಾಯಿಗತ ಹಲ್ಲುಗಳು, ಪಣ್ಣುಫಲಗಳನು– ಪಕ್ವವಾದ ಹಣ್ಣುಗಳ, ಇನ್ನೂ ಅನೇಕವಾದ ಭಕ್ಷ್ಯಗಳನ್ನು, ಅಗಿದು–ಅಗಿದು, ಛಂದಾಗಿ ಚೂರ್ಣಮಾಡಿ, ಜಿಹ್ವೆಗೆ–ನಾಲಿಗೆಗೆ, ರಸವನೀವಂತೆ–ರಸಕೊಟ್ಟಂತೆ, ಪುಣ್ಯಫಲಗಳ– ಪುಣ್ಯಸ್ವರೂಪದ ಜೀವರಿಗೆ ಪಕ್ವಕಾಲಕ್ಕೆ ತನ್ನಲ್ಲಿ (ಪರಮಾತ್ಮನಲ್ಲಿ) ಸರಿಯಾದ

ಅನುಸಂಧಾನಕೊಟ್ಟು, ಅಂಥಾ ಕರ್ಮವೇ ಮಾಡಿಸಿ ತನ್ನ ಸಂದರ್ಶನಾಖ್ಯ ಫಲವನ್ನ ಈವಂದದಲಿ-ಕೊಡೋ ರೀತಿಯಲ್ಲಿ, ನುಡಿವೆಣ್ಣ-ವಾಕ್ಯಗಳಿಗೆ ಅಭಿಮಾನಿಯಾದ ಸರಸ್ವತಿ ದೇವಿಯರ, ಆಳ್ವ-ಆಳತಕ್ಕ ಅಥವಾ ಪತಿಯಾದ ಬ್ರಹ್ಮದೇವರ, ಅಂಡದೊಳು-ಬ್ರಹ್ಮಾಂಡ ದೊಳು, ಲಕ್ಷ್ಮಣನಣ್ಣ-ಲಕ್ಷ್ಮಣನಿಗೆ ಅಣ್ಣನಾದ ಶ್ರೀರಾಮಚಂದ್ರದೇವರು. ಭಕ್ತರವಸರಕೆ-ಭಕ್ತರ ಅವಸರಕಾಲ ಪ್ರಾಪ್ತವಾದ ವ್ಯಾಳೆಯಲ್ಲಿ, ಅಮರಗಣಸಹಿತ-ದೇವತೆಗಳ ಸಮೂಹ ಸಹಿತ, ಒದಗುವ-ಒದಗೋವನಾಗತಾನೆ ಎಂತ ತಾತ್ಪರ್ಯ.

**ತಾ||** ಈ ನುಡಿಯಲ್ಲಿ ಸ್ವಾಮಿ ಸ್ವಪ್ರಯೋಜನರಹಿತನಾಗಿ ನಿಜಭಕ್ತರನ್ನ ಸಂರಕ್ಷಣೆ ಮಾಡತಾನೆ ಎಂಬೋ ವಿಷಯ ದೇಹದಲ್ಲಿರುವ ಅವಯವಗಳ ದೃಷ್ಟಾಂತವಾಗಿ ತೋರಿಸ ತಾರೆ. ಹ್ಯಾಂಗೆಂದರೇ, ನೇತ್ರದ್ವಯಗಳಿಗೆ ರೆಪ್ಪೆಗಳು ಸ್ವಪ್ರಯೋಜನವಿಲ್ಲದೇ ಹ್ಯಾಂಗೆ ಅವಸರವಾಗಿ ಒದಗತದೋ, ದೇಹದಲ್ಲಿ ತಿನಸು (ಕಡಿತ) ಉತ್ಪತ್ತಿಯಾದರೆ ಕರದ್ವಯವು ಹ್ಯಾಂಗೆ ಸ್ವಪ್ರಯೋಜನವಿಲ್ಲದೇ, ಅವಸರವಾಗಿ ತುರಿಸಿ ತಿನಸನ್ನ ಪರಿಹಾರಮಾಡತದೋ ಬಾಯಿ ಒಳಗೆ ಇರುವ ಹಲ್ಲುಗಳು ಫಲ ಮೊದಲಾದ ಪದಾರ್ಥಗಳನ್ನ ಅವಸರವಾಗಿ ಅಗಿದು ಸ್ವಪ್ರಯೋಜನವಿಲ್ಲದೇ ಅದರ ರಸವನ್ನ ನಾಲಿಗೆಗೆ ಹ್ಯಾಂಗೆ ದತ್ತಮಾಡತದೋ ತದ್ವತ್, ಶ್ರೀಪರಮಾತ್ಮ, ಈ ಬ್ರಹ್ಮಾಂಡದೊಳು ತನ್ನ ಭಕ್ತರ ಅವಸರಕೆಲಸಗಳಿಗೆ ಸ್ವಪ್ರಯೋಜನವಿಲ್ಲದೇ ಬಂದು ಸಹಾಯ ಮಾಡತಾನೆ, ಅಂದರೆ ಸಂರಕ್ಷಣ ಮಾಡತಾನೆ.

**ವಿಶೇಷಾರ್ಥ :-**

೧. ಕಣ್ಣುರೆಪ್ಪೆಗಳು ಕಣ್ಣಿನಿಂದ ಅವಿಯೋಗವಾಗಿ ಅತಿಸಮೀಪದಲ್ಲಿ ವಾಸ ವಾಗಿದ್ದರೂ ಸರ್ವಪದಾರ್ಥಗಳನ್ನು ನೋಡತಕ್ಕ ಕಣ್ಣುಗಳು ತಮಗೆ ಯಾವಾಗಲೂ ಸಹಾಯಭೂತವಾಗಿ ಕಾದಿರುವ ರೆಪ್ಪೆಗಳನ್ನ ನೋಡೋದಿಲ್ಲ. ತದ್ವತ್ ಬಿಂಬಪ್ರತಿಬಿಂಬ ರಾದ ಜೀವರು ಕ್ಷೀರನೀರವತ್ ಕಲೆತು ಇದ್ದರೂ ಜೀವನಾದವನು ಬಿಂಬನ್ನ ಕಾಣೋದಿಲ್ಲ. ಜೀವಗೆ ಕಾಣದೇನೇ ರೆಪ್ಪೆಗಳು ನೇತ್ರಗಳನ್ನ ಕಸಕುಪ್ಪಿಗಳು ಸಂಬಂಧವಾಗದೇ ಹ್ಯಾಂಗೆ ರಕ್ಷಿಸುತ್ತವೋ, ತದ್ವತ್ ಪರಮಾತ್ಮ ಸ್ವಪ್ರಯೋಜನರಹಿತನಾಗಿ ಭಕ್ತರನ್ನ ರಕ್ಷಿಸತಾನೆ.

೨. ಮೈಯ ಒಳಗೆ ತಿನಸು ಆದರೆ ಹಸ್ತಗಳು ತುರಿಸಿ ತಿನಸನ್ನ ಪರಿಹಾರಮಾಡು ವಂತೆ, ತಿನಸಿಗೆ ಸದೃಶವಾದ ವಿಷಯಸಂಬಂಧವಾದ ದುಃಖಗಳು ಪ್ರಾಪ್ತವಾದ ಕಾಲದಲ್ಲಿ ತನ್ನ ವಿಷಯಕವಾದ ಜ್ಞಾನಾನುಸಂಧಾನವೆಂಬ ಕರಗಳಿಂದ ದುಃಖಾದಿಗಳ ಪರಿಹರಿಸತಾನೆ. ಇದರಿಂದ ಕರಕ್ಕೆ ಹ್ಯಾಂಗೆ ಸ್ವಪ್ರಯೋಜನವು ಇಲ್ಲವೋ ಪರಮಾತ್ಮಗೂ ಹಾಂಗೆ ಸ್ವಪ್ರಯೋ ಜನವಿಲ್ಲ. ಕರಗಳ ಕಣ್ಣಿಂದ ಕಂಡಂತೆ ಅನುಸಂಧಾನಮಾರ್ಗ ಮನಸ್ಸಿನಿಂದ ಕಂಡವಗೆ ವಿಷಯಾದಿ ದುಃಖಗಳು ಆಗೋದಿಲ್ಲ.

೩. ದಂತಗಳು, ಹಣ್ಣುಗಳ ಭಕ್ಷ್ಯಗಳ ತಿಂದು, ಸಿಪ್ಪೆಯನ್ನು ದೂರಮಾಡಿ ಸುರಸ ವನ್ನ ಜಿಹ್ವೆಗೆ ಕೊಡತವೆ. ಹೀಗೆ ಮಾಡೋಣದರಿಂದ ದಂತಕ್ಕೆ ಏನೂ ಪ್ರಯೋಜನವಿಲ್ಲ.

ತದ್ವತ್ ಶ್ರೀಪರಮಾತ್ಮ ಸಿಪ್ಪೆಗೆ ಸದೃಶವಾದ ಲಿಂಗದೇಹ ದೂರಮಾಡಿ ತದ್ಗತ ಜೀವನ ಸ್ವರೂಪಾನಂದಾಖ್ಯರಸವನ್ನ ವ್ಯಕ್ತಮಾಡಿ ಜೀವಗೆ ಉಣಿಸತಾನೆ. ಇದರಿಂದ ಪರಮಾತ್ಮಗೆ ಯಾವ ವಿಧವಾದ ಪ್ರಯೋಜನವೂ ಇಲ್ಲ. ಸ್ವಪ್ರಯೋಜನವಿಲ್ಲದ ಮ್ಯಾಲೆ ಯಾಕೆ ಮಾಡಬೇಕೆಂದರೇ ಭೃತ್ಯನ್ನ ಈ ರೀತ್ಯಾ ಪಾಲಿಸತಕ್ಕದ್ದು ಪ್ರಭುವಿನ ಸ್ವಭಾವ. ಪ್ರಭುಲಕ್ಷಣವೇ ಅದು. ಅದು ಇಲ್ಲದೇಹೋದರೆ ಸ್ವಾಮಿತ್ವಕ್ಕೆ ನ್ಯೂನತೆಯೂ ಗುಣ ಪೂರ್ಣತ್ವಕ್ಕೆ ಲೋಪವೂ ಆಗುವ್ರುದರಿಂದ ಈ ಮಹಾಗುಣಗಳು ಪರಮಾತ್ಮನಲ್ಲಿ ಅವೆ ಎಂತ ತಿಳಿಯಬೇಕು ಎಂತ ತಾತ್ಪರ್ಯ.

**ಕೊಟ್ಟಿದನು ಕೈಗೊಂಬರಕ್ಷಣ ।**
**ಬಿಟ್ಟಗಲ ತನ್ನವರ ದುರಿತಗ ।**
**ಳಟ್ಟುವನು ದೂರದಲಿ ದುರಿತಾರಣ್ಯಪಾವಕನು ॥**
**ಬೆಟ್ಟ ಬೆನ್ನಿಲಿ ಹೊರಿಸಿದವರೊಳು ।**
**ಸಿಟ್ಟುಮಾಡಿದನೇನೋ ಹರಿ ಕಂ ।**
**ಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನು ॥ ೨೮ ॥**

ದುರಿತಾರಣ್ಯಪಾವಕನು = –ದುರಿತಾರಣ್ಯ–ಪಾಪಗಳೆಂಬ ಅರಣ್ಯಕ್ಕೆ, ಪಾವಕನು– ಅಗ್ನಿಸದೃಶನಾದ ಪರಮಾತ್ಮನು, ಕೊಟ್ಟಿದನು–ಜ್ಞಾನಾನುಸಂಧಾನದಿಂದ ಕೊಟ್ಟಂಥಾ ತನ್ನ ಸ್ವಾಖ್ಯರಸಗಳನ್ನು, ಕೈಗೊಂಬ–ತೊಕ್ಕೊಂಬುವನು, ಅರಕ್ಷಣ ಬಿಟ್ಟಗಲ–ಅರಕ್ಷಣ ವಾದರೂ ತನ್ನ ಭಕ್ತರನ್ನ ಬಿಟ್ಟು ದೂರ ಹೋಗದೇ ಸಮೀಪದಲ್ಲೇ ಇರುವನು. ತನ್ನವರ– ಇಂಥಾ ಭಕ್ತರ, ದುರಿತಗಳ–ಜ್ಞಾನಕ್ಕೆ ಪ್ರತಿಬಂಧಕಗಳಾದ ಅಜ್ಞಾನಾದಿ ದೋಷಗಳ, ದೂರದಲಿ–ದೂರದಲ್ಲಿರತಕ್ಕ ಭಗವದ್ದ್ವೇಷಿಗಳಾದ ದೈತ್ಯರ ಸಮೀಪಕ್ಕೆ, ಅಟ್ಟುವನು– ಓಡಿಸುವನು (ಸೂರ್ಯ ಅಂಧಕಾರವನ್ನು ಓಡಿಸುವಂತೆ ಓಡಿಸುವನು). ಬೆಟ್ಟ–ಬೆಟ್ಟ ವನ್ನು, ಬೆನ್ನಿಲಿ–ಬೆನ್ನುಮ್ಯಾಲೆ, ಹೊರಿಸಿದ–ಹೊರಿಸಿದಾಗ್ಯೂ, ಅವರೊಳು–ಅಂಥಾ ದೇವತೆಗಳಲ್ಲಿ, ಸಿಟ್ಟುಮಾಡಿದನೇನೊ–ಕೋಪ ಮಾಡಿಕೊಂಡನೇನೊ, ಅಂದರೆ ಕೋಪ ಮಾಡಲಿಲ್ಲ. ಕಂಗೆಟ್ಟ–ವಾಸುಕಿ ಸರ್ಪದ ಮುಖಭಾಗ ಹಿಡಿದು ವಿಷಜ್ವಾಲೆಗಳಿಂದಲೂ, ವಿಷಫೂತ್ಕಾರಗಳಿಂದಲೂ ಬಾಧಿತರಾಗಿ ಮುಂದೆ ಆಲೋಚನೆ ತೋರದೇ ಇದ್ದ, ಸುರರಿಗೆ– ದೇವತೆಗಳಿಗೆ, ಸುಧೆಯ–ಅಮೃತವನ್ನ, ಉಣಿಸಿದ–ಪಾನಮಾಡಿಸಿದನು. ಅಹಿತರನು– ತನಗೆ ಹಿತರಲ್ಲದಂಥಾ ದೈತ್ಯರಿಗೆ ಅಮೃತಪಾನಮಾಡಿಸದೆ ಅವರ ಇಚ್ಛಾವನ್ನ, ಮುರಿದ– ಭಂಗಮಾಡಿದ.

**ತಾ॥** ಭಕ್ತರು ಜ್ಞಾನಾನುಸಂಧಾನದಿಂದ ಕೊಟ್ಟಂಥಾ ಪದಾರ್ಥಗಳಲ್ಲಿರತಕ್ಕ ಸ್ವಾಖ್ಯರಸವನ್ನ ಸ್ವೀಕಾರ ಮಾಡುವ, ಅರೆಕ್ಷಣವಾದರೂ ತನ್ನ ಭಕ್ತರನ್ನ ಬಿಟ್ಟು ದೂರ ಹೋಗದೆ ಅವರ ಸತ್ಸಾಧನಿಗೆ ಪ್ರತಿಬಂಧಕಗಳಾದ ಅಜ್ಞಾನಾದಿ ದೋಷಗಳ

ತಡದು ತನಗೆ ದ್ವೇಷಿಗಳಾದಂತ ದೈತ್ಯರ ಸಮೀಪಕ್ಕೆ, ಸೂರ್ಯನು ಕತ್ತಲೆಯನ್ನು ನಿಮಿಷ ಮಾತ್ರದಲ್ಲಿ ಹ್ಯಾಂಗೆ ಓಡಿಸುವನೋ ತದ್ವತ್ ಓಡಿಸುವನು. ಇದು ಹ್ಯಾಗೆಂದರ ದೇವತೆಗಳು, ಶ್ರೀ ಪರಮಾತ್ಮ ಕೂರ್ಮಾವತಾರ ಎತ್ತಿದ ಕಾಲದಲ್ಲಿ, ಬೆನ್ನು ಮ್ಯಾಲೆ ಮಂದರ ಪರ್ವತವನ್ನ ಹೊರಿಸಿದ ಕಾಲಕ್ಕೂ, ಅವರಿಗೆ ಅಮೃತಪಾನ ಮಾಡಿಸಿ, ದೈತ್ಯರು ಎಷ್ಟು ಕಷ್ಟದಿಂದ ಪ್ರಯತ್ನಪಟ್ಟರೂ, ಅವರಿಗೆ ಅಮೃತಪಾನ ಮಾಡಿಸದೆ ಅವರ ಅಭಿಲಾಷೆಯನ್ನ ಭಂಗ ಮಾಡಿದ. ಈ ಪ್ರಕಾರ ಪರಮಾತ್ಮ ತನ್ನ ಭಕ್ತರ ಇಚ್ಛ್ಯಾವನ್ನ ಪೂರ್ಣ ಮಾಡುವನೆಂತ ತಾತ್ಪರ್ಯ.

**ವಿಶೇಷಾರ್ಥ :–**

ಕೊಟ್ಟದನ ಕೈಗೊಂಬ – "ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ । ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥" ೨೬ನೇ ಶ್ಲೋಕ, ಅಧ್ಯಾಯ ೯ ಭಗವದ್ಗೀತಾವಾಕ್ಯ ರೀತ್ಯಾ ಸ್ವೀಕಾರಮಾಡತಾನೆ.

ದುರಿತಾರಣ್ಯಪಾವಕನು ಎಂದರೇ ಜನನ ಮರಣಗಳಿಗೆ ಕಾರಣವಾದ ಕರ್ಮಗಳು ಯಾವತ್ತು ಪಾಪಕರ್ಮಗಳೇವೇ. ಇಂಥಾ ಪಾಪಕರ್ಮಗಳಾದ ಸಂಚಿತ ಕರ್ಮಗಳನ್ನ ಅಗ್ನಿಯೋಪಾದಿಯಲಿ ಸುಟ್ಟು ನಾಶಮಾಡತಕ್ಕವನು.

ಬೆಟ್ಟ ಬೆನ್ನಿಲಿ ಹೊರಿಸಿದರು : ದಾವಾಗ ಅಂದರೇ, ಸಮುದ್ರಮಥನ ಕಾಲದಲ್ಲಿ ಮಂದರ ಪರ್ವತವನ್ನ ಪರಮಾತ್ಮ ಕೂರ್ಮಾವತಾರ ಮಾಡಿದಾಗ್ಗೆ, ದೇವರ ಬೆನ್ನು ಮ್ಯಾಲೆ ಹೊರಿಸಿದರು. ಹಾಂಗೆ ಮಾಡಿದಾಗ್ಯೂ ಸ್ವಾಮಿ ಯಾಕೆ ಕೋಪ ಮಾಡಿ ಕೊಳ್ಳಲಿಲ್ಲ, ಎಂದರೇ ತನಗೆ ಇಷ್ಟವಾದ ಕಾರ್ಯವಾದ್ದರಿಂದಲೂ, ಭಕ್ತರ ಸಂರಕ್ಷಣಾರ್ಥಕ್ಕೂ, ದೈತ್ಯರ ನಾಶಕ್ಕಾಗಿಯೂ ಕೋಪ ಮಾಡಲಿಲ್ಲ. ಕಂಗೆಟ್ಟ ಸುರರಿಗೆ ಸುಧೆಯ ನುಣಿಸಿದ. (ವಾಸುಕಿ ಸರ್ಪವನ್ನು ಬಲಭಾಗದಲ್ಲಿ ಹಿಡಿದವರು ದೇವತೆಗಳು. ಎಡಭಾಗ ದೈತ್ಯರು ಹಿಡಿದರು).

**ಖೇದ ಮೋದ ಜಯಾಪಜಯ ಮೊದ ।**
**ಲಾದ ದೋಷಗಳಿಲ್ಲ ಚಿನ್ಮಯ ।**
**ಸಾದರದಿ ತನ್ನಂಘ್ರಿಕಮಲವ ನಂಬಿ ತುತಿಸುವರ ॥**
**ಕಾದುಕೊಂಡಿಹ ಪರಮಕರುಣಿಮ ।**
**ಹೋದಧಿಯು ತನ್ನವರು ಮಾಡಿದಪ ।**
**ರಾಧಗಳ ನೋಡದಲೆ ಸಲಹುವ ಸರ್ವಕಾಮದನು ॥ ೨೯ ॥**

ಚಿನ್ಮಯ–ಸಚ್ಚಿದಾನಂದಾತ್ಮಕನಾದ ಶ್ರೀ ಪರಮಾತ್ಮಗೆ, ಖೇದ–ದುಃಖಾದಿ ಳೇನು, ಮೋದ–ಸಂತೋಷವೇನು, ಜಯ–ತನ್ನ ಜಯಿಸೋಣವೇನು, ಅಪಜಯ– ಅನ್ಯರಿಂದ ತನಗೆ ಅಪಜಯವೇನು, ಮೊದಲಾದ–ಇವೇ ಮೊದಲಾದ, ದೋಷಗಳಿಲ್ಲ–

ಜೀವನಿಷ್ಠವಾದ ಈ ದೋಷಗಳು ಇಲ್ಲ. ಸಾದರದಿ–ಆದರ ಪೂರ್ವಕವಾಗಿ, ತನ್ನಂಘ್ರಿ ಕಮಲವ–ತನ್ನ ಪಾದಗಳೆಂಬ ಕಮಲದ್ವಯಗಳ (ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ನೆಂದು ಚಿಂತಿಸಿ), ನಂಬಿ–ಸರ್ವೋತ್ತಮ ಇವನೇ ಎಂತ ದೃಢಚಿತ್ತನಾಗಿ ನಂಬಿ, ತುತಿಸುವರ–ಗುಣಗಳ ಸ್ತೋತ್ರ ಮಾಡುವವರ, ಕಾದುಕೊಂಡಿಹ–ಸಮೀಪದಲ್ಲೇ ಇರತಾನೆ. ಪರಮ ಕರುಣಾಮಹೋದಧಿಯು–ಇನ್ನು ಇಂಥಾ ಭಕ್ತರಲಿ ಕರುಣಾಖ್ಯ ಮಹಾಸಮುದ್ರ ಉಳ್ಳವನಾಗಿ, ತನ್ನವರು ಮಾಡಿದ–ಭಕ್ತರು ಮಾಡಿದಂತ, ಅಪರಾಧಗಳ–ಅಪರಾಧಗಳ, ನೋಡದಲೆ ಸಲಹುವ–ಎಣಿಸದೆ ಸಂರಕ್ಷಣೆ ಮಾಡತಾನೆ. ಸರ್ವಕಾಮದನು–ಇವರು ಬೇಡಿದಂಥಾದ್ದರನ್ನ ಯೋಗ್ಯತಾನುಸಾರ ಕೊಡೋವನಾಗತಾನೆ ಎಂತ ತಾತ್ಪರ್ಯ.

**ತಾ||** ಅಂಧಂತಮಸ್ಸಿನಲ್ಲಿ ಕಲ್ಯಾದಿ ದೈತ್ಯರು ಅನುಭವಿಸತಕ್ಕ ದುಃಖಗಳು, ನಿತ್ಯಸುಖಲೋಕವಾದ ವೈಕುಂಠಲೋಕದಲ್ಲಿ ಬ್ರಹ್ಮಾದಿಗಳು ಅನುಭವಿಸತಕ್ಕ ಅತಿಶಯವಾದ ಸುಖದಿಂದ ಹುಟ್ಟುವ ಸಂತೋಷವು, ಅನ್ಯರು ಜಯಿಸೋಣವೇನು, ಅಪಜಯ ಹೊಂದೋಣವೇನು, ಈ ಮೊದಲಾದ ಜೀವನಿಷ್ಠವಾದ ದೋಷಗಳು, ಬಿಂಬ ನಾದ ಸ್ವಾಮಿಗೆ ಇಲ್ಲ ಎಂತಲೂ ಆದರಪೂರ್ವಕವಾಗಿ ಪರಮಾತ್ಮನ ಭಾರತೀರಮಣ ಮುಖ್ಯಪ್ರಾಣಾಂತರ್ಗತನೆಂದು ಚಿಂತಿಸಿ, ಸರ್ವೋತ್ತಮ ಇವನೇ ಎಂತ ದೃಢಮನಸ್ಸಿನಿಂದ ನಂಬಿ ತನ್ನ ಸ್ತೋತ್ರಮಾಡುವವರ ಸಮಿಾಪದಲ್ಲೇ ಪರಮಾತ್ಮ ಕಾದುಕೊಂಡಿರತಾನೆ. ಇನ್ನು ಕರುಣಾಖ್ಯ ಮಹಾಸಮುದ್ರ ಉಳ್ಳಂಥಾ ಪರಮಾತ್ಮ ಪೂರ್ವೋಕ್ತಪ್ರಕಾರ ಚಿಂತಿಸುವ ಭಕ್ತರು ಮಾಡುವಂಥಾ ದೋಷಗಳನ್ನ ಎಣಿಸದೆ ಸಂರಕ್ಷಣೆ ಮಾಡತಾನಾದ ಪ್ರಯುಕ್ತ ಭಕ್ತರು ಬೇಡಿದಂಥಾ ಇಷ್ಟಗಳನ್ನ ಕೊಡತಕ್ಕವ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಖೇದ :– ನಿತ್ಯ ನರಕವಾದ ಅಂಧಂತಮಸ್ಸಿನಲ್ಲಿ, ಲಿಂಗಭಂಗರಾಗಿ, ಪ್ರವೇಶ ಮಾಡಿ ಬಹುದುಃಖಗಳ ಅನುಭವಿಸತಕ್ಕ ಕಲ್ಯಾದಿ ದೈತ್ಯರು ಮಹಾದುಃಖಾನು ಭವ ಮಾಡತಾ ಇರತಾರೆ. ಅಂಥಾವರಿಗೂ ಬಿಂಬನಾದವ ಪರಮಾತ್ಮ. ಇವನಿಗೂ ಖೇದ ಉಂಟೇ ಎಂದರೇ, ಅಂಥಾ ದುಃಖಾದಿಗಳು ಇಲ್ಲ. ಮೋದ–ನಿತ್ಯ ಸುಖಲೋಕವಾದ ವೈಕುಂಠದಲ್ಲಿ ಆನಂದಾತಿಶಯಗಳ ಅನುಭವಿಸತಕ್ಕ ಬ್ರಹ್ಮಾದಿಗಳಿಗೆ, ಬಿಂಬನಾದ ಹರಿಗೆ ಅವರು ಅನುಭವಿಸುವ ಮಹಾಸುಖಾತಿಶಯದಿಂದ ಉಂಟಾಗುವ ಸಂತೋಷವೂ ಇಲ್ಲ.

**ಮಿಾನ ಕೂರ್ಮ ವರಾಹ ನರಪಂ |**
**ಚಾನನಾತುಳಶೌರ್ಯ ವಾಮನ |**
**ರೇಣುಕಾತ್ಮಜ ರಾವಣಾದಿನಿಶಾಚರಘ್ನಂಸಿ ||**
**ಧೇನುಕಾಸುರಮಥನ ತ್ರಿಪುರವ |**
**ಹಾನಿಗೈಸಿದ ನಿಪುಣ ಕಲಿಮುಖ |**
**ದಾನವರ ಸಂಹರಿಸಿ ಧರ್ಮದಿ ಕಾಯ್ದಿ ಸುಜನರನು || ೩೦ ||**

ಮೀನ–ಮತ್ಸ್ಯಾವತಾರ ಮಾಡಿ, ವೇದೋದ್ಧಾರಮಾಡಿದಂಥಾ ಸ್ವಾಮಿಯೇ, ಕೂರ್ಮ–ಕೂರ್ಮಾವತಾರ ಮಾಡಿ ಮಂದರಪರ್ವತವನ್ನ ಬೆನ್ನಿಂದ ಎತ್ತಿದವನೇ, ವರಾಹ–ವರಾಹಾವತಾರ ಮಾಡಿ ಭೂಮಿಯನ್ನ ಉದ್ಧಾರಮಾಡಿದವನೇ, ಅತುಳ ಶೌರ್ಯ–ಅತುಳ–ತುಲಾದಲ್ಲಿ ತೂಗೋದಕ್ಕೆ ಸದೃಶರಹಿತವಾದ, ಶೌರ್ಯ–ಪರಾಕ್ರಮ ವುಳ್ಳ, ನರಪಂಚಾನನ–ನರ–ನರಾಕಾರನೂ, ಪಂಚಾನನ–ಸಿಂಹಾಕಾರನೂ ಆದ ಶ್ರೀ ನೃಸಿಂಹನೇ, ವಾಮನ–ವಾಮನಾವತಾರ ಮಾಡಿ ತ್ರಿವಿಕ್ರಮರೂಪದಿಂದ ಭಾಗೀರಥಿ ಯನ್ನು ಪೆತ್ತವನೇ, ರೇಣುಕಾತ್ಮಜ–ಜಮದಗ್ನಿ ಋಷಿಪತ್ನಿಯಾದ ರೇಣುಕಾದೇವಿಯಲ್ಲಿ ಪರುಶುರಾಮತ್ವೇನ ಅವತಾರಮಾಡಿದವನೇ, ರಾವಣಾದಿನಿಶಾಚರಧ್ವಂಸಿ–ನಿಶಾಚರರಾದ ರಾವಣ, ಕುಂಭಕರ್ಣ, ಖರ, ದೂಷಣಾದಿ ರಾಕ್ಷಸರನ್ನ ಸಂಹಾರಮಾಡಿದವನೇ, ಧೇನುಕಾಸುರಮಥನ–ಬಲರಾಮದೇವರಲ್ಲಿ ಆವಿಷ್ಟನಾಗಿ ಕೃಷ್ಣರೂಪದಿಂದ ಧೇನುಕಾಸುರ ಮೊದಲಾದ ದೈತ್ಯರನ್ನ ಸಂಹಾರಮಾಡಿದವನೇ, ತ್ರಿಪುರವ ಹಾನಿಗೈಸಿದ ನಿಪುಣ– ತ್ರಿಪುರಾಸುರರ ಪತ್ನಿಯರು ವ್ರತಮಾಡಿದಾಗ ಅವರ ವ್ರತಗಳ ಭಂಗಮಾಡಿ, ತ್ರಿಪುರವ– ತ್ರಿಪುರಾಸುರನ್ನ ರುದ್ರದೇವರಿಂದ ನಾಶಮಾಡಿಸಿದ ಸಮರ್ಥನೇ, ಕಲಿಮುಖದಾನವರ– ಕಲಿಯೇ ಮೊದಲಾದ ಅನೇಕ ದೈತ್ಯರನ್ನ ಸಂಹಾರಮಾಡಿದ ಕಲ್ಕ್ಯವತಾರನೇ, ಧರ್ಮದಿ–ಧರ್ಮದಿಂದ, ಸುಜನರ–ಸಜ್ಜನರಾದ ಭಕ್ತರನ್ನ, ಕಾಯ್ದಿ–ಸಂರಕ್ಷಣೆಯನ್ನು ಮಾಡೋವನಾದಿ.

**ತಾ||** ಶ್ರೀ ಪರಮಾತ್ಮ ಮೀನ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕ್ಯಾದಿ ದಶಾವತಾರಗಳ ತಾಳಿ, ದುಷ್ಟರಾದ ರಾವಣಕುಂಭಕರ್ಣಾದಿ ರಾಕ್ಷಸರನ್ನ ಸಂಹಾರಮಾಡಿದವನೆಂತಲೂ, ಧರ್ಮದಿಂದ ಸಜ್ಜನ ರನ್ನ ಸಂರಕ್ಷಿಸಿದವನೆಂತಲೂ ದಶಾವತಾರಗಳನ್ನು ವರ್ಣನೆಮಾಡಿ ಸ್ತೋತ್ರ ಮಾಡಿದ್ದಾರೆ.

**ಶ್ರೀ ಮನೋಹರ ಶಮಲವರ್ಜಿತ ।**
**ಕಾಮಿತಪ್ರದ ಕೈರವದಳ ।**
**ಶ್ಯಾಮ ಶಬಲಶರಣ್ಯ ಶಾಶ್ವತ ಶರ್ಕರಾಕ್ಷಸಖ ॥**
**ಸಾಮಸನ್ನುತ ಸಕಲಗುಣಗಣ ।**
**ಧಾಮ ಶ್ರೀಜಗನ್ನಾಥವಿಠ್ಠಲ ।**
**ನೀ ಮಹಿಯೊಳವತರಿಸಿ ಸಲಹಿದೆ ಸಕಲಸುಜನರನು ॥ ೩೦ ॥**

ಶ್ರೀ ಮನೋಹರ–ಲಕ್ಷ್ಮೀದೇವಿಯರಿಗೆ ಆನಂದಾತಿಶಯ ಕೊಟ್ಟು ಲಕ್ಷ್ಮೀ ಮನಸ್ಸನ್ನು ಸ್ವಾಧೀನ ಮಾಡಿಕೊಂಡವನು, ಶಮಲವರ್ಜಿತ – ದೋಷದೂರನಾದ ವನು, ಕಾಮಿತಪ್ರದ–ಹೃದಯದಲ್ಲಿ ಅಪರೋಕ್ಷೀಕರಿಸಿಕೊಳ್ಳಬೇಕೆಂದು ಅಪೇಕ್ಷಿಸಿ ತತ್ಸಾಧನ ಮಾಡತಕ್ಕವರಿಗೆ ಪ್ರತ್ಯಕ್ಷನಾಗಿ ಸಂದರ್ಶನ ಕೊಡತಕ್ಕವನು. ಕೈರವದಳ- ಶ್ಯಾಮ–ನೀಲೋತ್ಪಲದ ದಳದೋಪಾದಿಯಲಿ ಶ್ಯಾಮಲವರ್ಣ ವಿಶಿಷ್ಟವಾದ ಶರೀರ ಉಳ್ಳವ, ಎಂದರೇ ನೀಲವರ್ಣೋಪೇತನಾದವನು, ಶಬಲ–ನಾನಾವರ್ಣ ವಿಶಿಷ್ಟವಾದದ್ದು

ದಾವುದೋ ಅದಕ್ಕೆ ಶಬಲ ಎಂತ ಸಾಂಕೇತವು. ನಾನಾ ವರ್ಣವು ಎಂದರೇ, ವರ್ಣ ಶಬ್ದ ಜಾತಿಪರ, ಅಂದರೆ ನಾನಾ ಜಾತೀಯರಾದ ಭಗವದ್ಭಕ್ತರಿಂದ, ಶರಣ್ಯ–ವಂದ್ಯ ನಾದವನು, ಶಾಶ್ವತ–ಅನಾದ್ಯನಂತ ಕಾಲಕ್ಕೂ ಶಶ್ವದೇಕಪ್ರಕಾರನಾಗಿರತಕ್ಕವನು. ಶರ್ಕರಾಕ್ಷಸಖ–ಶರ್ಕ–ಎಂದರೆ ಶ್ರೀ ಪರಮಾತ್ಮ ಹ್ಯಾಂಗೆಂದರೆ, ಶ–ಸುಖರೂಪಿಯಾದ, ರ– ("ರಮು ಕ್ರೀಡಾಯಾಮಿತಿ ಧಾತೋಃ") ಸೃಷ್ಟ್ಯಾದಿ ರೂಪವಾದ ಆಟಗಳನ್ನ ಆಡತಕ್ಕ, ಕ–ಪೂರ್ಣನಾದ ಪರಮಾತ್ಮ, ಇಂಥಾ ಪರಮಾತ್ಮನಲ್ಲಿ, ರ–ರಕ್ತಿ, ಅಂದರೆ ಆಸಕ್ತಿ ಸಹಿತವಾದ, ಅಕ್ಷ–ಚಕ್ಷಸ್ಸು ಉಳ್ಳವರು ದಾರೋ ಅವರಿಗೆ, ಸಖ–ಸ್ನೇಹಿತನಾದ ವನು, ಸಾಮಸನ್ನುತ – ಸಾಮವೇದದಿಂದಲೂ, ಮುಕ್ತರಿಂದಲೂ ಸ್ತುತ್ಯನಾದವ, ಸಕಲಗುಣಗಣಧಾಮ–ಸಮಸ್ತವಾದ ಕಲ್ಯಾಣ ಗುಣಗಳಿಂದ ಪೂರ್ಣನಾಗಿ, ಆಶ್ರಯ ನಾಗಿ ಇರತಕ್ಕ, ಶ್ರೀ ಜಗನ್ನಾಥವಿಠ್ಠಲನು–ಲಕ್ಷ್ಮೀದೇವೇರಿಗೂ, ಸಮಸ್ತ ಜೀವರಿಗೂ ಸ್ವಾಮಿಯಾಗಿ, ಇನ್ನೂ ಪಾಪ ಪರಿಹಾರಕನಾಗಿ ಇರುವಂಥಾ ಪರಮಾತ್ಮ, ಈ ಮಹಿ–ಯೊಳವತರಿಸಿ–ವರ್ತಮಾನವಾದ ಭರತಖಂಡದೊಳು ಅವತಾರ ಮಾಡಿದವನಾಗಿ, ಸಕಲ ಸುಜನರನ–ಸಮಸ್ತರಾದ ಮುಕ್ತಿಯೋಗ್ಯ ಜೀವರನ್ನ, ಸಲಹಿದ–ಸಂರಕ್ಷಣೆ ಮಾಡಿದ. ಹ್ಯಾಂಗೆಂದರೇ ಇವರಿಗೆ ಇದ್ದಂಥಾ ದೈತ್ಯರ ಬಾಧೆ ಪರಿಹಾರ ಮಾಡಿ, ಹಯಗ್ರೀವಾದಿ ಅನ್ಯ ಅವತಾರಗಳಿಂದ ಜ್ಞಾನೋಪದೇಶ ಮಾಡಿ, ಈ ಪ್ರಕಾರ ಸಂರಕ್ಷಣೆಮಾಡೋವನಾಗಿದಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ** :–ಶರ್ಕರಾಕ್ಷಸಖ ಎಂದರೆ ವಿವರ –

"ಶರ್ಕರಾಯಾಂ ತ್ರಯ್ಯಾಂ ಅಕ್ಷಂ ವಿಶೇಷಜ್ಞಾನಂ ಏಷಾಂ ತೇ ಶರ್ಕರಾಕ್ಷಾಃ ಬ್ರಹ್ಮಜ್ಞಾನಿನಃ | ತೇಷಾಂ ಸಖಾ ತತ್ಸಖಃ | ರಾಜಾಹಃಸಖಿಭ್ಯಷ್ಟಚ್ | ಯದ್ವಾ, ಶರ್ಕರಾಯಾಂ ಶ್ರುತೌ ಅಕ್ಷಃ ವಿಚಾರಃ ಯಸ್ಯ ಸಃ ಶರ್ಕರಾಕ್ಷೋ ವಾಯುಃ | ತಸ್ಯ ಸಖಾ ಶರ್ಕರಾಕ್ಷಸಖಃ | ಯದ್ವಾ ಲಕ್ಷಿತಲಕ್ಷಣಾಪರ್ಯಾಲೋಚನಯಾ ಶರ್ಕರಶಬ್ದ ಪರ್ಯಾಯಃ ಶಿತಶಬ್ದೋ ಗ್ರಾಹ್ಯಃ | ಶಿತಂ ಪರಿಶುದ್ಧಂ, ಸತ್ವಗುಣದ್ಯೋತಕಮಿತಿ ಯಾವತ್, ತಾದೃಶಸಾತ್ವಿಕಾನಿ ಅಕ್ಷಾಣಿ ಜ್ಞಾನಕರ್ಮೇಂದ್ರಿಯಾಣಿ ಏಷಾಂ ತೇ ಶರ್ಕರಾಕ್ಷಾಃ | ಅತ ಏವ ಬ್ರಹ್ಮಜ್ಞಾನಿನಃ | ತೇಷಾಂ ಸಖಾ ಶರ್ಕರಾಕ್ಷಸಖಃ || "

ಶರ್ಕರಾಕ್ಷ–ಸೂಕ್ಷ್ಮವಾದ ಅಕ್ಷ–ಜ್ಞಾನ ಎಂತ ಅರ್ಥ. "ಕ್ಷುದ್ರಪಾಷಾಣೇ ಸುಸೂಕ್ಷ್ಮೇ ಖಂಡಿತೇ ಗುಡೇ" ಎಂತ ಅಭಿಧಾನ ಇರೋಣದರಿಂದ. ಪರಮಾತ್ಮನ್ನ ತಿಳಿಯುವಂಥಾ ಸೂಕ್ಷ್ಮವಾದ ಜ್ಞಾನಿಗಳಿಗೆ ಸಖಾ ಎಂಬೋದೇ ಸಿದ್ಧ ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಕರುಣಾಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಮೂರನೆಯ ಸಂಧಿ

## ವ್ಯಾಪ್ತಿಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಪುರುಷರೂಪತ್ರಯ ಪುರಾತನ |**
**ಪುರುಷ ಪುರುಷೋತ್ತಮ ಕ್ಷರಾಕ್ಷರ |**
**ಪುರುಷಪೂಜಿತಪಾದ ಪೂರ್ಣಾನಂದಜ್ಞಾನಮಯ ||**
**ಪುರುಷಸೂಕ್ತಸುಮೇಯ ತತ್ತ |**
**ತ್ಪುರುಷಹೃತ್ಪುಷ್ಕರನಿಲಯ ಮಹ |**
**ಪುರುಷಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತ || ೧ ||**

**ಟೀಕಾ :**

ಹಿಂದಿನ ಸಂಧಿಯಲ್ಲಿ ಶ್ರೀ ಪರಮಾತ್ಮನ ಕರುಣಾತಿಶಯಗಳನ್ನ ಹೇಳಿದವರಾಗಿ, ಈ ಸಂಧಿಯಲ್ಲಿ ಆ ಪರಮಾತ್ಮನ ವ್ಯಾಪ್ತಿಕ್ರಮವನ್ನ ಹೇಳತಾರೆ. ಈ ಪರಮಾತ್ಮನು ಎಂಥಾವನೆಂದರೆ :–

ಪುರುಷರೂಪತ್ರಯ–ಪುರುಷ ಎಂದರೆ, ಪುರು–" ಪೂರ್ಣಾನಂದಂ ಷನೋತಿ ದದಾತಿ ಇತಿ ಪುರುಷಃ " ಪ್ರಥಮತಃ ಸೃಷ್ಟಿ ಪ್ರಾರಂಭದಲ್ಲಿ ವಟಪತ್ರಶಾಯಿಯಾದ ಶ್ರೀ ನಾರಾಯಣ ದೇವರಿಂದ ಅಭಿವ್ಯಕ್ತವಾದ ವಾಸುದೇವಗೆ ಪುರುಷ ಎಂತ ನಾಮ. ಈ ಪುರುಷನ ರೂಪಗಳು ಮೂರು, ದಾವದೆಂದರೇ, ೧. ಒಂದು ರೂಪದಿಂದ ಮಹತ್ತತ್ವ ಪ್ರವಿಷ್ಟವಾದದ್ದು. ೨. ಒಂದು ರೂಪದಿಂದ ಅಂಡಖರ್ಪರ ಪ್ರವಿಷ್ಟವಾದದ್ದು, ೩. ಒಂದು ರೂಪದಿಂದ ಸರ್ವಜೀವರಲ್ಲಿ ಪ್ರವಿಷ್ಟವಾದದ್ದು. ಅಂತು ಮೂರು ರೂಪಗಳು ಮತ್ತು ಸೃಷ್ಟ್ಯಾದಿಗಳಿಗೆ ಕಾರಣಗಳಾದ, ಅನಿರುದ್ಧ, ಪ್ರದ್ಯುಮ್ನ ಸಂಕರ್ಷಣ ರೂಪಗಳು ಎಂತಲೂ, ಈಶ್ವರಾಭಿನ್ನವಾದ ವಿಷ್ಣು, ಬ್ರಹ್ಮ, ಶಿವರೂಪಗಳೆಂತಲೂ ಹೇಳತಾರೆ. ಪ್ರಮಾಣ :– " ವಿಷ್ಣೋಸ್ತು ತ್ರೀಣಿ ರೂಪಾಣಿ ಪುರುಷಸ್ಯ ಮಹಾತ್ಮನಃ | ಪ್ರಥಮಂ ಮಹತಃ ಸ್ರಷ್ಟೃ ದ್ವಿತೀಯಂ ತ್ವಂಡ ಸಂಸ್ಥಿತಂ | ತೃತೀಯಂ ಸರ್ವಭೂತಸ್ಥಂ ತಾನಿ

ಜ್ಞಾತ್ವಾ ವಿಮುಚ್ಯತೇ ||" ಇತಿ ಭಾಗವತೇ. ಆದಕಡಿಯಿಂದ ಇಂಥಾ ಶ್ರೀ ಪರಮಾತ್ಮ, ಪುರಾತನಪುರುಷ–ಸೃಷ್ಟಿ ಪ್ರಾರಂಭದಲ್ಲಿ ಅನಿರುದ್ಧಾದಿ ರೂಪಗಳು ಅಭಿವ್ಯಕ್ತವಾಗುವುದಕ್ಕಿಂತ ಪೂರ್ವದಲ್ಲಿ ಅಭಿವ್ಯಕ್ತ ಆದವ, ವಾಸುದೇವನಾದ್ದರಿಂದ ಪುರಾತನ ಎಂತ ಕರಿಸೋವನಾದ ವಾಸುದೇವನು, ಪುರುಷೋತ್ತಮ–ಲಕ್ಷ್ಮೀದೇವೇರಕಿಂತಲೂ ಬ್ರಹ್ಮಾದಿ ಸರ್ವ ಜೀವರಕಿಂತಲೂ ಉತ್ತಮನಾದವ ಇವನು, ಕ್ಷರಾಕ್ಷರ ಪುರುಷ– "ಬ್ರಹ್ಮಾ ಶಿವಃ ಸುರೇಶಾದ್ಯಾಃ ಶರೀರಕ್ಷರಣಾತ್ಕ್ಷರಾಃ | ಲಕ್ಷ್ಮೀರಕ್ಷರದೇಹತ್ವಾದಕ್ಷರಾ ತತ್ಪರೋ ಹರಿಃ||" ಎಂತ ವಿಷ್ಣುತತ್ವನಿರ್ಣಯ ವಚನರೀತ್ಯಾ ಅನಾದಿಯಿಂದ ಲಿಂಗದೇಹ ಬಂಧಕವಾಗಿದ್ದು, ಅದರ ನಾಶ ಐದತಕ್ಕ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರು ಕ್ಷರಜೀವರು. ಅಕ್ಷರ–ಲಿಂಗದೇಹವೂ ಇಲ್ಲದೆ, ಅದರ ನಾಶವೂ ಇಲ್ಲದ ನಿತ್ಯಮುಕ್ತರಾದ ರಮಾದೇವೇರು ಅಕ್ಷರಳು. ಪರಮಾತ್ಮನು ಈ ಉಭಯರಿಗೆ ವಿಲಕ್ಷಣನಾಗಿ, ಅಂತರ್ಗತನಾಗಿ ಇರತಕ್ಕವನು. ಕ್ಷರಶಬ್ದದಿಂದ ಕಾರ್ಯರೂಪವಾದ ಜಡಗಳು ಅಂತರ್ಭೂತಗಳೇ. ಇಂಥಾ ರಮಾಬ್ರಹ್ಮಾದಿ ಪುರುಷರಿಂದ, ಪೂಜಿತ–ಪೂಜಾ ಮಾಡಿಕೊಳ್ಳಲ್ಪಟ್ಟ, ಪಾದ–ಪಾದದ್ವಯ ಉಳ್ಳವ ವಾಸುದೇವನು, (ದೈತ್ಯರು ಭಗವತ್ಪೂಜಾ ಮಾಡೋದಿಲ್ಲವಾದ್ದರಿಂದ ದೈತ್ಯರ ವ್ಯಾವೃತ್ತಿಯು), ಪೂರ್ಣಾನಂದಜ್ಞಾನಮಯ–ಈ ಪೂರ್ವೋಕ್ತ ತ್ರಿವಿಧರಲ್ಲಿ ಇದ್ದ ಕಾಲಕ್ಕೂ, ವಿಕಾರ ಶೂನ್ಯನಾಗಿ, ಪೂರ್ಣ– ಪರಿಪೂರ್ಣವಾದ, ಆನಂದ–ಸಂತೋಷವೂ, ಜ್ಞಾನ–ಜ್ಞಾನವೂ, ಮಯ–ಇವುಗಳಿಂದ ಪ್ರಚುರವಾದ ಶರೀರವು ಉಳ್ಳವನು. ಪುರುಷಸೂಕ್ತಸುಮೇಯ–ಪುರುಷ–ಈ ಪೂರ್ವೋಕ್ತ ವಾಸುದೇವಾಖ್ಯ ಪುರುಷ, ಸೂಕ್ತ–ದಾವ ವೇದ ಸೂಕ್ತದಿಂದ, ಸು–ಛಂದಾಗಿ, ಮೇಯ–ತಿಳಿಸಿಕೋತಾನೋ, ಆ ವೇದ ಸೂಕ್ತಕ್ಕೆ ಪುರುಷಸೂಕ್ತ ಎಂತ ಸಾಂಕೇತವು. "ನಮೋಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿಶಿರೋರುಬಾಹವೇ | ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ||" "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಎಂಬ ಋಗ್ವೇದ ವಚನಗಳು ಇರುವದರಿಂದ ಇಂಥಾ ವಾಸುದೇವನು ತನ್ನ ಅವಯವಗಳಿಂದ ಅಂಡದ ಒಳಗೆ ಜಗತ್ ಸೃಷ್ಟಿ ಮಾಡಿ, ಆ ಜಗತ್ತಿನಲ್ಲೂ ಇರುವ, ತತ್ತತ್ಪುರುಷ–ತತ್–ತ್ರಿವಿಧರಾದ ಜೀವರ, ಅಕ್ಷರ ಪುರುಷಳಾದ ರಮಾದೇವೇರ, ಈ ಉಭಯರ, ಹೃತ್ಪುಷ್ಕರನಿಲಯ–ಹೃತ್–ಸ್ವರೂಪ ದೇಹದ ಮತ್ತು ಸ್ಥೂಲ ದೇಹದ ಹೃದಯಗತ, ಪುಷ್ಕರ–ಅಷ್ಟದಳ ಕಮಲದಲ್ಲಿ, ನಿಲಯ–ಆವಾಸವಾಗಿರತಕ್ಕವ (ರಮಾದೇವೇರಿಗೆ ಸ್ಥೂಲ ದೇಹವಿಲ್ಲವಾದ ಪ್ರಯುಕ್ತ ಸ್ವರೂಪ ಹೃದಯ ಮಾತ್ರವೇ), ಮಹಾಪುರುಷ–ಇನ್ನೂ ಇದೇ ಪುರುಷನೇ, ಸ್ಥೂಲವಾದಂತ ಮೂರು ರೂಪಗಳ ಧರಿಸಿದವನಾಗಿ, ಅಜಾಂಡಾಂತರದಿ–ಒಂದು ರೂಪದಿಂದ ಬ್ರಹ್ಮಾಂಡ ಖರ್ಪರದಲ್ಲೇನು, ಇನ್ನೊಂದು ರೂಪದಿಂದ ಬ್ರಹ್ಮಾಂಡದ ಒಳಗೇನು, ಬಹಿರದಿ–ಇನ್ನೊಂದು ರೂಪದಿಂದ ಅಂಡದ ಹೊರಗೆ ಪೃಥಿವ್ಯಾವರಣ ಆರಂಭ ಮಾಡಿ ನವಾವರಣ ಪರಿಯಂತವೇನು, (ನವಾವರಣಕ್ಕೆ ವಿವರ :– (೧) ಜಲ, (೨) ಅಗ್ನಿ, (೩) ವಾಯು, (೪) ಆಕಾಶ, (೫) ಅಹಂಕಾರ ತತ್ವ,

(೬) ಮಹತ್ತತ್ವ, (೭) ತಮೋ ಆವರಣ, (೮) ರಜೋ ಆವರಣ. (೯) ಸತ್ವಾವರಣ) ವ್ಯಾಪ್ತ—ವ್ಯಾಪ್ತನಾಗಿದ್ದಾನೆ. ರಮಾದೇವೇರು ಗುಣತಃ ಅಸಮಳು. ಆದ ಪ್ರಯುಕ್ತ ಸಮ ವ್ಯಾಪ್ತಿ ಇಲ್ಲ ಮತ್ತು ತಾರತಮ್ಯದಲ್ಲಿ ನೀಚಳಾದ್ದರಿಂದ ವ್ಯಾಪ್ತಿ ವಿಷಯದಲ್ಲೂ ನೀಚಳೇವೇ. ಆದರೂ ನಿತ್ಯಾವಿಯೋಗಿನೀ. ಸ್ಥೂಲವಾದ ಪದಾರ್ಥದ ಏಕದೇಶ ಸ್ಪರ್ಶದಿಂದ ಅವಿಯೋಗಿತ್ವ ಹ್ಯಾಂಗೋ ತದ್ವತ್ ಅವಿಯೋಗಿತ್ವವೆಂದು ತಾತ್ಪರ್ಯ.

**ತಾ||** ಪರಮಾತ್ಮನು ಎಂಥಾವನೆಂದರೇ ಪುರುಷ ಎಂತ ಕರೆಸಿಕೊಂಡು ಮೂರು ರೂಪಗಳಿಂದ ಮೂರು ವಿಧ ವ್ಯಾಪಾರಗಳ ಮಾಡಿದವ. ಅದು ಯಾವದೆಂದರೇ, ಒಂದು ರೂಪದಿಂದ ಮಹತ್ತತ್ವದಲ್ಲಿಯೂ, ಎರಡನೇ ರೂಪದಿಂದ ಬ್ರಹ್ಮಾಂಡದಲ್ಲಿಯೂ, ಮೂರನೇ ರೂಪದಿಂದ ಸರ್ವಜೀವರಲ್ಲಿಯೂ ಇರತಕ್ಕವನು. ಮತ್ತು, ಅನಿರುದ್ಧಾದಿರೂಪಗಳು ಅಭಿವ್ಯಕ್ತವಾಗುವುದಕ್ಕಿಂತಲೂ ಮುಂಚಿತವಾಗಿ ಅಭಿವ್ಯಕ್ತವಾದವನಾದ ವಾಸುದೇವ ರೂಪವುಳ್ಳವನು. ಆದಕಾರಣ ಇವನು ಪುರಾತನಪುರುಷ (ಬಹುಕಾಲದ ಹಿಂದಿನ ಎಂತ ಅರ್ಥ) ಎನಿಸುತಾನೆ. ಲಕ್ಷ್ಮೀದೇವೇರಕಿಂತಲೂ, ಬ್ರಹ್ಮಾದಿ ಜೀವರಕಿಂತಲೂ ಉತ್ತಮ ನಾದವ. ಲಿಂಗದೇಹಬಂಧಕವಾಗಿದ್ದು, ಆ ಲಿಂಗದೇಹ ನಾಶ ಐದತಕ್ಕ ಬ್ರಹ್ಮಾದಿ ತೃಣಾಂತ ಜೀವರಿಗೂ, ಲಿಂಗದೇಹವಿಲ್ಲದ ನಿತ್ಯಮುಕ್ತಳಾದ ಲಕ್ಷ್ಮಿಗೂ ವಿಲಕ್ಷಣನಾಗಿ, ಅವರ ಅಂತ ರ್ಗತನಾಗಿ, ಅವರಿಂದ ಪೂಜೆಮಾಡಿಸಿಕೊಳ್ಳಲ್ಪಟ್ಟ ಪಾದದ್ವಯವುಳ್ಳವನು. ಪೂರ್ವೋಕ್ತ ತ್ರಿವಿಧರಲ್ಲಿ ಇದ್ದಾಗ್ಯೂ ಅವಿಕಾರನಾಗಿ ಸಂತೋಷ, ಜ್ಞಾನ, ಇವುಗಳಿಂದ ಪ್ರಚುರವಾದ ಶರೀರ ಉಳ್ಳವನು. ವೇದಸೂಕ್ತವಾದ ಪುರುಷಸೂಕ್ತದಿಂದ ಛಂದಾಗಿ ತಿಳಿಸಿಕೋತಕ್ಕವ. ಇಂಥಾ ಪರಮಾತ್ಮ ತನ್ನ ಅವಯವಗಳಿಂದ ಅಂಡದ ಒಳಗೆ ಜಗತ್ಸೃಷ್ಟಿಮಾಡಿ ಆ ಜಗತ್ತಿನಲ್ಲೂ, ಅದರಲ್ಲಿರುವಂಥಾ ರಮಾದೇವೇರ ಸ್ವರೂಪದೇಹದಲ್ಲೂ, ತ್ರಿವಿಧಜೀವರ ಸ್ಥೂಲ ದೇಹದಲ್ಲೂ ಆವಾಸನಾಗಿ ಮತ್ತು ತಾನೇ (ಇಂಥಾ ಪರಮಾತ್ಮನೇ), ಮೂರು ರೂಪಗಳ ಧರಿಸಿದಂಥಾವನಾಗಿ, ಒಂದು ರೂಪದಿಂದ ಬ್ರಹ್ಮಾಂಡಖರ್ಪರದಲ್ಲಿ, ಇನ್ನೊಂದು ರೂಪ ದಿಂದ ಬ್ರಹ್ಮಾಂಡದ ಒಳಗೆ, ಇನ್ನೊಂದು ರೂಪದಿಂದ ಅಂಡದ ಹೊರಗೆ ಪೃಥಿವ್ಯಾವರಣ ಆರಂಭಮಾಡಿ ನವಾವರಣಪರಿಯಂತ ವ್ಯಾಪ್ತನಾಗಿರತಕ್ಕವ. ಹೀಂಗೆ ವ್ಯಾಪ್ತನಾಗಿ ದ್ದಾಗ್ಯೂನೂ ತತ್ಸಂಬಂಧಪಡದೆ ಇರತಕ್ಕವ. ರಮಾದೇವೇರಿಗೆ ಕೂಡ ಲಭ್ಯವಾಗದ ಸ್ವಾಖ್ಯಪ್ರದೇಶ ಉಳ್ಳವನಾಗಿ ಅಪರಿಚ್ಛಿನ್ನವ್ಯಾಪ್ತನಾಗಿರತಕ್ಕವ.(ಯಾಕೆಂದರೆ ರಮಾದೇವಿ ಗುಣತಃ ಅಸಮಳು. ಆದಪ್ರಯುಕ್ತ ಸಮವ್ಯಾಪ್ತಿ ಇಲ್ಲ. ಮತ್ತು ತಾರತಮ್ಯದಲ್ಲಿ ನೀಚ ಳಾದ್ದರಿಂದ ವ್ಯಾಪ್ತಿವಿಷಯದಲ್ಲೂ ನೀಚಳೇವೇ. ಆದರೂ ನಿತ್ಯಾವಿಯೋಗಿನಿಯಾದ್ದರಿಂದ ಸ್ಥೂಲವಾದ ಪದಾರ್ಥದ ಏಕದೇಶಸ್ಪರ್ಶದಿಂದ ಅವಿಯೋಗಿತ್ವ ಹ್ಯಾಂಗೋ ತದ್ವತ್ ಅವಿಯೋಗಿತ್ವ.) ಈ ಪ್ರಕಾರ ಪರಮಾತ್ಮನ ಮಹಿಮಾ ತಿಳಿಯಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :—** "ಪುರುಷಃ ಪರಮಾತ್ಮಾಜೋ ಬ್ರಹ್ಮ ನಾರಾಯಣಃಪರಃ" ಎಂಬಂಥಾ ಶ್ರುತಿಯಿಂದ ಪ್ರತಿಪಾದಿತ ಪುರುಷಃ ಅಂದರೇ ದೇಹದಲ್ಲಿ ವಾಸವಾಗಿ

ಇರತಕ್ಕವ, ಅಥವಾ ಉತ್ತಮಾಧಿಷ್ಠಾನನಾಥಂಥಾ ಮುಖ್ಯಪ್ರಾಣದೇವರ ದೇಹದಲ್ಲಿ ವಾಸವಾಗಿ ಇರತಕ್ಕವ, ಅಥವಾ ಷಡ್ಗುಣೈಶ್ವರ್ಯಸಂಪನ್ನನಾದವ ಎಂದರ್ಥ. ಅಥವಾ ಜೀವರಿಗೆ ಕರ್ಮಫಲ ಕೊಡತಕ್ಕವ ಎಂದರ್ಥ.

**ರೂಪತ್ರಯ :–** ಒಂದು ರೂಪ ಮಹತ್ತತ್ವಪ್ರವಿಷ್ಟವಾದದ್ದು ಎಂತ ಹೇಳಿತು. ಇದಕ್ಕೆ ಪ್ರಮಾಣ :– "ಮಹತ್ತತ್ವಂ ತತೋ ವಿಷ್ಣುಃ ಸೃಷ್ಟವಾನ್ ಬ್ರಹ್ಮಣಸ್ತನುಮ್" ಎಂತ ಮಣಿಮಂಜರಿ ೧ನೇ ಸರ್ಗ ೨ನೇ ಶ್ಲೋಕ. ದ್ವಿತೀಯರೂಪದಿಂದ ಬ್ರಹ್ಮಾಂಡದಾಕಾರನಾಗಿ ಒಳಗೆ ಪ್ರವಿಷ್ಟನಾಗಿದ್ದಾನೆ ಎಂಬುದಕ್ಕೆ ಪ್ರಮಾಣ :– "ಚಿದಾನಂದ ಶರೀರಸ್ತು ಪ್ರವಿಷ್ಟಾಂಡೋ ಹರಿಃ ಸ್ವಯಂ" ಇತಿ ಏಕಾದಶತಾತ್ಪರ್ಯೇ. ಮೂರನೆ ರೂಪದಿಂದ ಜೀವರುಗಳಲ್ಲಿ ಅಂತರ್ಯಾಮಿಯಾಗಿದ್ದು ತತ್ತನ್ನಾಮದಿಂದ ಕರೆಸುತ್ತಾನೆಂಬುದಕ್ಕೆ ಪ್ರಮಾಣ :– "ಸ ಜೀವನಾಮಾ ಭಗವಾನ್ ಪ್ರಾಣಧಾರಣಹೇತುತಃ" ಇತಿ ಐತರೇಯಭಾಷ್ಯೇ.

**ಸ್ತ್ರೀ ನಪುಂಸಕ ಪುರುಷ ಭೂ ಸಲಿ ।**
**ಲಾನಲಾನಿಲ ಗಗನ ಮನ ಶಶಿ ।**
**ಭಾನು ಕಾಲ ಗುಣ ಪ್ರಕೃತಿಯೊಳಗೊಂದು ತಾನಲ್ಲ ॥**
**ಏನು ಇವನ ಮಹಾಮಹಿಮೆ ಕಡೆ ।**
**ಗಾಣರಜಭವಶಕ್ರಮುಖರು ವಿ ।**
**ಧಾನಿಸಲು ಮಾನವರಿಗಳವಡುವದೇ ವಿಚಾರಿಸಲು ॥ ೨ ॥**

ಶ್ರೀ ಪರಮಾತ್ಮನ ಮಹಿಮಾವನ್ನ ಸಾಕಲ್ಯೇನ ತಿಳಿಕೊಂಬೋದಕ್ಕೆ ಅಸಾಧ್ಯವೆಂತ ಹೇಳತಾರೆ.

ಸ್ತ್ರೀ–ಪೂರ್ವೋಕ್ತರೀತ್ಯಾ ಸರ್ವತ್ರವ್ಯಾಪ್ತನಾದ ಶ್ರೀಪರಮಾತ್ಮನು ಸ್ತ್ರೀ ಎಂತಲೂ, ನಪುಂಸಕ–ನಪುಂಸಕ ಎಂತಲೂ, ಪುರುಷ–ಗಂಡಸು ಎಂತಲೂ ಹೇಳಲಿಕ್ಕೆ ಇಲ್ಲ. ಇನ್ನು ಜಂತು ಎಂತಲೂ ಹೇಳಲಿಕ್ಕೆ ಇಲ್ಲ. ಯಾಕೆಂದರೆ ಪ್ರಮಾಣ :– "ಸ ವೈ ನ ದೇವಾಸುರ ಮರ್ತ್ಯತಿರ್ಯಙ್ ನ ಸ್ತ್ರೀ ನ ಷಂಡೋ ನ ಪುಮಾನ್ನ ಜಂತುಃ। ನಾಯಂ ಗುಣಃ ಕರ್ಮ ನ ಸನ್ನ ಚಾಸನ್ ನಿಷೇದಶೇಷೋ ಜಯತಾದಶೇಷಃ ॥" ಎಂತ ಭಾಗವತ ಗಜರಾಜಸ್ತೋತ್ರ ಇರುವದರಿಂದ ಸಮಸ್ತರಿಗೂ ವಿಲಕ್ಷಣನಾದವನು ಎಂತ ತಾತ್ಪರ್ಯ. ಅನೇಕ ಧಾನ್ಯಗಳ ಮೇಳನಮಾಡಿ, ರಾಶಿಭೂತವಾದ ರಾಶಿಗೆ ಧಾನ್ಯರಾಶಿ ಎಂತ ನಿರ್ಧಾರವೇ ಹೊರತು ಏಕಬೀಜದ ರಾಶಿಗೆ ಧಾನ್ಯರಾಶಿ ಎಂತ ಹೇಳಲಿಕ್ಕೆ ಹ್ಯಾಂಗೆ ಆಗೋದಿಲ್ಲವೋ, ತದ್ವತ್ ಶ್ರೀ ಪರಮಾತ್ಮ ಇಂಥಾವನೆಂದು ನಿರ್ಧಾರಕ್ಕೆ ಸಾಧ್ಯವಲ್ಲದ ವಿಲಕ್ಷಣಗಳಾದ ಅನೇಕ ರೂಪಗಳಿಂದ, ಸ್ತ್ರೀಯರಲ್ಲಿಯೂ, ಪುರುಷರಲ್ಲಿಯೂ, ನಪುಂಸಕರಲ್ಲಿಯೂ ಅಂತರ್ಗತನಾಗಿರುವುದರಿಂದ ದೇವರು ಸ್ತ್ರೀ ಎಂತಲೂ, ಪುರುಷ ಎಂತಲೂ,

ನಪುಂಸಕ ಎಂತಲೂ ಹೇಳಿಸಿಕೊಳ್ಳಲ್ಪಡುತ್ತಾನೆ. (ಇಂಥಾ ಅಚಿಂತ್ಯಾದ್ಭುತನಾದ ಪರಮಾತ್ಮ) ಜೀವರಿಗೆ ಪ್ರಾಪ್ತವಾದ ಪಾಂಚಭೌತಿಕ ಸ್ಥೂಲದೇಹಗಳಾದ, ಸ್ತ್ರೀ ಪುರುಷ ನಪುಂಸಕ ದೇಹಗಳು ಎಷ್ಟು ತತ್ವಗಳಿಂದ ನಿರ್ಮಿತವಾಗಿ ಅವೆ ಎಂದರೆ, ಭೂ—ಪೃಥ್ವಿ, ಸಲಿಲ—ಉದಕವು, ಅನಲ—ಅಗ್ನಿ, ಅನಿಲ—ವಾಯು, ಗಗನ—ಆಕಾಶ, ಮನ—ಮನಸ್ಸು, ಮನವೆಂಬ ದಿಕ್ಪ್ರದರ್ಶನದಿಂದ ಉಪಲಕ್ಷಣಯಾ ಕಾರ್ಯರೂಪವಾದ ಚತುರ್ವಿಂಶತಿ ತತ್ವಗಳೊಳಗೆ ಈ ಆರು ತತ್ವಗಳ ಬಿಟ್ಟು ಅವಶಿಷ್ಟ ತತ್ವಗಳು ಗ್ರಾಹ್ಯ, ಶಶಿ—ಎಡನೇತ್ರಾಭಿಮಾನಿ ಚಂದ್ರದೇವರು, ಭಾನು—ಬಲನೇತ್ರದ ಅಭಿಮಾನಿ ಸೂರ್ಯದೇವರು, ಇದರಿಂದ (೨೪) ಚತುರ್ವಿಂಶತಿ ತತ್ವಾಭಿಮಾನಿ ದೇವತೆಗಳು ಗ್ರಾಹ್ಯರು. ಕಾಲ—ಜೀವರುಗಳಿಗೆ ಆಯುಃಪರಿಮಿತಿಕಾಲ, ಗುಣ—ಆಯಾ ಭಿನ್ನಭಿನ್ನವಾದ ಸ್ಥೂಲದೇಹಗತ ಗುಣತ್ರಯಗಳು, ಪ್ರಕೃತಿಯೊಳಗೆ— ಇದರಿಂದ ಚರಾಚರ ಸರ್ವಪ್ರಾಣಿಗಳ ಸ್ಥೂಲದೇಹವು ಗ್ರಾಹ್ಯ, ಇಷ್ಟರ ಒಳಗೆ ಅಂತರ್ಗತನಾಗಿ ತದಾಕಾರನಾಗಿ ಇದ್ದಾನೆ. ಅಷ್ಟೇ ಹೊರತು, ಒಂದು—ಇಷ್ಟರೊಳಗೆ ಒಂದಾದರೂ, ತಾನಲ್ಲ—ತಾನೇ ಆಕಾಶಾದಿ ತತ್ವಗಳಲ್ಲ. (ಎಂದರೇ, ಮೃತ್ ಘಟದಂತೆ ಪರಿಣಾಮವಾದೋಪಾದಿಯಲ್ಲಿ ಪರಮಾತ್ಮನೇ ಉಪಾದಾನನಾಗಿ ಜಗದಾಕಾರತ್ವೇನ ಪರಿಣಮಿಸಿದವನಲ್ಲ. ಆದರೆ ಹ್ಯಾಂಗಿದ್ದಾನೆ ಎಂದರೆ, ತದ್ಭಿನ್ನನಾಗಿ, ತದಾಕಾರನಾಗಿ, ತದಂತರ್ಯಾಮಿಯಾಗಿ ಜಗದ್ವ್ಯಾಪಾರಗಳ ನಡೆಸುತ್ತಾ ಇದ್ದಾನೆ.) ಏನು ಇವನ ಮಹಾಮಹಿಮೆ—ಇಂಥಾ ಮಹಾತ್ಮನ ಅತ್ಯದ್ಭುತವಾದ, ಅಪರಿಚ್ಛಿನ್ನವಾದ ಮಹಿಮೆಯನ್ನ ಏನೆಂದು ಹೇಳಲಿ. ಅಜಭವಶಕ್ರಮುಖರು—ಬ್ರಹ್ಮರುದ್ರೇಂದ್ರಾದಿ ದೇವತೆಗಳು, ಇನ್ನೂ ರಮಾದೇವಿಯರು, ಕಡೆಗಾಣರು—ಅಂತ್ಯ ಕಾಣಲಿಲ್ಲ. ನಿಧಾನಿಸಲು—ರಮಾದೇವಿಯರು ಆಲೋಚನೆಯಿಂದ ಅಂತ್ಯಕಾಣದೇ, ಇನ್ನೂ ನೋಡೋಣ ಎಂತ ಎಷ್ಟು ನಿಧಾನಿಸಿ ನೋಡಿದರೂ ಅಂತ್ಯಕಾಣದೇ ನೋಡುತ್ತಲೇ ಇದ್ದಾಳೆ. ಯೋಗ್ಯತಾಕ್ಕೆ ಮಿಂಚಿದರೆ ತಿರೋಧಾನವಾಗೋದಿಲ್ಲ, ಅಂತ್ಯ ಕಾಣೋಣವೂ ಇಲ್ಲ. ಬ್ರಹ್ಮಾದಿಗಳ ದೃಷ್ಟಿಗೆ ತಿರೋಧಾನವಾಗತದೆ. ಮಾನವರಿಗೆ—ಮನುಷ್ಯರಿಗೆ, ಅಳವಡುವದೇ—ಸಾಕಲ್ಯೇನ ತಿಳಿಕೊಂಬೋದಕ್ಕೆ ಸಾಧ್ಯವಾಗೋದೇ ಎಂದರೆ, ವಿಚಾರಿಸಲು—ವಿಚಾರಮಾಡಿದರೆ ಸಾಧ್ಯವಾಗಲಾರದು ಎಂತ ತಾತ್ಪರ್ಯ. ಇದರಿಂದ, ಭಗವದ್ವಿಚಾರಮಾಡಬಾರದು ಎಂತ ಹೇಳತಕ್ಕದ್ದಲ್ಲ. ಅವರವರ ಯೋಗ್ಯತಾನುಸಾರ ವಿಚಾರಮಾಡಿ ಶ್ರೀ ಪರಮಾತ್ಮನ ಮಹಾಪ್ರಸಾದ ಹೊಂದಬೇಕು ಎಂತಲೂ, ಸ್ವರೂಪವಿಚಾರಮಾಡಿ ತಿಳಕೋಬೇಕು ಎಂತಲೂ ತಾತ್ಪರ್ಯ.

**ತಾ||** ಶ್ರೀ ಪರಮಾತ್ಮನ್ನ ಸ್ತ್ರೀ ಎಂತಲೂ, ನಪುಂಸಕನೆಂತಲೂ, ಪುರುಷ ಎಂತಲೂ ಹೇಳಲಿಕ್ಕೆ ಇಲ್ಲ. ಪರಮಾತ್ಮನು ಇಂಥಾವನು ಎಂತ ಹೇಳಲಿಕ್ಕೆ ಸಾಧ್ಯವಲ್ಲದ ವಿಲಕ್ಷಣಗಳಾದ ಅನೇಕ ರೂಪಗಳಿಂದ, ಸ್ತ್ರೀಯರಲ್ಲಿಯೂ ಪುರುಷರಲ್ಲಿಯೂ ನಪುಂಸಕರಲ್ಲಿಯೂ ಅಂತರ್ಗತನಾಗಿ ಇರುವುದರಿಂದ ದೇವರು ಸ್ತ್ರೀ ಎಂತಲೂ, ಪುರುಷ ಎಂತಲೂ, ನಪುಂಸಕ

ಎಂತಲೂ ಹೇಳಿಸಿಕೊಳ್ಳಲ್ಪಡತಾನೆ. ಇಂಥಾ ಅಚಿಂತ್ಯಾದ್ಭುತನಾದ ಪರಮಾತ್ಮ ಜೀವರಿಗೆ ಪ್ರಾಪ್ತವಾದ ಪಾಂಚಭೌತಿಕ ಸ್ಥೂಲದೇಹಗಳಾದ ಸ್ತ್ರೀಪುರುಷನಪುಂಸಕ ದೇಹಗಳಲ್ಲಿ ೨೪ ತತ್ವಗಳಿಂದ ನಿರ್ಮಿತವಾದ ಅದರ ಒಳಗೆ ಪೃಥ್ವಿ, ಉದಕ, ಅಗ್ನಿ, ವಾಯು, ಆಕಾಶ, ಮನಸ್ಸು ಈ ಆರು ತತ್ವಗಳು ಹೋಗತಾ, ಅವಶಿಷ್ಟತತ್ವಗಳಾದ ಎಡನೇತ್ರಾಭಿಮಾನಿ ಚಂದ್ರದೇವರು, ಬಲನೇತ್ರಾಭಿಮಾನಿ ಸೂರ್ಯದೇವರು ಈ ಪ್ರಕಾರ ೨೪ ತತ್ವಗಳಲ್ಲಿಯೂ, ಆಯಾ ತತ್ವಾಭಿಮಾನಿ ದೇವತೆಗಳಲ್ಲಿಯೂ, ಜೀವರುಗಳಿಗೆ ಆಯುಃಪ್ರಮಾಣದಲ್ಲಿಯೂ, ಆಯಾ ಭಿನ್ನಭಿನ್ನ ಜೀವರ, ಭಿನ್ನಭಿನ್ನವಾದ ಸ್ಥೂಲದೇಹಗತ ಗುಣತ್ರಯಗಳಲ್ಲಿಯೂ, ಉಪಾದಾನಕಾರಣವಾದ ಶುಕ್ಲಶೋಣಿತಾಖ್ಯ ಪ್ರಕೃತಿಯಿಂದ ಉತ್ಪನ್ನವಾದ ಚರಾಚರ ಸರ್ವಪ್ರಾಣಿಗಳ ಸ್ಥೂಲದೇಹಗಳಲ್ಲಿಯೂ, ಅಂತರ್ಗತನಾಗಿ ಇರುತ್ತಾನೆಯೇ ಹೊರತು, ಇವುಗಳೊಳಗೆ ತಾನೇ ಆಕಾಶಾದಿ ತತ್ವಗಳೇ ಅಲ್ಲ. ಇಂಥಾ ಪರಮಾತ್ಮನ ಅತ್ಯದ್ಭುತವಾದ, ಅಪರಿಚ್ಛಿನ್ನವಾದ ಮಹಿಮೆಯನ್ನ ಏನಂತ ಹೇಳಬೇಕು. ಲಕ್ಷ್ಮೀದೇವೇರಿಗೂ ಬ್ರಹ್ಮರುದ್ರೇಂದ್ರಾದಿಗಳಿಗೂ ಅಸಾಧ್ಯವಾದ ಮೇಲೆ, ಮನುಷ್ಯರಿಗೆ, ಶ್ರೀಹರಿಮಾಹಾತ್ಮ್ಯ ಸಾಕಲ್ಯೇನ ತಿಳಿಕೊಂಬೋದಕ್ಕೆ ಸಾಧ್ಯವಾಗೋದೇ ಎಂದರೆ, ವಿಚಾರಮಾಡಿದರೂ ಸಾಧ್ಯವಾಗೋದಿಲ್ಲ ಎಂತ ಭಾವ.

**ವಿಶೇಷಾರ್ಥ :–** ಪರಮಾತ್ಮ ಸ್ತ್ರೀ, ಪುರುಷ, ನಪುಂಸಕ ಜಂತುಗಳೊಳಗೆ ಒಂದೂ ತಾನಲ್ಲ ಎಂಬುದಕ್ಕೆ ಪ್ರಮಾಣ – "ನ ಸ್ತ್ರೀ ನ ಷಂಡೋ ನ ಪುಮಾನ್ನ ಜಂತುಃ" ಇತಿ ಭಾಗವತೇ. ಪರಮಾತ್ಮಗೆ ಸ್ತ್ರೀ, ಪುರುಷ ರೂಪಗಳು ಅವೆ ಹೊರತು, ನಪುಂಸಕ ರೂಪ ಎಂದೆಂದಿಗೂ ಇಲ್ಲ ಎಂಬುದಕ್ಕೆ ಪ್ರಮಾಣ :– "ಪುಂರೂಪಃ ಪ್ರಮದಾರೂಪಃ ಸ್ವರೂಪೇ ರಮತೇ ಸ್ವಯಂ" ಇತಿ ಸತ್ತತ್ವರತ್ನಮಾಲಾಯಾಂ, ಮತ್ತು "ನಪುಂಸಕಂ ನೈವ ಸ್ವರೂಪಭೂತಂ ಅತೋಽಹತಾ ನಾಸ್ತಿ ವಿಚಿಂತನೀಯಂ" ಇತಿ ಗರುಡಪುರಾಣೇ, ಮತ್ತು "ಸ್ತ್ರೀಪುಂದೋಷವಿಹೀನತ್ವಾದ್ಭಗವಾನ್ ನ ನಪುಂಸಕಃ" ಇತಿ ಋಗ್ಭಾಷ್ಯೇ.

**ಗಂಧ ರಸ ರೂಪ ಸ್ಪರಶ ಶ ।**
**ಬ್ದೊಂದು ತಾನಲ್ಲದರದರ ಪೆಸ ।**
**ರಿಂದ ಕರೆಸುತ ಜೀವರಿಗೆ ತರ್ಪಕನು ತಾನಾಗಿ ॥**
**ಪೊಂದಿಕೊಂಡಿಹ ಪರಮ ಕರುಣಾ ।**
**ಸಿಂಧು ಶಾಶ್ವತ ಮನವೆ ಮೊದಲಾ ।**
**ದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ ॥ ೩ ॥**

ಚತುರ್ವಿಂಶತಿ ಜಡತತ್ವಗಳಲ್ಲಿ ಸೇರಿದ ರೂಪರಸಾದಿ ತನ್ಮಾತ್ರಗತ, ಜೀವನ ವಿಚಾರ, ಪರಮಾತ್ಮನ ವಿಚಾರ ಹೇಳತಾರೆ.

ಗಂಧ–ಗಂಧತನ್ಮಾತ್ರ ನಾಸಿಕದಲ್ಲಿ, ರಸ–ರಸತನ್ಮಾತ್ರ ಜಿಹ್ವೆಯಲ್ಲಿ, ರೂಪ–ರೂಪತನ್ಮಾತ್ರ ನೇತ್ರದಲ್ಲಿ, ಸ್ಪರಶ–ಸ್ಪರ್ಶತನ್ಮಾತ್ರ ತ್ವಕ್ಕಿನಲ್ಲಿ, ಶಬ್ದ–ಶಬ್ದತನ್ಮಾತ್ರ

ಕರ್ಣದಲ್ಲಿ (ಐದು ತತ್ವಗಳು ಐದು ಜ್ಞಾನೇಂದ್ರಿಯಗಳಲ್ಲಿವೆ. ಇಚ್ಛಾದಿಗಳು ಮನೋ ತತ್ವದಲ್ಲಿ ಅವೆ. ಈ ಪಂಚತನ್ಮಾತ್ರೆಗಳಲ್ಲಿ, ಒಂದು ತಾನಲ್ಲ_ಅಂತರ್ಗತನಾಗಿ ತದಾಕಾರ ತಚ್ಛಬ್ದವಾಚ್ಯನಾಗಿ, ಶ್ರೀಪರಮಾತ್ಮ ಇದ್ದಾನೆ. ಈ ಗಂಧಾದಿ ಐದು ತತ್ವಗಳೊಳಗೆ, ಒಂದಾದರೂ ತಾನೇ ಆ ತತ್ವಾಕಾರನಾಗಿ ಪರಿಣಮಿಸಿದವನಲ್ಲ. ತದ್ಭಿನ್ನ ತದಂತರ್ಯಾಮಿ ಯಾಗಿ ಇದ್ದಾನೆ ಎಂತ ಅರ್ಥ. ಅವರವರ_ಆಯಾ ಗಂಧರಸರೂಪಾದಿ, ಪೆಸರಿಸಿಂದ_ ನಾಮಗಳಿಂದ, ಕರೆಸುತ_ಅಂತರ್ಗತನಾಗಿ ಕರೆಸುತ್ತಾ, ಜೀವರಿಗೆ_ಸಮಸ್ತರಾದ ಜೀವರಿಗೆ, ತರ್ಪಕನು_ಆಯಾ ತನ್ಮಾತ್ರೆಗಳ ದ್ವಾರಾ ತೃಪ್ತಿಪಡಿಸತಕ್ಕವನು. (ಹ್ಯಾಂಗೆಂದರೆ, ದಿವ್ಯ ಸುವಾಸನೆಯಿಂದ ನಾಸಿಕದ್ವಯಕ್ಕೂ, ಚಲೋ ರಸಗಳಿಂದ ಜಿಹ್ವೇಂದ್ರಿಯಕ್ಕೂ, ಅನೇಕ ಪದಾರ್ಥಗಳನ್ನು ನೋಡೋಣದರಿಂದ ನೇತ್ರಗಳಿಗೂ, ಸ್ಪರ್ಶಜ್ಞಾನದಿಂದ ತ್ವಕ್ಕಿಗೂ, ಅನೇಕ ಶಬ್ದ ಕೇಳೋಣದರಿಂದ ಕರ್ಣದ್ವಯಕ್ಕೂ, ಈ ಪ್ರಕಾರ ಆಹ್ಲಾದ ಕೊಡತಕ್ಕವ. ಅಂದರೆ ತೃಪ್ತಿಕೊಡತಕ್ಕವನು). ತಾನಾಗಿ_ಅಂತರ್ಗತನಾದ ಶ್ರೀ ಪರಮಾತ್ಮ ತನಗೆ ತಾನಾಗೇ ಪಂಚಜ್ಞಾನೇಂದ್ರಿಯಗಳಿಗೆ, ಬಾಹ್ಯವಿಷಯಗಳ ಸಂಬಂಧಮಾಡೋವನಾಗಿ, ಪೊಂದಿಕೊಂಡಿಹ_ಆಶ್ರಯಮಾಡಿಕೊಂಡು ಇದ್ದಾನೆ. ಪರಮಕರುಣಾಸಿಂಧು_ಸಮಸ್ತ ಜೀವರಲ್ಲಿ, ತ್ರಿವಿಧ ಜೀವರಲ್ಲಿ, ಪೂರ್ವೋಕ್ತಪ್ರಕಾರ ತರ್ಪಕನಾದ ಕಾಲಕ್ಕೂ, ಪರಮ_ ಉತ್ತಮರಾದ ತನ್ನ ಭಕ್ತರಲ್ಲಿ, ಕರುಣಾಸಿಂಧು_ದಯಾಸಮುದ್ರನಾಗಿ ಇದ್ದಾನೆ. (ಎಂದರೆ ಪಂಚತನ್ಮಾತ್ರಗಳು ತನಗೆ ಪ್ರೀತಿಕರರಾದ ಸುಭಕ್ತರ ಸುಮಾರ್ಗದಲ್ಲಿ ವರ್ತಿಸುವಂತೆ ಆಯಾ ಜ್ಞಾನೇಂದ್ರಿಯಗಳ ದ್ವಾರಾ ಪ್ರೇರಿಸತಕ್ಕವನು. ತನಗೆ ದ್ವೇಷಿಗಳಾದ ದೈತ್ಯರಿಗೆ ದ್ವೇಷ ಮಾಡುವ ಮಾರ್ಗದಲ್ಲಿ ಪ್ರೇರಿಸತಕ್ಕವನು. ಅವರವರ ಸ್ವರೂಪಯೋಗ್ಯತಾನು ಸಾರ ಎಂತ ಅರ್ಥ. ಸ್ಥೂಲಶರೀರ ಜೀವರಿಗೆ ಹ್ಯಾಂಗೆ ಅಂದರೇ, ಶಾಶ್ವತ_ಲಿಂಗದೇಹಾಂತ ರ್ಗತನಾದ ಅತ್ಯಣುವಾದ ಜೀವನು ಸ್ಥೂಲದೇಹಗತ ಜಡಗಳಾದ ಏಕಾದಶೇಂದ್ರಿಯಗಳಲ್ಲಿ ತನ್ನ ಸ್ವರೂಪಭೂತವಾದ, ಶಾಶ್ವತವಾದ, ಮನವೇ ಮೊದಲಾದ_ಮನ ಇಂದ್ರಿಯಗಳೇ ಮೊದಲಾದ, ಇಂದ್ರಿಯಗಳೊಳಗೆ_ಏಕಾದಶೇಂದ್ರಿಯಗಳು, ಜಡೇಂದ್ರಿಯಗಳೊಳಗೆ, ಏಕದೇಶಗತ ಅಲ್ಪವಾದ ದೀಪದಂತೆ ಇದ್ದು, ಪ್ರಕಾಶತಃ ವ್ಯಾಪ್ತನಾಗಿದ್ದು, ಭೋಗಿಸು ತಿಹನು_ಜಡಭೋಗಗಳಿಗೆ ಅನರ್ಹನಾದ ಚಿದಾನಂದಶರೀರಗಳುಳ್ಳ ಜೀವನು ದೇಹಾಭಿ ಮಾನದಿಂದ ಅಹಂ ಸುಖೀ, ಅಹಂ ದುಃಖೀ ಎಂತ ಪ್ರತಿಬಂಧಕಸಾಮಗ್ರಿಯಿಂದ ಅವಿದ್ಯಾಯುಕ್ತನಾಗಿ, ಆರೋಪಿತದಿಂದ ಏತಾದೃಶನಾಗಿ ಸುಖದುಃಖಭೋಗ ಮಾಡತಾ ಪ್ರಾಕೃತೇಂದ್ರಿಯಗಳಲ್ಲಿ ವ್ಯಾಪ್ತನಾಗಿ, ಲಿಂಗಭಂಗಪರಿಯಂತ ಇರೋವನಾಗತಾನೆ. ವಿಷಯಗಳ_ಸ್ವರೂಪೇಂದ್ರಿಯವಿಷಯಗಳಿಗೆ ಅನ್ಯವಾದ, ಪ್ರಾಕೃತೇಂದ್ರಿಯಗತ ರೂಪ, ರಸಾದಿ ವಿಷಯಗಳು ಎಂತ ತಾತ್ಪರ್ಯ ಪೂರ್ವೋಕ್ತಪ್ರಕಾರ ಗ್ರಾಹ್ಯವು. ಇವನು ಪೂರ್ವೋಕ್ತ ಪುರುಷರೂಪತ್ರಯಗಳಿಂದ ಸ್ಥೂಲದೇಹದಲ್ಲಿ, ಮಹತ್ತತ್ವದಲ್ಲಿ ಒಂದು ರೂಪ ಮತ್ತು ಪಂಚಜ್ಞಾನೇಂದ್ರಿಯಗಳಲ್ಲಿ ಒಂದು ರೂಪ, ಪಂಚಕರ್ಮೇಂದ್ರಿಯಗಳಲ್ಲಿ ಒಂದು ರೂಪ, ಮನ ಇಂದ್ರಿಯದಲ್ಲಿ ಒಂದು ರೂಪ, ಈ ಪ್ರಕಾರ ವ್ಯಾಪ್ತನಾಗಿ ತತ್ತತ್ಪ್ರಕಾಶಕ ನಾಗಿ, ತದ್ಭಿನ್ನನಾಗಿ ಇದ್ದಾನೆ ಎಂತ ತಾತ್ಪರ್ಯ.

**ಶ್ರವಣ ನಯನ ಘ್ರಾಣ ತ್ವಗ್ರಸ ।**
**ನಿವುಗಳಲಿ ವಾಕ್ ಪಾಣಿ ಪಾದಾ ।**
**ದ್ಯವಯವಗಳಲಿ ತದ್ಗುಣಗಳಲಿ ತತ್ಪತಿಗಳೊಳಗೆ ॥**
**ಪ್ರವಿತತನು ತಾನಾಗಿ ಕೃತಿಪತಿ ।**
**ವಿವಿಧಕರ್ಮವ ಮಾಡಿ ಮಾಡಿಸಿ ।**
**ಭವಕೆ ಕಾರಣನಾಗಿ ತಿರುಗಿಸುತಿಹನು ತಿಳಿಸದಲೆ ॥ ೪ ॥**

ಅಸ್ವತಂತ್ರನಾದ ಜೀವ ಸ್ಥೂಲದೇಹೇಂದ್ರಿಯಾದಿಗಳಿಂದ ಕರ್ಮ ಮಾಡೋ ಕ್ರಮ, ನಿಯಾಮಕ ಭಗವದ್ರೂಪಗಳನ್ನು ಹೇಳತಾರೆ.

ಶ್ರವಣನಯನಘ್ರಾಣತ್ವಗ್ರಸನ– ಶ್ರವಣ–ಶ್ರವಣೇಂದ್ರಿಯದಿಂದ ಶಬ್ದ ಕೇಳೋಣ, ನಯನ–ನೇತ್ರೇಂದ್ರಿಯದಿಂದ ಪದಾರ್ಥಗಳ ನೋಡೋಣ, ಘ್ರಾಣ–ನಾಸಿಕೇಂದ್ರಿಯದಿಂದ ಗಂಧ ಸ್ವೀಕಾರಮಾಡೋಣ, ತ್ವಕ್–ತ್ವಗಿಂದ್ರಿಯದಿಂದ ಶೀತೋಷ್ಣಗಳ ತಿಳಿಯೋಣ, ರಸನ–ಜಿಹ್ವೇಂದ್ರಿಯದಿಂದ ರಸಸ್ವೀಕಾರಮಾಡೋಣ, (ಇವು ಐದು ಜ್ಞಾನೇಂದ್ರಿಯಗಳು, ತಜ್ಜನಿತವಾದ ಕರ್ಮರೂಪವಾದ ವ್ಯಾಪಾರಗಳು ಐದು). ಈ ಪಂಚಜ್ಞಾನೇಂದ್ರಿಯ ಗಳಲ್ಲಿ, ಇವುಗಳಲ್ಲಿ ತದ್ವಿಷಯಗಳಾದ ಕೇಳೋಣ ಮೊದಲಾದ ಐದು ಕರ್ಮಗಳಲ್ಲಿ, ತತ್‌ಕ್ರಿಯೆಗಳಲ್ಲಿ, ವಾಕ್‌ಪಾಣಿಪಾದಾದ್ಯವಯವಗಳಲ್ಲಿ– ವಾಕ್–ವಾಗಿಂದ್ರಿಯ ಮತ್ತು ಮಾತಾಡೋಣ, ಪಾಣಿ–ಕರಗಳು ಮತ್ತು ಕೊಡೋಣ, ತೆಗೆದುಕೊಂಬೋಣ, ಪಾದ– ಪಾದೇಂದ್ರಿಯ ಮತ್ತು ಗಮನಾಗಮನಮಾಡೋಣ. ಆದಿಶಬ್ದದಿಂದ ಅವಶಿಷ್ಟ ಗ್ರಾಹ್ಯ. ಪಾಯು–ಪಾಯು ಇಂದ್ರಿಯ (ಮಲವಿಸರ್ಜನ ಮೈಥುನ ರೇತಃಸ್ಖಲನಮಾಡುವ ಕರ್ಮ, ಇದು ಐದು ಕರ್ಮೇಂದ್ರಿಯಗಳ ಮತ್ತು ತತ್ಕಾರ್ಯರೂಪವಾದ ಕರ್ಮಗಳು ಐದು, ತತ್ಕ್ರಿಯೆಗಳು ಐದು), ಮತ್ತು ಅವಯವಗಳಲಿ–ದೇಹಕ್ಕೆ ಅವಯವಗಳಾದ ಪೂರ್ವೋಕ್ತ ದಶೇಂದ್ರಿಯಗಳಲ್ಲಿ, ತದ್ಗುಣಗಳಲಿ – ಈ ಹತ್ತರಲ್ಲಿ ವಿದ್ಯಮಾನವಾದ ಸಾತ್ವಿಕಾದಿ ಗುಣ ಗಳಲ್ಲಿ, (ಇವುಗಳಲ್ಲಿ ಇರೋಣದರಿಂದ, ಒಂದೊಂದು ಇಂದ್ರಿಯಕ್ಕೆ ಮೂರು ಪ್ರಕಾರ ಕರ್ಮಪ್ರವೃತ್ತಿಯು). ಇಂಥಾ ಗುಣಗಳಲ್ಲಿ, ತತ್ಪತಿಗಳೊಳಗೆ–ತತ್–ಆ ದಶೇಂದ್ರಿಯಗಳ, ಪತಿಗಳು–ದೇವತೆಗಳ ಒಳಗೆ, ಈ ಯಾವತ್ತರಲ್ಲಿ, ಪ್ರವಿತತನು ತಾನಾಗಿ– ಪ್ರ–ಛಂದಾಗಿ, ವಿತತನು–ವ್ಯಾಪ್ತನು, ತಾನಾಗಿ–ಅನ್ಯಪ್ರೇರಣೆ ಇಲ್ಲದೇ, ತನಗೆ ತಾನಾಗಿ, ಕೃತಿಪತಿ– ಕೃತಿನಾಮಕ ಲಕ್ಷ್ಮೀಪತಿಯಾದ ಪ್ರದ್ಯುಮ್ನರೂಪಿ ಪರಮಾತ್ಮ, ವಿವಿಧ–ಎಂಭತ್ತು ನಾಲ್ಕು(೮೪) ಲಕ್ಷ ಯೋನಿಜಾತರಾದ ಜೀವರು, ಅದರಲ್ಲಿ, ಒಂದೊಂದು ಯೋನಿಯಲ್ಲಿ ಅನೇಕ ಸಂಖ್ಯಾತ ಜೀವರು ಪರಸ್ಪರ ಸ್ವರೂಪಭೇದಯುಕ್ತರಾಗಿ, ಜ್ಞಾನಕರ್ಮಾದಿ ಗಳಿಂದ ಭಿನ್ನಭಿನ್ನರಾಗಿ ನಾನಾವಿಧರಾದವರು, ಅವರವರ ಸ್ವರೂಪಭೂತ ಕರ್ಮವೇನು, ಅನಾದಿಕರ್ಮವೇನು, ಸಂಚಿತಾಗಾಮಿ ಕರ್ಮವೇನು, ಈ ಪ್ರಕಾರ ಎಲ್ಲಾನೂ ಭಿನ್ನಭಿನ್ನ ಗಳಾಗಿ ನಾನಾವಿಧಗಳಾದ, ಕರ್ಮವ–ಈಶ್ವರನಿಂದ ರಚಿತವಲ್ಲದ, ಅನಾದಿಯಿಂದ

ಲಿಂಗದೇಹಸ್ಥವಾದ, ಅನಾದಿಕರ್ಮದ ದೆಶೆಯಿಂದ, ಪರಂಪರಾ ಬಂದ ಕರ್ಮವನನುಸರಿಸಿ, ಜನ್ಮಗಳು ಬಂದ ಕಾಲದಲ್ಲಿ, ಪೂರ್ವೋಕ್ತಕರ್ಮವನನುಸರಿಸಿ ನಾನಾವಿಧ ಕರ್ಮಗಳ ಇಂದ್ರಿಯಗಳಿಂದ, ಮಾಡಿ—(ಬಿಂಬಸದೃಶನಾದ ಪುರುಷನು ಚಲನಮಾಡಿದರೆ ಪ್ರತಿಬಿಂಬ ಸದೃಶವಾದ ನೆರಳು ಆಡಿದಂತೆ ಪರಮಾತ್ಮ ತಾನು ತನ್ನ ಕ್ರಿಯಾದಿಂದ, ಮಾಡಿ) ಮಾಡಿಸಿ— ಆಯಾ ಇಂದ್ರಿಯಾಭಿಮಾನಿಗಳ ದ್ವಾರಾ ಮಾಡಿಸಿ (ರಮಾದೇವಿಯರಲ್ಲಿ ಸಾಕ್ಷಾತ್ತಾಗಿ ಮಾಡತಾನೆ, ತದನ್ಯರಲ್ಲಿ ಪರಂಪರಾದಿಂದ ಕ್ರಿಯಾ ; ದೇವತೆಗಳ ದ್ವಾರಾ ವ್ಯಾಪ್ತನಾದ ಜೀವನ ಕ್ರಿಯಾ, ತದ್ದ್ವಾರಾ ದೇಹಕ್ಕೆ ಕ್ರಿಯಾ. ಜೀವ ಈಶಾಧೀನ ಎಂಬುದು ರಾಜಭೃತ್ಯ ನ್ಯಾಯವಲ್ಲ. ಪುರುಷನು ಛಾಯಾದ್ಯೋಪಾದಿಯಲಿ ಅಧೀನನು. ಆದ್ದರಿಂದ ಮಾಡಿ ಮಾಡಿಸುವನೆಂದು ಪ್ರಯೋಗ.) ಭವಕೆ ಕಾರಣನಾಗಿ—ಪೂರ್ವೋಕ್ತ ಪ್ರಕಾರ ಮಾಡಿಸಿ, ರಮಾ ವ್ಯತಿರಿಕ್ತ ಅನ್ಯಜೀವರನ್ನ, ಭವಕೆ—ಪ್ರಾಣಿಗಳು ಸಂಸಾರದಲ್ಲಿ ಪರಿವರ್ತನ ಮಾಡ ಬೇಕಾದರೆ, ಅವರವರ ಈಶ್ವರನಿಂದ ರಚಿತವಲ್ಲದ ಅನಾದಿಕರ್ಮ, ಅದಕ್ಕೆ ಅನುಸರಿಸಿದ ಅನಾದಿಲಿಂಗ ಇವು ಮೂಲಕಾರಣಗಳು. ಇದರನ್ನ ಅಭಿವ್ಯಕ್ತಿಮಾಡಿ ಜೀವರನ್ನ ಸಂಸಾರಕ್ಕೆ ತರೋದಕ್ಕೆ, ಕಾರಣನಾಗಿ—ನಿಮಿತ್ತಕಾರಣನಾಗಿ, ತಿರುಗಿಸುತಿಹನು—ಪ್ರಾಣಿ ಗಳ ದೇಹ ವಿವಕ್ಷಯಾ ಜನನಮರಣಾದಿಗಳಿಂದ ತಿರುಗಿಸುತ ದೇಹದಲ್ಲಿ ಆವಾಸನಾಗಿ ದ್ದಾನೆ. ತಿಳಿಸದಲೆ—ಪಕ್ವಕಾಲದಲ್ಲಿ ಹೊರತು ಅಪಕ್ವಕಾಲದಲ್ಲಿ ಬಿಂಬಕ್ರಿಯಾ ದ್ವಾರಾ, ಪ್ರತಿಬಿಂಬಕ್ರಿಯಾ ಎಂಬ ನಿರ್ಲಿಪ್ತಮಾರ್ಗವನ್ನ ತಿಳಿಸಿರ್ದೇನೇ ದೇಹದಲ್ಲಿ ಆವಾಸನಾಗಿ ದ್ದಾನೆ. ಬಾಹ್ಯಕರ್ಮದಿಂದ ಸಂಸಾರ, ಸ್ವರೂಪಕರ್ಮದಿಂದ ಮೋಕ್ಷ, ತ್ರಿವಿಧರಿಗೆ ಯೋಗ್ಯತಾನುಸಾರವೆಂದು ತಾತ್ಪರ್ಯ.

**ಗುಣಿ ಗುಣಗಳೊಳಗಿದ್ದು ಗುಣಿಗುಣ ।**
**ನೆನಿಸುವನು ಗುಣಬದ್ಧನಾಗದೆ ।**
**ಗುಣಜ ಪುಣ್ಯಾಪುಣ್ಯಫಲ ಬ್ರಹ್ಮಾದಿಚೇತನಕೆ ॥**
**ಉಣಿಸುತವರೊಳಗಿದ್ದು ವೃಜಿನಾ ।**
**ರ್ದನ ಚಿದಾನಂದೈಕದೇಹನು ।**
**ಕೊನಿಗೆ ಸಚರಾಚರಜಗದ್ಭುಕುವೆನಿಪನವ್ಯಯನು ॥ ೫ ॥**

ಸಂಕರ್ಷಣರೂಪೀ ಪರಮಾತ್ಮ, ಜೀವರು ಮಾಡಿದ ಕರ್ಮ ಫಲಭೋಗ ಮಾಡಿ ಸುತಾನೆಂದು ಹೇಳತಾರೆ.

ಗುಣಿಗುಣಗಳೊಳಗಿದ್ದು—ಗುಣಿ—ಗುಣವುಳ್ಳವನು ಗುಣಿ. ಗುಣ ಮೂರು ಪ್ರಕಾರ:

೧. ಸತ್ವಗುಣ—ಸತ್ವಗುಣ ಸ್ವಭಾವರಾದ, ಸುಖರೂಪರಾದ ಭಗವದ್ಭಕ್ತರು, ವಿಷ್ಣು ಸರ್ವೋತ್ತಮ ಎಂಬುವರು.

೨. ರಜೋಗುಣ—ರಜೋಗುಣ ಸ್ವಭಾವರಾದ ನಿತ್ಯಸಂಸಾರಿಗಳು. ಪಂಚಭೇದ ಅಂಗೀಕರಿಸಿ ತಾರತಮ್ಯ ಅಂಗೀಕರಿಸದೆ, ಶ್ರೀ ಪರಮಾತ್ಮ ಸರ್ವೋತ್ತಮ

ನೆಂಬಲ್ಲಿ ಮಿಶ್ರಜ್ಞಾನ ಉಳ್ಳವರು. ಸುಖದುಃಖ ಮಿಶ್ರವಾದ ಸ್ವರೂಪ ಉಳ್ಳವರು.

೩. ತಮೋಗುಣ–ತಮೋಗುಣ ಸ್ವಭಾವದವರು. ದುಃಖರೂಪರಾದ ತಮೋ ಯೋಗ್ಯರು. ಭಗವದ್ದ್ವೇಷಿಗಳು. ಅಹಂ ಬ್ರಹ್ಮ ಎನತಕ್ಕವರು.

ಈ ಪ್ರಕಾರ ಮೂರು ವಿಧ ಗುಣ ಉಳ್ಳವರು (ಜೀವರು) ಮೂರು ಪ್ರಕಾರ ಗುಣಿಗಳೆಂದು ಸಾಂಕೇತರು. (ಇಂಥಾ ಜೀವರಲ್ಲಿ) ಗುಣಗಳ–ಆಯಾ ಜೀವರಲ್ಲಿ ಪೂರ್ವೋಕ್ತ ಅವರವರ ಸ್ವಭಾವಗುಣಗಳ, ಒಳಗಿದ್ದು–ಒಳಗೆ ಇದ್ದು, (ಮತ್ತು ಗುಣ ಎಂದರೇ ತ್ರಿಗುಣಾತ್ಮಕ ಲಿಂಗದೇಹ. ಇಂಥಾ ದೇಹ ಉಳ್ಳವ ಜೀವನಾದ್ದರಿಂದ, ಇದರಿಂದಲೂ ಗುಣಿ ಎಂದು ಕರಿಸಿದ, ಜೀವವೇನು, ಲಿಂಗದೇಹವೇನು, ಅನಾದಿಗಳಾದ ಉಭಯ ಪ್ರಕಾರವಾದ ಗುಣಗಳಲ್ಲಿ ಮತ್ತು ಜೀವನಲ್ಲಿ ಇದ್ದು), ಗುಣಿಗುಣನೆನಿಸುವನು–ಗುಣಿ–ಗುಣಿ ಸಾಂಕೇತನಾದ ಜೀವನ ಸ್ವರೂಪದಲ್ಲಿ ಇದ್ದು ಗುಣಿ ಎಂತಲೂ, ಗುಣ–ಗುಣ ಸಾಂಕೇತವಾದ ಲಿಂಗದೇಹದಲ್ಲಿ ಇದ್ದು ಗುಣ ಎಂತಲೂ, ಎನಿಸುವನು–ಆಯಾ ನಾಮಗಳುಳ್ಳವನೆಂದು ಪರಮಾತ್ಮ ಎನಿಸೋವನಾಗತಾನೆ. ಗುಣಬದ್ಧನಾಗದೆ–ತ್ರಿಗುಣಾತ್ಮಕ ಲಿಂಗದೇಹದಿಂದ ಬದ್ಧನಾಗದೇ, ಗುಣಜ–ತ್ರಿಗುಣಾತ್ಮಕ ಲಿಂಗದೇಹೋಪಾದಾನದಿಂದ ಜನಿತಗಳಾದ ಲಿಂಗದೇಹಕ್ಕೆ ಆವರಣಗಳಾದ ಶರೀರಗಳಿಂದ ಜನಿತಗಳಾದ (ಲಿಂಗದೇಹದ ಮೇಲೆ ವೈಷಯಿಕ ಸಾದಿ ಲಿಂಗಶರೀರ ಇದೆ. ಇದರ ಮೇಲೆ ಮಹತ್ತತ್ವ ಶರೀರವು. ಇದರ ಮೇಲೆ ಅಹಂಕಾರತತ್ವಶರೀರವು. ಇದರ ಮೇಲೆ ಪಂಚಭೂತಾತ್ಮಕ, ಪಂಚ ಆವರಣದಿಂದ ಸಹಿತವಾದ ಅನಿರುದ್ಧ ಶರೀರವು. ಈ ಅನಿರುದ್ಧಶರೀರಾಖ್ಯ ಪಂಚಭೂತಾವರಣಗಳಲ್ಲಿ ಲಿಂಗದೇಹಸ್ಥ ಚತುರ್ವಿಂಶತಿ ತತ್ವಾಂಶಗಳು ಇರೋದಾಗಿ ಅವೆ. ಈ ದೇಹಗಳಿಗೆ ಪರಂಪರಾದಿಂದ ಉತ್ಪತ್ತಿ. ಇದು ಯಾವತ್ತು ಅಂಡದ ಹೊರಗಿನ ಸಪ್ತಾವರಣಗಳಾದ ಅಸಂಸ್ಪೃಷ್ಟ ತತ್ವಗಳ ಸದೃಶ ಲಿಂಗೋಪಾದಾನ ಗುಣತ್ರಯಧಿಂದ ಪರಂಪರಾ ಜನಿತಗಳು ಮತ್ತು ತದನ್ಯವಾದ ಜಗದುಪಾದಾನಕಾರಣವಾದ ಮೂಲಜಡಪ್ರಕೃತಿಯಾದ ತ್ರಿಗುಣ ಜನಿತ ಪಾಂಚಭೌತಿಕ ಸ್ಥೂಲದೇಹ, ಅನಿರುದ್ಧ ಶರೀರದ ಮೇಲೆ ಸರ್ವಪ್ರಾಣಿಗಳಿಗೆ ಆಗೋದಾಗಿ ಅದೆ. ಗುಣ ಶಬ್ದದ ತಾತ್ಪರ್ಯವು ಇದು.), ಪುಣ್ಯಾಪುಣ್ಯಫಲ–ಇಂದ್ರಿಯಗಳ ದ್ವಾರಾ ಭಗವತ್ಪ್ರೀತಿಕರವಾದ ಪುಣ್ಯ ಕರ್ಮಗಳೇನು, ಮತ್ತು ಭಗವದಪ್ರಿಯಕರಗಳಾದ ಪಾಪಕರ್ಮಗಳೇನು ಇವುಗಳಿಂದ ಉಂಟಾಗುವ, ಸುಸಾಧನಿ ಮತ್ತು ದುಸ್ಸಾಧನಿಗೆ ಸಾಧಕವಾದ ದೇಹದಿಂದ ಭೋಗಿಸಲ್ಪಡತಕ್ಕ ಫಲಗಳನ್ನ, ಬ್ರಹ್ಮಾದಿ–ಚೇತನಕೆ–ಬ್ರಹ್ಮದೇವರೇ ಮೊದಲಾದ ಸಮಸ್ತ ತತ್ವಾಭಿಮಾನಿ ದೇವತೆಗಳಿಗೂ, ಇನ್ನೂ ಸಮಸ್ತ ದೇವತೆಗಳಿಗೂ ಮತ್ತು ದೇಹಗತ ಜೀವನಿಗೂ ಯೋಗ್ಯತಾನುಸಾರ, ಆದಿಶಬ್ದದಿಂದ ನಿತ್ಯಸಂಸಾರಿಗಳಿಗೆ ಉದಾಸೀನ ಕರ್ಮಫಲ, ತಮೋಯೋಗ್ಯರಿಗೆ ಪಾಪಕರ್ಮಫಲ, ಅವರವರ ಯೋಗ್ಯತಾನುಸಾರ ಕೊಡತಾನೆ. ದೇಹಗತ ಜೀವಗೆ, ಪಾಪ,

ಉದಾಸೀನ, ಪುಣ್ಯಫಲಗಳು ತ್ರಿವಿಧ ಫಲಗಳನ್ನ ಕೊಡತಾನೆ. (ನಿತ್ಯಸಂಸಾರಿಗಳಿಗೆ ಸರ್ವಜೀವರ ದೇಹಾಭಿಮಾನಿತ್ವವೂ, ಇಂದ್ರಿಯ ನಿಯಾಮಕತ್ವವೂ ಇವೆ.) ಚೇತನಕೆ– ಈ ತ್ರಿವಿಧ ಜೀವರ ದೇಹಗತ ಜೀವನಿಗೆ, ಉಣಿಸುತ–ಬಿಂಬಕ್ರಿಯಾ ದ್ವಾರಾ ತನ್ನ ಸ್ವಾಖ್ಯಗಳ ತಾನು ಉಂಡು, ತತ್ವೇಶರ ದ್ವಾರಾ ದೇಹಗತ ಜೀವಗೆ ಕರ್ಮಫಲ ಉಣಿಸುತಾ, ಅವರೊಳಗಿದ್ದು–ಆಯಾ ದೇಹಗತ, ಆಯಾ ತ್ರಿವಿಧ ತತ್ವೇಶರೊಳಗಿದ್ದು, ವೃಜಿನಾರ್ದನ–ವೃಜಿನ–ಪಾಪಗಳ, ಅರ್ದನ–ನಾಶಮಾಡತಕ್ಕವನಾದ, ಚಿದಾನಂದೈಕ ದೇಹನು – ಚಿತ್ – ಜ್ಞಾನ, ಆನಂದ – ಸಂತೋಷವು. ಈ ಎರಡರಿಂದ, ಏಕ – ಅಸದೃಶವಾದ, ದೇಹನು–ಇಂಥಾ ದೇಹವುಳ್ಳ ಶ್ರೀ ಪರಮಾತ್ಮನು, ಕೊನೆಗೆ–ಸ್ಥಿತಿಕಾಲದ ಅಂತ್ಯಕ್ಕೆ, ಸಚರಾಚರ ಜಗದ್ಭುಕು ಎನಿಪನು–ಸಂಕರ್ಷಣ ರೂಪದಿಂದ ಚರಾಚರ ನಾಶ ಮಾಡಿದ ನಂತರ, ಚರ–ಜಂಗಮ ಜೀವರು, ಮತ್ತು ಅಚರ–ಸ್ಥಾವರ ಜೀವರು ಸಹಿತರಾದ ತ್ರಿವಿಧ ಜೀವರ, ಭುಕು–ಮುಖ ದ್ವಾರದಿಂದ ಅನ್ನಾದಿಗಳು ಭೋಜನ ಮಾಡಿ ಉದರದಲ್ಲಿಡುವ, ಮುಖ ದ್ವಾರದಿಂದ ತನ್ನ ಉದರದಲ್ಲಿ ನಾರಾಯಣ ದೇವರು ಇಟ್ಟವರಾಗಿ, ಆಯಾ ಜೀವರ ಅನ್ಯೋನ್ಯಕಾದಿಗಳಿಗೆ ಉದರದಲ್ಲಿ ಸ್ಥಾನಭೇದಗಳು ಇದ್ದಂತೆ ನಾನಾ ಭೇದಗಳಲ್ಲಿ ಇಡತಾನೆ. ಎನಿಪ–ಈ ಕಾರಣದಿಂದ ನಾರಾಯಣ ದೇವರು ಜಗದ್ಭುಕು ಎಂತ ಎನಿಸೋವನಾಗತಾನೆ. ಅವ್ಯಯನು–ಅನಂತಾನಂತ ಬ್ರಹ್ಮಾಂಡಗಳ ಹಾಂಗೆ ಜೀವರು ಜನಿಸಿ ದೇಹದಿಂದ ನಾಶಯ್ದಿ ಮುಕ್ತರಾಗಿ ಬೇರೆ ಬರೋವರಾಗಿದ್ದಾರೆ ಅನಾದ್ಯನಂತ ಕಾಲಕ್ಕೂ ನಾಶರಹಿತನಾದ ಪರಮಾತ್ಮ ಇವನೊಬ್ಬನೇ, ಅನ್ಯರು ದಾರೂ ಇಲ್ಲವೆಂದು ಅರ್ಥ. ಪ್ರಳಯ ಕಾಲದಲ್ಲಿ ಸಾಧನ ಪೂರ್ತಿ ಆದವರಿಗೆ ಲಿಂಗಭಂಗ ಐದಿಸಿ ಮೋಕ್ಷ ಕೊಡತಾನೆ. ಪ್ರಳಯ ಕಾಲದಲ್ಲಿ ಸಾಧನ ಸಂಪತ್ತು ಪೂರ್ಣರಾಗದವರಿಗೆ ಎಂದರೆ ಅದರನ್ನ ಮುಂದೆ ಹೇಳತಾರೆ.

**ತಾ||** ಸತ್ವರಜಸ್ತಮೋಗುಣಗಳುಳ್ಳ ಜೀವರಲ್ಲಿ ಅವರವರ ಸ್ವಾಭಾವಿಕ ಗುಣಗಳ ಒಳಗೆ ಪರಮಾತ್ಮ ಇದ್ದು ಗುಣ ಸಾಂಕೇತರಾದ ಜೀವರ ಸ್ವರೂಪದಲ್ಲಿದ್ದು ಗುಣಿ ಎಂತಲೂ, ಗುಣ ಸಾಂಕೇತವಾದ ಲಿಂಗದೇಹದಲ್ಲಿದ್ದು ಗುಣ ಎಂತಲೂ ಎನಿಸುವನು. ಆದರೆ ತ್ರಿಗುಣಾತ್ಮಕ ಲಿಂಗದೇಹದಿಂದ ಬದ್ಧನಾಗದೇ, ತ್ರಿಗುಣಾತ್ಮಕ ಲಿಂಗದೇಹೋಪಾದಾನದಿಂದ ಜನಿತಗಳಾದ, ಆವರಣಗಳಾದ, ವೈಷಯಿಕವಾದ ಸಾದಿ ಲಿಂಗ ಶರೀರವೂ, ಇದರ ಮೇಲೆ ಮಹತ್ತತ್ವ ಶರೀರವೂ, ಇದರ ಮೇಲೆ ಅಹಂಕಾರ ತತ್ವ ಶರೀರವೂ, ಇದರ ಮೇಲೆ ಪಂಚಭೂತಾತ್ಮಕ ಪಂಚ ಆವರಣಗಳಿಂದಲೂ, ೨೪ ತತ್ವಗಳಿಂದಲೂ ಸಹಿತವಾದ ಅನಿರುದ್ಧ ಶರೀರವೂ, ಇದರ ಮೇಲೆ ಜಗದುಪಾದಾನ ಕಾರಣವಾದ ಮೂಲ ಜಡ ಪ್ರಕೃತಿಯಿಂದ ಜನಿತವಾದ ಪಾಂಚಭೌತಿಕ ಸ್ಥೂಲದೇಹ, ತಜ್ಜನಿತಗಳಾದ, ಇಂದ್ರಿಯಗಳ ದ್ವಾರಾ, ಭಗವತ್ಪ್ರೀತಿಕರವಾದ ಪುಣ್ಯ ಕರ್ಮಗಳಿಂದ ಮತ್ತು ಭಗವದಪ್ರಿಯಕರಗಳಾದ ಪಾಪ ಕರ್ಮಗಳಿಂದ ಉಂಟಾಗುವ, ಸುಸಾಧನ ಮತ್ತು

ದುಸ್ಸಾಧನಿಗೆ ಸಾಧಕವಾದಂತಾ ದೇಹದಿಂದ ಭೋಗಮಾಡಲ್ಪಡತಕ್ಕ ಕರ್ಮಜನ್ಯ ಫಲಗಳ ಬ್ರಹ್ಮದೇವರೇ ಮೊದಲಾದ ಎಲ್ಲಾ ತತ್ವಾಭಿಮಾನಿ ದೇವತೆಗಳಿಗೂ, ಇನ್ನೂ ಸಮಸ್ತ ದೇವತೆಗಳಿಗೂನೂ, ಇನ್ನೂ ದೇಹಗತನಾದ ಜೀವನಿಗೂನೂ, ಅವರವರ ಯೋಗ್ಯತಾನುಸಾರ ನಿತ್ಯಸಂಸಾರಿಗಳಿಗೆ ಉದಾಸೀನ ಕರ್ಮಫಲ, ತಮೋಯೋಗ್ಯರಿಗೆ ಪಾಪಕರ್ಮ ಫಲಗಳು, ಈ ಪ್ರಕಾರ ತ್ರಿವಿಧ ದೇಹಗತ ಜೀವರಿಗೆ ಬಿಂಬಕ್ರಿಯಾ ದ್ವಾರಾ ತನ್ನ ಸ್ವಾಖ್ಯರಸಗಳ ತಾನು ಉಂಡು, ತತ್ವೇಶರ ದ್ವಾರಾ ದೇಹಗತ ಜೀವಗೆ ಕರ್ಮಫಲಗಳು ಉಣಿಸುತಾ, ಆಯಾ ದೇಹಗತ, ಆಯಾ ತತ್ವೇಶರ ಒಳಗೆ ಇದ್ದು ಪಾಪಗಳ ನಾಶ ಮಾಡತಕ್ಕವನೂ, ಸಚ್ಚಿದಾನಂದ ಮೂರ್ತಿಯೂ ಆದ ಪರಮಾತ್ಮನು, ಸ್ಥಿತಿ ಕಾಲದ ಅಂತ್ಯಕ್ಕೆ ಸಂಕರ್ಷಣ ರೂಪದಿಂದ ಚರಾಚರ ನಾಶ ಮಾಡಿದ ನಂತರ ಜಂಗಮ ಜೀವರು, ಸ್ಥಾವರ ಜೀವರು ಇವರಿಂದ ಸಹಿತರಾದ ತ್ರಿವಿಧ ಜೀವರ ಮುಖ ದ್ವಾರದಿಂದ ಅನ್ನಾದಿಗಳು ಭೋಜನ ಮಾಡಿ ಉದರದಲ್ಲಿ ಇಡುವಂತೆ ಮುಖ ದ್ವಾರದಿಂದ ತನ್ನ ಉದರದಲ್ಲಿ ನಾರಾಯಣ ದೇವರು ಇಟ್ಟವನಾಗಿ, ಆಯಾ ಜೀವರ ಅನ್ನೋದಕಾದಿಗಳಿಗೆ ಉದರದಲ್ಲಿ ಸ್ಥಾನಭೇದಗಳು ಇದ್ದಂತೆ, ಸ್ಥಾನಭೇದಗಳಲ್ಲಿ ಇಡತಾನೆ. ಆದ ಕಾರಣ ಶ್ರೀ ನಾರಾಯಣ ದೇವರು ಜಗದ್ಭುಕು ಎಂತ ಎನಿಸೋವನಾಗತಾನೆ. ಇನ್ನು ಅನಂತಾನಂತ ಬ್ರಹ್ಮಾಂಡಗಳ ಹಾಂಗೆ ಜೀವರು ಜನಿಸಿ ದೇಹದಿಂದ ನಾಶಯ್ದಿದಿ ಮುಕ್ತರಾಗಿ ಬೇರೆ ಬರೋವರಾಗಿದ್ದಾರೆ. ಆದರೆ ಅನಾದ್ಯನಂತ ಕಾಲಕ್ಕೂ ನಾಶರಹಿತನಾದವನು ಪರಮಾತ್ಮನೊಬ್ಬನೇ. ಅನ್ಯರು ದಾರೂ ಇಲ್ಲವಾದ ಕಾರಣ ಅವ್ಯಯನು ಎಂತ ಕರಿಸೋವನಾಗತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ** :— ನಿತ್ಯಸಂಸಾರಿಗಳಿಗೆ ಸರ್ವಜೀವರ ದೇಹಾಭಿಮಾನಿತ್ವ, ಇಂದ್ರಿಯ ನಿಯಾಮಕತ್ವ ಇದೆ ಎಂಬುದಕ್ಕೆ ಪ್ರಮಾಣ :— "ದೇಹೇಂದ್ರಿಯಪ್ರಾಣಧಿಯಾಂ ಸ್ತಥೈವ ತ್ವಭಿಮಾನಿನಃ|| ತತ್ರೋತ್ತಮಾ ದೇವತಾಸ್ಥಾಃ ಸರ್ವದೋಷವಿವರ್ಜಿತಾಃ ಗುಣೈಸ್ಸರ್ವೈಃ ಸುಸಂಪನ್ನಾ ವಿರಿಂಚಾದುತ್ತರೋತ್ತರಂ || ಮಧ್ಯಮಾ ಗುಣದೋಷೇತಾಃ ಅಧಮಾ ಅಸುರಾ ಮತಾಃ| ತೇ ಸರ್ವೇ ದೋಷಸಂಯುಕ್ತಾಃ ಅಚಿತ್ತಾದುತ್ತರೋತ್ತರಂ | ತೇಭ್ಯೋಽನ್ಯೇ ಮಾನುಷಾ ಜೀವಾಃ ತಾಭ್ಯಾಂ ದೇವಾಸುರಾ ಅಪಿ ||" ತೇಭ್ಯಃ ಅನ್ಯೇ ಮಾನುಷಾ ಜೀವಾಃ ಅಂದರೆ ಪೂರ್ವೋಕ್ತ ದೇಹಾಭಿಮಾನಿ ತ್ರಿವಿಧ ಸಾಂಶರ ಕಿಂತಲೂ ಅನ್ಯರಾದ ನಿರಂಶ ಜೀವರು ಎಂತ ತಾತ್ಪರ್ಯ. ತಾಭ್ಯಾಂ—ಈ ಸಾಂಶ ನಿರಂಶರಲ್ಲಿ ದೇವತೆಗಳು ಅಸುರರು, ಅಪಿಶಬ್ದದಿಂದ ನಿತ್ಯಸಂಸಾರಿಗಳೂ ಇದ್ದಾರೆ ಎಂತ ತಾತ್ಪರ್ಯ. ಇದರಿಂದ ನಿತ್ಯಸಂಸಾರಿಗಳಿಗೆ ಸಾಂಶತ್ವವು, ತತ್ವಾಭಿಮಾನಿತ್ವವೂ ಏರ್ಪಡುತ್ತದೆ. ಅತ ಏವ ಪರಮಾತ್ಮ ಉದಾಸೀನ ಕರ್ಮ ಫಲವನ್ನು ದೇಹಗತ ತತ್ವಾಭಿಮಾನಿಗಳಾದ ನಿತ್ಯಸಂಸಾರಿಗಳಿಗೆ ವಿಭಾಗಿಸಿ ಕೊಡತಾನೆ. ಪುರಂಜನ ಎಂಬುವ ನಿತ್ಯಸಂಸಾರಿ ಜೀವರೊಳಗೆ ಬ್ರಹ್ಮಸದೃಶನಾದವನು ಎಂತ ವಿಜಯದಾಸರವರ ಸುಳಾದಿಯಲ್ಲಿಯೂ, ಪದಗಳಲ್ಲಿಯೂ, ಉಗಾಭೋಗಗಳಲ್ಲಿಯೂ ಹೇಳಿಯದೆ.

**ವಿದ್ಯೆ ತಾನೆಂದೆನಿಸಿಕೊಂಬನಿ ।**
**ರುದ್ಧದೇವನು ಸರ್ವಜೀವರ ।**
**ಬುದ್ಧಿಯೋಳ್ ನೆಲೆಸಿದ್ದು ಕೃತಿಪತಿ ಬುದ್ಧಿಯೆನಿಸುವನು ॥**
**ಸಿದ್ಧಿಯೆನಿಸುವ ಸಂಕರುಷಣ ಪ್ರ ।**
**ಸಿದ್ಧನಾಮಕ ವಾಸುದೇವನ ।**
**ವದ್ಯರೂಪಚತುಷ್ಟಯಗಳರಿತವನೆ ಪಂಡಿತನು ॥ ೬ ॥**

ಶ್ರೀ ಪರಮಾತ್ಮನ ಮಹಿಮಾ ತಿಳಿದು ಧ್ಯಾನೋಪಾಸನ ಮಾಡತಕ್ಕವನೇ ಪಂಡಿತನೆಂದು ಹೇಳತಾರೆ.

ಮನೋವೃತ್ತಿಗಳು ನಾಲ್ಕು, ಮನಸು ಕೂಡಾ ಸೇರಿ ಐದು.

| | | | | | | |
|---|---|---|---|---|---|---|
| ೧. | ಅಹಂಕಾರ | — | ಅಸ್ವರೂಪೇ ಸ್ವರೂಪತಾಮಿತಿ | — | ಅನಿರುದ್ಧ |
| ೨. | ಬುದ್ಧಿ | — | ನಿಶ್ಚಯ ಜ್ಞಾನ | — | ಪ್ರದ್ಯುಮ್ನ |
| ೩. | ಚಿತ್ತ | — | ಸ್ಮರಣೇಚ್ಛಾ | — | ವಾಸುದೇವ |
| ೪. | ಮನಸ್ಸು | — | ಸಂಕಲ್ಪ, ವಿಕಲ್ಪ | — | ಸಂಕರ್ಷಣ |
| ೫. | ಅಂತಃಕರಣ | — | ಫಲಭೋಗ | — | ನಾರಾಯಣ |

ಈ ಐದು ರೂಪಗಳು ಜೀವರನ್ನು ಉದ್ಧಾರ ಮಾಡತಕ್ಕ ರೂಪಗಳು, ಹ್ಯಾಂಗೆಂದರೆ,

ವಿದ್ಯೆ—ಅಹಂಕಾರ ವೃತ್ತಿಯಲ್ಲಿ ವಿದ್ಯಮಾನವಾದ ಅಹಂಮಮತಾದಿಗಳ ಬಿಡಿಸಿ ತಾರತಮ್ಯ ಪಂಚಭೇದಗಳ ಸುಜ್ಞಾನವೆಂಬ ವಿದ್ಯಾವನ್ನ ವ್ಯಕ್ತಿಮಾಡಿ, ತಾನೆಂದು— ವಿದ್ಯಾ ಸ್ವರೂಪನಾಗಿ ಇರತಕ್ಕವನೆಂದು, ಎನಿಸಿಕೊಂಬನು—ಎನಿಸತಾನೆ ಅನಿರುದ್ಧ ದೇವನು—ಅನಿರುದ್ಧ ನಾಮಕನು. ಸರ್ವಜೀವರ—ಮುಕ್ತಿಯೋಗ್ಯರಾದ ಸಮಸ್ತ ಜೀವರ, ಬುದ್ಧಿಯೊಳ್—ಬುದ್ಧಿ ಸಾಂಕೇತ ವೃತ್ತಿಯಲ್ಲಿ, ನೆಲೆಸಿದ್ದು—ಆವಾಸನಾಗಿದ್ದು, ಕೃತಿಪತಿ— ಕೃತಿಪತಿ ಪ್ರದ್ಯುಮ್ನ ನಾಮಕನು, ಬುದ್ಧಿ ಎನಿಸುವನು—ಪೂರ್ವೋಕ್ತ ರೀತ್ಯಾ ಉತ್ಪನ್ನ ವಾದ ಜ್ಞಾನ ವಿಷಯದಲ್ಲಿ ನಿಶ್ಚಯವಾದ ಬುದ್ಧಿಯನ್ನು ಕೊಟ್ಟು, ತದಂತರ್ಗತನಾಗಿ ನಿಶ್ಚಯ ಬುದ್ಧಿ ಎಂತ ಕರಿಸತಾನೆ. ಸಿದ್ಧಿ—ಆ ಹುಟ್ಟಿದ ನಿಶ್ಚಯಜ್ಞಾನ ಪುನಃ ವಿಕಲ್ಪ ವಾಗದಂತೆ ಮನೋವೃತ್ತಿ ದ್ವಾರಾ ವಿಶೇಷವಾಗಿ ಸಿದ್ಧಿ ಮಾಡಿಕೊಟ್ಟು, ಸಿದ್ಧಿ ಎಂತ, ಎನಿಸುವ—ಎನಿಸತಾನೆ, ಸಂಕರುಷಣ ನಾಮಕನು—ಸಂಕರುಷಣ ನಾಮಕನು. ಪ್ರಸಿದ್ಧ ನಾಮಕ ವಾಸುದೇವ—ಅಂಥ ಸಿದ್ಧಿ ಆದ ಜ್ಞಾನದಿಂದ ಹೃದಯಾಕಾಶದಲ್ಲಿ ಪರಮಾತ್ಮನ ಧ್ಯಾನಾದಿಗಳ ಮಾಡಬೇಕೆಂಬ ಪ್ರಸಿದ್ಧವಾದ ಧ್ಯಾನೋಪಾಸನಾದಿಗಳ ಪ್ರಯತ್ನ ಚಿತ್ತ ದ್ವಾರಾ ನಡಿಸಿ ಅದರಲ್ಲಿ ಪ್ರಸಿದ್ಧನಾಮಕನಾಗಿ ವಾಸುದೇವನು ಇರತಾನೆ. ಇಲ್ಲಿಗೆ ಅನಿರುದ್ಧಾದಿ ನಾಲ್ಕು ಭಗವದ್ರೂಪಗಳು ಮನ ಆದಿ ವೃತ್ತಿಗಳಲ್ಲಿ ಇರತಕ್ಕವುಗಳಾಗಿ ಜೀವರ ಉದ್ಧಾರಾರ್ಥ ಜ್ಞಾನಾದಿಗಳು ಪ್ರಕಾಶ ಮಾಡಿ ಕಾರ್ಯಭೇದಗಳಿಂದ ಅನ್ಯವಾದ

ಆಯಾ ನಾಮುಗಳಿಂದ ಕರಿಸೋವರಾದರೂ, ಅನವದ್ಯ–ದೋಷರಹಿತವಾದ, ರೂಪ ಚತುಷ್ಟಯಗಳ–ನಾಲ್ಕು ವೃತ್ತಿಗತ ಕಾರ್ಯ ಭೇದದಿಂದ ಅನ್ಯನಾಮುಗಳ ಸಹಿತ ಅನಿರುದ್ಧಾದಿ ರೂಪ ಚತುಷ್ಟಯಗಳ, ಅರಿತವನೇ–ತಿಳಿದವನೇ, ಪಂಡಿತನು–ಜ್ಞಾನಿಯಾದವನು. ಅಂತಃಕರಣವೃತ್ತಿಗತನಾದ ನಾರಾಯಣನ ವಿಚಾರ ಮುಂದೆ ಹೇಳತಾರೆ.

**ತಾ||** ವಿದ್ಯಾದಿ ಚತುಃಸ್ಥಾನದಲ್ಲಿ ತತ್ತನ್ನಾಮದಿಂದ ಶ್ರೀಹರಿ ಕರೆಸತಾನೆಂದು ತಿಳಿದವನೇ ಪಂಡಿತನು.

**ತನುಚತುಷ್ಟಯಗಳೊಳು ನಾರಾ ।**
**ಯಣನು ಹೃತ್ಕಮಲಾಖ್ಯ ಸಿಂಹಾ ।**
**ಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತ ॥**
**ತನಗೆ ತಾನೇ ಸೇವ್ಯ ಸೇವಕ ।**
**ನೆನಿಸಿ ಸೇವಾಸಕ್ತ ಸುರರೊಳ ।**
**ಗನವರತ ನೆಲಸಿದ್ದು ಸೇವೆಯ ಕೊಂಬನವರಂತೆ ॥ ೭ ॥**

ತನುಚತುಷ್ಟಯಗಳೊಳು — ತನು–ಸ್ಥೂಲಶರೀರವು, ಚತುಷ್ಟಯಗಳೊಳು–ನಾಲ್ಕರ ಒಳಗೆ ಅಂದರೆ ನಾಲ್ಕು ವಿಧ ಶರೀರಗಳೊಳು :– ೧. ಬ್ರಹ್ಮದೇವರ ಮೊದಲು ಶತಸ್ಥರವರೆಗೆ ದೇವಗಣ ಒಂದು, ೨. ಬಲ್ಯಾದಿ ಪುಷ್ಕರಾಂತ ಕರ್ಮಜ ದೇವಗಣ ಒಂದು, ೩. ಆಜಾನಜರು ಮೊದಲು ಗಂಧರ್ವರವರೆಗೆ ಒಂದು ಗಣ, ೪. ಮನುಷ್ಯ ಗಂಧರ್ವಾರಭ್ಯ ತೃಣಾಂತ ಗಣ ಒಂದು. ಈ ನಾಲ್ಕು ದೇಹಗಣಗಳೊಳು ವಿದ್ಯಮಾನವಾದ ಅಂತಃಕರಣವೃತ್ತಿಗತನಾದವ ನಾರಾಯಣನು. ಪೂರ್ವೋಕ್ತ ನಾಲ್ಕು ವೃತ್ತಿಗಳ ಕಾರ್ಯವೂ ತನುಚತುಷ್ಟಯದಲ್ಲಿ ಉಂಟೆಂದು ತಿಳಿಯಬೇಕು. ತನುಚತುಷ್ಟಯಗತ ಮನೋವೃತ್ತಿಯಲ್ಲಿರುವ, ನಾರಾಯಣನು–ಶ್ರೀನಾರಾಯಣದೇವರು, ಹೃತ್–ಸ್ಥೂಲ ದೇಹಹೃದಯಗತ ಸುಷುಮ್ನನಾಡೀ ಮಧ್ಯಗತ, ಕಮಲಾಖ್ಯ–ರಮಾಭಿಮನ್ಯಮಾನವಾದ ಅಷ್ಟದಳಕಮಲವೆಂಬ, ಸಿಂಹಾಸನದೊಳು–ಸಿಂಹಾಸನದಲ್ಲಿ, ಅನಿರುದ್ಧಾದಿ–ಅನಿರುದ್ಧ, ಪ್ರದ್ಯುಮ್ನ, ಸಂಕರುಷಣ, ವಾಸುದೇವ, ರೂಪಗಳಿಂದ–ಅಭಿನ್ನವಾದ ತನ್ನ ರೂಪಗಳಿಂದ, ಶೋಭಿಸುತ–ಪ್ರಕಾಶಮಾನನಾಗುತ್ತಾ, ತನಗೆ ತಾನೇ–ತನ್ನ ಅಸದೃಶವಾದ, ಚಿದಾನಂದವಾದ ತನ್ನ ರೂಪಗಳಿಂದ ತಾನೇ ಆಗಿ (ಅಥವಾ ತನ್ನ ಅಸದೃಶವಾದ ಚಿದಾನಂದರೂಪಕ್ಕೆ ಪೂಜೋಪಯೋಗ್ಯವಾದ ದ್ರವ್ಯಗಳು), ಸೇವ್ಯ–ಸೇವೆ ತೆಗೆದು ಕೊಂಬವನೇನು, ಸೇವಕ–ಸೇವೆ ಮಾಡುವನೇನು (ಹಾಗೇವೇ ಪೂಜಾಮಾಡೋ ದ್ರವ್ಯಗಳೇನು, ಎಲ್ಲಾನೂ), ಎನಿಸಿ–ತಾನೇ ಎನಿಸಿ ಪೂಜಾದಿಗಳ ಮಾಡಿಕೋತಾನೆ. (ಹ್ಯಾಂಗೆ ಅಂದರೆ), ಸೇವಾಸಕ್ತ–ಸೇವೆ ಮಾಡತಕ್ಕ, ಆಸಕ್ತಿಯುಳ್ಳ, ಸುರರೊಳಗೆ–ದೇವತೆಗಳೊಳು ಮತ್ತು ಬ್ರಾಹ್ಮಣರಲ್ಲಿ, ಅನವರತ–ನಿರಂತರ, ತದಾಕಾರದಿಂದ, ನೆಲೆಸಿದ್ದು–ಆವಾಸ

ವಾಗಿದ್ದು, ಎಂದರೆ ಪೂಜಾದಿಗಳು ಮಾಡಿಸಿಕೊಳ್ಳತಕ್ಕ ಪ್ರತಿಮಾಂತರ್ಗತನಾಗಿಯೂ, ಪೂಜಾಮಾಡೋವನಲ್ಲಿ ತದಾಕಾರನಾಗಿಯೂ ಪೂಜೋಪಯೋಗ್ಯವಾದ ದ್ರವ್ಯಾಂತರ್ಗತ ನಾಗಿಯೂ, ಈ ಪ್ರಕಾರ ತ್ರಿವಿಧಾಧಿಷ್ಠಾನದಲ್ಲಿ ಆವಾಸನಾಗಿದ್ದು, ಸೇವೆಯಗೊಂಬನು– ಪೂಜಾದಿಗಳನ್ನು ತೆಗೆದುಕೋತಾನೆ. ದಾವದರನ್ನ ಎಂದರೆ ತನ್ನ ಸ್ವಾಖ್ಯರೂಪದಿಂದ ಸ್ವಾಖ್ಯವಾದ ಪೂಜಾದ್ರವ್ಯಾಂತರ್ಗತ ಭಗವದ್ರೂಪವನ್ನ ಎಂತ ಅರ್ಥ. ಇಂಥಾ ಅಂತಃ ಕರಣವೃತ್ತಿಗತನಾದ ನಾರಾಯಣನ ಕಾರ್ಯವಿದು. ಆದಕಡಿಯಿಂದ, ಅದರಂತೆ– ಇಂಥಾ ಹೃದಯಾಂತರ್ಗತ ವಾಸನಾಮಯ ಪ್ರತೀಕವನ್ನ ನಿಲ್ಲಿಸಿ ಪೂಜಾದಿಗಳು ಮಾಡಿ ದರೆ ಭಗವದಪರೋಕ್ಷವಾಗಿ ಯೋಗ್ಯತಾನುಸಾರ ಫಲ ಹೊಂದತಾನೆ ಎಂತ ತಾತ್ಪರ್ಯ.

**ತಾ||** ಮೇಲೆ ಹೇಳಿದ ನಾಲ್ಕು ಸ್ಥೂಲಶರೀರಗಳಲ್ಲಿ (ಅಥವಾ ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲ) ಈ ನಾಲ್ಕು ದೇಹಗಳಲ್ಲಿ ಅನಿರುದ್ಧಾದಿರೂಪಚತುಷ್ಟಯದಿಂದ ಶ್ರೀಪರಮಾತ್ಮ ಇದ್ದು ವಿದ್ಯಾದಿ ತತ್ವಾಭಿಮಾನಿ ದೇವತೆಗಳಲ್ಲಿಯೂ, ಪೂಜಾಸಾಧನ ದ್ರವ್ಯಗಳಲ್ಲಿಯೂ, ಪೂಜಾಮಾಡೋವರಲ್ಲಿಯೂ ತಾನೇ ನಿಂತು ಜೀವರಂತೆ ತನ್ನ ಸೇವಾ ತಾನೇ ಮಾಡಿಕೋತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–**ಉಕ್ತಂ ಚ ಸತ್ತತ್ವರತ್ನಮಾಲಾಯಾಂ ನಾರಾಯಣಪ್ರಕರಣೇ :– "ಸ್ವಯಂ ಸರ್ವತ್ರ ಸಂಸ್ಥಃ ಸನ್ ಸ್ವಪೂಜಾಂ ವಿದಧಾತಿ ಚ | ಸರ್ವಕರ್ಮಾಣಿ ಕುರುತೇ ಸರ್ವತ್ರಾಸಕ್ತವಸನ್ನಿತಿ ||" ಸುಷುಮ್ನಾನಾಡೀ ಪಂಚವಿಧ :— ೧. ಆರ್ಯಕಾ, ೨. ವಜ್ರಿಕಾ, ೩. ಪ್ರಕಾಶಿಕಾ, ೪. ವೈದ್ಯುತಿ, ೫. ಸುಷುಮ್ನಾ. ಈ ಸುಷುಮ್ನಾಕ್ಕೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ನಾಡಿ, ಮಧ್ಯದಲ್ಲಿ ಸುಷುಮ್ನಾ. ಈ ಐದು ನಾಡಿಗಳಲ್ಲಿ ಪೂರ್ವೋಕ್ತ ಮನ ಆದಿ ಪಂಚವೃತ್ತಿಗಳು ಅನಿರುದ್ಧಾದಿ ಐದು ಭಗವದ್ರೂಪಗಳಿವೆ. ಅದರಲ್ಲಿ ಮಧ್ಯನಾಡಿಯಲ್ಲಿ, ಅಂತಃಕರಣವೃತ್ತಿಯಲ್ಲಿ ನಾರಾಯಣದೇವರು ಇದ್ದಾರೆ. ಈ ಐದು ನಾಡಿಗಳಲ್ಲಿ, ಪ್ರತಿನಾಡಿಯಲ್ಲಿ ಹೃದಯಪ್ರದೇಶದಲ್ಲಿ ಅಷ್ಟದಳ ಕಮಲಗಳು ಅವೆ. ಅದರಲ್ಲಿ ಐದು ಭಗವದ್ರೂಪಗಳು ಅವೆ.

**ಜಾಗರ ಸ್ವಪ್ನಂಗಳೊಳು ವರ |**
**ಭೋಗಿಶಯನ ಬಹು ಪ್ರಕಾರ ವಿ |**
**ಭಾಗಗೈಸಿ ನಿರಂಶಜೀವರ ಚಿಚ್ಛರೀರವನು ||**
**ಭೋಗವಿತ್ತು ಸುಷುಪ್ತಿಕಾಲದಿ |**
**ಸಾಗರವ ನದಿ ಕೂಡುವಂತೆ ವಿ |**
**ಯೋಗರಹಿತನು ಅಂಶಗಳನೇಕತ್ರವೈದಿಸುವ || ೮ ||**

ಜೀವರ ಅವಸ್ಥಾತ್ರಯಗಳೊಳಗೆ ಸ್ವಪ್ನಾವಸ್ಥಾವಿಚಾರವು ಮತ್ತು ನಿದ್ರಾವಸ್ಥಾ ವಿಚಾರವು ಹೇಳತಾರೆ.

ಜಾಗರ–ಆಯಾ ಪ್ರಾಣಿಗಳ ಜಾಗ್ರದವಸ್ಥಾ ಅತೀತವಾಗಿ, ಸ್ವಪ್ನಂಗಳೊಳು–ಸ್ವಪ್ನಾವಸ್ಥಾದಿಂದ ಸಹಿತವಾಗಿರುವ, ಆಯಾ ಜೀವರು ಸ್ವಪ್ನಗಳಲ್ಲಿ ಕಾಣತಕ್ಕ ಗಜ ತುರಗ ಮಾನುಷಾದಿ ಸ್ಥೂಲದೇಹಸಹಿತರಾದ ಜೀವರು ನಿದ್ರಾವಸ್ಥಾದಲ್ಲಿ ಕಾಣುವ ಸ್ವಪ್ನಗಳೊಳು, ವರಭೋಗಿಶಯನ– ವರ–ಸರ್ಪಶ್ರೇಷ್ಠನಾದ, ಭೋಗಿ–ಶೇಷದೇವರೇ, ಶಯನ–ಹಾಸಿಗೆಯಾಗಿ ಉಳ್ಳ, ಸ್ವಪ್ನಾವಸ್ಥಾಪ್ರೇರಕನಾದ ತೈಜಸರೂಪೀ ಪರಮಾತ್ಮನು, ಬಹುಪ್ರಕಾರ–ನಾನಾಪ್ರಕಾರ ಸ್ಥೂಲದೇಹದಿಂದ ಯುಕ್ತರಾದ, ನಿರಂಶಜೀವರ–ಅಂಶ ಇಲ್ಲದ ಜೀವರ, ಚಿಚ್ಛರೀರವನು – ಚಿತ್–ಕಾಂತಿರೂಪವನ್ನು, ಶರೀರವನು–ಅವರವರು ಧರಿಸಿದ ಸ್ಥೂಲಶರೀರವನ್ನು, ಎರಡರನ್ನೂ, ವಿಭಾಗಗೈಸಿ – ಅಂಶವಿಶೇಷದಿಂದ ವಿಭಾಗ ಮಾಡಿ, ಭೋಗವಿತ್ತು–ಆ ವಿಭಾಗಮಾಡಿದ ಆಯಾ ಭಿನ್ನಭಿನ್ನರಾದ ಗಜತುರಗಾದಿ ಜೀವರ ಅಂಶಗಳ ಪರಸ್ಪರ ಅವರವರ ಸ್ವಪ್ನಕಾಲದಲ್ಲಿ ಅವರವರಿಗೆ ಪ್ರದರ್ಶನಮಾಡಿ, ಅವರವರಿಗೆ ಪರಸ್ಪರ ಸಂಭಾಷಣಾದಿಗಳಿಂದ ಭೋಗವಿತ್ತು ಮತ್ತು ಜಾಗ್ರತ್ಕಾಲದಲ್ಲಿ ನೋಡಿದ ಗಜತುರಗಮಾನುಷರು ಇವರೇ ಎಂತಲೂ, ಜಾಗ್ರತ್ಕಾಲದಲ್ಲಿ ಸಂಚಾರ ಮಾಡತಾ ಇದ್ದ ಪ್ರದೇಶದಲ್ಲಿ ಸಂಚಾರಮಾಡತಾ ಇದ್ದಾನೆಂತಲೂ, ಈ ಪ್ರಕಾರ ಸ್ವಪ್ನ ಐದತಾ ಇರತಕ್ಕ ಜೀವಗೆ ಇಂಥಾ ಅನುಭವ ಪ್ರತಿಜೀವಗೆ ಸ್ವಪ್ನಕಾಲದಲ್ಲಿ ಭೋಗವಿತ್ತು ನಂತರ, ಸುಷುಪ್ತಿಕಾಲದಿ – ಸ್ವಪ್ನ ಅತೀತವಾಗಿ ನಿದ್ರಾ ಪ್ರಾಪ್ತವಾಗೋ ಕಾಲದಲ್ಲಿ, ಸಾಗರವ–ಸಮುದ್ರವನ್ನು, ನದೀ ಕೂಡುವಂತೆ–ನದಿಗಳು ಸೇರುವೋಪಾದಿಯಲ್ಲಿ (ಸಮುದ್ರ ಅಂಶಿ, ನದಿಗಳು ಅಂಶ. ಮೇಘ ಈ ಸಮುದ್ರೋದಕವನ್ನು ವಿಭಾಗದಿಂದ ಕ್ವಚಿತ್ ಪಾನಮಾಡಿ ಮಳೆ ಸುರಿಸುತ್ತದೆ. ಮತ್ತು ಆ ಉದಕ ನದೀ ರೂಪದಿಂದ ಸಮುದ್ರವನ್ನ ಹ್ಯಾಂಗೆ ಸೇರತದೋ, ತದ್ವತ್), ವಿಯೋಗರಹಿತನು–ಜೀವನ ವಿಯೋಗದಿಂದ ರಹಿತ ನಾದ ಶ್ರೀಪರಮಾತ್ಮನು, ಅಂಶಗಳ–ನಿರಂಶರಾದ ಜೀವರ ತನ್ನ ಅಚಿಂತ್ಯಶಕ್ತಿಯಿಂದ ಜೀವರಿಗೆ ತಿಳಿಯದೇನೇ ಅಂಶಗಳ ವಿಭಾಗಮಾಡಿ ಅನ್ಯರ ಸ್ವಪ್ನದಲ್ಲಿ ಪ್ರದರ್ಶನಮಾಡಿ ಮತ್ತು ವಿಭಾಗಮಾಡಿದ ಆಯಾ ಅಂಶಗಳ ಅಂಶಿಯಾದ ನಿರಂಶಜೀವನಲ್ಲಿ, ಏಕತ್ರ ವೈದಿಸುವ–ಒಂದೇ ಸ್ಥಳದಲ್ಲಿ ಐದಿಸೋವನಾಗತಾನೆ ಎಂದರೆ ಅಂಶಗಳ ಅಂಶಿಯಲ್ಲಿ ಸೇರಿಸ ತಾನೆ.

**ತಾ||** " ಸರ್ವೇಂದ್ರಿಯಾಣಾಮುಪರಮ ಏವ ಸುಷುಪ್ತಿಃ " ಎಂಬ ಪ್ರಮಾಣ ರೀತ್ಯಾ ಜಾಗರಸ್ವಪ್ನಗಳಲ್ಲಿ ಅಂಶ ಇಲ್ಲದ ಜೀವರ ಕಾಂತಿರೂಪವನ್ನು, ಸ್ಥೂಲಶರೀರವನ್ನು ಸರ್ವಕಾಲದಲ್ಲೂ ವಿಭಾಗಮಾಡಿ ಸಕಲಭೋಗಗಳನ್ನು ಮಾಡಿಸಿ ಅನಂತರ ಸುಷುಪ್ತಿ ಯಲ್ಲಿ, ಮೇಘಗಳು ಸಮುದ್ರೋದಕವನ್ನು ಪಾನಮಾಡಿ ಮಳೆಗರೆದು ನದೀ ದ್ವಾರಾ ಪಾನ ಮಾಡಿದ ಉದಕವನ್ನೇ ಸಮುದ್ರ ಸೇರಿಸುವಂತೆ ಏಕತ್ರ ಕೂಡಿಸತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಏಕತ್ರವೈದಿಸುವ ಎಂದರೆ ಅಂಶಿಗಳನ್ನ ಅಂಶದಲ್ಲಿ ಸೇರಿಸದಾನೆ. ಇನ್ನು ನಿರಂಶರಿಗೆ ಸಾಂಶತ್ವ ಎಂಬುದು ಹ್ಯಾಂಗೆಂದರೆ, ಪ್ರಮಾಣ :– " ನಿರಂಶಾನಾಂ ಚ

ಜೀವಾನಾಂ ಕ್ವಚಿತ್ಸಾಂಶತ್ವಮಿಷ್ಯತೇ । ಲೋಕಾಂತರೇ ತು ಸಾಂಶತ್ವಂ ಸುಖಾದೇವ ಭವಿಷ್ಯತಿ || ತಸ್ಮಾಜ್ಜೀವಸ್ಯ ಸಾಂಶತ್ವಂ ಅಂಗೀಕಾರ್ಯಂ ಮನೀಷಿಭಿರಿತಿ || " ವಾಮನೇ. ಮತ್ತು ಸ್ವಪ್ನಕಾಲದಲ್ಲಿ ವಿಭಾಗಕ್ಕೆ ಪ್ರಮಾಣ :– " ಅನಂಶಸ್ಯಾಪಿ ಜೀವಸ್ಯ ವಿಭಾಗಂ ಬಹುಧಾ ಹರಿಃ | ಕೃತ್ವಾ ಭೋಗಾನ್ ಪ್ರದಾಯ್ಯೈವ ಚೈಕ್ಯಮಾಪಾದಯೇತ್ಸ್ವನರಿತಿ || " ನಿರಂಶರೆಂದು ಪ್ರಸಿದ್ಧಿ ಬರೋಪಕ್ಕೆ ಕಾರಣವೇನೆಂದರೆ ದೇವತೆಗಳೊ ಪಾದಿಯಲ್ಲಿ ಸ್ವಸಾಮರ್ಥ್ಯದಿಂದ ಅಂಶವಿಭಾಗವಿಲ್ಲದ್ದರಿಂದ. ಹಲ್ಲಿ ಬಾಲವನ್ನು ವಿಭಾಗಮಾಡಿದರೆ ಎರಡು ಭಾಗವೂ ಚಲಿಸುತ್ತಾ ಇರುತ್ತವೆ. " ಗೋಧಾದ್ವಿತ್ರಿಭಾಗವತ್ " ಎಂತ ಗ್ರಂಥಾಂತರದಲ್ಲಿ ದೃಷ್ಟಾಂತವಿದೆ.

**ಭಾರ್ಯರಿಂದೊಡಗೂಡಿ ಕಾರಣ ।**
**ಕಾರ್ಯವಸ್ತುಗಳಲ್ಲಿ ಪ್ರೇರಕ ।**
**ಪ್ರೇರ್ಯ ರೂಪಗಳಿಂದ ಪಟತಂತುಗಳವೊಲಿದ್ದು ।**
**ಸೂರ್ಯಕಿರಣಗಳಂತೆ ತನ್ನಯ ।**
**ವೀರ್ಯದಿಂದಲೆ ಕೊಡುತ ಕೊಳುತಿಹ ।**
**ನಾರ್ಯರಿಗೆ ಈತನ ವಿಹಾರವು ಗೋಚರಿಪುದೇನೋ || ೯ ||**

ಶ್ರೀಪರಮಾತ್ಮ ದೇಹಗತನಾಗಿ ಮಾಡತಕ್ಕ ವ್ಯಾಪಾರ ದಾರ ದಾರಿಗೆ ತಿಳಿಯ ದೆಂದು ಹೇಳತಾರೆ.

ಕಾರಣಕಾರ್ಯವಸ್ತುಗಳಲ್ಲಿ – ಕಾರಣವಸ್ತುಗಳು ದಾವ್ರದೆಂದರೆ (೧) ಜಗತ್ತಿಗೆ ಉಪಾದಾನಕಾರಣವಸ್ತುವಾದ ಮೂಲಜಡಪ್ರಕೃತಿ, (೨) ಜೀವ ಸೃಷ್ಟಿಸೋದಕ್ಕೆ ಉಪಾ ದಾನಕಾರಣವಾದ ಲಿಂಗದೇಹಾಖ್ಯ ಪ್ರಕೃತಿ, (೩) ಜೀವರ ಜನ್ಮಕ್ಕೆ ಉಪಾದಾನಕಾರಣ ವಾದ ಲಿಂಗದೇಹಗತ ಅನಾದಿ ಕರ್ಮ, (೪) ಲಿಂಗಾಂತರ್ಗತ ಜೀವ, (೫) ಅನಿರುದ್ಧ ಶರೀರಗತ ತತ್ವದೇವತೆಗಳು. ಕಾರ್ಯವಸ್ತುಗಳು ಯಾವುವೆಂದರೆ :– ನವಾವರಣ ಸಹಿತ ಬ್ರಹ್ಮಾಂಡವೇನು, ಲೋಕಗಳೇನು, ಲಿಂಗದಮೇಲೆ ವೈಷಯಿಕ ಶರೀರಾರಭ್ಯ ಅನಿರುದ್ಧಶರೀರದವರೆಗೂ ಆಗಾಮಿಸಂಚಿತ ಕರ್ಮಗಳು, ಸ್ಥೂಲದೇಹದಲ್ಲಿ ತದಾಕಾರ ದಂತೆ ವ್ಯಾಪ್ತನಾದ ಜೀವ ಇವುಗಳು. ಹ್ಯಾಂಗೆ ಸ್ಥೂಲದೇಹಗತ ತತ್ವದೇವತೆಗಳು ಸ್ಥಾವರಜಂಗಮಾತ್ಮಕ ಈ ಪೂರ್ವೋಕ್ತ ಕಾರ್ಯಕಾರಣವಸ್ತುಗಳಲ್ಲಿ, ಪ್ರೇರಕಪ್ರೇರ್ಯ ರೂಪಗಳಿಂದ–(ಕಾರಣರೂಪ ಶ್ರೀಹರಿ ಕಾರ್ಯರೂಪ ರಮಾದೇವಿ ಆರಭ್ಯ ಸರ್ವಚರಾಚರ ಗಳಲ್ಲಿ ಅಂತರ್ಗತನಾಗಿ ಸರ್ವಕಾರ್ಯ ನಡೆಸತಾನಾದ್ದರಿಂದ ಕಾರ್ಯರೂಪ). ಹ್ಯಾಂಗೆ ಎರಡು ಭಗವದ್ರೂಪಗಳು ಪ್ರೇರಕರೂಪ ಕಾರಣರೂಪದಲ್ಲಿ, ಪ್ರೇರ್ಯರೂಪ ಕಾರ್ಯದಲ್ಲಿ ಮತ್ತು ಚರಾಚರಪ್ರಾಣಿಗಳಿಗೆ ಪ್ರೇರಕ, ಪರಮಾತ್ಮನಿಂದ ಪ್ರೇರಣೆಮಾಡಿಸಿಕೋತಕ್ಕ ಪ್ರಾಣಿಗಳು ಆದ ಪ್ರಯುಕ್ತ ಪ್ರೇರ್ಯನು. ಇಂಥಾ ಕಾರ್ಯಕಾರಣವಸ್ತುಗಳಲ್ಲಿ, ಭಾರ್ಯ ರಿಂದೊಡಗೂಡಿ–ಈ ಭಗವದ್ರೂಪಗಳು ತನ್ನ ಪತ್ನಿಯರಾದ ಶ್ರೀ, ಭೂ, ದುರ್ಗಾಸಮೇತ

ಕೂಡಿಕೊಂಡು ಅಂತರ್ಗತರಾಗಿ, ಪಟತಂತುಗಳವೊಲಿದ್ದು– ಪಟ–ವಸ್ತ್ರ, ತಂತುಗಳು ಅಂದರೆ ದಾರಗಳು, ಅನೇಕ ದಾರಗಳಿಂದ ಸೇರಿ ಒಂದು ವಸ್ತ್ರ ಹ್ಯಾಂಗೋ, ತದ್ವತ್ ಅನಂತಾನಂತ ರೂಪಗಳಿಂದ ಸಹಿತವಾದ, ವಸ್ತ್ರದೋಪಾದಿಯಲ್ಲಿ ಒಂದು ರೂಪನಾಗಿ ತೋರತಕ್ಕ ಶ್ರೀ ಪರಮಾತ್ಮನು ಸರ್ವತ್ರ ಪ್ರೇರಕ, ಪ್ರೇರ್ಯ ರೂಪಗಳಿಂದ ಇದ್ದವನಾಗಿ, ಸೂರ್ಯಕಿರಣಗಳಂತೆ–ಪರ್ಜನ್ಯನಾಮಕ ಸೂರ್ಯನು ಮೇಘಾಂತರ್ಗತನಾಗಿ ತನ್ನ ಕಿರಣ ಗಳ ದ್ವಾರಾ ಸಮುದ್ರೋದಕ ಪಾನಮಾಡಿ ಪುನಃ ಅದೇ ಉದಕ ತನ್ನ ಕಿರಣಗಳಿಂದ ಮೇಘದ್ವಾರಾ ಮಳೆಸುರಿಸಿಕೊಟ್ಟಂತೆ, ತನ್ನ ವೀರ್ಯದಿಂದ–ತನ್ನ ಸ್ವಕೀಯವಾದ, ತನ್ನ ಅಭಿನ್ನವಾದ ಸಾಮರ್ಥ್ಯದಿಂದ, ಕೊಡುತ–ಸ್ವರೂಪಯೋಗ್ಯತಾನುಸಾರ ಬುದ್ಧಿಗಳ ಕೊಡುತ್ತಾ, ಕೊಳುತಿಹನು–ಅವರವರಿಗೆ ತಾನೇ ಪ್ರೇರಿಸಿದವನಾಗಿ ತಾನೇ ಅವರ ದ್ವಾರಾ ಅರ್ಪಣೆರೂಪದಿಂದ ತೆಗೆದುಕೋತಾನೆ. ಈ ಪ್ರಕಾರ ಪ್ರಾಣಿಗಳಲ್ಲಿರತಕ್ಕ ಪರಮಾತ್ಮ, ಕರ್ಮ ಅರ್ಪಿಸಲಿ, ಅರ್ಪಿಸದೇ ಹೋಗಲಿ, ಆ ಕರ್ಮಗಳ ಸ್ವೀಕಾರಮಾಡಿ, ಅದಕ್ಕೆ ಫಲಗಳ ಕೊಡತಾನೆ. ಆರ್ಯರಿಗೆ–ಅಪರೋಕ್ಷಜ್ಞಾನಿಗಳಿಗಾದರೂ, ಈತನ ವಿಚಾರವು– ಈ ಪರಮಾತ್ಮ ಮಾಡತಕ್ಕ ಕಾರ್ಯವೂ, ಸಂಚಾರಕ್ರಮವೂ, ಗೋಚರಿಪುದೇನೋ– ತಿಳಿಯತದಾ ಅಂದರೆ ತಿಳಿಯಲಾರದು ಎಂತ ತಾತ್ಪರ್ಯ.

**ತಾ||** ಶ್ರೀ ಪರಮಾತ್ಮ ತನ್ನ ಸ್ತ್ರೀಯರಾದ ಶ್ರೀ, ಭೂ, ದುರ್ಗಾದೇವಿಯರಿಂದ ಯುಕ್ತನಾಗಿ, ಸಮಸ್ತ ಜೀವರಿಗೆ ಸಕಲ ಪದಾರ್ಥಗಳ ಕೊಟ್ಟು, ಪುನಃ ಅವರಿಗೆ ಪ್ರೇರಿಸಿ ಅವರಿಂದ ಅರ್ಪಿಸಿಕೊಂಡು, ಅವರವರ ಯೋಗ್ಯತಾನುಸಾರ ಫಲಗಳನ್ನ ತೆಗೆದುಕೋ ತಾನೆ. ಇಂಥಾ ಪರಮಾತ್ಮನ ಅಚಿಂತ್ಯಾದ್ಭುತ ಶಕ್ತಿ ಯಾರಿಂದಲೂ ತಿಳಿಯುವುದು ಅಸಾಧ್ಯ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಸೂರ್ಯನ ವ್ಯಾಪಾರಕ್ಕೆ ಪ್ರಮಾಣ :— "ಅಷ್ಟೌ ಮಾಸಾನ್ನಿಪೀತಂ ಯದ್ಭೂಮ್ಯಾಶ್ಚೋದಮಯಂ ವಸು | ಸ್ವಗೋಭಿರ್ಮೋಕ್ತುಮಾರೇಭೇ ಪರ್ಜನ್ಯಃ ಕಾಲ ಆಗತೇ || " (ಭಾ. ೧೦–೨೦–೫) ಈ ರೀತಿ ಭಾಗವತ ದಶಮಸ್ಕಂಧ ದಲ್ಲಿ ಉಕ್ತವಾಗಿದೆ.

**ಜನಕ ತನ್ನಾತ್ಮಜಗೆ ವರ ಭೂ |**
**ಷಣ ದುಕೂಲವ ತೊಡಿಸಿ ತಾ ವಂ |**
**ದನೆಯ ಕೈಕೊಳುತವನ ಹರಸುತ ಹರುಷಬಡುವಂತೆ ||**
**ವನರುಹೇಕ್ಷಣ ಪೂಜ್ಯ ಪೂಜಕ |**
**ನೆನಿಸಿ ಪೂಜಾಸಾಧನಪದಾ |**
**ರ್ಥನು ತನಗೆ ತಾನಾಗಿ ಫಲಗಳನೀವ ಭಜಕರಿಗೆ || ೧೦ ||**

ಜನಕ–ತಂದೆಯಾದವನು, ತನ್ನ ಆತ್ಮಜಗೆ–ತನ್ನ ಪುತ್ರನಾದವಗೆ, ವರ–ಉತ್ತಮ ವಾದ ನವರತ್ನಗಳಿಂದ ನಿರ್ಮಿತವಾದ, ಭೂಷಣ–ದಿವ್ಯಾಭರಣಗಳೇನು, ದುಕೂಲವ–

ದಿವ್ಯ ರೇಷ್ಮೆವಸ್ತ್ರಗಳೇನು, ತೊಡಿಸಿ–ಅವುಗಳಿಂದ ಅಲಂಕಾರ ಮಾಡಿದವನಾಗಿ, ತಾ– ತಾನು, ವಂದನೆಯ–ನಮಸ್ಕಾರವನ್ನು, ಕೈಕೊಳುತ–ಸ್ವೀಕಾರಮಾಡುತಾ, ಅವನ ಹರಸುತ–ತನ್ನ ಪುತ್ರ ಕ್ಷೇಮವಾಗಿರುವಂತೆ ಆಶೀರ್ವಾದಮಾಡತಾ, ಹರುಷಬಡುವಂತೆ– ಸಂತೋಷಪಡುವ ರೀತಿಯಾಗಿ, ವನರುಹೇಕ್ಷಣ–ಕಮಲಾಯತನೇತ್ರಗಳುಳ್ಳ ಪರ ಮಾತ್ಮನು, ಪೂಜ್ಯಪೂಜಕನೆನಿಸಿ–ಜಡಪ್ರತಿಮಾಂತರ್ಗತನಾಗಿ ಪೂಜಿಸಲ್ಪಡೋವ ನೆಂತಲೂ, ಪೂಜಾಮಾಡೋವನಲ್ಲಿ ಪೂಜಕನೆಂತಲೂ, ಎನಿಸಿ–ಎನಿಸಿದವನಾಗಿ, ಪೂಜಾ ಸಾಧನ–ಪೂಜಾಕ್ಕೆ ಸಾಧನಭೂತವಾದ, ಪದಾರ್ಥದ–ಸಾಧನಪ್ರವ್ಯಗಳು, ತನಗೆ ತಾನಾಗಿ–ತದಾಕಾರನಾಗಿ, ಭಜಕರಿಗೆ–ತನ್ನ ಮಹಿಮೆ ತಿಳಿದ ಜ್ಞಾನಿಗಳಿಗೆ, ಫಲಗಳನೀವ– ಯೋಗ್ಯತಾನುಸಾರ ಸುಖಗಳು ಕೊಡತಾನೆ.

**ತಾ||** ಲೋಕದಲ್ಲಿ ತಂದೆಯಾದವ, ತನ್ನ ಪುತ್ರನಲ್ಲಿರುವ ಅಂತಃಕರಣದಿಂದ ತಾನು ಸಂಪಾದಿಸಿದ ವಸ್ತ್ರಾಭರಣಗಳನ್ನು ಪುತ್ರಗೆ ಅಲಂಕಾರಮಾಡಿ, ಸಂತೋಷದಿಂದ, ಅಪ್ಪಾ! ನಮಸ್ಕಾರಮಾಡು, ಆಶೀರ್ವಾದಮಾಡುತ್ತೇನೆ ಎಂದು ತನ್ನ ಪುತ್ರನಿಂದ ನಮಸ್ಕೃತನಾಗಿ ಹೇಗೆ ಆಶೀರ್ವಾದಮಾಡುವನೋ, ಅದೇ ಪ್ರಕಾರ ಸರ್ವಾಂತರ್ಯಾಮಿಯಾಗಿರುವ ಪರಮಾತ್ಮನು ತನ್ನಿಂದ ಸೃಷ್ಟಿಮಾಡಲ್ಪಟ್ಟ ಸರ್ವ ವಸ್ತುಗಳಲ್ಲಿ ತಾನು ಇದ್ದು ಪೂಜ್ಯ ಎಂತಲೂ, ಪೂಜಾ ಮಾಡೋವನಲ್ಲಿ ಪೂಜಕ ಎಂತಲೂ ಕರೆಸಿಕೊಂಡು, ಪೂಜಾಸಾಧನ ಪದಾರ್ಥಗಳಲ್ಲಿ ತಾನು ಅಂತರ್ಗತನಾಗಿ ಇದ್ದರೂ ಪದಾರ್ಥಗಳಿಂದ ತಾನು ಪೂಜಾ ಮಾಡಿಸಿಕೊಂಡು, ತನ್ನ ಭಕ್ತರಾದ ಜ್ಞಾನಿಗಳಿಗೆ ಅವರವರ ಯೋಗ್ಯತಾನುಸಾರ ಸುಖ ಗಳನ್ನು ಕೊಡುವನು. ಇದರ ಒಟ್ಟು ತಾತ್ಪರ್ಯವೇನೆಂದರೆ, ತಂದೆಸದೃಶ ಶ್ರೀಹರಿ ಪುತ್ರಸದೃಶರಾದ ಭಕ್ತರನ್ನ ಉದ್ಧಾರಮಾಡಬೇಕೆಂಬುದಾಗಿ ಭಕ್ತರಿಗೆ ಪೂಜೋಪ ಯೋಗ್ಯ ಪದಾರ್ಥಗಳನ್ನು ಕೊಟ್ಟು ಅದರಿಂದ ಪೂಜಿತನಾಗಿ ನಮಸ್ಕರಿಸಿಕೊಂಡು ಅವ ರನ್ನು ಸುಖವಂತರನ್ನಾಗಿ ಮಾಡುತ್ತಾನೆ. ಆದಕಡಿಯಿಂದ ಶ್ರೀಪರಮಾತ್ಮ ಭಕ್ತರ ಉದ್ಧಾರಾರ್ಥವಾಗಿ ಈ ಪ್ರಕಾರ ಪ್ರವರ್ತಿಸತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** "ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಂ | ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ" ಎಂಬ ಗೀತಾಭಾಷ್ಯ ಉಕ್ತಿಯನ್ನೇ ದಾಸರಾಯರು ಮೇಲಿನ ನುಡಿಯಲ್ಲಿ ಪ್ರಯೋಗ ಮಾಡಿರುವರು. ಪೂಜ್ಯ ಎಂಬುದಕ್ಕೆ ಪ್ರಮಾಣ :– "ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ | ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ" ಇದರ ಅರ್ಥವೇನೆಂದರೆ :– ನಮ್ಮ ಇಂದ್ರಿಯಾಧಿಪನೇ, ಇಂದ್ರಿಯ ಸಮೂಹದಲ್ಲಿ ನಿನ್ನನ್ನು ಪ್ರಕೃಷ್ಟತಮನೆಂದು ಹೇಳತಾರೆ. ನಿನ್ನ ಹೊರತು ಒಬ್ಬನಿಂದಲೂ, ಸಮೀಪದಲ್ಲಾಗಲೀ ದೂರದಲ್ಲಾಗಲೀ ಒಂದು ಕಾರ್ಯವೂ ಮಾಡಲ್ಪಡೋದಿಲ್ಲ. ಆದಕ್ಕೆ ಮಹ–ಮಹತ್ತಾ ದಂತಾ ಅರ್ಕ–ಪರಮಾನಂದ ರೂಪನಾದಂತಾ, ಯಜ್ಞಾಧಿಪನಾದಂತಾ, ಆಶ್ಚರ್ಯ

ರೂಪನಾದಂತಾ ಸ್ವಾಮಿಯೇ, ನಿನ್ನನ್ನು ನೀನೇ ಪೂಜಿಸು. ನನಗೇನೂ ಶಕ್ತಿಯಿಲ್ಲ. ಈ ಪ್ರಕಾರ ಲಕ್ಷ್ಮೀ ಸ್ವರೂಪಳಾದಂತಾ ದುರ್ಗಾದೇವೇರು ಶೃತಿಗೀತಾದಲ್ಲಿ ಶ್ರೀ ಪುರುಷೋತ್ತಮನನ್ನು ಪ್ರಾರ್ಥಿಸಿದ್ದಾಳೆ.

ಪೂಜ್ಯ ಪೂಜಕ—ಈ ವಿಷಯದಲ್ಲಿ ಭೃಗುಋಷಿಗಳ ಅಂಶರಾದ, ಶ್ರೀ ಜಗನ್ನಾಥ ದಾಸರಾಯರ ಪರಮ ಗುರುಗಳಾದ, ಶ್ರೀ ವಿಜಯದಾಸರು ತಾವು ಮಾಡಿರುವ ಪರಿಪೂರ್ಣ ಸುಳಾದಿಯ ಐದನೆ ನುಡಿಯಲ್ಲಿ "ಸಕಲ ಸಂಪೂಜೆ ಈ ಪರಿಯಿರಲು ಮತ್ತೆ ಲಕುಮಿ ಪೂಜಿಸುವಳು. ಲಕುಮಿಗೆ ನೀನೆ ಪ್ರೇರಕನಾಗಿ ಒಳಗೆ ನಿಂದು ನಿನಗೆ ಅರ್ಚಕನಾಗಿ ಅನುಕಾಲಾ" ಎಂತ ಹೇಳಿ, ಜತೆಯಲ್ಲಿ "ನಿನಗೆ ನೀನೇ ಪೂಜೆ ಮಾಡಿಕೊಂಬುವ ದೇವಾ, ಯನಗಾವ ಸಥಿಯಿಲ್ಲ ವಿಜಯವಿಠ್ಠಲ ವಲಿಯೋ" ಎಂತ ಹೇಳಿದ್ದಾರೆ. ಪೂಜಾ ವಿಧಾನ ಎಂಥಾದ್ದು ಎಂದರೇ, ಸರ್ವರು ಜಡದ್ರವ್ಯಗಳಿಂದ ಜಡ ಪ್ರತಿಮಾಕ್ಕೆ ಪೂಜಾ ಮಾಡತಾರೆ. ಇದು ಪೂಜಾವಲ್ಲ. ಮತ್ತೆ ಹ್ಯಾಂಗೆಂದರೇ ಪರಿದೃಶ್ಯಮಾನ ಜಡ ಪ್ರತಿಮಾದಲ್ಲಿ ಶ್ರೀ ಪರಮಾತ್ಮನ ಚಿದಾನಂದ ಶರೀರವನ್ನು ತಿಳಿದು ಪೂಜಾ ಮಾಡುವ ದ್ರವ್ಯಗಳಲ್ಲಿ ಆ ಪರಮಾತ್ಮನ ಸ್ವಾಖ್ಯ ರೂಪಗಳ ಅನುಸಂಧಾನ ಮಾಡಿ ಪ್ರತಿಮಾಂತರ್ಗತ ರೂಪಕ್ಕೂ, ದ್ರವ್ಯಾಂತರ್ಗತ ರೂಪಕ್ಕೂ ಐಕ್ಯ ಚಿಂತನೆ ಮಾಡಬೇಕು. ಇದು ಸ್ವಾಖ್ಯ ರೂಪದಿಂದ ಸ್ವಾಖ್ಯರೂಪ ಪೂಜೆ ಎಂತ ಅನ್ನಿಸಿಕೊಳ್ಳಲ್ಪಡುತ್ತದೆ. ಇದೇ ಪೂಜಾ. ಆದರೆ ಅಧಿಕಾರಿಗೆ ಜಡಪ್ರತಿಮಾ, ಜಡದ್ರವ್ಯಗಳ ಹೊರತು ಬೇರೆ ಇಲ್ಲ. ಜಡ ಪ್ರತಿಮಾವನ್ನ ಜಡ ಪದಾರ್ಥಗಳಿಂದ ಪೂಜಾ ಮಾಡೋ ಕಾಲದಲ್ಲಿ ಅಂತರ್ಗತ ಪರಮಾತ್ಮ ತದಾಕಾರ, ತದ್ಭಿನ್ನ ಎಂತ ಲಕ್ಷ್ಯವಿಟ್ಟು, ಎಲ್ಲಾನೂ ಈಶ್ವರಾಖ್ಯಗಳು ಎಂತ ತಿಳಿದು ಪೂಜಾ ಮಾಡಬೇಕು. ಇದರ ವಿವರ ಐದನೇ ವಿಭೂತಿ ಸಂಧಿಯಲ್ಲಿ ಹೇಳತಾರೆ.

**ತಂದೆ ಬಹು ಸಂಭ್ರಮದಿ ತನ್ನಯ ।**
**ಬಂಧು ಬಳಗವ ನೆರಹಿ ಮದುವೆಯ ।**
**ನಂದನಗೆ ತಾ ಮಾಡಿ ಮನೆಯೊಳಗಿಡುವ ತೆರನಂತೆ ॥**
**ಇಂದಿರಾಧವ ತನ್ನ ಇಚ್ಛೆಗ ।**
**ಳಿಂದೆ ಗುಣಗಳ ಚೇತನಕೆ ಸಂ ।**
**ಬಂಧಗೈಸಿ ಸುಖಾಸುಖಾತ್ಮಕ ಸಂಸೃತಿಯೊಳಿಡುವ ॥ ೧೧ ॥**

ಕಾರ್ಯಕಾರಣಕರ್ತೃತ್ವೇ ದ್ರವ್ಯಜ್ಞಾನಕ್ರಿಯಾದಯಃ | ಬಧ್ನಂತಿ ನಿತ್ಯದಾ ಮುಕ್ತಂ ಮಾಯಿನಂ ಪುರುಷಂ ಗುಣಂ || ಎಂಬ ಪ್ರಮಾಣಾನುಸಾರ ಅಸೃಜ್ಯರಾಶಿಗತ ತ್ರಿವಿಧ ಜೀವರ ಸೃಷ್ಟಿ ಎಂಬುದು ಅವರವರ ನಿಜಗತಿಯಾದ ಸ್ವರೂಪಗತಿಗಳ ಕೊಡೋ ನಿಮಿತ್ತ ಎಂತ ಹೇಳತಾರೆ. ಇದರಲ್ಲಿ ನಿತ್ಯ ಸಂಸಾರಿಗಳ ಲಿಂಗ ಭಂಗ ವಿಚಾರ ಬರತದೆ.

ತಂದೆ–ಪಿತನಾದವನು, ನಂದನಗೆ–ತನ್ನ ಮಗನಿಗೆ, ಬಹುಸಂಭ್ರಮದಿ–ಅತ್ಯಂತ ಸಂತೋಷದಿಂದ, ತನ್ನಯ ಬಂಧು–ಸ್ವಕೀಯ ನೆಂಟರನ್ನು, ಬಳಗದ–ತನ್ನ ಪತ್ನಿಗೆ ಸಂಬಂಧಿಸಿದ ನೆಂಟರನ್ನು, ನೆರಹಿ–ಏಕತ್ರ ಗುಂಪು ಕೂಡಿಸಿದವನಾಗಿ, ಮದುವೆಯ– ವಿವಾಹವನ್ನು, ತಾ ಮಾಡಿ–ತಂದೆಯಾದವ ತಾನು ಮಾಡಿದವನಾಗಿ, ಮನೆಯೊಳಗಿಡುವ– ತನ್ನ ಮನೆ ಒಳಗೆ ಇಡತಾನೆ. ತೆರನಂತೆ–ಈ ತಂದೆಮಗನೋಪಾದಿಯಲಿ (ಅನಾದಿ ಯಿಂದ ಪುತ್ರರಾದ ಜೀವರಿಗೆ ತಂದೆಯಾದ), ಇಂದಿರಾಧವ–ಶ್ರೀ ಲಕ್ಷ್ಮೀಪತಿ ನಾರಾಯಣ ದೇವರು (ತಂದೆಯಾದವ ತನ್ನ ಪುತ್ರನ ಇಚ್ಛಾ ತೆಗೆದುಕೊಳ್ಳದೇ ತನ್ನ ಇಚ್ಛಾದಿಂದ ಪುತ್ರಗೆ ವಯಸ್ಸು ಬಂದ ಕಾಲದಲ್ಲಿ ಹ್ಯಾಂಗೆ ಮದುವೆ ಮಾಡುವನೋ ತದ್ವತ್ ಶ್ರೀ ನಾರಾಯಣ ದೇವರು), ತನ್ನ ಇಚ್ಛೆಗಳಿಂದಲೇ–ತನ್ನ ಇಚ್ಛಾದಿಂದಲೇ (ಬಹುವಚನಪ್ರಯೋಗ ಯಾಕೆ ಎಂದರೆ ತ್ರಿವಿಧ ಜೀವರಿಗೆ ತ್ರಿವಿಧ ಪ್ರಕಾರ ಇಚ್ಛಾದಿ ಗಳು ಮಾಡಿ, ಆ ಇಚ್ಛಾದಿಂದಲೇ ತನ್ನ ಬಳಗ ಪುರುಷದೇವತೆಗಳು, ತನ್ನ ಪತ್ನೀ ಬಳಗ ಸ್ತ್ರೀದೇವತೆಗಳು, ಇವರನ್ನ ಗುಂಪುಕೂಡಿಸಿ ಎಂದರೆ ಹಿಂದೆ ಸೃಜ್ಯರಾದ ಸಾಧನಸಂಪತ್ತು ಅವಶಿಷ್ಟರಾದ ದೇವತೆಗಳ ಗುಂಪು ಸೇರಿಸಿದವನಾಗಿ), ಗುಣಗಳ–ಬಣಗಿದ ಗಜ್ಜುಗಕ್ಕೆ ಬೀಜ ಹ್ಯಾಂಗೆ ಅಸಂಬಂಧವೋ, ತದ್ವತ್ ಅಸಂಬಂಧವಾಗಿದ್ದ ಅನಾದಿಲಿಂಗದೇಹಾಖ್ಯ ಗುಣಗಳ, ಚೇತನಕೆ–ಅಸೃಜ್ಯರಾಶಿಗತ ಸ್ಥಾವರಜಂಗಮಾತ್ಮಕ ಪ್ರಾಣಿಗಳಿಗೆ, ಸಂಬಂಧ ಗೈಸಿ–ಸೃಷ್ಟಿಪ್ರಾರಂಭದಲ್ಲಿ, ಲಿಂಗದಲ್ಲಿ ತನ್ನ ಇಚ್ಛಾದಿಂದ, ಜೀವರೋದಕ ಉತ್ಪತ್ತಿ ಮಾಡಿ, ತದ್ದ್ವಾರಾ ತೊಯ್ದ ವಸನ ದೇಹಕ್ಕೆ ಸಂಬಂಧವಾದರೆ ಹ್ಯಾಂಗೋ, ಹಾಂಗೆ ಸಂಬಂಧಗೈಸಿ ಮತ್ತು ಮೂಲ ಜಡಪ್ರಕೃತಿ ಗುಣತ್ರಯಗಳಿಂದ, ಗುಣತ್ರಯಾತ್ಮಕ ಸ್ಥೂಲದೇಹವನ್ನ, ಪೂರ್ವೋಕ್ತಪ್ರಕಾರ ತತ್ವೇಶರೆಂಬ ಉಭಯವಿಧ ಬಳಗಗಳ ಸೇರಿಸಿ, ಸಂಬಂಧಗೈಸಿ, ಏತಾದೃಶವಾದ ದೇಹಾಖ್ಯ ಕನ್ಯಾಸಂಬಂಧಾಖ್ಯ ಮದುವೆಯ ಮಾಡಿಸಿ (ಲೋಕದೃಷ್ಟಾಂತ ದಲ್ಲಿ ಪುತ್ರನು ಕೆಲವುಕಾಲಾನಂತರ ದಾರಾನ ಬಿಟ್ಟು ಮೃತಿ ಐದಿ ಪರಲೋಕದಲ್ಲಿ ತನ್ನ ಯೋಗ್ಯಸ್ಥಾನ ಸೇರಿರ್ದೋಪಾದಿಯಲಿ, ಶ್ರೀ ಪರಮಾತ್ಮನಿಂದ ಪೂರ್ವೋಕ್ತಪ್ರಕಾರ ಸಂಬಂಧಮಾಡಿಸಿಕೊಂಡಂಥಾ ತ್ರಿವಿಧಜೀವರು ಪ್ರಳಯಕಾಲದಲ್ಲಿ, ಸ್ಥೂಲದೇಹ ಮತ್ತು ಲಿಂಗದೇಹ ಬಿಡೋವರಾಗತಾರೆ. ಅನಂತರ ಪರಮಾತ್ಮ ಲಿಂಗಭಂಗಾನಂತರ ತ್ರಿವಿಧ ಜೀವರಿಗೆ, ಸುಖ–ಭಗವದ್ಭಕ್ತರಿಗೆ ಸುಖವಾದ ವೈಕುಂಠದಲ್ಲಿ ನಿತ್ಯವಾದ ಸ್ವರೂಪಸುಖ, ಅಸುಖ–ಭಗವದ್ದ್ವೇಷಿಗಳಿಗೆ ದುಃಖವಾದ ಅಂಧಂತಮೋಲೋಕದಲ್ಲಿ ನಿತ್ಯವಾದ ಸ್ವರೂಪ ದುಃಖ, ಆತ್ಮಕ–ಈ ಉಭಯಮಿಶ್ರವಾದ ನಿತ್ಯಸಂಸಾರಿಗಳಿಗೆ ಸಾಂತಾನಿಕಲೋಕದಲ್ಲಿ ಸುಖದುಃಖಗಳ, ಸಂಸೃತಿಯೊಳಿಡುವ–ಕೊಡೋವನಾಗತಾನೆ.

**ತಾ||** ದಾವ ದಾವ ಚೇತನಕ್ಕೆ ದಾವ ದಾವ ಗುಣ ಸಂಬಂಧಿಸಬೇಕು, ಆ ಪ್ರಕಾರ ತ್ರಿವಿಧ ಜೀವರಿಗೂ ತಿಳಿಸದೇಲೆ ಶ್ರೀಹರಿ ಮಾಡತಾನೆ ಎಂತ ಹೇಳತಾರೆ.

**ವಿಶೇಷಾರ್ಥ :–** ಆಯಾ ಲೋಕಗಳಲ್ಲಿ ಪ್ರಳಯಕಾಲದವರಿಗೂ ಅನುಭವಿಸುತಾ ಪ್ರಳಯದಲ್ಲಿ ಮುಕ್ತಾಮುಕ್ತ ತ್ರಿವಿಧ ಜೀವರು ಶ್ರೀನಾರಾಯಣದೇವರ ಉದರ ಪ್ರವಿಷ್ಟರಾಗತಾರೆ. ಸೃಷ್ಟಿಕಾಲಕ್ಕೆ ಪುನಃ ಹೊರಗೆ ಹೊರಟು ಆವರವರ ಸ್ಥಾನಗಳ

ಸೇರಿ ಅವರವರ ಸ್ವರೂಪಭೂತವಾದ ಸುಖದುಃಖಗಳ ಅನುಭವಿಸುತಾ ಇರತಾರೆ. ಆಯಾ ಸ್ಥಾನಗಳ ಬಿಟ್ಟು ಉದರಪ್ರವೇಶಮಾಡೋಣದರಿಂದ ಸ್ವರೂಪಕ್ಕೆ ಹತ್ತಿದ ಸುಖದುಃಖ ಮಿಶ್ರ ಲೇಪವಾಗದೇ ಯಥಾಪ್ರಕಾರ ಇರತದೆ.

ನಿತ್ಯಸಂಸಾರಿಗಳಿಗೆ ಲಿಂಗಭಂಗ ಉಂಟು ಎಂಬೋದಕ್ಕೆ ಪ್ರಮಾಣ :— ಪ್ರಕಾಶ ಸಂಹಿತಾಯಾಂ —

ನಿತ್ಯಸಂಸಾರಿಣಃ ಪೃಥ್ವ್ಯಾಂ ತ್ಯಕ್ತ್ವಾ ಸ್ಥೂಲಂ ತು ಸೂಕ್ಷ್ಮತಃ ।
ಧರ್ಮೇ ಪ್ರವಿಶ್ಯ ಸಂತ್ಯಕ್ತ್ವಾಽನಾದ್ಯವಿದ್ಯಾ ಭವಂತಿ ಹಿ ॥
ಕೇಚಿದತ್ರೈವ ಮುಚ್ಯಂತೇ ಕೇಚಿದ್ವೈ ಮೇರುಮೂರ್ಧನಿ ।
ವೈಶ್ವಾನರೇ ದ್ಯುನದ್ಯಾಂ ಸೂರ್ಯೇ ವಾ ವಾಯಾವೇವ ವಾ ॥
ತ್ಯಕ್ತ್ವಾಽವಿದ್ಯಾ ಮಿಶ್ರಪಾಕಾಲ್ಲಯೇ ನಾಭೌ ಹರೇಃ ಗತಾಃ ।
ಸ್ವರ್ಗಭೂಮ್ಯಾದಿಷು ಸ್ಥಿತ್ವಾ ಭ್ರಮಂತಿ ಶ್ರೀಹರೇಚ್ಛಯಾ ॥

ಇತಿ ಪ್ರಥಮಪರಿಚ್ಛೇದೇ ತ್ರಯೋದಶೋಽಧ್ಯಾಯಃ ॥

ನಿರಂಶಮರ್ತ್ಯಗಂಧರ್ವಪೂರ್ವಾಃ ಸರ್ವೇ ತೃಣಾಂತಕಾಃ ।
ಯೋಗ್ಯಾ ನಿತ್ಯಸೃತಿಸ್ಥಾಶ್ಚ ತಮೋಯೋಗ್ಯಾಶ್ಚ ಕೃತ್ಸ್ನಶಃ ॥ ೬೯ ॥
ಸರ್ವೇಽಪ್ಯೇವಂ ಲಿಂಗಬದ್ಧಾಃ ಏವಂ ಜೀವಂ ನ ಚಾನ್ಯಥಾ ।
ತೇಷು ಪೂರ್ವಾನಂತಕಲ್ಪೇಷ್ವಪಿ ಸ್ವೋಚಿತಸಾಧನೈಃ ॥ ೭೦ ॥
ಮುಕ್ತಾ ಮಧ್ಯಸ್ತಮಃಪ್ರಾಪ್ತಾಃ ಸಂತಿ ಶ್ರೀಹರಿಗರ್ಭಗಾಃ ।
ಸಂತಿ ಸೃಜ್ಯಾ ಹ್ಯನಂತೋರುರಾಶಯಸ್ಸಂತಿ ಲಿಂಗಗಾಃ ॥

ಇತಿ ಪ್ರಥಮಪರಿಚ್ಛೇದೇ ಪಂಚಮೋಽಧ್ಯಾಯಃ ॥

ಸಂಸಾರಿಣಾಂ ತು ಯಲ್ಲಿಂಗಂ ಹೂಂಕಾರೇಣ ವಿನಶ್ಯತಿ ॥
ನಿತ್ಯಸಂಸಾರಿಣಸ್ತತ್ರ ಹೂಂಕಾರೇಣೈವ ಸರ್ವಶಃ ॥
ಲಿಂಗಭಂಗಂ ಪ್ರಾಪಯಿತ್ವಾ ದೇಶೇ ಪ್ರಾಗ್ಘರಿಣಸ್ತಥಾ ॥
ಯಥಾಕಾಮಂ ಮಿಶ್ರಫಲಂ ಭೋಕ್ತಾರಃ ಸ್ವರ್ಗಮಾಸ್ಥಿತಾಃ ॥
ಪುನಃ ಭೂಮಿಂ ಗತಾಸ್ತೇ ತು ನರಕೇ ಚ ಪತಂತ್ಯಹೋ ॥
ನೈಕತ್ರ ಸಂಸ್ಥಿತಾಃ ಸರ್ವೇ ಪುನರ್ಜನ್ಮವಿವರ್ಜಿತಾಃ ॥
ಲಯಹೀನಾ ಭವತ್ಯದ್ಧಾ ಮಿಶ್ರಮೇವ ಫಲಂ ತದಾ ॥
ಏಕಸ್ಮಿನ್ನೇವ ಕಾಲೇ ತು ಭುಂಜಂತೇ ಕಾಮಚಾರಿಣಃ ॥

ಇತಿ ಗಾರುಡೇ ॥

ವಾಸುದೇವೋಽಭವದ್ದೇವಃ ಮಾಯಯಾ ಪ್ರಿಯಯಾ ಯುತಃ ।
ಸರ್ವಮುರ್ವಾರುಕಮಿವ ಮೋಚಯೇದ್ಯೋನಿಸಂಭವಾತ್ ॥

ಇತಿ ಸಂಗ್ರಹರಾಮಾಯಣೇ ಬಾಲಕಾಂಡೇ ಪ್ರಥಮಸರ್ಗಃ ॥

**ತೃಣಕೃತಾಲಯದೊಳಗೆ ಪೊಗೆ ಸಂ ।**
**ದಣಿಸಿ ಪ್ರತಿ ಛಿದ್ರದಲಿ ಪೊರಮ ।**
**ಟ್ಟನಲನಿರವನು ತೋರಿ ತೋರದಲಿಪ್ಪ ತೆರನಂತೆ ।**
**ವನಜಜಾಂಡದೊಳಖಿಳ ಜೀವರ ।**
**ತನುವಿನೊಳಹೊರಗಿದ್ದು ಕಾಣಿಸ ।**
**ದನಿಮಿಷೇಶನು ಸಕಲ ಕರ್ಮವ ಮಾಳ್ಪನವರಂತೆ ॥ ೧೨ ॥**

ತೃಣಕೃತಾಲಯದೊಳಗೆ–ಹುಲ್ಲಿನಿಂದ ನಿರ್ಮಿತವಾದ ಮನೆ ಒಳಗೆ, ಪೊಗೆ ಸಂದಣಿಸಿ–ಹೊಗೆಯು ನಿಬಿಡವಾಗಿ, ಪ್ರತಿಛಿದ್ರದಲಿ–ಮನೆ ಮೇಲೆ ಹೊದ್ದಿಸಿದ ಹುಲ್ಲಿನ ಪ್ರತಿ ಪ್ರತಿ ಸಂದುಗಳಲ್ಲಿ, ಪೊರಮಟ್ಟು–ಅಗ್ನಿದ್ವಾರಾ ಹೊರಟು, ಅನಲನು–ಅಗ್ನಿಯು ಗೃಹದೊಳಗೆ, ಇರವನು–ಹಾರೋಣನಾಗುತಾನೆ. ಹ್ಯಾಂಗೆಂದರೆ, ತೋರಿತೋರದಲೆ–ಧೂಮಕೇತುವಿನಿಂದ ಅಗ್ನಿ ಇದ್ದಾನೆ ಎಂತ ತೋರುತದೆ–ಮನಸ್ಸಿಗೆ. ದೂರದಲ್ಲಿ ಇದ್ದವರಿಗೆ ಅಗ್ನಿ ಪ್ರತ್ಯಕ್ಷದಲ್ಲಿ ತೋರೋದಿಲ್ಲ. ಇಪ್ಪ ತೆರನಂತೆ–ಈ ಪ್ರಕಾರ ಇರತಕ್ಕ ಅಗ್ನಿಯೋಪಾದಿಯಲ್ಲಿ, ವನಜಜಾಂಡದೊಳು–ಬ್ರಹ್ಮಾಂಡದೊಳು ಮತ್ತು, ಅಖಿಲಜೀವರ–ಸಮಸ್ತರಾದ ತ್ರಿವಿಧಜೀವರ, ಒಳಹೊರಗೆ–ಒಳಗಿರುವ ಜೀವನ ಸ್ವರೂಪದೇಹದ ಒಳಗೆ, ಹೊರಗೆ ಲಿಂಗದೇಹ ಆರಂಭಮಾಡಿ, ಜೀವಗೆ ಹೊರಭಾಗದಲ್ಲಿ ಇರತಕ್ಕ ಸ್ಥೂಲದೇಹದವರಿಗೂ ದೇಹಗಳಲ್ಲಿ, ತನುವಿನೊಳಗೆ–ಪ್ರತಿ ಪ್ರತಿ ಜೀವರ ಶರೀರಗಳಲ್ಲಿ, ಇದ್ದು–ಆವಾಸವಾಗಿದ್ದು, ಕಾಣಿಸದ–ಜೀವರ ಕಣ್ಣಿಗೆ ಕಾಣಿಸದಂಥಾ, ಅನಿಮಿಷೇಶನು–ದೇವತಾಶ್ರೇಷ್ಠನಾದ ಶ್ರೀ ಪರಮಾತ್ಮನು, ಅವರಂತೆ–ಆಯಾ ಜೀವಸ್ವರೂಪಸ್ವಭಾವದಂತೆ, ಅದಕ್ಕೆ ಅನುಸರಿಸಿರುವ ಲಿಂಗಗತ ಅನಾದಿಕರ್ಮಸ್ವಭಾವದಂತೆ, ಸಕಲಕರ್ಮವ–ಸ್ಥೂಲದೇಹಾಂತರ್ಗತವಾದ ದೇಹಾಕಾರದಂತೆ ವ್ಯಾಪ್ತವಾದ ಜೀವಾಧಿಷ್ಠಾನದಲ್ಲಿದ್ದು ಪ್ರಪಂಚಕರ್ಮವನ್ನು, ಮಾಳ್ಪ–ಮಾಡುತಾನೆ. ಹ್ಯಾಂಗೆಂದರೆ, ಬಿಂಬಕ್ರಿಯಾದ್ವಾರಾ ತನ್ನ ಸ್ವಾಪ್ಯಕರ್ಮಗಳನ್ನು ಮಾಡುತಾನೆ. ತದನಂತರ ಪರಂಪರಾದಿಂದ ದೇಹದ್ವಾರಾ ಜೀವನು ಕರ್ಮಮಾಡುತಾನೆ ಎಂತ ಅರ್ಥ.

**ತಾ॥** ಹುಲ್ಲುಮನೆಯಲ್ಲಿ ಇದ್ದಂತಾ ಅಗ್ನಿಸಂಬಂಧ ಧೂಮ ಒಳಗೆ ವಿಶೇಷ ವ್ಯಾಪಿಸಿ ಹೊರಗೆ ತೋರಿ ತೋರದ ಹಾಂಗೆ, ಹ್ಯಾಂಗೆ ಇರತದೋ, ತದ್ವತ್ ಬಿಂಬರೂಪೀ ಪರಮಾತ್ಮ ಅಧಿಕಾರಿಗಳ ಕಣ್ಣಿಗೆ, ಅಪಕ್ವದಶಾದಲ್ಲಿ ಕಾಣದೇನೇ ಜೀವರಲ್ಲಿ ತಾನಿದ್ದು ಸಕಲ ಕರ್ಮವೂ ತಾನೇ ಮಾಡುತಾನೆಂತ ತಾತ್ಪರ್ಯ.

**ವಿಶೇಷಾರ್ಥ :–** ದೃಷ್ಟಾಂತಸಮನ್ವಯ ಹೇಳತಾರೆ. ದೇಹ ಎಂಬುದೇ ಆಲಯ ಸದೃಶ. ಆ ಆಲಯಗತ ಅಗ್ನಿಸದೃಶ ಶ್ರೀ ಪರಮಾತ್ಮ. ಮನೆ ಮೇಲಿನ ಹೊದ್ದಿಕೆ ಸದೃಶ ಸಪ್ತಧಾತುಗಳು. ಛಿದ್ರಸದೃಶ ನವದ್ವಾರಗಳಿಂದ ಯುಕ್ತವಾದ ಇಂದ್ರಿಯಗಳು. ಹೊಗೆ ಸದೃಶ ಇಂದ್ರಿಯಜನ್ಯ ನಾನಾ ಕರ್ಮಗಳು. ಜೀವ ಅಸ್ವತಂತ್ರ, ದೇಹ ಜಡ. ಇವರಿಗೆ

ಸ್ವತಃ ಪ್ರವೃತ್ತಿ ಇಲ್ಲ. ಜೀವ ಅಸ್ವತಂತ್ರ ಎಂಬುದು ೧) ಇಚ್ಛಾಭಂಗ, ೨) ಲೋಕದಲ್ಲಿ ಸ್ಥಾವರಜಂಗಮಾದಿಗಳನ್ನ ಆಶ್ರಯಿಸಿ ಜೀವನಾದಿಗಳು ಮಾಡಬೇಕಾಗಿರುವುದು ಇವುಗಳಿಂದ ಸಿದ್ಧವಾಗುತ್ತದೆ. ಪರಸ್ಪರ ವಿಚಾರಮಾಡಿದಾಗ ಅಪರಾಧೀನ ಸ್ವತಂತ್ರ ಪರಮಾತ್ಮನೆಂದು ಪ್ರಮಾಣಗಳಿಂದ ಸಿದ್ಧವು. ಜೀವನು ಮನ ಆದಿ ಕರಣ (ಇಂದ್ರಿಯ) ಗಳಿಂದ ಕರ್ಮಮಾಡೋದು ಕಂಡಿದೆ. ಆದರೆ ಸ್ವತಃ ಪ್ರವೃತ್ತಿ ಜೀವಗೆ ನಿಷೇಧವಾದ ಮೇಲೆ ಅನ್ಯ ಪ್ರವರ್ತಕ ಒಬ್ಬ ದೇಹದಲ್ಲಿ ಇದ್ದಾನೆಂತಲೇ ಸಿದ್ಧವಾಗತದೆ. ಅವ ಕಣ್ಣಿಗೆ ಕಾಣೋದಿಲ್ಲ. ಧೂಮಕೇತುವಿನಿಂದ ಅಗ್ನಿ ಒಳಗೆ ಅದೆ ಎಂಬುದು ಹ್ಯಾಂಗೆ ಸಿದ್ಧವೋ, ಹಾಂಗೆ ಕರ್ಮಹೇತುವಿನಿಂದ ದೇಹದಲ್ಲಿ ಸರ್ವೋತ್ತಮನಾದ ಪುರುಷ ಇದ್ದಾನೆಂದು ನಿರ್ಧಾರವು. ಆದ್ದರಿಂದ ಕಣ್ಣಿಗೆ ಕಾಣಲಿಲ್ಲ ಎಂತ ಪ್ರತ್ಯಕ್ಷಪ್ರಮಾಣವಾದಿಯಾದ ಚಾರ್ವಾಕಮತಾವಲಂಬನೆ ಮಾಡದೇ ವೇದೋಕ್ತಾನುಸಾರ ದೇವರಲ್ಲಿ ಭಕ್ತಿಮಾಡಿ ಧ್ಯಾನೋಪಾಸನೆ ಮಾಡಿದರೆ ಶ್ರೀ ಪರಮಾತ್ಮ ಪ್ರತ್ಯಕ್ಷನಾಗತಾನೆ ಎಂತ ತಾತ್ಪರ್ಯ.

**ಪಾದಪಗಳಡಿಗೆರೆಯೆ ಸಲಿಲವು ।**
**ತೋದು ಕೊಂಬೆಗಳುಬ್ಬಿ ಪುಷ್ಪ ।**
**ಸ್ವಾದು ಫಲವೀವಂದದಲಿ ಸರ್ವೇಶ್ವರನು ಜನರಾ ॥**
**ರಾಧನೆಯ ಕೈಕೊಂಡು ಬ್ರಹ್ಮ ಭ ।**
**ವಾದಿಗಳ ನಾಮದಲಿ ಫಲವಿ ।**
**ತ್ತಾದರಿಸುವನು ತನ್ನ ಮಹಿಮೆಯ ತೋರಗೊಡ ಜಗಕೆ ॥ ೧೩ ॥**

ಯಥಾ ತರೋರ್ಮೂಲನಿಷೇಚನೇನ ತೃಪ್ಯಂತಿ ತತ್ಸ್ಕಂಧಭುಜೋಪಶಾಖಾಃ । ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ ತಥೈವ ಸರ್ವಾರ್ಹಣಮಚ್ಯುತೇಜ್ಯಾ ॥ (ಭಾ. ೪-೩೧-೧೪) ಎಂಬ ಪ್ರಮಾಣಾನುಸಾರ ತತ್ವೇಶ ಮೊದಲಾದವರಲ್ಲಿ ಫಲದಾತೃತ್ವ ಪ್ರತ್ಯಕ್ಷದಲ್ಲಿ ಕಂಡಾಗ್ಯೂ, ಆ ಕರ್ತೃತ್ವ ಶ್ರೀ ಪರಮಾತ್ಮನ ಅಧೀನವಾಗಿರುವುದರಿಂದ ಭಜಕರಿಗೆ ಫಲಗಳ ದೇವತೆಗಳ ದ್ವಾರಾ ಪರಮಾತ್ಮ ಕೊಡತಾನೆ ಎಂತ ಹೇಳತಾರೆ.

ಪಾದಪಗಳ–ಬೇರಿನಿಂದ ಜಲಪಾನ ಮಾಡತಕ್ಕ ವೃಕ್ಷಗಳ, ಅಡಿಗೆ–ಅಧೋಭಾಗಗತ ಭೂಮಿಯಲ್ಲಿ ಆಚ್ಛಾದನವಾಗಿದ್ದ ಬೇರುಗಳಿಗೆ, ಸಲಿಲವು ಎರಿಯೆ-ನೀರು ಹಾಕಿದರೆ, ತೋದು–ಹಾಕಿದ ಉದಕದಿಂದ ಬೇರು ನೆನೆದು ತೃಪ್ತಿಯೈದಿ, ಕೊಂಬೆಗಳುಬ್ಬಿ–ವೃಕ್ಷಗತ ಶಾಖೋಪಶಾಖೆಗಳು ಬೆಳೆದು, ಥಂಡಾಗಿ ಪುಷ್ಟಿಯೈದಿ ಚಿಗುರುಗಳು ತೊಪ್ಪಲುಗಳು ಉಂಟಾಗಿ, ಸ್ವಾದುಫಲವ–ಮೊಗ್ಗುಗಳು ಉಂಟಾಗಿ, ಪುಷ್ಪಗಳೂ ಆಗಿ, ಮಧುರ ಫಲಗಳನ್ನು ಜನರಿಗೆ ಭೋಜನಕ್ಕೂ ಕೊಡೋದಾಗತದೆ. (ಉದಕ ಹಾಕಿದ ಮಾತ್ರದಿಂದ, ಆ ಹಾಕತಕ್ಕ ಉದಕ ಚಲೋದೇ ಹಾಕಲಿ ಅಥವಾ ಕಶ್ಮಲ ಉದಕವೇ ಹಾಕಲಿ, ಚಲೋ ಫಲಗಳ) ಈವಂದದಲಿ–ಕೊಡೋಪಾದಿಯಲಿ, ಸರ್ವೇಶ್ವರನು–ಜಗದಾಖ್ಯ

ವೃಕ್ಷಕ್ಕೆ ಬೇರು ಸದೃಶನಾದ ಬೇರಿನಿಂದಾದಿಯಲಿ ಕಣ್ಣಿಗೆ ಕಾಣದೆ, ದೇಹದಲ್ಲಿ ಆವಾಸನಾಗಿ ಸಕಲ ಕರ್ಮಗಳ ಬಿಂಬಕ್ರಿಯಾ ದ್ವಾರಾ ಮಾಡಿ ಮಾಡಿಸತಕ್ಕ ಶ್ರೀ ಬಿಂಬರೂಪಿಯಾದ ಪರಮಾತ್ಮ, ಜನರ–ಭಕ್ತ ಜನರ (ಕಣ್ಣಿಗೆ ಕಾಣದೆ ಇದ್ದ ಕಾಲಕ್ಕೂ, ಪೂರ್ವೋಕ್ತ ಹೇತುಗಳಿಂದ ಸರ್ವವ್ಯಾಪಿ ಇದ್ದ ಅನ್ನೆಂದು ಸ್ಥಿರಚಿತ್ತರಾಗಿ ಪರಮಾತ್ಮನ ಪೂಜಾ ಮಾಡಿ, ಭಜನ ಮಾಡತಕ್ಕ ಭಕ್ತ ಜನರ) ಆರಾಧನೆಯು–ಜಲಸೇಚನಾಖ್ಯ ಆರಾಧನೆಯನ್ನು, ಕೈಕೊಂಡು–ಸ್ವೀಕಾರ ಮಾಡಿ, ಬ್ರಹ್ಮಭವಾದಿ–ಬ್ರಹ್ಮರುದ್ರಾದಿದೇವತೆಗಳ. ನಾಮದಲಿ–ಜಗದಾಖ್ಯ ವೃಕ್ಷಕ್ಕೆ ದಾಯೋಪಶಾಖೆನಾಮದಲಿ ಕರೆಸತಕ್ಕವರು. ಇವರ ದ್ವಾರಾ. ಫಲಿಸಿತ್ತು–ಐಶ್ವರ್ಯಾದಿಗಳು (ಜ್ಞಾನ. ಭಕ್ತಿ, ವೈರಾಗ್ಯ ಫಲಗಳ) ಕೊಟ್ಟು, ತದುಣುವನು–ಆ ಫಲಭೋಜನರೂಪವಾದ ಮೋಕ್ಷಸುಖ ಭೋಜನ ಮಾಡಿಸಿ ಆದರಿಸೋವನಾಗುತಾನೆ, ತನ್ನ ಮಹಿಮೆಯ–ಬಿಂಬನಾದವನು ತನ್ನ ಮಹಿಮೆಯನ್ನು, ತೋರಗೊಡ–ನಾಕಲ್ರೇನ ತೋರಿಸೋದಿಲ್ಲ, ಜನಕ–ಜನರಿಗೆ ಎಂತ ಅರ್ಥ.

**ತಾ||** ಬೇರಿನಿಂದ ಸಕಲ ಫಲವಾದಂತೆ. ಆದರೂ ಜನರಿಗೆ ಶಾಖೆಗಳು ಫಲ ಕೊಟ್ಟಂತೆಂಬ ಲಕ್ಷ್ಯ ಹ್ಯಾಂಗಿರುತ್ತದೋ, ತದ್ವತ್ ಶಾಖಾರೂಪರಾದ ಬ್ರಹ್ಮಾದಿ ದೇವತೆಗಳೇನು, ತದನ್ಯರಾದ ಉಪಶಾಖರಾದ ಪ್ರಾಣಿಗಳೇನು, ಫಲ ಕೊಟ್ಟರೆಂದು ಲಕ್ಷ್ಯವಿರತದೆ. ಅದನ್ನು ಮರೆತು, ಸರ್ವವೂ ಪರಮಾತ್ಮನಲ್ಲಿ ಅನ್ವಯಿಸಬೇಕು. ಬೇರಿಗೆ ಶುದ್ಧಾಶುದ್ಧೋದಕಗಳಲ್ಲಿ ದಾವದಾದರೂ ಸರಿಯೇ, ಹಾಕಿದ ಮಾತ್ರದಿಂದ ಸುರಸೋಪೇತ ಫಲ ಹ್ಯಾಂಗೆ ಕೊಡುತ್ತದೋ ತದ್ವತ್ ಭಕ್ತಿಯಿಂದ, ಬೇರು ಸಾಮ್ಯವುಳ್ಳ ಪರಮಾತ್ಮಗೆ ಉದಕ ಸದೃಶವಾದ ಶುಭಾಶುಭ ಕರ್ಮಗಳು ಅರ್ಪಿಸೋಣದರಿಂದ ಅರ್ಪಿಸಿದವರಿಗೆ ಸುಫಲ ಕೊಡತಾನೆ. ದೈತ್ಯರು ಇಂಥಾ ಈಶ್ವರಾಖ್ಯ ವೃಕ್ಷದ ಬೇರಿನಲ್ಲಿ ದ್ವೇಷ ಉಳ್ಳವರಾಗಿ ಭಕ್ತಿರೂಪವಾದ ಉದಕ ಸೇಚನೆ ಮಾಡೋದಿಲ್ಲವಾದ್ದರಿಂದ ಸುಫಲ ಭಿನ್ನವಾದ ದುಷ್ಟಫಲ ಹೊಂದತಾರೆ ಎಂತ ತಾತ್ಪರ್ಯ.

**ಶ್ರುತಿತತಿಗಳಿಗೆ ಗೋಚರಿಸದ ।**
**ಪ್ರತಿಮಜಾನಂದಾತ್ಮನಚ್ಯುತ ।**
**ವಿತತ ವಿಶ್ವಾಧಾರ ವಿದ್ಯಾಧೀಶ ವಿಧಿಜನಕ ॥**
**ಪ್ರತಿದಿವಸ ಚೇತನರೊಳಗೆ ಪ್ರಾ ।**
**ಕೃತಪುರುಷನಂದದಲಿ ಸಂಚರಿ ।**
**ಸುತ ನಿಯಮ್ಯನಿಯಾಮಕನು ತಾನಾಗಿ ಸಂತೈಪ ॥ ೧೪ ॥**

ದೇಹದಲ್ಲಿ ತತ್ವಾಭಿಮಾನಿಗಳ ಸಹಿತವಾಗಿ ಪರಮಾತ್ಮ ಇದ್ದು ರಕ್ಷಿಸತಾನೆ ಎಂತ ಹೇಳತಾರೆ.

ಶ್ರುತಿತತಿಗಳಿಗೆ–ವೇದಸಮೂಹಗಳಿಗೆ, ರಮಾದೇವೇರಿಗೆ, ಗೋಚರಿಸದ–ಸಾಕಲ್ಯೇನ ಗೋಚರವಾಗದ ಗುಣಗಳುಳ್ಳ, ಅಪ್ರತಿಮ–ಸದೃಶರಹಿತನಾದವ, ಅಜ–ಉತ್ಪತ್ತಿಶೂನ್ಯನಾದವನು, ಆನಂದ–ಸಂತೋಷವೇನು, ಜ್ಞಾನವೇನು, ಇವುಗಳೇ, ಆತ್ಮ–ಶರೀರವಾಗಿ ಉಳ್ಳವನು, ಅಚ್ಯುತ–ನಾಶರಹಿತನಾದಂಥಾವನು, ಇನ್ನು, ವಿತತ–ಸರ್ವಜೀವರ ದೇಹೇಂದ್ರಿಯಗಳಲ್ಲಿ, ಬ್ರಹ್ಮಾಂಡದಲ್ಲಿ, ಬ್ರಹ್ಮಾಂಡಾದ್ಬಹಿಃ ಸರ್ವಸ್ಥಳಗಳಲ್ಲಿ ಅಪರಿಚ್ಛಿನ್ನ ವ್ಯಾಪ್ತಿ ಉಳ್ಳವನು, ವಿಶ್ವಾಧಾರ–ಬ್ರಹ್ಮಾಂಡಕ್ಕೆ ಆಧಾರಭೂತನಾದವನು, (ಇನ್ನೊಂದು ಅರ್ಥ), ವಿಶ್ವ–ದಕ್ಷಿಣಾಕ್ಷಿಮುಖದಲ್ಲಿ ವಿಶ್ವನಾಮದಿಂದ ಇದ್ದು ಸಕಲ ಜೀವರಿಗೆ ಜಾಗರ ಪ್ರವರ್ತಕನಾಗಿ ಸರ್ವಪದಾರ್ಥಗಳ ತೋರಿಸತಕ್ಕವ, ಶುಭಾಶುಭಗಳ ತೋರಿಸತಕ್ಕವ, ಸರ್ವೇಂದ್ರಿಯಗಳಿಗೆ ಎಚ್ಚರಿಕೆ ಹುಟ್ಟಿಸಿಕೊಡತಕ್ಕವ, ಆಧಾರ–ಮಹಾಪ್ರಳಯದಲ್ಲಿ ಕೂಡಾ ಜೀವಾಂತರ್ಗತನಾಗಿ, ಜಗದುಪಾದನಮೂಲಜಡಪ್ರಕೃತಿ ಅಂತರ್ಗತನಾಗಿದ್ದು, ಮೂಲ ರೂಪದಲ್ಲಿ ಏಕೀಭವಿಸದೇ, ಅವುಗಳಿಗೆ ಆಧಾರನಾಗಿರತಕ್ಕವ, ವಿದ್ಯಾಧೀಶ–ಜ್ಞಾನಯುಕ್ತರಾದ ರುದ್ರಾದಿದೇವತೆಗಳಿಗೆ ಸ್ವಾಮಿಯಾದವನು, ಇನ್ನೂ ಎಂಥಾವನೆಂದರೆ, ವಿಧಿಜನಕ–ಬ್ರಹ್ಮದೇವರಿಗೆ ತಂದೆಯಾದವನು. ಇಂಥಾ ಸರ್ವೋತ್ತಮನಾದ ಶ್ರೀ ಪರಮಾತ್ಮ, ಪ್ರತಿದಿವಸ–ಪ್ರತಿದಿನಕಲ್ಪದಲ್ಲೂ ಅವತಾರಗಳು ಮಾಡಿ, ಚೇತನರೊಳಗೆ–ಪ್ರಕೃತಿಸಂಬಂಧವಾದ ಸ್ಥೂಲದೇಹದಿಂದ ಸಹಿತರಾದ ಚೇತನರೊಳಗೆ ಕೂಡಿಕೊಂಡು ತಾನೂನೂ, ಪ್ರಾಕೃತಪುರುಷನಂದದಲಿ–ಸಾಧಾರಣಮನುಷ್ಯರು ದಾವರೀತ್ಯಾ ಸಂಚಾರಮಾಡತಾರೋ ಅಂಥಾ ಪುರುಷರೋಪಾದಿ, ಸಂಚರಿಸುತ–ಬಾಹ್ಯದಲ್ಲಿ ಸಂಚಾರಮಾಡತಾ, ನಿಯಮ್ಯ–ದೇಹಾಂತರ್ಗತನಾಗಿ, ಬಿಂಬನಾಗಿ ಇದ್ದು ತನ್ನಿಂದ ನಿಯಮ್ಯರಾದ ತತ್ವಾಭಿಮಾನಿದೇವತೆಗಳಿಗೆ, ನಿಯಾಮಕನು–ದೇಹೇಂದ್ರಿಯಗಳಿಂದ ಕಾರ್ಯಗಳು ಮಾಡಿಸುವಂತೆ ಆಜ್ಞಾ ಮಾಡತಕ್ಕವನು, ತಾನಾಗಿ–ತಾನೇ ಆಗಿ, ಬಹಿಃ ದುಷ್ಟರಾದ ದೈತ್ಯರ ಬಾಧಾ ಇಲ್ಲದಂತೆ ಅವರನ್ನ ನಿಗ್ರಹಮಾಡಿ, ಸಂತೈಪ–ಭಕ್ತರನ್ನ ಸಂರಕ್ಷಣ ಮಾಡತಾನೆ.

**ತಾ||** ವೇದಪ್ರತಿಪಾದ್ಯನು, ಆದಿಮಧ್ಯಾಂತರಹಿತನು, ಸಮಸ್ತ ಜಗಜ್ಜೀವಾಧಾರಕನು, ಸಂಹಾರಕನು, ಅಂತರ್ಯಾಮಿಯು, ಜ್ಞಾನ–ವಿಜ್ಞಾನ–ಪ್ರಜ್ಞಾನಮಯನು, ಅಪ್ರಾಕೃತನೂ ಆದ ಶ್ರೀ ಪರಮಾತ್ಮನು, ಪ್ರತಿದಿವಸದಲ್ಲೂ, ಪ್ರತಿಕಲ್ಪದಲ್ಲೂ, ಪ್ರಕೃತಿ ಸಂಬಂಧವಾದ ಸ್ಥೂಲದೇಹದಿಂದ ಸಹಿತರಾದ ಚೇತನರೊಳಗೆ ಕೂಡಿಕೊಂಡು ತಾನೂನೂ ಸಾಧಾರಣಮನುಷ್ಯರ ಹಾಗೆ ಬಾಹ್ಯದಲ್ಲಿ ಸಂಚಾರಮಾಡುತಾ ದುಷ್ಟನಿಗ್ರಹ, ಶಿಷ್ಟಪರಿಪಾಲನಮಾಡುತಾ, ಆಯಾ ತತ್ವಾಭಿಮಾನಿ ದೇವತೆಗಳಿಗೆ ತತ್ತದಿಂದ್ರಿಯವ್ಯಾಪಾರಗಳನ್ನ ಸದ್ವ್ಯಾಪಾರದಲ್ಲೇ ಮಾಡುವಂತೆ ಆಜ್ಞಾ ಮಾಡತಾ, ದುಷ್ಟರಾದ ದೈತ್ಯರ ಬಾಧಾ ಇಲ್ಲದಂತೆ ಅವರನ್ನ ನಿಗ್ರಹಮಾಡಿ ತನ್ನ ಭಕ್ತರಾದವರನ್ನ ಸಂರಕ್ಷಣೆ ಮಾಡುವನು ಎಂತ ತಾತ್ಪರ್ಯ.

**ಮನ ವಿಷಯದೊಳಗಿರಿಸಿ ವಿಷಯವ ।**
**ಮನದೊಳಗೆ ನೆಲೆಗೊಳಿಸಿ ಬಲು ನೂ ।**
**ತನವು ಸುಸಮೀಚೀನವಿದುಪಾದೇಯವೆಂದರುಪಿ ॥**
**ಕನಸಿಲಾದರು ತನ್ನ ಪಾದದ ।**
**ನೆನೆವನೀಯದೆ ಸರ್ವರೊಳಗಿ ।**
**ದ್ದನುಭವಿಸುವನು ಸ್ಥೂಲವಿಷಯವ ವಿಶ್ವನೆಂದೆನಿಸಿ ॥ ೧೫ ॥**

ಮನ—ಸ್ಥೂಲದೇಹಗತ ಮನಸ್ಸೆಂಬ ಗೋಳಕದಲ್ಲಿ, ವಿದ್ಯಮಾನವಾದ ಲಿಂಗದೇಹಸ್ಥ ಸುಪ್ತಪರಿಚ್ಛೇದವಾದ, ಪ್ರಥಮಪರಿಚ್ಛೇದಗತ ಅನಾದಿ ಜಡಮನಸ್ಸು ಪರಂಪರಾದಿಂದ ಬಂದು, ಸ್ಥೂಲದೇಹಗತ ಗೋಳಕಸಾಂಕೇತವಾದ ಮನದಲ್ಲಿ ವ್ಯಾಪಿಸಿ ಇದೆ. ಅದರಲ್ಲಿ ದೇಹದಲ್ಲಿ ವ್ಯಾಪ್ತವಾದ ಜೀವನ ಚಿತ್ತವನ್ನು, ವಿಷಯದೊಳಗಿರಿಸಿ—ದಶೇಂದ್ರಿಯಗಳಿಗೆ ವಿಷಯಗಳಾದ ರೂಪರಸಾದಿಗಳು, ಗಮನಾಗಮನಗಳು ಇತ್ಯಾದಿ ಇಂದ್ರಿಯವಿಷಯಗಳಲ್ಲಿ, ವಿಶ್ವರೂಪ ಪರಮಾತ್ಮ ಪ್ರವೇಶಮಾಡಿ, ತದ್ದ್ವಾರಾ ಬಾಹ್ಯವಾದ ಭೋಗಯೋಗ್ಯ ಪ್ರಾಕೃತವಿಷಯಗಳಲ್ಲಿ ಮನಸ್ಸನ್ನು ಪ್ರವೇಶಮಾಡಿಸಿ, ವಿಷಯವ—ಮನೋದ್ವಾರಾ ಇಂದ್ರಿಯಗಳಿಂದ ಸ್ವೀಕರಿಸಿದ ವಿಷಯವನ್ನು, ಮನದೊಳಗೆ—ಪೂರ್ವೋಕ್ತಪ್ರಕಾರ ಇರತಕ್ಕ ಸ್ಥೂಲದೇಹಗತ ಮನದೊಳಗೆ, ನೆಲೆಗೊಳಿಸಿ—ಇಂದ್ರಿಯಗಳ ಮಾರ್ಗದಿಂದ ಪ್ರವೇಶ ಮಾಡಿಸಿ ಇಟ್ಟು, ಎಂದರೆ, ಪೂರ್ವೋಕ್ತಕ್ರಮದಿಂದ ಬಿಂಬಕ್ರಿಯಾದ್ವಾರಾ ಇಟ್ಟವನಾಗಿ, ಬಲುನೂತನವು—ಇದುವರೆಗೆ ಅನೇಕಾವೃತ್ತಿ ಜೀವನಾದವ ಭೋಗಮಾಡಿದ ವಿಷಯಗಳಾದ ಕಾಲಕ್ಕೂ ಅತ್ಯಂತ ನೂತನವೂ ಎಂತಲೂ, ಸುಸಮೀಚೀನವಿದು—ಭೋಗಕ್ಕೆ ಯೋಗ್ಯವಾದ ಸಮೀಚೀನವಾದ ವಿಷಯ ಇದು ಎಂತಲೂ, ಉಪಾದೇಯ—ಉಪ—ಸಮೀಪ, ಸಮೀಪಕಾಲದ ಒಳಗೆ, ಆ—ಸಮ್ಯಕ್, ದೇಯಾ—ಸುಖಕೊಡತಕ್ಕದ್ದು ಎಂತಲೂ, ಎಂದರುಪಿ—ಎಂತ ಮನಸ್ಸಿಗೆ ತಿಳಿಸಿ (ಪ್ರಾಣಿಗಳಿಗೆ ವಿಷಯಭೋಗಗಳ ಮಾಡಿಸೋವನಾಗಿ), ಕನಸಿಲಾದರೂ—ಜಾಗ್ರತ್ಕಾಲದ ವಾಸನಾದೇ ಸ್ವಪ್ನ, ಜಾಗ್ರತ್ಕಾಲದಲ್ಲಿ ಪೂರ್ವೋಕ್ತಪ್ರಕಾರ ಅನುಸಂಧಾನ, ಜ್ಞಾನ, ಜ್ಞಾಪಕದಲ್ಲಿ ಕೊಡದೇ ಇರೋಣದರಿಂದ ಸ್ವಪ್ನದಲ್ಲಾದರೂ ಜ್ಞಾಪಕ ಕೊಡೋದಕ್ಕೆ ಅವಕಾಶವಿಲ್ಲದಾಯಿತು. ಆದ್ದರಿಂದ ಜಾಗ್ರತ್–ಸ್ವಪ್ನ ಉಭಯಕಾಲದಲ್ಲಿ (ಜಾಗ್ರತ್ಕಾಲದಲ್ಲಿ ವಿಶ್ವ, ಸ್ವಪ್ನಕಾಲದಲ್ಲಿ ತೈಜಸ), ತನ್ನ ಪಾದದ, ನೆನೆವನೀಯದೆ—ಈ ಉಭಯರು ತಮ್ಮ ತಮ್ಮ ಪಾದದ ಜ್ಞಾಪಕವೂ ಎಂದರೇ ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬಕ್ರಿಯಾ ಎಂಬ ಜ್ಞಾಪಕವು ತಮ್ಮ ಪಾದದಲ್ಲಿ ಕೊಡದೇ ಎಂದರೇ ಅಂಥಾ ಸಾಧನಿ ಪರಿಪಕ್ವಕಾಲ ಬಾರದೇ ಇರೋಣದರಿಂದ ಕೊಡದವನಾಗಿ, ಸರ್ವರೊಳಗಿದ್ದನುಭವಿಸುವ—ಸರ್ವ ಚರಾಚರಪ್ರಾಣಿಗಳಲ್ಲಿ, ಸರ್ವ ಜಡಗಳಲ್ಲಿ ತದಾಕಾರ ತಚ್ಛಬ್ದವಾಚ್ಯನಾಗಿ ಅನುಭವಿಸುತ್ತಾನೆ. (ದಾವುದರನ್ನ? ದಾರು? ಎಂದರೆ), ಸ್ಥೂಲ ವಿಷಯವ—ಜೀವರು ಸ್ಥೂಲದೇಹದಿಂದ ಅನುಭವಿಪ ಸ್ಥೂಲವಿಷಯಗಳಲ್ಲಿ ಸ್ಥೂಲಪದ

ವಾಚ್ಯನಾಗಿ, ದ್ರವ್ಯನಾಮದಿಂದಲೂ ವಾಚ್ಯನಾಗಿದ್ದು, ಇಂಥಾ ಸ್ಥೂಲಸಾಂಕೇತವಾದ ತನ್ನ ಸ್ವಾಖ್ಯವಿಷಯಗಳ ಸ್ಥೂಲದೇಹಾಂತರ್ಗತನಾಗಿ, ಸ್ಥೂಲದೇಹಪದವಾಚ್ಯನಾಗಿದ್ದು, ಸ್ವಾಖ್ಯ ಸ್ಥೂಲದೇಹಗತರೂಪದಿಂದ, ಅನುಭವಿಪ–ವಿಷಯಾಂತರ್ಗತ ಸ್ವಾಖ್ಯವಿಷಯಗಳ ಅನುಭವಿಸತಾನೆ. ವಿಶ್ವನೆಂದೆನಿಸಿ–ವಿಶ್ವ ಎಂತ ನಾಮದಿಂದ ಕರಿಸಿ ಜಾಗ್ರತ್ಕಾಲದಲ್ಲಿ ಇಂಥಾ ಭೋಗಗಳ ಮಾಡತಾನೆ. ತದ್ವತ್ ತೈಜಸ ಪ್ರಾಕೃತ ವಿಷಯ ಜೀವನ ದ್ವಾರಾ ಜಡದೇಹಕ್ಕೆ ಸಂಬಂಧಮಾಡಿ, ದೇಹಾಭಿಮಾನವಿಶಿಷ್ಟನಾದ ಜೀವನೊಡಗೂಡಿ ಸಂತೋಷಪಡೋ ಭಾಗ್ಯವನ್ನ ಕೊಡೋವನಾಗತಾನೆ. ಜೀವಗೆ ಉಪಚಯಭಾಗ ದಾವದೂ ಇಲ್ಲ. ದೇಹಗತ ತತ್ವದೇವತೆಗಳಿಗೆ ವಿಶ್ವತೈಜಸರೋಪಾದಿಯಲ್ಲಿ ಭೋಗವು.

**ತೋದಕನು ತಾನಾಗಿ ಮನ ಮೊದ ।**
**ಲಾದ ಕರಣದೊಳಿದ್ದು ವಿಷಯವ ।**
**ನೈದುವನು ನಿಜಪೂರ್ಣಸುಖಮಯ ಗ್ರಾಹ್ಯಗ್ರಾಹಕನು ॥**
**ವೇದವೇದ್ಯನು ತಿಳಿಯದವನೋ**
**ಪಾದಿ ಭುಂಜಿಸುತೆಲ್ಲರೊಳಗಾ ।**
**ಹ್ಲಾದ ಪಡುವನು ಭಕ್ತವತ್ಸಲ ಭಾಗ್ಯಸಂಪನ್ನ ॥ ೧೬ ॥**

ಮನ ಮೊದಲಾದ ಕರುಣದೊಳಿದ್ದು–ಪ್ರಾಣಿಗಳ ಸ್ಥೂಲದೇಹಗತ, ಇಂದ್ರಿಯ ಗೋಳಕಗಳು, ತದ್ಗತ ಲಿಂಗದೇಹದ ಇಂದ್ರಿಯಾಂಶಗಳು. ತದ್ಗತ ಜೀವನ ವ್ಯಾಪ್ತವಾದ ಇಂದ್ರಿಯಗಳು. ಏತಾದೃಶವಾದ ಮನ ಇಂದ್ರಿಯ ಮೊದಲಾದ, ಕರಣ–ಏಕಾದಶೇಂದ್ರಿಯಗಳಲ್ಲಿ ತನ್ನಾಮ, ತದಾಕಾರ, ತದ್ವಾಚ್ಯನಾಗಿ, ಅವಯವವಿಶಿಷ್ಟನಾಗಿ, ಅಲ್ಲಲ್ಲಿದ್ದು, ತೋದಕನು–ಆಯಾ ಇಂದ್ರಿಯಗಳಿಗೆ ಪ್ರೇರಕನು, ನಿಯಾಮಕನು, ತಾನಾಗಿ–(ಪ್ರಥಮತಃ ತಾನೇ ನಿಯಾಮಕನಾಗಿ ನಂತರ ಪರಂಪರಾದಿಂದ ಜೀವರಿಗೆ ಪ್ರಾಕೃತ ಭೋಗ ಮಾಡಿಸತಾನೆ. ಪರಮಾತ್ಮನಾದ ತನ್ನ ಭೋಗ ಹ್ಯಾಂಗೆಂದರೇ, ಜೀವರ ದೇಹಗತ, ಪೂರ್ವೋಕ್ತ ಪ್ರಕಾರ, ಮನ ಮೊದಲಾದ ಇಂದ್ರಿಯಗಳಲ್ಲಿ, ಇದ್ದು ತಾನಾಗಿ, ತನ್ನ ಸ್ವಾಖ್ಯ ಇಂದ್ರಿಯಗಳಿಗೆ, ತನಗೆ ತಾನಾಗಿ, ಪ್ರೇರಕನಾಗಿ,) ನಿಜ ಪೂರ್ಣಸುಖಮಯ– ನಿಜ–ತನ್ನ ಸ್ವಾಖ್ಯಗಳಾದ, ಪೂರ್ಣ–ದೋಷವರ್ಜಿತವಾಗಿ ಪೂರ್ಣಗಳಾದ, ಸುಖಮಯ–ಸುಖಸ್ವರೂಪಗಳಾದ, ವಿಷಯವನು–ಅಧಿಷ್ಠಾನಗತ ಏತಾದೃಶವಾದ ತನಗೆ, ಅಭಿನ್ನವಾದ, ವಿಷಯವನ್ನ, ಐದುವನು–ಐದೋವನಾಗತಾನೆ. ಗ್ರಾಹ್ಯ–ಹಂಸದೋಪಾದಿಯಲಿ ತನ್ನ ಭೋಗಕ್ಕೆ ಯೋಗ್ಯವಾದದ್ದರನ್ನ ಗ್ರಹಿಸತಕ್ಕವನು. ಗ್ರಾಹಕನು–ಅದನ್ನು ಭುಂಜಿಸತಕ್ಕವನು. ತದನ್ಯ ಗ್ರಹಿಸೋದಿಲ್ಲ, ಭುಂಜಿಸೋದೂ ಇಲ್ಲ. (ಈ ಪ್ರಕಾರ ಅನುಸಂಧಾನ ಮಾರ್ಗ ತಿಳಿದು), ವೇದವೇದ್ಯನು–ವೇದ–ಅನುಷ್ಠಿಸತಕ್ಕವರಿಗೆ, ವೇದ್ಯನು–ಅಪರೋಕ್ಷದಿಂದ ಪ್ರತ್ಯಕ್ಷನಾಗತಕ್ಕವನು, ತಿಳಿಯದೆ–ದೇಹಾಂತರ್ಗತ ಇಂದ್ರಿಯಾಂತರ್ಗತನಾಗಿದ್ದು, ತಿಳಿಸಿಕೊಳ್ಳದೇ, ಬಿಂಬರೂಪಿ ಪರಮಾತ್ಮ,

ಅವನೋಪಾದಿ–ಜೀವನು ಪ್ರಾಕೃತ ವಿಷಯಗಳ, ಪ್ರಾಕೃತ ಸ್ಥೂಲ ದೇಹದಿಂದ, ಹ್ಯಾಂಗೆ ಭುಂಜಿಸುತ್ತಾನೋ, ಅವನೋಪಾದಿಯಲಿ, ದೇಹಾಂತರ್ಗತನಾದ, ದೇಹಾಕಾರನಾದ, ಶ್ರೀ ಪರಮಾತ್ಮ, ಎಲ್ಲರೊಳಗೆ–ಸರ್ವ ಪ್ರಾಣಿಗಳೊಳಗೆ ಇದ್ದು, ಭುಂಜಿಸುತಾ–ತನ್ನ ಸ್ವಾಖ್ಯಗಳ ತಾನು ಭುಂಜಿಸುತ ಎಂದರೇ, (ಜೀವನ ಭೋಜನ, ಪರಮಾತ್ಮ ಭೋಜನ, ಏಕಕಾಲಾವಚ್ಛೇದೇನ, ಪುರುಷ ಭೋಜನ ಮಾಡತಕ್ಕ ಕಾಲಕ್ಕೂ ತತ್ಕ್ರಿಯಾ ದ್ವಾರಾ ಛಾಯಾ ಭೋಜನ ಮಾಡೋ ಕಾಲಕ್ಕೂ ಐಕ್ಯ ಹ್ಯಾಂಗೋ ತದ್ವತ್ ಜೀವಪರಮಾತ್ಮರ ಭೋಜನವೂ. ಛಾಯಾ ಭೋಜನ ಮಾಡತಕ್ಕದ್ದು ತನ್ನೋಪಾದಿಯಲಿ ಪ್ರತಿಫಲಿಸಿದ ಫಲಗಳ ಛಾಯಾವನ್ನು. ಭುಂಜಿಸುವ ಪುರುಷನಾದವ ಪ್ರತ್ಯಕ್ಷವಾದ ಫಲಗಳ ಭೋಜನ ಮಾಡತಾನೆ. ಅತ ಏವ, ಬಿಂಬಭುಕ್ತ ಪ್ರತಿಬಿಂಬಗಿಲ್ಲ, ಪ್ರತಿಬಿಂಬಭುಕ್ತ ಬಿಂಬಗಿಲ್ಲ. ಎರಡೂ ಬೇರೆ ಬೇರೇನೇ. ಉಭಯರ ಭೋಜನ ಏಕಕಾಲಾವಚ್ಛೇದವೆಂದು ತಿಳಿಯ ಬೇಕು.) ಈ ಪ್ರಕಾರ ಭುಂಜಿಸುತ ಶ್ರೀ ಪರಮಾತ್ಮನು, ಆಲ್ಹಾದಪಡುವನು–ತಾನು ಸಂತೋಷನಾಗಿರತಾನೆ. ಈ ಪ್ರಕಾರ ತಿಳಿದ ಜ್ಞಾನಿಗಳಿಗೆ ದಿವ್ಯ ಸಂತೋಷ ಕೊಟ್ಟು ಸಂರಕ್ಷಣೆ ಮಾಡತಾನೆ. ಇನ್ನು ಎಂಥಾವನೆಂದರೆ, ಭಕ್ತವತ್ಸಲ–ಇಂಥಾ ಭಕ್ತರಲ್ಲಿ ಬಹು ಅಂತಃಕರುಣ ಮಾಡೋವನಾಗಿ, ಅವರಿಗೆ, ಭಾಗ್ಯಸಂಪನ್ನ–ಜ್ಞಾನ, ಭಕ್ತಿ, ವೈರಾಗ್ಯ ವೇನು ಕೊಟ್ಟು ಸಂರಕ್ಷಣೆ ಮಾಡೋವನಾಗತಾನೆ ಎಂತ ತಾತ್ಪರ್ಯ.

**ತಾ||** ೧೫–೧೬ನೆ ಶ್ಲೋಕಗಳು ಸ್ಥೂಲದೇಹದಲ್ಲಿ ವ್ಯಾಪ್ತನಾದ, ಜೀವನ ದ್ವಾರಾ ದಕ್ಷಿಣಾಕ್ಷಿಗತ ವಿಶ್ವನು ಸ್ಥೂಲ ದೇಹೇಂದ್ರಿಯಾದಿಗಳಿಂದ, ಸ್ಥೂಲಕರ್ಮಗಳ ಮಾಡಿಸಿ, ತನ್ನ ಸ್ವಾಖ್ಯ ಸ್ಥೂಲವನ್ನು, ತಾನು ಅನುಭವಿಸತಾನೆ, ಎಂತಲೂ, ಹಾಂಗೆ ಸ್ಥೂಲ ದೇಹಗತನಾಗಿ ತನ್ನ ಸ್ವಾಖ್ಯಗಳ ತಾನುಂಡು ಆವಾಸವಾಗಿದ್ದಾನೆ ಎಂತಲೂ, ಹೀಗೆ ಅನುಸಂಧಾನಪೂರ್ವಕ ವಿಷಯವಿರಕ್ತನಾಗಿ, ನಿಸ್ಸಂಗನಾಗಿ ಪರಮಾತ್ಮನ ವಿಷಯವಾದ ಸಂತೋಷವನ್ನು ದಾವನಾದರೂ ಪಡಿಯಾನೋ ಅಂಥಾ ಭಕ್ತಗೆ, ಜ್ಞಾನ, ಭಕ್ತಿವೈರಾಗ್ಯದ್ವಾರಾ ಅಪರೋಕ್ಷಭಾಗ್ಯವನ್ನ ಕೊಟ್ಟು ಲಿಂಗಭಂಗ ಐದಿಸಿ ಮೋಕ್ಷ ಸಂಪತ್ತಿನಿಂದ ಯುಕ್ತನ್ನಾಗಿ ಮಾಡತಾನೆಂದು ತಾತ್ಪರ್ಯ.

**ನಿತ್ಯ ನಿಗಮಾತೀತ ನಿರ್ಗುಣ ।**
**ಭಕ್ತವತ್ಸಲ ಭಯವಿನಾಶನ ।**
**ಸತ್ಯಕಾಮುಶರಣ್ಯ ಶ್ಯಾಮಲ ಕೋಮಲಾಂಗ ಸುಖಿ ॥**
**ಮತ್ತನಂದದಿ ಮರ್ತ್ಯರೊಳಹೊರ ।**
**ಗೆತ್ತ ನೋಡಲು ಸುತ್ತಲಿಪ್ಪನು ।**
**ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ಪರಮಾಪ್ತ ॥ ೧೭ ॥**

ನಿತ್ಯ–ಶ್ರೀ ಪರಮಾತ್ಮನೋಪಾದಿಯಲಿ, ಅನಾದಿಯಾಗಿ, ನಿತ್ಯವಾಗಿ, ಈಶ್ವರ

ನಿಂದ ರಚಿತವಲ್ಲದ, ಈಶ್ವರಾಧೀನವಾದ, ಶ್ರೀ ಪರಮಾತ್ಮನ ದಿವ್ಯ ಮಾಹಾತ್ಮ್ಯಗಳ ಹೇಳತಕ್ಕ, ನಿಗಮ–ಋಗಾದಿ ನಾಲ್ಕು ನಾಮಗಳಿಂದ ಯುಕ್ತವಾದ ಅನಂತ ವೇದಗಳು (ಇವ್ರಗಳಿಗೆ), ಅತೀತ–ಅತೀತನಾದವ, ನಿರ್ಗುಣ–ಪ್ರಾಕೃತ ಗುಣಗಳು ಇಲ್ಲದವ, ತನ್ನ ಸ್ವಾಖ್ಯವಾದ ಅಪ್ರಾಕೃತಗುಣ, ಅಂದರೇ ಅನಂತಕಲ್ಯಾಣಗುಣಪರಿಪೂರ್ಣನಾದವನು, ಭಕ್ತವತ್ಸಲ–ತನ್ನ ಸರ್ವೋತ್ತಮನೆಂದು ತಿಳಿದಂತಾ ಜ್ಞಾನಿಗಳಲ್ಲಿ, ಅತ್ಯಂತ ಪ್ರೇಮಾಸ್ಪದನಾದವ, ಭಯವಿನಾಶನ–ಇಂಥಾ ಭಕ್ತರಿಗೆ ಬರತಕ್ಕ ಭಯಗಳನ್ನ ನಾಶಮಾಡತಕ್ಕವ, ಇನ್ನೂ, ತಮೋಯೋಗ್ಯರಿಗೆ, ಭಯ–ಭಯವನ್ನು, ವಿ–ವಿಶೇಷಾಕಾರವಾಗಿ ಕೊಡತಕ್ಕವ, ಸತ್ಯಕಾಮ–ತಾರತಮ್ಯ ಪಂಚಭೇದ ಸತ್ಯ, ಜಗತ್ತು ಸತ್ಯ ಎಂತ ತಿಳಿದು ತದನುಷ್ಠಾನ ಮಾಡತಕ್ಕ ಭಕ್ತರು, ಬೇಡಿದ ಇಷ್ಟಾರ್ಥವನ್ನು ಕೊಡತಕ್ಕವ, ಶರಣ್ಯ–ಭಕ್ತ ಜನರಿಂದ ವಂದ್ಯನಾದವ, ಶ್ಯಾಮಲ–ಶ್ಯಾಮಲವರ್ಣ ವಿಶಿಷ್ಟನಾದವ, ಕೋಮಲಾಂಗ–ಅತ್ಯಂತ ಸುಂದರತರವಾದ ತನ್ನ ಶರೀರವನ್ನು ಅಪರೋಕ್ಷದಿಂದ, ಸುಖಿ–ಮುಕ್ತರಿಗೆ ಕೊಡತಕ್ಕವ, ಮತ್ತನಂದದಿ–ಮಂತ್ರೌಷಧಗಳನ್ನು ತಿಳಿದ ಪುರುಷ ದಾವ ಭಯವೂ ಇಲ್ಲದೇ ಹ್ಯಾಂಗೆ ನಿರ್ಭಯವಾಗಿ ಮತ್ತನಾಗಿರತಾನೋ, ತದ್ವತ್, ಸರ್ವೋತ್ತಮನಾದ ಶ್ರೀಪರಮಾತ್ಮನು, ರಮಾಬ್ರಹ್ಮಾದಿ ಸರ್ವ ತ್ರಿವಿಧ ಜೀವರ ಲಕ್ಷ್ಯ ಮಾಡದೇ, ಮರ್ತ್ಯರೊಳ–ಮನುಷ್ಯರೊಳಗೆ, ಹಾಂಗೆ, ರಮಾಬ್ರಹ್ಮಾದಿ ಸರ್ವ ಜೀವರೊಳಗೆ, (ಬ್ರಹ್ಮಾಂಡದೊಳಗೆ), ಹೊರಗೆ–ಬಹಿರಾಕಾಶದಲಿ ಬ್ರಹ್ಮಾಂಡದ ಹೊರಗೆ ನವಾವರಣ ಪರ್ಯಂತವಾಗಿ, ಎತ್ತ–ನೋಡಲು–ಅದಕ್ಕೆ ಆಚೇಲಿ ವಿಚಾರದಿಂದ, ನೋಡಲು–ಅವ್ಯಾಕೃತಾಕಾಶದಲ್ಲಿ, ಸ್ವಾಖ್ಯ ಪ್ರದೇಶದಲ್ಲಿ, ಅಪರಿಚ್ಛಿನ್ನನಾಗಿ, ಸುತ್ತಲಿಪ್ಪನು–ಸುತ್ತಲೂ ಅಚ್ಛಿದ್ರವಾಗಿ, ವ್ಯಾಪ್ತನಾಗಿ ಇರೋವನಾಗಿದಾನೆ. ಇದರಿಂದ "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಎಂಬ ಶ್ರುತಿ ಅರ್ಥ ಹೇಳಿದಂತಾಯಿತು. ಅತ್ಯಧಿಕ–ಅಸ್ವತಂತ್ರಲಕ್ಷಣರಾದ ಕ್ಷರಾಕ್ಷರ ಜೀವರೊಳು ಅಕ್ಷರಳಾದ ರಮಾದೇವಿ ಅಧಿಕಳು. ಈಕೆಗಿಂತಲೂ ಅಪರಿಚ್ಛಿನ್ನವಾದ ಅತ್ಯಧಿಕ ಉಳ್ಳವನು. ಸಂತೃಪ್ತ–ಸಂ–ಯೋಗ್ಯರಾದ, ಬ್ರಹ್ಮಾದಿ ಮುಕ್ತಿಯೋಗ್ಯರಿಗೆ ತನ್ನ ಸಂದರ್ಶನದಿಂದ ಆನಂದ ಭೋಜನ ಮಾಡಿಸಿ, ತೃಪ್ತ–ತೃಪ್ತರನ್ನಾಗಿ ಮಾಡತಕ್ಕವನು. ತದನ್ಯರಿಗೆ–ರಾಮಕೃಷ್ಣಾದಿ ರೂಪ ಸಂದರ್ಶನದಿಂದ, ಭೇದ ಐದಿಸಿ ಅತೃಪ್ತರನ್ನಾಗಿ ಮಾಡತಕ್ಕವನು. (ತಮೋಯೋಗ್ಯ ಮತ್ತು ನಿತ್ಯ ಸಂಸಾರಿಗಳಿಗೆ), ತ್ರಿಜಗದ್ವ್ಯಾಪ್ತ–ತ್ರಿ–ಮೂರಾದಂಥಾ, ಪೂರ್ವೋಕ್ತ ಪುರುಷ ರೂಪತ್ರಯಗಳಿಂದ, ಜಗದ್ವ್ಯಾಪ್ತ–ಸ್ಥಾವರ ಜಂಗಮಾದಿಗಳಲ್ಲಿ, ಆಯಾ ರೂಪಗಳಿಂದ ವ್ಯಾಪ್ತನಾದವನು. ಪರಮಾಪ್ತ– ಪರಮ–ತಾರತಮ್ಯಾನುಸಾರ ಉತ್ತಮರಾದ ಭಕ್ತರಿಗೆ ಅವರ ಯೋಗ್ಯತಾನುಸಾರ, ಆಪ್ತ–ಆಪ್ತನಾದವನು, ನಿರ್ಲಿಪ್ತ–ನಿರ್ಲಿಪ್ತನಾದವನು.

**ತಾ||** ಶ್ರೀ ಪರಮಾತ್ಮನ ಗುಣೋಪಾಸನಪೂರ್ವಕ, ಭಕ್ತಿ ಮಾಡಿದವರು, ಮುಕ್ತಿ ಐದತಾರೆ ಎಂತ ತಾತ್ಪರ್ಯ.

**ಪವಿ ಹರಿನ್ಮಣಿ ವಿದ್ರುಮದ ಸ ।**
**ಚ್ಛವಿಗಳಂದದಿ ರಾಜಿಸುತ ಮಾ ।**
**ಧವ ನಿರಂತರ ದೇವಮಾನವದಾನವರೊಳಿದ್ದು ॥**
**ತ್ರಿವಿಧಗುಣ ಕರ್ಮ ಸ್ವಭಾವವ ।**
**ಪವನಮುಖ ದೇವಾಂತರಾತ್ಮಕ ।**
**ದಿವಸದಿವಸದಿ ವ್ಯಕ್ತ ಮಾಡುತಲವರೊಳಿದ್ದುಣಿಪ ॥ ೧೮ ॥**

ತ್ರಿವಿಧ ಜೀವರಲ್ಲಿದ್ದು ಕರ್ಮಸಾಧನ ಮಾಡತಾನೆ ಎಂತ ಹೇಳತಾರೆ.

ಪವಿ_ವಜ್ರ, ತದ್ಗತ ತೇಜಃಸದೃಶ ಜ್ಞಾನ, ಸಾತ್ವಿಕ ಜ್ಞಾನ, ಭಗವದ್ಭಕ್ತರಾದ ದೇವತೆಗಳು ಮೊದಲು ತೃಣಾಂತ ಜೀವರು, ಹರಿನ್ಮಣಿ_ನೀಲ. ಈ ನೀಲವಾದದ್ದು ಮಿಶ್ರವರ್ಣಯುಕ್ತವಾದದ್ದರಿಂದ ರಜೋಗುಣ ಸ್ವಭಾವ ಉಳ್ಳದ್ದು, ಮಿಶ್ರಜ್ಞಾನಯುಕ್ತ ರಾದವರು, ನಿತ್ಯ ಸಂಸಾರಿಗಳು, ತೃಣಾಂತ ಜೀವರು, ವಿದ್ರುಮ_ಹವಳ, ಈ ಹವಳ ವಾದದ್ದು ಏಕವರ್ಣವಿಶಿಷ್ಟವಾಗಿ ಒಂದೇ ಪ್ರಕಾರ ತೇಜ ಉಳ್ಳದ್ದು. ವಜ್ರದ ಕಾಂತಿಗೂ, ನೀಲಕಾಂತಿಗೂ ವಿಲಕ್ಷಣ ಕಾಂತಿ ಉಳ್ಳದ್ದು. ತಮೋಯೋಗ್ಯರು ತೃಣಾಂತ ಜೀವರು, ಸಚ್ಛವಿಗಳಂದದಿ_ ಈ ಪ್ರಕಾರ ಅದರದರ ಸ್ವಭಾವ ಅದರದ್ದಾಗಿ ಇರುವದರಿಂದ, ಈ ದೃಷ್ಟಾಂತಾನುಸಾರ ಅವರದರ ಪ್ರಕಾಶ ಹ್ಯಾಂಗೋ, ಅದರಂತೆ ಜ್ಞಾನಗಳಿಂದ, ರಾಜಿಸುತ_ಪ್ರಕಾಶಮಾನರಾಗುತ, ರೂಪಯುಕ್ತರಾಗಿ, ಸ್ವರೂಪಸ್ವಭಾವರಾದ, ದೇವ_ ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರು, ಮಾನವ ಪುರಂಜನ ಆರಂಭ ಮಾಡಿ, ತೃಣಾಂತ ನಿತ್ಯ ಸಂಸಾರಿಗಳು, ದಾನವರೊಳು_ಕಲಿ ಆರಂಭ ಮಾಡಿ, ತೃಣಾಂತ ತಮೋಯೋಗ್ಯರು. ಈ ತ್ರಿವಿಧರ ಸ್ವರೂಪದಲಿ, ಮಾಧವ_ಲಕ್ಷ್ಮೀಸಹಿತನಾಗಿ ಶ್ರೀ ನಾರಾಯಣ ದೇವರು, ನಿರಂತರ_ಅಸೃಜ್ಯರಾಶಿದಶಾದಲ್ಲೂ, ಸ್ಥಿತಿ ಕಾಲದಲ್ಲೂ, ಲಿಂಗಭಂಗಾನಂತರ ಸ್ವಸ್ವರೂಪದಿಂದ ಇರೋ ಕಾಲದಲ್ಲೂ, ಅಂದರೇ ಸದಾ ಅವಿಯೋಗ ರಾಗಿ ರಮಾಮಧುಸೂದನರು ಮಾತ್ರವೇ, ಇವರುಗಳ ಸ್ವರೂಪದಲ್ಲಿ ಆವಾಸರಾಗಿ ಇರತಾರೆ. (ಈ ಪ್ರಕಾರ), ಇದ್ದು_ಸ್ವರೂಪದಲ್ಲಿದ್ದವರಾಗಿ, ತ್ರಿವಿಧಗುಣ_ತ್ರಿವಿಧ ಜೀವರ ಸ್ವರೂಪ ಗುಣಗಳ ಅನುಸರಿಸಿ, ಕರ್ಮ ಸ್ವಭಾವವ_ಕರ್ಮಗಳ ಅವರವರ ಸ್ವರೂಪ ಸ್ವಭಾವವ, ಅಂತರಾತ್ಮಕ_ಆತ್ಮಾಂತರಾತ್ಮೇತಿ ಹರಿಃ ಏಕ ಏವ ದ್ವಿಧಾ ಸ್ಥಿತಃ" ಎಂಬ ವಚನಾನುಸಾರ, ಆತ್ಮಶಬ್ದವಾಚ್ಯ ಹರಿ ಸ್ಥೂಲದೇಹಸ್ಥನಾಗಿಯೂ, ಅಂತರಾತ್ಮನಾದ ಬಿಂಬರೂಪಿ ಪರಮಾತ್ಮ, ಪವನಮುಖ_ವಾಯುದೇವರು ಮೊದಲಾದ, ದೇವ_ತತ್ವ ದೇವತೆಗಳ ನಾಮದಿಂದ, ಸಾಕ್ಷಾತ್ತಾಗಿ ತಾನೇ, ದಿವಸದಿವಸದಿ_ಪ್ರತಿದಿನ, ಪ್ರತಿಕ್ಷಣದಲ್ಲಿ, ವ್ಯಕ್ತ ಮಾಡುತಲಿ_ಕಾರಣಾತ್ಮನು ಇರತಕ್ಕ ಸ್ವರೂಪಜ್ಞಾನವನ್ನು, ಕಾರ್ಯಾತ್ಮನು, ಸ್ಥೂಲದೇಹ ದ್ವಾರಾ, ಸ್ಥೂಲಕರ್ಮ ದ್ವಾರಾ, ಆತ್ಮರೂಪದಿಂದ ಅಭಿವ್ಯಕ್ತಿಮಾಡುತಲಿ, ಅವರೊಳಿದ್ದುಣಿಪ_ಆಯಾ ತ್ರಿವಿಧ ಪ್ರಾಣಿಗಳೊಳಗಿದ್ದು ಬಿಂಬಕ್ರಿಯಾದ್ವಾರಾ ಉಣಿಸತಾನೆ.

**ತಾ||** ಬ್ರಹ್ಮದೇವರ ನೂರು ವರುಷ ಒಂದು ಹಗಲು, ಹಾಗೆ ನೂರು ವರುಷ ಒಂದು ರಾತ್ರಿ. ಈ ಪ್ರಕಾರ ಒಂದು ದಿನವೆಂದು ನಾರಾಯಣಗೆ ಜೀವರ ಸೃಷ್ಟ್ಯಾದಿಗಳ ವಿವಕ್ಷಯಾ ಸಂಕೇತವು. ಇಂಥಾ ತನ್ನ ಪ್ರತಿದಿವಸಗಳಲ್ಲಿ ರಾಶಿಗತ ಜೀವರ ಸ್ಥೂಲ ಸೃಷ್ಟಿಗೆ ತಂದು ಸಾಧನ ಪೂರ್ತಿ ಮಾಡಿಸಿ, ಅವರವರ ಸ್ವರೂಪಸುಖ ಅವರವರಿಗೆ ಬಿಂಬ ರೂಪ ಉಣಿಸತಾನೆ ಎಂತ ತಾತ್ಪರ್ಯ.

**ಅಣುಮಹತ್ತಿನೊಳಿಪ್ಪ ಘನಪರ ।**
**ಮಾಣುವಿನೊಳಡಗಿಸುವ ಸೂಕ್ಷ್ಮವ ।**
**ಮುಣುಗಿಸುವ ತೇಲಿಸುವ ಸ್ಥೂಲಗಳವನ ಮಾಯವಿದು ।**
**ದನುಜರಕ್ಕಸರೆಲ್ಲರಿವನೊಳು ।**
**ಮುನಿದು ಮಾಡುವದೇನುಲೂಖಲ ।**
**ಒನಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ || ೧೯ ||**

ಅಘಟಿತಘಟನಶಕ್ತಿಯುಳ್ಳ ಪರಮಾತ್ಮನಲ್ಲಿ ದ್ವೇಷಮಾಡತಕ್ಕವರನ್ನ ಸಂಹಾರ ಮಾಡತಾನೆ ಎಂತ ಹೇಳತಾರೆ.

ಅಣು–ಬ್ರಹ್ಮಾದಿ ತೃಣಾಂತ ಜೀವರ (ತ್ರಿವಿಧ) ಸ್ವರೂಪ ಅಣುವಾದದ್ದು (ಇದರ ವಿವರ ೯ನೇ ಸಂಧಿಯಲ್ಲಿ ಹೇಳಿದೆ. ಉದಾತ್ತಾನುದಾತ್ತ ಸಂಧಿಯ ೨ನೆ ಶ್ಲೋಕದಲ್ಲಿ ಇದೆ.) ಆ ಪ್ರಕಾರ ಜೀವ ಅಣುವಾದವನು. ತದಪೇಕ್ಷಯಾ ಅಣುತ್ವ ರಮಾದೇವೇರಿಗೆ ಇರೋಣದರಿಂದ ಜೀವಾಂತರ್ಗತತ್ವ ರಮಾದೇವೇರಿಗೆ ಕೂಡಿತು. ಬ್ರಹ್ಮಾದಿಜೀವರುಗಳಿಗೆ ಹಾಗೆ ಇಲ್ಲ. ಇಂಥಾ ಅಣುಸ್ವರೂಪರಾದ ರಮಾದೇವೇರಲ್ಲಿ ತದಪೇಕ್ಷಯಾ ಅಣುವಾಗಿ ಶ್ರೀರೂಪದಿಂದ ಬಿಂಬನಾಗಿ ಇದ್ದಾನೆ. ಅತ ಏವ ಜೀವಾಂತರ್ಗತತ್ವ ರಮಾನಾರಾಯಣರಿಗೆ ಮಾತ್ರವೇ ಅಂತ ೧೮ನೆ ಶ್ಲೋಕಕ್ಕೆ ಅನ್ವಯವು. ಬ್ರಹ್ಮಾದಿ ಜೀವರಿಗೆ ಸ್ವರೂಪದೆಶೆಯಿಂದ ಅಣುಮಹತ್ತುಗಳು ಇಲ್ಲ. ಪ್ರಮಾಣ :– "ಮುಕ್ತಸ್ಯ ತು ಸ್ವರೂಪೇಣ ಹ್ಯಣುವೃದ್ಧಿರ್ನ ಯುಜ್ಯತೇ । ನೋ ಹಾನಿಃ ಪುನರಾವೃತ್ತಿಃ ದುಃಖಾಜ್ಞಾನ ಭಯಾದಯಃ ||" ಇತಿ ಪ್ರಕಾಶಸಂಹಿತಾಯಾಂ. ಮಹತ್ತು–ಸ್ವರೂಪದೇಹದಕಿಂತಲೂ ದೊಡ್ಡದಾದ ಸ್ಥೂಲದೇಹದಲ್ಲಿ ಬ್ರಹ್ಮಾದಿ ತತ್ವೇಶರ ಸಹಿತನಾಗಿ ಇದ್ದಾನೆ. ಮತ್ತು ನವಾವರಣಸಹಿತನಾದ ಬ್ರಹ್ಮಾಂಡವೇನು, ಇದರ ಆಚೇಲಿ ಸ್ಥೂಲತ್ವೇನ ವ್ಯಾಪ್ತ ರಮಾ, ಈ ಎರಡರಲ್ಲಿ ತದಾಕಾರ ಮಹದ್ರೂಪದಿಂದ ಇದ್ದಾನೆ. ತದಪೇಕ್ಷಯಾ ಮಹತ್ತು, ಸ್ವಾಖ್ಯಪ್ರದೇಶ ಪರಮಾತ್ಮನ ಅಣುವು ಅಪರಿಚ್ಛಿನ್ನವೇ. ಈ ಪ್ರಕಾರ ಅಣುಮಹತ್ತಿನಲ್ಲಿ, ನೊಳಿಪ್ಪ–ಇರೋವನಾಗಿದ್ದಾನೆ. ಘನ–ದೊಡ್ಡದಾದ ಬ್ರಹ್ಮಾಂಡವು, ಇಂಥಾ ಘನವಾದ ಅನಂತಾನಂತ ಬ್ರಹ್ಮಾಂಡಗಳ, ಪರಮಾಣುವಿನೊಳಗಡಗಿರುವ–ಜೀವಾಂತರ್ಗತನಾಗಿ ಪರಮಾಣುರೂಪದಿಂದ ಇರತಕ್ಕ, ಪ್ರಕೃತಿ ಪರಮಾಣುಗಳಲ್ಲಿ, ಪರಮಾಣುರೂಪದಿಂದ

ಇರತಕ್ಕ, ತನ್ನ ಪರಮಾಣುರೂಪದೊಳಗೆ ಅಡಗಿಸೋವನಾಗಿದ್ದಾನೆ. ಎಂದರೆ ಅಡಗಿಸಿದ್ದಾನೆ ಎಂತ ವರ್ತಮಾನಾರ್ಥವು. ಸೂಕ್ಷ್ಮವ ಮುಣುಗಿಸುವ—ಉದಕದಲ್ಲಿ ಸೂಕ್ಷ್ಮವಾದ ಅತ್ಯಲ್ಪವಾದ ಒಂದು ಮರಳು ಬಿಟ್ಟರೆ ಮುಳುಗುತ್ತದೆ. ಈ ಪ್ರಕಾರ ಮುಳುಗಿಸುವ, ತೇಲಿಸುವ ಸ್ಥೂಲಗಳನು—ಮರಳಿಗಿಂತಲೂ ದೊಡ್ಡದಾದ, ಅಧಿಕವಾದ ಭಾರದಿಂದಿರುವ ಕಾಷ್ಠಾದಿಗಳನ್ನು ಉದಕದಲ್ಲಿ ತೇಲುವಂತೆ ಮಾಡುವ, ಮತ್ತು ಸೂಕ್ಷ್ಮದರ್ಶಿಗಳಾದ ತನ್ನ ಭಕ್ತರು ಮಾಡಿದ ಪಾಪಗಳ ಮುಳುಗಿಸತಕ್ಕವ, ಅಭಕ್ತರಾದ ದೈತ್ಯರ ಪಾಪಗಳ ಸ್ಥೂಲವಾಗಿ ತೇಲಿಸತಕ್ಕವ, ಅವನ ಮಾಯವಿದು—ಇಂಥಾ ಕಾರ್ಯಗಳು ಶ್ರೀ ಪರಮಾತ್ಮನ ಸಾಮರ್ಥ್ಯ. ಅವನ ಇಚ್ಛಾವೇ ಅಂಥಾದ್ದು. ಆದಕಡಿಯಿಂದ, ದನುಜ—ರಾಕ್ಷಸಸಮೂಹಗಳೇನು, ರಕ್ಕಸರು—ದೈತ್ಯಸಮೂಹಗಳೇನು, ಎಲ್ಲ—ಇನ್ನೂ ಯಾವತ್ತು ಮಂದಿ ಭಗವದ್ದ್ವೇಷಿಗಳು, ಇವನೊಳು ಮುನಿದು—ಇವನಲ್ಲಿ ವಿಮುಖರಾಗಿ, ಮಾಡುವದೇನು—ಮಾಡತಕ್ಕದ್ದೇನು? ಮಾಡತಕ್ಕ ಕಾರ್ಯ ಒಂದೂ ಇಲ್ಲ. ಇವರ ಕೈಲಿ ಒಂದೂ ಆಗದೆ ನಷ್ಟಪೌರುಷ ಉಳ್ಳವರಾಗತಾರೆ. ಶ್ರೀ ಪರಮಾತ್ಮ ಇಂಥಾ ದೈತ್ಯರನ್ನ ಅಂಧಂತಮಸ್ಸಿನಲ್ಲಿ ಉಲೂಖಲ—ಒರಳುಗಳಲ್ಲಿ, ಧಾನ್ಯಗಳ—ಧಾನ್ಯಗಳನ್ನು, ಒನಕೆಗಳು—ಒನಕೆಗಳು, ಹಣಿವಂದದಲಿ—ಮರ್ದನಮಾಡಿ ಅಂಕುರವಾಗದಂತೆ ಸಂಹರಿಸುವೋಪಾದಿಯಲಿ, ಸ್ವಲ್ಪಕಾಲವಾದರೂ, ಬಿಡದೆ ಸಂಹರಿಪ—ಪೀಡಿಸತಾ ಇರತಾನೆ. ಮತ್ತು ದೇಹಗತ ದೈತ್ಯರ, ಬಾಹ್ಯದಲ್ಲಿ ವಿದ್ಯಮಾನರಾದ ದೈತ್ಯರ, ಈ ಪ್ರಕಾರ ಪೀಡಿಸತಾ ಇರತಾನೆ. ಸಾಧಾರಣನರಕಗಳಲ್ಲಿ ಒರಳು ಬ್ರಹ್ಮದೇವರಾಗಿಯೂ, ಒನಕೆಗಳು ತದನ್ಯ ದೇವತೆಗಳಾಗಿಯೂ, ಕುಟ್ಟೋವ, ಬಾಧಿಸೋವ ಶ್ರೀ ಪರಮಾತ್ಮನೆಂತ ತಾತ್ಪರ್ಯ.

**ತಾ||** ಅಣುಮಹತ್ತುಗಳು ಎಂಬುದು ಜೀವಕೋಟಿಪ್ರವಿಷ್ಟರಲ್ಲಿ ಇಲ್ಲ. ಈಶಕೋಟಿ ಮಾತ್ರವೇ, ಅಂದರೆ ರಮಾನಾರಾಯಣರಿಗೆ ಮಾತ್ರವೇ ಎಂತ ತಾತ್ಪರ್ಯ. "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ಶ್ರುತ್ಯರ್ಥದಿಂದ ವ್ಯಕ್ತವಾಗತದೆ.

**ವಿಶೇಷಾರ್ಥ :—** ತದುಕ್ತಂ ದಶಮತಾತ್ಪರ್ಯೇ. "ಇದಮೇಕಮೇಕೋ ಅಸ್ಮಿ ನಿಷ್ಷಾಳಭಿ ದ್ವಾ ಕಿಮು ತ್ರಯಃ ಕರಂತಿ | ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ" (ಋಗ್ವೇದ ೮—೧—೫—೭) ಇತಿ ಶ್ರುತಿಃ

ಈ ನುಡಿಯ ಉತ್ತರಾರ್ಧದ ಅಭಿಪ್ರಾಯವನ್ನು ಶ್ರೀ ಸರ್ವಜ್ಞರು ಭಾಗವತ ತಾತ್ಪರ್ಯದಲ್ಲಿ ಉದಾಹರಣ ಮಾಡಿದ್ದಾರೆ.

"ಇದಂ ಜಗತ್ಸರ್ವಮಥೇದೃಶಾನಿ ಭೂರೀಣಿ ವಾ ಮಾಮಭಿಯಾಂತಿ ಸಂಖ್ಯೇ | ಧಾನ್ಯಾನಿ ಯದ್ವತ್ಖಲಗಾನಿ ಮರ್ತ್ಯಃ ಸಂಚೂರ್ಣಯಿಷ್ಯಾಮ್ಯಹಮೇಕ ಏವ ||" ಇತಿ ಬ್ರಹ್ಮಾಂಡೇ.

**ದೇವ ಮಾನವ ದಾನವರು ಎಂ ।**
**ದೀ ವಿಧದಲಾವಾಗಲಿಪ್ಪರು ।**
**ಮೂವರೊಳಗಿವಗಿಲ್ಲ ಸ್ನೇಹೋದಾಸೀನ ದ್ವೇಷ ॥**
**ಜೀವರಧಿಕಾರಾನುಸಾರದ ।**
**ಲೀವ ಸುಖ ಸಂಸಾರದುಃಖವ ।**
**ತಾ ಉಣದೊಲವರವರಿಗುಣಿಸುವ ನಿರ್ಗತಾಶನನು ॥ ೨೦ ॥**

ಶ್ರೀ ಪರಮಾತ್ಮಗೆ ಜೀವರಲ್ಲಿ ದ್ವೇಷಾಸೂಯೆಗಳು ಇಲ್ಲ ಎಂತ ಹೇಳತಾರೆ.

ದೇವ–ಈ ಶಬ್ದದಿಂದ ಬ್ರಹ್ಮದೇವರ ಆರಂಭಮಾಡಿ, ತೃಣಾಂತವರಿಗೂ ಮುಕ್ತಿಯೋಗ್ಯರು, ಮಾನವ–ಈ ಶಬ್ದದಿಂದ ಪುರಂಜನ ಮೊದಲು, ತೃಣಾಂತ ನಿತ್ಯಸಂಸಾರಿಗಳು, ದಾನವ–ಕಲಿ ಮೊದಲು, ತೃಣಾಂತ ದೈತ್ಯರು, ಎಂದು–ಈ ಪ್ರಕಾರ ನಾಮಗಳುಳ್ಳವರು ಎಂತ ಕರೆಸುತ, ಈ ವಿಧದಲಿ–ಮೂರು ಪ್ರಕಾರ ಅಸೃಜ್ಯರಾಶಿಯಲ್ಲಿಯೂ, ಸೃಷ್ಟಿಕಾಲದಲ್ಲಿಯೂ, ಪ್ರಳಯಕಾಲದಲ್ಲಿಯೂ, ಲಿಂಗಭಂಗದಲ್ಲಿಯೂ, ಎಂದರೆ, ಸದಾ–(ಇವರು ಈಶ್ವರನಿಂದ ಸೃಷ್ಟರಾದವರಲ್ಲ) ಅನಾದಿಯಿಂದಲೂ, ಆವಾಗಲಿಪ್ಪರು–ಯಾವಾಗಲೂ ಇರೋವರಾಗಿದ್ದಾರೆ. ಅವರವರ ಅನಾದಿಸ್ವರೂಪವೂ ಅಂಥಾದ್ದೇ. ಮೂವರೊಳಗೆ–ಈ ತ್ರಿವಿಧರಾದ ಜೀವರಲ್ಲಿ, ಸ್ನೇಹ–ಮುಕ್ತಿಯೋಗ್ಯರಲ್ಲಿ ಕೇವಲ ಅಂತಃಕರಣವೇನು, ಉದಾಸೀನ–ನಿತ್ಯಸಂಸಾರಿಗಳಲ್ಲಿ ಉದಾಸೀನವೇನು, ದ್ವೇಷ–ತಮೋ ಯೋಗ್ಯರಲ್ಲಿ ದ್ವೇಷ ಮಾಡೋಣವೇನು (ಇವುಗಳು), ಅವಗಿಲ್ಲ–ಪರಮಾತ್ಮಗೆ ಇಲ್ಲ. ಆದರೂ, ಜೀವರ–ತ್ರಿವಿಧ ಜೀವನ (ಸ್ವರೂಪಯೋಗ್ಯತಾ ಎಂಥಾದ್ದೋ ಅಂಥಾದ್ದೇ), ಅಧಿಕಾರಾನುಸಾರದಲಿ–ಶ್ರೀಪರಮಾತ್ಮ ಅಧಿಕಾರಾನುಸಾರ ಅಭಿವ್ಯಕ್ತಿಮಾಡಿ, ಸುಖ–ಮುಕ್ತರಾದವರಿಗೆ ಲಿಂಗಭಂಗಾನಂತರ ವೈಕುಂಠಾದಿಲೋಕಗಳಲ್ಲಿ ದಿವ್ಯವಾದ ಸುಖವೇನು, ಸಂಸಾರ–ನಿತ್ಯಸಂಸಾರಿಗಳಿಗೆ ಸಾಂತಾನಿಕಲೋಕದಲ್ಲಿ, ಲಿಂಗಭಂಗಾನಂತರ ಕಾಲಾವಚ್ಛೇದೇನ ಭೋಗಿಸತಕ್ಕ, ಸುಖದುಃಖಮಿಶ್ರವಾದ ಭೋಗವೇನು, ದುಃಖವ–ತಮೋಯೋಗ್ಯರಿಗೆ, ಲಿಂಗಭಂಗಾನಂತರ ಅಂಧಂತಮಸ್ಸಿನಲ್ಲಿ ದುಃಖಗಳನ್ನೇನು, ಈವ–ಕೊಡತಾನೆ. ತಾ ಉಣದಲೆ–ಪರಮಾತ್ಮ ತ್ರಿವಿಧರಿಗೆ ಬಿಂಬನಾದ್ದರಿಂದ ಇರುವ ಭೊಗಮಾಡತಕ್ಕ ತ್ರಿವಿಧಪ್ರಕಾರವಾದ ಭೋಗಗಳನ್ನು ತಾನು ಅನುಭವಿಸದೇ, ಅವರಿಗುಣಿಸುವ–ಅವರವರಿಗೆ ಅನುಭವಕ್ಕೆ ತಂದುಕೊಡತಾನೆ. ನಿರ್ಗತಾಶನನು–ಹೋಗಲ್ಪಟ್ಟ ಭೋಗರೂಪವಾದ ಅಶನ ಉಳ್ಳವನು. ಎಂದರೇ ನಿತ್ಯತೃಪ್ತನು ಎಂತ ಅರ್ಥ.

**ತಾ॥** ಈ ಶ್ಲೋಕದ ಮುಖ್ಯ ತಾತ್ಪರ್ಯವೇನೆಂದರೆ, ಪೂರ್ವಶ್ಲೋಕಾಭಿಪ್ರಾಯ ಪ್ರಕಾರ, ತ್ರಿವಿಧಜೀವರಲ್ಲಿ ಶ್ರೀ ಪರಮಾತ್ಮ ಇದ್ದಾಗ್ಯೂ, ಇವರಲ್ಲಿ ತಾನು ಪ್ರತ್ಯೇಕವಾಗಿ ಸ್ನೇಹೋದಾಸೀನಗಳು ತೋರಿಸದೆ ಅವರವರ ಸ್ವಭಾವ ಯೋಗ್ಯತಾನುಸಾರ ಸುಖದುಃಖಗಳು ಕೊಟ್ಟು ತಾನು ಏನೂ ಅನುಭವಿಸದೆ ನಿತ್ಯತೃಪ್ತನಾಗಿರತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಸಾಂತಾನಿಕ ಲೋಕ ಎಂದರೇ, ಲಿಂಗಭಂಗಾನಂತರ, ನಿತ್ಯ ಸಂಸಾರಿಗಳು ವಾಸಮಾಡತಕ್ಕ ಲೋಕ. ಅಲ್ಲಿ ಭೋಗ ಎಂಥಾದ್ದು ಎಂದರೆ, ಕಟುವಾದ ಪದಾರ್ಥವು ಮಧುರವಾದ ಪದಾರ್ಥವು ಎರಡೂ ಸೇರಿಸಿ ಜಿಹ್ವೆಗೆ ಸ್ಪರ್ಶವಾದರೆ, ಎರಡು ರಸವೂ ಏಕಕಾಲಾವಚ್ಛೇದೇನ ಭೋಗಕ್ಕೆ ಬಂದಂತೆ ಇವರ ಸುಖ ಎಂತ ಅರ್ಥ. ಇವರ ವಿವರ ೨೦ನೆ ಸಂಧಿಯಾದ ಗುಣತಾರತಮ್ಯಸಂಧಿಯಲ್ಲಿ ಮಾಡಿದ್ದಾರೆ.

**ಎಲ್ಲಿ ಕೇಳಿದರೆಲ್ಲಿ ನೋಡಿದ ।**
**ರೆಲ್ಲಿ ಬೇಡಿದರೆಲ್ಲಿ ನೀಡಿದ ।**
**ರೆಲ್ಲಿ ಓಡಿದರೆಲ್ಲಿ ಆಡಿದರೆಲ್ಲಿ ಇರುತಿಹನು ॥**
**ಬಲ್ಲಿದರಿಗತಿಬಲ್ಲಿದನು ಸರಿ ।**
**ಯಿಲ್ಲ ಇವಗಾವಲ್ಲಿ ನೋಡಲು ।**
**ಖುಲ್ಲಮಾನವರೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೨೦ ॥**

ಎಲ್ಲಿ ಕೇಳಿದರೆಲ್ಲಿ– ಕೇಳಿದರೆ–ಜೀವರು ಶಬ್ದಾದಿಗಳು ಕೇಳಿದರೆ, ಅಲ್ಲಿ–ಆ ಶಬ್ದಾದಿಗಳಲ್ಲಿ, ಎಲ್ಲಿ–ಶಬ್ದಾದಿಗಳ ಕೇಳತಕ್ಕ ಕರ್ಣಗೋಳಕದಲ್ಲಿ, ತದ್ಗತ ಕರ್ಣೇಂದ್ರಿಯಗಳಲ್ಲಿ, ಕರ್ಣಾಭಿಮಾನಿಯಾದ ದಿಗ್ದೇವತೆಗಳಲ್ಲಿ, ಶಬ್ದಾಭಿಮಾನಿಯಾದ ದಾಸಪ್ರಾಣನಾದ ಮರುತ್ಪ್ರವಿಷ್ಟಪ್ರಾಣನಲ್ಲಿ, ನೋಡಿದರೆಲ್ಲಿ–ನೋಡಿದರೆ–ದಾವ ದಾವ ಪದಾರ್ಥ ನೋಡಿದರೆ ಅಲ್ಲಿ–ಆಯಾ ಪದಾರ್ಥಗಳಲ್ಲಿ, ನೋಡತಕ್ಕ ನೇತ್ರಗೋಳಕದಲ್ಲಿ, ತದ್ಗತ ನೇತ್ರೇಂದ್ರಿಯದಲ್ಲಿ, ನೇತ್ರಾಭಿಮಾನಿ ಸೂರ್ಯನಲ್ಲಿ, ನೋಡಿದ ಪದಾರ್ಥಾಭಿಮಾನಿಯಲ್ಲಿ, ಬೇಡಿದರೆಲ್ಲಿ–ಮನಸ್ಸಿನಿಂದ ಬೇಡಿದರೆ, ಅಲ್ಲಿ–ಮನೋಗೋಳಕದಲ್ಲಿ, ತದ್ಗತ ಮನಇಂದ್ರಿಯದಲ್ಲಿ, ತದ್ಗತ ಮನೋಭಿಮಾನಿಯಲ್ಲಿ, ಅಂದರೆ ರುದ್ರದೇವರಲ್ಲಿ, ಬೇಡಿದ ಪದಾರ್ಥಾಭಿಮಾನಿಯಲ್ಲಿ, ಪದಾರ್ಥಗಳಲ್ಲಿ, ನೀಡಿದರೆಲ್ಲಿ– ನೀಡಿದರೆ–ಒಂದು ಪದಾರ್ಥವನ್ನು ಕೈಯಿಂದ ನೀಡಿ ಕೊಟ್ಟರೆ, ಅಲ್ಲಿ–ಆ ಕೊಟ್ಟ ಪದಾರ್ಥದಲ್ಲಿ, ಪದಾರ್ಥಾಭಿಮಾನಿಯಲ್ಲಿ, ಹಸ್ತಗೋಳಕದಲ್ಲಿ, ಹಸ್ತಗತ ಇಂದ್ರಿಯವಾದ ಹಸ್ತೇಂದ್ರಿಯದಲ್ಲಿ, ತದಭಿಮಾನಿಯಾದ ದಕ್ಷನಲ್ಲಿ, ಇದೇ ಪ್ರಕಾರ ತಾನು ಹಸ್ತ ನೀಡಿ ತೊಗೊಂಬೋದರಲ್ಲಿ, ಓಡಿದರೆಲ್ಲಿ– ಓಡಿದರೆ–ಗಮನಾಗಮನಾದಿಗಳು ಮಾಡಿದರೆ, ಅಲ್ಲಿ–ಹೆಜ್ಜೆಹೆಜ್ಜೆಗಳು ಇಡೋ ಭೂಮಿಯಲ್ಲಿ, ತದಭಿಮಾನಿಯಲ್ಲಿ, ಪಾದಗೋಳಕದಲ್ಲಿ, ತದ್ಗತ ಪಾದೇಂದ್ರಿಯದಲ್ಲಿ, ಪಾದಾಭಿಮಾನಿಯಾದ ಜಯಂತನಲ್ಲಿ, ಆಡಿದರೆಲ್ಲಿ– ಆಡಿದರೆ–ಮಾತುಗಳು ತಥಾ ಭಗವನ್ನಾಮಕೀರ್ತನೆಗಳು, ಅಲ್ಲಿ–ಆ ಕೀರ್ತನೆಗಳಲ್ಲಿ, ವಾಕ್ಕುಗಳಲ್ಲಿ, ಆಡತಕ್ಕ ಮುಖದಲ್ಲಿ, ತದ್ಗತ ಮುಖಗೋಳಕದಲ್ಲಿ, ತದಭಿಮಾನಿಯಾದ ಅಗ್ನಿಯಲ್ಲಿ, ಇರುತಿಹನು–ಈ ಪ್ರಕಾರ ಸರ್ವಕ್ರಿಯೆಗಳಲ್ಲಿ, ಸರ್ವ ಇಂದ್ರಿಯ ಗೋಳಕಗಳಲ್ಲಿ, ತದ್ಗತ ಇಂದ್ರಿಯಗಳಲ್ಲಿ, ತದಭಿಮಾನಿ ದೇವತೆಗಳಲ್ಲಿ ಅಂತರ್ಗತನಾಗಿ ಇದ್ದಾನೆ. ಬಲ್ಲಿದರಿಗತಿಬಲ್ಲಿದನು– ಬಲ್ಲಿದರಿಗೆ–ಈ ಪ್ರಕಾರ ಅನುಸಂಧಾನದಿಂದ ಯುಕ್ತರಾಗಿ ಸರ್ವೇಂದ್ರಿಯ ವ್ಯಾಪಾರಗಳು, ಶ್ರೀ ಪರಮಾತ್ಮ

ಮಾಡಿಸತಾ ಇದ್ದಾನೆ ಎಂತ ತಿಳಿದವರಿಗೆ, ಅತಿಬಲ್ಲಿದನು—ಅತ್ಯಂತವಾಗಿ ಅಂಥಾ ಅಧಿಕಾರಿಯು ತನ್ನವನೆಂದು ತಿಳಿದವನು, ಮತ್ತು ಹೀಗೆ ತಿಳಿದ ರಮಾಬ್ರಹ್ಮಾದಿಗಳಕಿಂತಲೂ ವಿಶೇಷವಾಗಿ ಸರ್ವವೂ ಶ್ರೀಪರಮಾತ್ಮ ತಿಳಿದವನು, ಇವಗಾವಲ್ಲಿ ನೋಡಲು—ಬ್ರಹ್ಮಾಂಡ ಪಿಂಡಾಂಡ ಇನ್ನೂ ಬಹಿರವ್ಯಾಕೃತಾಕಾಶ ಸ್ವರಮಣಪ್ರದೇಶ ಇವುಗಳಲ್ಲಿ ವಿಚಾರಮಾಡಿದರೆ ಈ ಪರಮಾತ್ಮಗೆ ಸರಿ ಇಲ್ಲ ; ಸಮಾನವಾದವರು ದಾರೂನೂ ಇಲ್ಲ. ಖುಲ್ಲಮಾನವರೊಲ್ಲ—ಈ ಪರಮಾತ್ಮನಾದರೋ ಅಹಂಮಮತಾಯುಕ್ತರಾಗಿ ಬಾಹ್ಯಭಕ್ತಿ ಮಾಡಿ ಪ್ರತಿಷ್ಠಾ ಸಂಪಾದಿತರಾದ ಕ್ಷುದ್ರಮನಸ್ಸು ಉಳ್ಳ ಮನುಷ್ಯರು ಮಾಡತಕ್ಕ ಭಕ್ತಿವಿಶ್ವಾಸ ಪೂಜಾದಿಗಳ ಅಂಗೀಕರಿಸುವುದಿಲ್ಲ. ಅಪ್ರತಿಮಲ್ಲ—ಸ್ವಸಾಮರ್ಥ್ಯದಿಂದ ಇರತಕ್ಕವ. ಜಗಕೆಲ್ಲ—ಭೂತಭವಿಷ್ಯದ್ವರ್ತಮಾನಕಾಲಕ್ಕೂ ಅನಂತಾನಂತ ಬ್ರಹ್ಮಾಂಡಗಳಿಗೂ ಈಶನಾದವ, ಈ ಪರಮಾತ್ಮ ಒಬ್ಬನೇ ಹೊರತು ಬೇರೆ ಇನ್ನೊಬ್ಬರಿಲ್ಲದವ ಎಂತ ತಾತ್ಪರ್ಯ.

**ತಾ||** ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳ ಸರ್ವವ್ಯಾಪಾರಗಳಲ್ಲಿ ಶ್ರೀಪರಮಾತ್ಮ ಆಯಾ ಇಂದ್ರಿಯಗೋಳಕಗಳಲ್ಲಿಯೂ, ಆಯಾ ಇಂದ್ರಿಯಗಳಲ್ಲಿಯೂ, ತದ್ಗತ ಅಭಿಮಾನಿ ದೇವತೆಗಳಲ್ಲಿಯೂ, ಇಂದ್ರಿಯವ್ಯಾಪಾರ ನಡಿಯುವ ಪದಾರ್ಥಗಳಲ್ಲಿಯೂ ಇರುತ್ತಾನೆ ಎಂತ ಅನುಸಂಧಾನಮಾಡುವಂಥಾವರ ತನ್ನವನೆಂದು ತಿಳಿಯುವನು. ಇವರೇ ಅಂತರಂಗಭಕ್ತರು. ಪ್ರತಿಷ್ಠಾ ಸಂಪಾದಿಸೋ ನಿಮಿತ್ತ ಪರಮಾತ್ಮನಲ್ಲಿ ಭಕ್ತಿವಿಶ್ವಾಸಾದಿಗಳು ಮಾಡಿದ ಸರಿಸಮಾನಸ್ಥರು, ಶ್ರೇಷ್ಠರಾದವರು ಎಲ್ಲಿ ನೋಡಿದರೂ ಇಲ್ಲ. ಈ ಪರಮಾತ್ಮ ಒಬ್ಬನೇ ಸರ್ವವ್ಯಾಪಕನಾಗಿ ಇರುತ್ತಾನೇ ಹೊರತು ಬೇರೊಬ್ಬರಿಗೆ ಈ ಸಾಮರ್ಥ್ಯ ಇಲ್ಲ ಎಂತ ತಾತ್ಪರ್ಯ.

**ತಪ್ತ ಲೋಹವು ನೋಳ್ಪ ಜನರಿಗೆ ।**
**ಸಪ್ತಜಿಹ್ವನ ತೆರದಿ ತೋರ್ಪದು ।**
**ಲುಪ್ತಪಾವಕ ಲೋಹ ಕಾಂಬುದು ಪೂರ್ವದೋಪಾದಿ ||**
**ಸಪ್ತವಾಹನ ನಿಖಿಳ ಜನರೊಳು ।**
**ವ್ಯಾಪ್ತನಾದುದರಿಂದ ಸರ್ವರು ।**
**ಆಪ್ತರಾಗಿಹರೆಲ್ಲ ಕಾಲದಿ ಹಿತವ ಕೈಕೊಂಡು || ೨೨ ||**

ಶ್ರೀಹರಿಯ ವ್ಯಾಪ್ತಿ ಇಲ್ಲದೇ, ಜೀವರ ಜಡಕ್ರಿಯಾ ಬೇರೆ ಇಲ್ಲ ಎಂತಲೂ, ದೇಹೇಂದ್ರಿಯಾದಿಗಳಲ್ಲಿ ಶ್ರೀಹರಿ ಇರೋವರಿಗೂ ಸರ್ವರೂ ಆಪ್ತರಾಗಿ ಇರತಾರೆಂತಲೂ ದೃಷ್ಟಾಂತದಿಂದ ಹೇಳತಾರೆ.

ತಪ್ತಲೋಹವು—ಅಗ್ನಿಯಲ್ಲಿ ಕಾಯಿಸಲ್ಪಟ್ಟ ಕಬ್ಬಿಣವು, ನೋಳ್ಪ ಜನರಿಗೆ—ನೋಡತಕ್ಕ ಪ್ರಾಣಿಗಳಿಗೆ, ಸಪ್ತಜಿಹ್ವನ ತೆರದಿ—ಏಳು ನಾಲಿಗೆಗಳುಳ್ಳ ಅಗ್ನಿದೇವರೋಪಾದಿಯಲ್ಲಿ, ತೇಜಃಪುಂಜವಾಗಿ, ಮಹಾಶ್ಲಾಘ್ಯವಾಗಿ, ತೋರ್ಪದು—ಕಣ್ಣುಗಳಿಗೆ ತೋರೋದಾಗತದೆ.

ಲುಪ್ತಪಾವಕ–ಲೋಹಗತ ಅಗ್ನಿ ಆರಿಹೋದರೆ, ಪೂರ್ವದೋಪಾದಿ–ಲೋಹ ಕಾಯಿಸ ಲಿಕ್ಕೆ ಮುಂಚೆ ಹೇಗಿತ್ತೋ ಅದರೋಪಾದಿಯಲಿ, ಲೋಹ ಕಾಂಬುದು–ಪ್ರಕೃತ ಲೋಹ ಕಾಣತಾ ಇರತದೆ. ಇದರಂತೆ. ಸಪ್ತವಾಹನ–ಏಳು ಕುದುರೆಗಳುಳ್ಳ ಸೂರ್ಯನು, ಎಂದರೆ, ದ್ವಾದಶಾದಿತ್ಯರೊಳಗೆ ಉರುಕ್ರಮನಾಮಕ ಸೂರ್ಯ, ಸಾಕ್ಷಾತ್ ಶ್ರೀಪರಮಾತ್ಮ ನಿಖಿಳಜನರೊಳು–ಸಮಸ್ತರಾದ ಪ್ರಾಣಿಗಳು ಧರಿಸಿ ಇರುವ ಸ್ಥೂಲದೇಹದೊಳು ಲೋಹಗತ ಅಗ್ನಿಯೋಪಾದಿಯಲ್ಲಿ, ವ್ಯಾಪ್ತನಾದುದರಿಂದ–ವ್ಯಾಪ್ತನಾಗಿ ಇರೋಣದ ರಿಂದ, ಎಲ್ಲ ಕಾಲದಿ–ವ್ಯಾಪ್ತಿ ಇರೋ ಕಾಲದವರೆಗೂ, ಸರ್ವರು–ಸಮಸ್ತತತ್ವಾಭಿಮಾನಿ ದೇವತೆಗಳು, ಆಪ್ತರಾಗಿಹರು–ದೇಹದಲ್ಲಿ ಆಪ್ತರಾಗಿರತಾರೆ. ಹಿತವ ಕೈಕೊಂಡು–ದೇಹ ದಿಂದ ಆಗತಕ್ಕ ಸುಖದುಃಖಗಳನ್ನು ಸ್ವೀಕರಿಸಿದವರಾಗಿ, ತಮ್ಮದು ತಾವು ಸ್ವೀಕರಿಸಿ, ಪರಮಾತ್ಮನದು ಅವಗೆ ಅರ್ಪಣೆ ಮಾಡತಾರೆ. ಅಗ್ನಿ ಶಾಂತವಾದರೆ ಲೋಹವನ್ನು ಅಶ್ಲಾಘ್ಯವಾಗಿ ನೋಡಿದಂತೆ, ದೇಹಗತ ಪರಮಾತ್ಮ, ದೇವತೆಗಳು, ಜೀವ ಇವರುಗಳು ಶಾಂತರೂಪರಾದರೆ ದೇಹವನ್ನ ಅಶ್ಲಾಘನ ಮಾಡತಾರೆ. ಶರೀರ ಲೋಹಸದೃಶ ನಿಶ್ಚೇಷ್ಟ ವಾಗತದೆ. ಯದ್ಯಪಿ ಲೋಹಸದೃಶ ದೇಹದಲ್ಲಿ ಪರಮಾತ್ಮ ನಿಶ್ಚೇಷ್ಟಿತನಾಗಿರತಾನೆ. ಆದಕಡಿಯಿಂದ ಚೇಷ್ಟಾರಹಿತವಾದ ಪದಾರ್ಥಗಳಲ್ಲಿ ಶ್ರೀಪರಮಾತ್ಮ ಅಂತರ್ಯಾಮಿ ಯಾಗಿರತಾನೆ.

**ತಾ||** ಶ್ರೀ ಪರಮಾತ್ಮ ಲೋಹಗತ ಅಗ್ನಿಯೋಪಾದಿಯಲಿ, ದೇಹದಲ್ಲಿ ವ್ಯಾಪ್ತ ನಾಗಿರೋ ಕಾಲದವರಿಗೂ, ದೇಹಗತ ತತ್ವಾಭಿಮಾನಿ ದೇವತೆಗಳು, ದೇಹದಿಂದ ಆಗ ತಕ್ಕ ಸುಖದುಃಖಗಳನ್ನು ಸ್ವೀಕರಿಸಿ ತಮ್ಮದು ತಾವು ತೆಗೆದುಕೊಂಡು, ಪರಮಾತ್ಮನದು, ಅವಗೆ ಅರ್ಪಣೆ ಮಾಡತಾರೆ. ದೇಹಗತ, ಜೀವ, ಪರಮಾತ್ಮ, ತತ್ವಾಭಿಮಾನಿ ದೇವತೆಗಳು ಹೊರಟು ಹೋದರೆ ಲೋಹಗತ ಅಗ್ನಿ ಆರಿ ಹೋದರೆ ತೇಜೋಹೀನವಾಗಿ ಪೂರ್ವದಂತೆ ಹೇಗೆ ಕಾಣತದೋ ಆ ಪ್ರಕಾರ ದೇಹವೂ ತೇಜೋಹೀನವಾಗಿ ನಿಶ್ಚೇಷ್ಟವಾಗತದೆ. ಈ ಪ್ರಕಾರ ದೇಹ ನಿಶ್ಚೇಷ್ಟವಾದಾಗ್ಯೂ, ಶ್ರೀ ಪರಮಾತ್ಮ ಒಬ್ಬನೇ ಅಂತರ್ಯಾಮಿ ಯಾಗಿರತಾನೆ ಹೊರತು, ಮಿಗಿಲಾದ ತತ್ವಾಭಿಮಾನಿ ದೇವತೆಗಳೂ, ಜೀವ ಇವರೂ ಇರೋದಿಲ್ಲ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಅಗ್ನಿಗೆ ಸಪ್ತಜಿಹ್ವೆಗಳು ಯಾವುವೆಂದರೆ :—

| ಜಿಹ್ವೆಗಳ ಹೆಸರುಗಳು | ವರ್ಣ | ತ್ರಿವಿಧ ಸ್ವೀಕಾರ ವಿಧಿ 1 | 2 | 3 |
|---|---|---|---|---|
| 1. ಕಾಲೀ | ಹಿರಣ್ಯ | ಔಪಾಸನ | ಅಗ್ನಿಹೋತ್ರ | ಅಗ್ನಿಷ್ಟೋಮ |
| 2. ಕರಾಲೀ | ಕನಕ | ವೈಶ್ವದೇವ | ದರ್ಶಪೌರ್ಣಮಾಸ | ಅತ್ಯಗ್ನಿಷ್ಟೋಮ |
| 3. ಮನೋಜವಾ | ರಕ್ತ | ಸ್ಥಾಲೀಪಾಕ | ಪಿಂಡಪಿತೃಯಜ್ಞ | ಉದ್ಯ |
| 4. ಸುಲೋಹಿತಾ | ಕೃಷ್ಣ | ಅಷ್ಟಕ | ಪಶುಬಂಧ | ಷೋಡಶ |
| 5. ಸುಧೂಮ್ರವರ್ಣ | ಸುಪ್ರಭಾ | ಮಾಸಶ್ರಾದ್ಧ | ಆಗ್ರಯಣ | ವಾಜಪೇಯ |
| 6. ಸ್ಫುಲಿಂಗಿನೀ | ಅತಿರಕ್ತ | ಈಶಾನಬಲಿ | ಚಾತುರ್ಮಾಸ್ಯ | ಅತಿರಾತ್ರ |
| 7. ವಿಶ್ವರುಚೀ | ಬಹುರೂಪ | ಸರ್ವಬಲಿ | ಸೌತ್ರಾಮಣಿ | ಆಪ್ತೋರ್ಯಾಮ |

ಈ ಅಗ್ನಿ ಆಯಾ ಜಿಹ್ವೆಗಳಿಂದ ಒಂದೊಂದರಿಂದ ಮೂರು ಮೂರು ವಿಧಗಳ ಸ್ವೀಕರಿಸ ತಾನೆ. ಉರುಕ್ರಮನಾಮಕ ಸೂರ್ಯನೇ ಪರಮಾತ್ಮ ಎಂಬುದಕ್ಕೆ ಪ್ರಮಾಣ :— "ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ ಸ್ಪೃಶತ್ಯನರ್ಥಾಪಗಮೋ ಯದುತ್ಥಃ ||" ಇತಿ ಭಾಗವತೇ ಸಪ್ತಮಸ್ಕಂಧೇ.

**ವಾರಿದನು ಮಳೆಗರಿಯೆ ಬೆಳೆದಿಹ ।**
**ಭೂರುಹಂಗಳ ಚಿತ್ರ ಫಲರಸ ।**
**ಬೇರೆ ಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು ॥**
**ಮಾರಮಣನವರವರ ಯೋಗ್ಯತೆ ।**
**ಮೀರದಲೆ ಗುಣಕರ್ಮಗಳನು ।**
**ಸಾರ ನಡೆಸುವ ದೇವನಿಗೆ ವೈಷಮ್ಯವೆಲ್ಲಿಹುದೋ ॥ ೨೩ ॥**

ಶ್ರೀ ಪರಮಾತ್ಮನು ತ್ರಿವಿಧರಾದ ಜೀವರಲ್ಲಿ ಸಮಾನನಾಗಿ ಇದ್ದಾನೆ ಎಂತಲೂ, ಇವನಲ್ಲಿ ವೈಷಮ್ಯ, ನೈರ್ಘೃಣ್ಯ ಇಲ್ಲ ಎಂತಲೂ ಹೇಳತಾರೆ.

ವಾರಿದನು – ಉದಕವನ್ನು ಕೊಡತಕ್ಕ ಮೇಘ, ತದಭಿಮಾನಿ ಪರ್ಜನ್ಯಾಖ್ಯ ಸೂರ್ಯನು, ಮಳೆಗರೆಯೆ–ಮಳೆ ಸುರಿಸಲು, (ಅದರಿಂದ), ಬೆಳೆದಿಹ–ಅಭಿವೃದ್ಧಿಯಾಗಿರ ತಕ್ಕ, ಚಿತ್ರ–ನಾನಾ ಬಗೆಗಳಾದ, ಭಿನ್ನಭಿನ್ನಗಳಾದ, ಭೂರುಹಂಗಳ–ಭೂಮಿಯೇ ಯೋನಿಯಾಗಿ ಉಳ್ಳ, ಭೂಮಿಯನ್ನು ಭೇದಿಸಿಕೊಂಡು ಬಂದ ವೃಕ್ಷಗಳ (ಅದರಲ್ಲಿ ಆದ), ಫಲರಸ–ಭಿನ್ನಭಿನ್ನಗಳಾದ ಫಲಗತ ರಸಗಳು, ಬೇರೆ ಬೇರಿಪ್ಪಂತೆ–ಪೃಥಕ್‌ಪೃಥಕ್ಕಾಗಿ, ಕಹಿ ಸಿಹಿ ಹುಳಿ ಖಾರ ಇತ್ಯಾದಿ ರಸಭೇದಗಳಿಂದ ಇದ್ದಂತೆ, ಮಾರಮಣನು–ಮೇಘಕ್ಕೆ ಸದೃಶನಾದ ಲಕ್ಷ್ಮೀಪತಿಯಾದ ನಾರಾಯಣದೇವರು ವರ್ಷೋದಕಕ್ಕೆ (ಮಳೆನೀರು ಧಾರಾಕಾರ) ಸಮಾನವಾದ ಕರುಣಾಖ್ಯ ಉದಕವನ್ನು, ಬಹುವಿಧ ಜೀವರೊಳಗೆ–ನಾನಾ ವಿಧ ನಿಜಸದೃಶರಾದ ಜೀವರಾದವರಿಗೆ ಸುರಿಸಿದವನಾಗಿ, ಇದ್ದು–ಕರುಣಾರೂಪದಿಂದ ಇದ್ದು, ಅವರವರ–ಆಯಾ ಪ್ರಾಣಿಗಳ, ಯೋಗ್ಯತೆ ಮೀರದಲೆ–ಸ್ವರೂಪಯೋಗ್ಯತಾಕ್ಕೆ ಮೀರಿ ಅನ್ಯಥಾ ಮಾಡಧಾಂಗೆ, ಗುಣಕರ್ಮಗಳನುಸಾರ ನಡೆಸುವ – ಸ್ವರೂಪಗುಣಗಳ ಅನುಸರಿಸಿ, ಇನ್ನೂ ಸ್ವರೂಪಕರ್ಮಗಳ ಅನುಸಾರವಾಗಿ, ಇನ್ನು ಅದನನುಸರಿಸಿದ ಬಾಹ್ಯ ಗುಣ, ಬಾಹ್ಯಕರ್ಮಗಳನುಸರಿಸಿ, ಸ್ಥೂಲದೇಹದ್ವಾರಾ ಇಂದ್ರಿಯವ್ಯಾಪಾರಗಳ ನಡೆಸ ತಾನೆ. ಸೂರ್ಯನಾದವನು ಛಲೋದಾದ ಒಂದೇ ಉದಕವೇ ಭೂಮಿಯಲ್ಲಿ ಇರುವ ಸರ್ವಬೀಜಗಳಲ್ಲಿ ಸುರಿಸತಾನೆ. ಅವನಲ್ಲಿ ವೈಷಮ್ಯವಿಲ್ಲದ ಕಾಲಕ್ಕೂ, ಬೀಜಗಳ ಸ್ವಭಾವಾನುಸಾರ ಆ ಉದಕ ನಾನಾವಿಧ ರಸಗಳ ವ್ಯಕ್ತಮಾಡತದೆ. ಈ ವ್ಯಕ್ತಮಾಡುವ ದೋಷ ಪರ್ಜನ್ಯನಲ್ಲಿ ಇಲ್ಲ. ಉದಕದಲ್ಲಿಯೂ ಇಲ್ಲ. ಬೀಜಗಳಲ್ಲಿ ಅವೆ. ಆದ್ದರಿಂದ ಉದಕ, ಪರ್ಜನ್ಯ ಇವರಲ್ಲಿ ಹ್ಯಾಂಗೆ ವೈಷಮ್ಯ ಇಲ್ಲವೋ, ತದ್ವತ್, ದೇವನಿಗೆ– ಮೇಘಸದೃಶನಾದ ಶ್ರೀ ಪರಮಾತ್ಮಗೆ, ಇವನ ಅಂತಃಕರಣ ಎಂಬ ಉದಕಕ್ಕೆ, ವೈಷಮ್ಯ

ಎಲ್ಲಿಹುದೋ–ವೈಷಮ್ಯ ನೈರ್ಘೃಣ್ಯಗಳು ಎಲ್ಲಿ ಅದೆ ? ಅಂದರೆ ಇವು ಯಾವ್ವೂ ಇಲ್ಲ ಎಂತ ತಾತ್ಪರ್ಯ.

**ತಾ||** ಪರಮಾತ್ಮ ಅಂತಃಕರಣರೂಪವಾದ ನೀರು ಸದೃಶ, ಜೀವರು ಬೀಜಗಳ ಸದೃಶ. ನೀರಿನ ಸ್ಪರ್ಶವಿಲ್ಲದೇನೇ ಬೀಜಗಳಿಗೆ ಬೆಳಸು ಇಲ್ಲ. ಆದಕಡಿಯಿಂದ ನೀರಿನಲ್ಲಿ ಅಂತಃಕರಣ ಇಪೆ. ಈ ಅಂತಃಕರಣ ಸಮಸ್ತ ಬೀಜಗಳಲ್ಲಿ ಸರಿಸಮಾನವಾಗಿದೆ. ಹಾಂಗೆ ಪರಮಾತ್ಮಗೂ ಅಂತಃಕರಣ, ಜೀವರಲ್ಲಿ ಸರಿಸಮಾನವಾಗಿರುತ್ತದೆ. ಆದರೆ ಈ ನೀರು ಆಯಾ ಬೀಜಗಳ ಸಂಬಂಧ ಮಾಡಿದರೆ ಆಯಾ ಬೀಜಗಳನ್ನ ಹ್ಯಾಂಗೆ ವ್ಯಕ್ತಿಮಾಡತದೋ ಅಂದರೆ ನಾನಾವಿಧವಾದ ಬೀಜಗಳು ನೀರಿನ ಸಂಬಂಧವಾದ ಕೂಡಲೆ ಅದರದರ ಗುಣ ಗಳು ಆ ನೀರಿನಿಂದ ವ್ಯಕ್ತಿಮಾಡತದೋ ಆ ಪ್ರಕಾರ ನಿಷ್ಪಕ್ಷಪಾತಿಯಾದ ಶ್ರೀಪರಮಾತ್ಮ ಜೀವರ ಸಂಬಂಧದಿಂದ ಅಂದರೆ ತ್ರಿವಿಧಜೀವರಲ್ಲಿ ಇದ್ದಾಗ್ಯೂ ತನಗೆ ವೈಷಮ್ಯ ಇಲ್ಲದಲೆ, ಆಯಾ ಜೀವರ ಗುಣಕರ್ಮಾನುಸಾರ, ಆಯಾ ಜೀವರಿಗೆ ಭಿನ್ನಭಿನ್ನವಾದ ಫಲಗಳ ಕೊಡತಾನೆ. ಮತ್ತು ಮೇಘ ತನ್ನ ಉದಕದಿಂದ ಅದರದರ ಸ್ವರೂಪಯೋಗ್ಯತಾನುಸಾರ ಬೀಜಗಳ ಸ್ವಭಾವವನ್ನು ಒಹಿರ್ವ್ಯಕ್ತಿಮಾಡುವಂತೆ ಪರಮಾತ್ಮ ಜೀವರ ಸ್ವಭಾವವನ್ನು ತಿಳಿಸತಾನೆ. ದೋಷ ಬೀಜಗಳಲ್ಲಿ ಅದೆ. ಇನ್ನು ಸುರಸೋಪೇತವಾದ ಪದಾರ್ಥಗಳು ಕಲುಷ ಜಿಹ್ವೆಗೆ ಕಹಿಯಾಗಿ ತೋರತದೆ. ದೋಷ ಜಿಹ್ವೇದೇ ಹೊರತು ಪದಾರ್ಥದ್ದು ಅಲ್ಲ. ಅದೇ ಪದಾರ್ಥವನ್ನು ಸಮೀಚೀನವಾದ ಜಿಹ್ವೆಗೆ ಭೋಜನ ಮಾಡಿಸಿದರೆ ಸುರಸ ವಾಗಿ ತೋರತದೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಜೀವರ ಯೋಗ್ಯತಾನುಸಾರ ಫಲಗಳ ಕೊಡುವ್ರದಕ್ಕೆ ಪ್ರಮಾಣ :– "ಪುಣ್ಯಪಾಪಾದಿಕಂ ವಿಷ್ಣುಃ ಕಾರಯೇತ್ ಪೂರ್ವಕರ್ಮಣಾ | ಅನಾದಿತ್ವಾತ್ ಕರ್ಮಣಶ್ಚ ನ ವಿರೋಧಃ ಕಥಂಚನ ||" ಇತಿ ಸೂತ್ರಭಾಷ್ಯೇ. ಮತ್ತು "ಅನಾದಿಯೋಗ್ಯತಾಕರ್ಮಸಾಪೇಕ್ಷೋ ಹಿ ಕರೋತ್ಯಜಃ ||" ಇತಿ ಸತ್ತತ್ವರತ್ನ ಮಾಲಾಯಾಂ ಜ್ಞೇಯಂ.

**ವಾರಿಜಾಪ್ತನ ಕಿರಣಮಣಿಗಳ |**
**ಸೇರಿ ತತ್ತದ್ವರ್ಣಗಳನು ವಿ |**
**ಕಾರಗೈಸದೆ ನೋಳ್ಪರಿಗೆ ಕಂಗೊಳಿಸುವಂದದಲಿ ||**
**ಮಾರಮಣ ಲೋಕತ್ರಯದೊಳಿಹ |**
**ಮೂರು ವಿಧ ಜೀವರೊಳಗಿದ್ದು ವಿ |**
**ಹಾರಮಾಡುವನವರ ಯೋಗ್ಯತೆ ಕರ್ಮವನುಸರಿಸಿ || ೨೪ ||**

ಪೂರ್ವೋಕ್ತ ಸಂಗತಿಯನ್ನೇ ಮತ್ತೊಂದು ದೃಷ್ಟಾಂತದಿಂದ ಹೇಳತಾರೆ.

ವಾರಿಜಾಪ್ತನ ಕಿರಣ – ಕಮಲಗಳಿಗೆ ಆಪ್ತನಾದ ಸೂರ್ಯನ ನಿರ್ದೋಷವಾದ ಕಿರಣಗಳು, ಮಣಿಗಳ ಸೇರಿ–(೧) ವಜ್ರ, (೨) ನೀಲ, (೩) ಕೆಂಪು ಈ ಪ್ರಕಾರವಾಗಿರುವ

*

ತ್ರಿವಿಧ ಮಣಿಗಳಲ್ಲಿ ಪ್ರವೇಶಮಾಡಿ, ತತ್ತದ್ವರ್ಣಗಳನು– ಆಯಾ ಮಣಿಗಳಲ್ಲಿರುವ ಸ್ವಭಾವ ವರ್ಣಗಳನ್ನು, ನೋಳ್ಪರಿಗೆ–ನೋಡತಕ್ಕ ಜನರಿಗೆ ಅದರದರ ಪ್ರಕಾಶ ಅದದು ತೋರಿಸೋದಾಗತದೆ. (ದೀಪದಿಂದ ದೀಪಪ್ರಕಾಶ), ಕಂಗೊಳಿಸುವಂದದಲಿ–ಕಣ್ಣಿಗೆ ತೋರಿದೋಪಾದಿಯಲಿ, ಮಾರಮಣ–ಸೂರ್ಯಸದೃಶನಾದ, ಲಕ್ಷ್ಮೀಪತಿಯಾದ ನಾರಾಯಣದೇವರು, ಲೋಕತ್ರಯದೊಳಿಹ–೧) ಭೂಲೋಕ, ೨) ಅಧೋಲೋಕಗಳು ಸೇರಿ ಒಂದು, ೩) ಊರ್ಧ್ವಲೋಕಗಳು ಸೇರಿ ಒಂದು ಲೋಕ, ಅಂತೂ ಮೂರು ಲೋಕ ಅಂತ ತಾತ್ಪರ್ಯ (ಚತುರ್ದಶಲೋಕ ಎಂತಲೂ ತಾತ್ಪರ್ಯ). ಈ ಪ್ರಕಾರ ಲೋಕಗಳಲ್ಲಿರುವಂಥಾ, ಮೂರುವಿಧ ಜೀವರೊಳಿದ್ದು–ತ್ರಿವಿಧರಾದ ದೇವ, ಮಾನವ, ದಾನವ ಜೀವರಲ್ಲಿದ್ದವನಾಗಿ ಎಂದರೇ ಸೂರ್ಯಕಿರಣಗಳು ಮಣಿಗಳಲ್ಲಿ ಸೇರಿ, ಅದರದರ ಪ್ರಕಾಶ ವ್ಯಕ್ತಮಾಡಿದಂತೆ ಶ್ರೀಪರಮಾತ್ಮ ಜೀವರ ಸ್ವರೂಪದಲ್ಲಿ, ಬಾಹ್ಯಸ್ಥೂಲದೇಹದಲ್ಲಿ ವ್ಯಾಪ್ತನಾಗಿದ್ದು, ಅವರ ಯೋಗ್ಯತೆಕರ್ಮವನುಸರಿಸಿ–ಅವರವರ ಯೋಗ್ಯತೆ, ಅವರವರ ಕರ್ಮಗಳು ಎಂಥಾದ್ದೋ ಅಂಥಾದ್ದರನ್ನ ಅನುಸರಿಸಿ, ತಾನು ವ್ಯಕ್ತಮಾಡಿದವನಾಗಿ, ವಿಹಾರ ಮಾಡುವ–ತಾನು ತನ್ನ ಸ್ವೇಚ್ಛಾನುಸಾರ ಇರೋವನಾಗಿದ್ದಾನೆ. ಈ ಜೀವರ ಯೋಗ್ಯತೆ ಈಶ್ವರನಿಂದ ರಚಿತವಲ್ಲ. ಅದು ಅನಾದಿ. ಮಣಿಗಳ ವರ್ಣ ಎನಿಸತಕ್ಕದ್ದು ಹೇಗೆ ಸೂರ್ಯನಿಂದ ರಚಿತವಲ್ಲವೋ ತದ್ವತ್ ಎಂತ ಅರ್ಥ.

**ತಾ||** ಹಿಂದಿನ ಶ್ಲೋಕದ ಅಭಿಪ್ರಾಯವೇ ಇದಕ್ಕೂ ಅನ್ವಯ. ಹೇಗೆಂದರೇ ಒಂದೇ ಉದಕ ಆಯಾ ಬೀಜಗಳ ಸ್ವಭಾವ ಗುಣಗಳನ್ನು ವ್ಯಕ್ತಿಮಾಡುವ ರೀತಿಯಾಗಿ ಸೂರ್ಯನ ಕಿರಣಗಳು ಉದಕರೀತಿಯಾಗಿ ನಿರ್ದೋಷವಾದದ್ದು, ಆದರೂ ವಿವಿಧ ವರ್ಣಯುಕ್ತವಾದ ಮಣಿಗಳಿಗೆ ಸಂಬಂಧವಾಗದಲೇ ಆಯಾ ಮಣಿಗಳ ಸ್ವರೂಪಯೋಗ್ಯತೆಯನ್ನ ವ್ಯಕ್ತಮಾಡುವಂತೆ, ಶ್ರೀ ಪರಮಾತ್ಮ ನಿರ್ದೋಷನಾದವನಾದ ಕಾರಣ, ಸತ್ವರಜಸ್ತಮೋಜೀವರಲ್ಲಿ ವ್ಯಾಪ್ತನಾಗಿ, ಅವರವರ ಸ್ವರೂಪಯೋಗ್ಯತೆಗಳನ್ನು ವ್ಯಕ್ತಮಾಡಿ ಅವರವರ ಯೋಗ್ಯತಾನುಸಾರ ಫಲಗಳ ಕೊಡೋವನಾಗಿದ್ದಾನೆ ಎಂತ ತಾತ್ಪರ್ಯ.

**ಜಲವನಪಹರಿಸುವ ಘಳಿಗೆಬ |**
**ಟ್ಟಲನುಳಿದು ಜೈಘಂಟೆ ಕೈಪಿಡಿ |**
**ದೆಳೆದು ಹೊಡೆವಂದದಲಿ ಸಂತತ ಕರ್ತೃ ತಾನಾಗಿ ||**
**ಹಲಧರಾನುಜ ಪುಣ್ಯಪಾಪದ |**
**ಫಲಗಳನು ದೇವಾಸುರರ ಗಣ |**
**ದೊಳು ವಿಭಾಗವ ಮಾಡಿ ಉಣಿಸುತ ಸಾಕ್ಷಿಯಾಗಿಪ್ಪ || ೨೫ ||**

ಜೀವಾಂತರ್ಗತ, ದೇಹಾಂತರ್ಗತನಾದ ಪರಮಾತ್ಮ ಅವರವರ ಫಲಭೋಗ ಮಾಡಿಸಿ ಸಾಕ್ಷಿಯಾಗಿ ಇರತಾನೆ ಎಂತ ಹೇಳತಾರೆ.

ಜಲವನಪಹರಿಸುವ–ಜಲವನ್ನು ಆಕರ್ಷಣಮಾಡತಕ್ಕ, ಘಳಿಗೆಬಟ್ಟಲನು–ಘಳಿಗೆ–ಮಹೂರ್ತಕಾಲವನ್ನು ಅನ್ಯರಿಗೆ ತೋರಿಸಿಕೊಡತಕ್ಕ ಬಟ್ಟಲು ಸಂಕೇತಪಾತ್ರೆಯನ್ನು, ಉಳಿದು–ಬಿಟ್ಟವರಾಗಿ ಅಲ್ಲದೇ ಉಳಿಸಿದವರಾಗಿ, ಜೈಘಂಟೆಯ–ಸರ್ವರಿಗೂ ಕಾಲಸಂಕೇತ ತಿಳಿಯೋನಿಮಿತ್ತ, ಪುರುಷನಾದವನು ಝಾಂಗಟೆಯನ್ನು, ಕೈಪಿಡಿದೆಳೆದು–ಕೈಯಿಂದ ತನ್ನ ಮುಂಭಾಗಕ್ಕೆ ಎಳೆದುಕೊಂಡು, ಹೊಡೆವಂದದಲಿ–ಹೊಡೆಯೋಪಾದಿಯಲ್ಲಿ (ಭಕ್ತರನ್ನ ರಕ್ಷಿಸಿ ದುಷ್ಟರನ್ನ ಶಿಕ್ಷಾ ಮಾಡತಾನೆ ಎಂತ ತಾತ್ಪರ್ಯ. ಹೇಗೆಂದರೆ,

(೧) ಉದಕಯುಕ್ತ ಪಾತ್ರೆಯೇ ಶ್ರೀ ಪರಮಾತ್ಮ.

(೨) ತದ್ಗತ ಉದಕವೇ ಶ್ರೀ ಪರಮಾತ್ಮನ ಗುಣಗಳು.

(೩) ತದ್ಗತ ಬಟ್ಟಲು ಜೀವನು.

(೪) ಬಟ್ಟಲಿಗೆ ವಿದ್ಯಮಾನವಾದ ಛಿದ್ರವೇ ಜೀವನಾದ ತನಗೂ ಛಿದ್ರಯುಕ್ತನು, ಅಪೂರ್ಣನು ಎಂಬ ಜ್ಞಾನವು.

(೫) ಆ ಛಿದ್ರದಿಂದ ಉದಕಸ್ವೀಕಾರ ಮಾಡದಪೆ ಅದೇ ಶ್ರೀ ಪರಮಾತ್ಮನ ಅಸದೃಶವಾದ ಗುಣಗಳ ಉಪಾಸನರೂಪವಾದ ಪಾನವು.

(೬) ಬಟ್ಟಲು ಮುಳುಗೋಣ ಎಂಬುದು ಬಾಹ್ಯಜ್ಞಾನಶೂನ್ಯನಾಗಿ ಗುಣೋದಕದಲ್ಲಿ ಮುಳುಗೋಣ, ಅಂತರ್ಲಕ್ಷಣವಾಗೋಣ.

(೭) ಕಾಲ ಅನ್ಯರಿಗೆ ತೋರಿಸಿಕೊಡೋಣ ಎಂಬುದೇ ಕಾಲನಾಮಕ ಪರಮಾತ್ಮನ ಗುಣಗಳ ಅನ್ಯರಾದ ಭಗವದ್ಭಕ್ತರಿಗೆ ತಿಳಿಸಿ ಕೊಡೋಣ.

ಜ್ಞಾನ, ಭಕ್ತಿ ಇತ್ಯಾದಿಗಳು ಬಟ್ಟಲುಸದೃಶರಾದ ಭಕ್ತರಿಗೆ ಇರೋಣದರಿಂದ ಅವರನ್ನ ಶ್ರೀಹರಿ ಶಿಕ್ಷಿಸೋದಿಲ್ಲ. ಝಾಂಗಟೆ ಸದೃಶರಾದವರು ದೈತ್ಯರು. ಝಾಂಗಟೆಯ ಹೊಡೆಯತಕ್ಕ ಪುರುಷ ಸದೃಶನಾದ ಶ್ರೀ ಪರಮಾತ್ಮ, ಬಟ್ಟಲಿಗೆ ಸದೃಶರಾದ ದೇವತೆಗಳಿಂದ ಸಮೇತನಾಗಿ, ದೈತ್ಯರ ದೇಹದಲ್ಲಿದ್ದು ಉದಕಪಾನಸದೃಶ ತಮ್ಮ ಸಾಧನಮಾಡಿ ಬಟ್ಟಲು ಮುಳುಗೋಪಾದಿಯಲ್ಲಿ ತಾವುಗಳು ವ್ಯಾವರ್ತವಾಗಿ, ಝಾಂಗಟೇಸದೃಶ ದೈತ್ಯರನ್ನ ವಾಯುದೇವರೆಂಬ ಕೋಲಿನಿಂದ ಶ್ರೀಪರಮಾತ್ಮ ಝಾಂಗಟೆಯನ್ನ ಹೊಡೆದೋಪಾದಿಯಲ್ಲಿ ಶಿಕ್ಷಾ ಮಾಡತಾನೆ. ಕಾಲವನ್ನು ಅನುಸರಿಸಿ ಎಂತ ಅರ್ಥ. ಭಗವದ್ಭಕ್ತರಲ್ಲದವರಿಗೆ ಆಗತಕ್ಕ ಶಿಕ್ಷಾ ಇಂಥಾದ್ದು ಎಂತ ತಿಳಿಸತಾನೆ. ಮತ್ತು ಕಾಲವಾಗತಾ ಬಂತು, ಸಜ್ಜನರು ಬೇಗ ಸತ್ಸಾಧನೆ ಮಾಡಿರಿ ಎಂತಲೂ ಕಾಲಗಳ ತಿಳಿಸಿಕೊಡತಾನೆ. ಈ ಪ್ರಕಾರ ಭಕ್ತಾಭಕ್ತರ ರಕ್ಷಣ ಶಿಕ್ಷಣ ಮಾಡತಕ್ಕ ಶ್ರೀ ಪರಮಾತ್ಮ, ಸಂತತ ಕರ್ತೃ ತಾನಾಗಿ–ನಿರಂತರದಲ್ಲೂ, ತ್ರಿವಿಧಜೀವರಿಗೂ ಬಿಂಬನಾದ ಸರ್ವೇಂದ್ರಿಯವ್ಯಾಪಾರಮಾಡಿಸತಕ್ಕವನಾಗಿ, ಹಲಧರಾನುಜ–ಹಲಾಯುಧನಾದ ಬಲರಾಮದೇವರ ತಮ್ಮನಾದ ಶ್ರೀಕೃಷ್ಣರೂಪಾಭಿನ್ನ ಶ್ರೀಪರಮಾತ್ಮ, ಪುಣ್ಯಾಪಾಪದ ಫಲಗಳನು–ಇಂದ್ರಿಯಜನಿತ ಪುಣ್ಯಾಪಾಪಕರ್ಮಗಳ

ಭೋಗಯೋಗ್ಯಫಲಗಳನ್ನು, ದೇವ–ದೇಹಾಂತರ್ಗತ ಜೀವ, ತತ್ವದೇವತೆಗಳಿಗೆ, ಅಸುರ–ದೈತ್ಯರಿಗೆ, ನಿತ್ಯಸಂಸಾರಿಗಳಿಗೆ, ಗಣದೊಳು–ಇವರ ಅಂತರ್ಗತನಾಗಿದ್ದು, ವಿಭಾಗವ ಮಾಡಿ–ಮೂರು ಪ್ರಕಾರ ವಿಭಾಗವನ್ನು ಮಾಡಿಕೊಟ್ಟು, ಜೀವನ ಭಾಗ ಜೀವಗೆ ಭಾಗ ಮಾಡಿಕೊಟ್ಟು, ಉಣಿಸುತ–ಪೂರ್ವೋಕ್ತ ಬಟ್ಟಲು, ಝಾಂಗಟಿಗೆ ಉಣಿಸಿದೋಪಾದಿಯಲಿ, ಸುಖವನ್ನೂನು, ಝಾಂಗಟಿ ಪೆಟ್ಟು ತಿಂದುದೋಪಾದಿಯಲಿ ದುಃಖವನ್ನೂ, ಈ ಪ್ರಕಾರ ದೇವದೈತ್ಯರಿಗೆ ಭೋಜನಮಾಡಿಸುತ್ತಾ, ಸಾಕ್ಷಿಯಾಗಿಪ್ಪ–ತಾನು ಝಾಂಗಟಿ ಬಡಿಯುವ ಪುರುಷನೋಪಾದಿಯಲಿ ಜೀವರು ಮಾಡತಕ್ಕ ಕರ್ಮಗಳಿಗೆ ಲೋಪವಾಗದಂತೆ ವ್ಯಾವರ್ತನಾಗಿ ಸಾಕ್ಷಿಯಾಗಿಪ್ಪ ಅಂದರೆ ಸಾಕ್ಷಿಯಾಗಿರತಾನೆ. (ಯಮಲೋಕದಲ್ಲಿ ಯಮನ ವಿಚಾರಣಕಾಲದಲ್ಲಿ ಪುಷ್ಕರಾಂತರ್ಗತನಾಗಿ ಸಾಕ್ಷಿ ಹೇಳೋವನಾಗತಾನೆ ಎಂತ ತಾತ್ಪರ್ಯ.

**ತಾ||** ಈ ರೀತಿಯಾಗಿ ಶ್ರೀಪರಮಾತ್ಮ ಸಮಸ್ತರಲ್ಲಿ ಕರ್ಮಸಾಕ್ಷಿಯಾಗಿದ್ದು, ಕರ್ಮಫಲಗಳನ್ನು ಮೂರು ಪ್ರಕಾರ ಭಾಗಮಾಡಿ, ದೇಹಾಂತರ್ಗತ ಜೀವನಿಗೆ, ತತ್ವಾಭಿಮಾನಿ ದೇವತೆಗಳಿಗೆ, ತಥಾ ದೈತ್ಯರಿಗೆ, ಯೋಗ್ಯತಾನುಸಾರ, ಜೀವಂದು ಜೀವಗೆ ಕೊಟ್ಟು, ದೇವತೆಗಳಿಗೆ ಬಟ್ಟಲುಸದೃಶ ಸುಖವನ್ನೂನು, ದೈತ್ಯರಿಗೆ ಝಾಂಗಟಿ ಸದೃಶ ದುಃಖವನ್ನೂನು ಕೊಟ್ಟು, ಕರ್ಮಸಾಕ್ಷಿಯಾಗಿದ್ದು ಸಂರಕ್ಷಣ ಮಾಡತಾನೆ ಎಂತ ತಾತ್ಪರ್ಯ.

**ಹೊಂದಿಕೊಂಡಿಹ ಸರ್ವರೊಳು ಸಂ |**
**ಬಂಧವಾಗದೆ ಸಕಲಕರ್ಮವ |**
**ರಂದದಲಿ ತಾ ಮಾಡಿ ಮಾಡಿಸಿ ತತ್ಫಲಗಳುಣದೆ ||**
**ಕುಂದದಣು ಮಹತ್ತೆನಿಪ ಘಟ |**
**ಮಂದಿರದಿ ಸರ್ವತ್ರ ತುಂಬಿಹ |**
**ಬಾಂದಳದ ತೆರನಂತೆ ಇರುತಿಪ್ಪನು ರಮಾರಮಣ || ೨೬ ||**

"ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವಗತೋ ಮಹಾನ್ | ತಥಾ ಸರ್ವಾಣಿ ಭೂತಾನಿ ಮತ್‌ಸ್ಥಾನೀತ್ಯುಪಧಾರಯ ||" ಎಂಬ ಗೀತಾವಚನ ಇರುವದರಿಂದ ಶ್ರೀ ಪರಮಾತ್ಮ ದೇಹಾಂತರ್ಗತನಾಗಿ ಇದ್ದ ಕಾಲಕ್ಕೂ ನಿರ್ಲಿಪ್ತನಾಗಿದ್ದಾನೆ ಎಂತ ಹೇಳತಾರೆ.

ರಮಾರಮಣ–ಲಕ್ಷ್ಮೀಪತಿಯಾದ, ಬಿಂಬರೂಪಿಯಾದ ಶ್ರೀ ನಾರಾಯಣದೇವರು, ಸರ್ವರೊಳು–ತ್ರಿವಿಧ ಜೀವರೊಳು, ಸರ್ವಜೀವರೊಳು, ಸಂಬಂಧವಾಗದೆ–ವ್ಯಾಪ್ತನಾಗಿದ್ದ ಕಾಲಕ್ಕೂ, ಇವರು ಭೋಜನಮಾಡತಕ್ಕ ಫಲಗಳಿಗೆ ಸಂಬಂಧಿಸದೆ, ಹೊಂದಿಕೊಂಡಿಹ–ಆಯಾ ಜೀವರಲ್ಲಿ ಹೊಂದಿಕೊಂಡು ಬಿಂಬನಾಗಿದ್ದಾನೆ. (ಘಟಕ್ಕೆ ಭೇದಭೇದಾದಿಗಳು ಕಂಡರೂ ತದ್ಗತ ಆಕಾಶಕ್ಕೆ ಭೇದಭೇದಗಳು ಹೇಗೆ ಇಲ್ಲವೋ, ಅದರಂತೆ ಎಂತ

ಅರ್ಥ), ಸಕಲಕರ್ಮವ–ಇವರಲ್ಲಿ ಇದ್ದು ಸಕಲೇಂದ್ರಿಯಗಳಿಂದ ಕರ್ಮಸಮೂಹಗಳನ್ನು, ಅವರಂದದಲಿ – ಆಯಾ ಪ್ರಾಣಿಗಳ ಸ್ವರೂಪಯೋಗ್ಯತಾನುಸಾರ ಇರತಕ್ಕ ಬಾಹ್ಯ ಕರ್ಮಾನುಸಾರದಲ್ಲಿ ಸ್ಥೂಲದೇಹಗಳಿಂದ, ತಾ ಮಾಡಿ–ಪ್ರಥಮತಃ ಬಿಂಬಕ್ರಿಯಾ ದ್ವಾರಾ ಸ್ವಾಖ್ಯಕರ್ಮ ತಾನು ಮಾಡಿ, ಮಾಡಿಸಿ–ದೇವತೆಗಳ ದ್ವಾರಾ, ಜೀವನ ದ್ವಾರಾ, ಏಕಕಾಲಾವಚ್ಛೇದೇನ ಮಾಡಿಸಿ, ತತ್ಫಲಗಳುಣದೆ–ಆಯಾ ಜೀವರು ಸ್ಥೂಲದೇಹದ್ವಾರಾ ಉಣತಕ್ಕ ಕರ್ಮಫಲಗಳ ತಾನು ಉಣದೇ, ತನ್ನ ಸ್ವಾಖ್ಯಗಳ ತಾನು ಉಣತಾ, ಕುಂದದ–ನ್ಯೂನಾಧಿಕ್ಯಗಳು ಇಲ್ಲದ, ಅಣು–ಅಣುಸ್ವರೂಪಿಯಾದ ಜೀವನ ಸ್ವರೂಪದಲ್ಲಿ, ಮಹತ್ತೆನಿಪ–ತದಪೇಕ್ಷಯಾ ದೊಡ್ಡದು ಎಂತ ಎನಿಸತಕ್ಕವನಾಗಿ, ಘಟಮಂದಿರದಿ–ಘಟ ಸಾಂಕೇತವಾದ ಸ್ಥೂಲದೇಹಾಖ್ಯ ಮಂದಿರದಲ್ಲಿ, ಸರ್ವತ್ರ–ಸರ್ವ ಚರಾಚರ ಅಂತ ರ್ಬಹಿಯಲ್ಲಿ, ತುಂಬಿಹ–ತುಂಬಿಕೊಂಡಿರತಕ್ಕ, ಬಾಂದಳದ ತೆರನಂತೆ–ಆಕಾಶದೋಪಾದಿ ಯಲ್ಲಿ, ಇರುತಿಪ್ಪ–ಇರೋವನಾಗಿದ್ದಾನೆ.

**ತಾ||** ಘಟಸದೃಶ ಜೀವರು, ದೇಹಗಳು. ತದ್ಗತ ಆಕಾಶಸದೃಶ ಪರಮಾತ್ಮ. ಪರಮಾತ್ಮಸದೃಶ ಆಕಾಶಕ್ಕೆ ಲೇಪ ಇಲ್ಲ ಎಂತಲೂ, ಈ ಪ್ರಕಾರ ಶ್ರೀ ಪರಮಾತ್ಮಗೆ ಭೇದ ಭೇದಾದಿಗಳು ಇಲ್ಲದೆಯೂ ತನ್ನ ಸ್ವಾಖ್ಯರಸಗಳ ತಾನು ಉಣತಾ ಸರ್ವತ್ರ ತುಂಬಿಕೊಂಡಿರ ತಾನೆ ಎಂತ ತಾತ್ಪರ್ಯ.

**ಕಾದ ಕಬ್ಬಿಣ ಹಿಡಿದು ಬಡಿಯಲು |**
**ವೇದನೆಯು ಲೋಹಗಳಿಗಲ್ಲದೆ |**
**ಆದುದೇನೈ ಅನಳಗಾ ವ್ಯಥೆ ಏನು ಮಾಡಿದರು ||**
**ಆದಿದೇವನು ಸರ್ವಜೀವರ |**
**ಕಾದುಕೊಂಡಿಹನೊಳಹೊರಗೆ ದುಃ |**
**ಖಾದಿಗಳು ಸಂಬಂಧವಾಗುವುವೇನೋ ಚಿನ್ಮಯಗೆ || ೨೭ ||**

ದೇಹಗತನಾದ ಶ್ರೀಪರಮಾತ್ಮಗೆ ದೇಹಗತವಾದ ಜೀವನೋಪಾದಿಯಲ್ಲಿ ದುಃಖಾದಿ ಗಳ ಸಂಬಂಧವಿಲ್ಲೆಂದು ಹೇಳತಾರೆ.

ಕಾದಕಬ್ಬಿಣ–ಅಗ್ನಿ ಒಳಗೆ ಛಂದಾಗಿ ಕಾದಂಥಾ ಕಬ್ಬಿಣವನ್ನ, ಹಿಡಿದು ಬಡಿಯಲು– ಚಲಿಸದಂತೆ ಆಯುಧವಿಶೇಷದಿಂದ ಹಿಡಕೊಂಡು, ಚಮುಟಿನಾಮಕ ಆಯುಧದಿಂದ ಹೊಡೆ ದರೆ, ವೇದನೆಯು–ಪೆಟ್ಟಿನಿಂದ ಆಗತಕ್ಕ ವೇದನೆಯು, ಲೋಹಗಳಿಗಲ್ಲದೆ–ಕಬ್ಬಿಣ ಮೊದಲಾದ ಲೋಹಗಳಿಗೆ ಹೊರತು, ಅನಳಗೆ–ಲೋಹದಲ್ಲಿ ವ್ಯಾಪ್ತವಾದ ಅಗ್ನಿಗೆ, ಆ ವ್ಯಥೆ–ಆ ಬಡಿಯಲ್ಪಟ್ಟ ಪೆಟ್ಟು, ಆದುದೇನೈ–ಆ ಗೋ ೀ ದೇ ನ ಯ್ಯಾ ! (ಎಂತ ಸಂಬೋಧನ), ಏನು ಮಾಡಿದರು–ದೈತ್ಯರು ತಮ್ಮ ಅನಾದಿಸ್ವಭಾವವನ್ನು ಅನುಸರಿಸಿ ಪರಮಾತ್ಮನಲ್ಲಿ ದ್ವೇಷ ಮಾಡಿದರೂನೂ, ಪರಮಾತ್ಮನಾದ ತಾನು ದ್ವೇಷ ಮಾಡಥಾಂಗೆ, ಆದಿದೇವನು–ಸರ್ವಶ್ರೇಷ್ಠನಾದ ಶ್ರೀ ಪರಮಾತ್ಮನು, ಸರ್ವಜೀವರ–ತ್ರಿವಿಧಜೀವರಿಗೆ

ಬಿಂಬನಾಗಿ, ಜೀವನಲ್ಲಿ, ದೇಹದಲ್ಲಿ ಅಂಗರ್ತತನಾಗಿ, ಬಿಡದೆ, ಕಾದುಕೊಂಡಿಹ_ಕಾದು ಕೊಂಡು ಇದ್ದಾನೆ. ಒಳ_ಲಿಂಗಭಂಗಾನಂತರ, ೧. ವೈಕುಂಠದೊಳಗೆ, ೨. ಅಂಧಂತಮೋ ಲೋಕದೊಳಗೆ, ೩. ಸಾಂತಾನಿಕಲೋಕದೊಳಗೆ, ಈ ಪ್ರಕಾರ ತ್ರಿಸ್ಥಾನದಲ್ಲಿರತಕ್ಕ ಜೀವರ, ಹೊರಗೆ_ತದ್ವ್ಯತಿರಿಕ್ತ ಹೊರಭಾಗವಾದ ಸ್ಥಿತಿಕಾಲವಾದ ಭೂಲೋಕದಲ್ಲಿ, ನರಕದಲ್ಲಿ, ಸ್ಥೂಲದೇಹದಲ್ಲಿ ಇರತಕ್ಕ, ಜೀವರ ಅಂತರ್ಗತನಾಗಿ ಇದ್ದ ಕಾಲಕ್ಕೂ, ದುಃಖಾದಿಗಳು_ಅವರವರ ಸುಖದುಃಖಾದಿಗಳು, ಸಂಬಂಧವಾಗುವ್ರವೇನೊ_ಅಂತರ್ಗತ ನಾಗಿರುವ ಪರಮಾತ್ಮಗೆ ಪೂರ್ವೋಕ್ತದೃಷ್ಟಾಂತಾನುಸಾರ ಸಂಬಂಧವಾಗೋದೇ ಎಂದರೆ, ಸಂಬಂಧವಾಗಲಾರದು ಎಂತ ತಾತ್ಪರ್ಯ. (ಯಾಕೆ ಅಂದರೆ), ಚಿನ್ಮಯಗೆ_ಚಿದ್ರೂಪಿ ಪರಮಾತ್ಮಗೆ ಸಂಬಂಧವಾಗತಕ್ಕ ದೋಷಸಾಮಗ್ರಿಗಳು ಇಲ್ಲ, ನಿರ್ದೋಷಿಯಾದ ಕಾರಣ ಎಂತ ಅರ್ಥ.

**ತಾ||** ಕಾದಂಥ ಕಬ್ಬಿಣವನ್ನು ಹಿಡಿದು, ಚಮ್ಮಟಿಗೆ ಆಯುಧದಿಂದ ಬಡಿದರೆ, ಅದರಿಂದ ಉಂಟಾಗುವ ವ್ಯಥೆರೂಪವಾದ ವಿಕಾರವು, ಲೋಹಗತ ಅಗ್ನಿಗೆ ಹೇಗೆ ಸಂಬಂಧಿಸದೇ, ಲೋಹವನ್ನ ವಿಕಾರಗೈಸುವುದೋ, ತದ್ವತ್ ದೇಹಗತನಾದ ಪರಮಾತ್ಮಗೆ ಜೀವನ ಕರ್ಮಫಲದಿಂದ ಉಂಟಾಗುವ ಸುಖದುಃಖಾದಿಗಳು, ಜೀವಗೆ ಸಂಬಂಧಿಸೋದೇ ಹೊರತು ಪರಮಾತ್ಮಗೆ ಸಂಬಂಧಿಸೋದಿಲ್ಲ. ಇಂಥಾ ನಿರಂಜನ ದೋಷಸಂಬಂಧವಾದ ಸುಖದುಃಖಾದಿಗಳು ಸಂಬಂಧವಾಗದೇ ಸ್ವಾಖ್ಯಸುಖಸಂಬಂಧದಿಂದ ಪೂರ್ಣನಾಗಿದ್ದಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**_ಲೋಹಸದೃಶ ದೇಹಸಹಿತನಾದ ಜೀವ, ಅಗ್ನಿಸದೃಶ ಅಂತರ್ಗತ ಪರಮಾತ್ಮ, ಪೆಟ್ಟುಸದೃಶ ಕರ್ಮಫಲಭೋಗ ಎಂತ ತಿಳಿಯಬೇಕು.

**ಮಳಲ ಮನೆಗಳ ಮಾಡಿ ಮಕ್ಕಳು ।**
**ಕೆಲವು ಕಾಲದಲಾಡಿ ಮೋದದಿ ।**
**ತುಳಿದು ಕೆಡಿಸುವ ತೆರದಿ ಲಕುಮೀರಮಣ ಲೋಕಗಳ ॥**
**ಹಲವು ಬಗೆಯಲಿ ನಿರ್ಮಿಸುವ ನಿ ।**
**ಶ್ಚಲನು ತಾನಾಗಿದ್ದು ಸಲಹುವ ।**
**ಎಲರುಣಿಯವ್ರೋಲ್ ನುಂಗುವಗೆ ಎಲ್ಲಿಹುದೊ ಸುಖದುಃಖ ॥**

ಜಗತ್ಸೃಷ್ಟ್ಯಾದಿಗಳು ಮಾಡುವ ಶ್ರೀಹರಿಗೆ, ಮೋಹಾದಿಗಳು ಇಲ್ಲದ್ದರಿಂದ ಸುಖ ದುಃಖ ಲೇಪವಿಲ್ಲ ಎಂತ ಬಾಲಕರ ಕ್ರೀಡಾದೃಷ್ಟಾಂತದಿಂದ ಹೇಳತಾರೆ.

ಮಕ್ಕಳು_ಆಟ ಆಡತಕ್ಕ ಬಾಲಕರು, ಮಳಲ_ಉಸುವಿನಿಂದ ತಥಾ ಮಣ್ಣಿನಿಂದ, ಮನೆಗಳ ಮಾಡಿ_ಹಸ್ತದಿಂದ ಮನೆಗಳಾಗಿಯೂ, ಪಾದದಿಂದ ಗೂಡುಗಳಾಗಿಯೂ, ಮಾಡಿ, ಕೆಲವು ಕಾಲದಿ ಆಡಿ_ಸ್ವಲ್ಪಕಾಲ ಪರಿಯಂತ ಅದರ ಸಂಗಡ (ಅದರನ್ನ ಆಟದ ಪಾತ್ರಿಯಾಗಿಟ್ಟುಕೊಂಡು) ಆಟಗಳು ಆಡಿದವರಾಗಿ, ಮೋದದಿ_ಅವರವರು, ಆ ಮನೆಗಳ

ಸಂತೋಷದಿಂದ, ತುಳಿದು–ತಮ್ಮ ತಮ್ಮ ಪಾದಗಳಿಂದ ತುಳಿದು, ಕೆಡಿಸುವ ತೆರದಿ– ನಾಶಮಾಡೋಪಾದಿಯಲ್ಲಿ, ಲಕುಮೀರಮಣ–ಶ್ರೀ ಲಕ್ಷ್ಮೀಪತಿಯಾದ ಶ್ರೀನಾರಾಯಣ ದೇವರು, ಪ್ರಳಯಕಾಲದಲ್ಲಿ, ಸಮಸ್ತ ಜಗತ್ತನ್ನೂ ಉದರದಲ್ಲಿ ಧರಿಸಿ ಮಲಗಿದವನಾಗಿ, ಸೃಷ್ಟಿಕಾಲ ಪ್ರಾಪ್ತವಾಗಿರಲಿಕ್ಕೆ, ವಾಸುದೇವಾದಿ ಅಂಶರೂಪಗಳಿಂದ, ಪತ್ನೀಸಹಿತನಾಗಿ, ಲೋಕಗಳ–ತನ್ನ ಉದರಗತ ಹದಿನಾಲ್ಕು ಲೋಕಗಳನ್ನು, ಪ್ರಾಣಿಗಳನ್ನು, ಹೊರಗೆ ತೆಗೆದು, ಅವರವರಿಗೆ, ಸ್ಥೂಲದೇಹಗಳಾದ ಮಣ್ಣು ಸದೃಶವಾದ ಉಪಾದಾನ ಪ್ರಕೃತಿ ಯಿಂದ, ಹಲವು ಬಗೆಯಲಿ–ಬಾಲಕರು ನಾನಾಬಗೆಯಲ್ಲಿ ಮನೆಗಳ ನಿರ್ಮಿಸಿದಂತೆ ನಾನಾ ಬಗೆ ಸ್ವರೂಪಗಳಾದ ಗಜತುರಗಾದಿ ನಾನಾವಿಧ ಸ್ವರೂಪವುಳ್ಳ ಜೀವರ ಸ್ವರೂಪಾನುಸಾರ ತಜ್ಜಾತಿಯ ದೇಹಗಳು ನಿರ್ಮಾಣಮಾಡಿ, ವಿಜಾತಿಯಾದ ಆಯಾ ದೇಹಗಳಲ್ಲಿ ಜೀವರ ಪ್ರವೇಶಮಾಡಿಸಿ, ನಿರ್ಮಿಸುವ–ಸೃಷ್ಟಿಮಾಡತಾನೆ. ಒಂದು ವಿಶೇಷ. ಸಜಾತಿದೇಹದಲ್ಲಿ ಸಜಾತಿಜೀವರ ಇಟ್ಟು ಆ ಸಜಾತಿ ದೇಹದ ಸಹಿತ ವಿಜಾತಿ ದೇಹದಲ್ಲಿ ಇಡತಾನೆ. ಹ್ಯಾಗೆಂದರೆ, ಆಡತಕ್ಕ ಮಕ್ಕಳು ಅನೇಕ ಮಂದಿಗೆ ಸದೃಶ ಬಿಂಬರೂಪಗಳ ಅನೇಕ ಆಟಕ್ಕೆ ಕಾರಣವಾದ ಉಪಾದಾನಗಳು ಎರಡು. ಅನಾದಿಲಿಂಗದೇಹೋಪಾದಾನ ಒಂದು, ಮೂಲಜಡಪ್ರಕೃತಿ ಉಪಾದಾನ ಒಂದು. ಲಿಂಗೋಪಾದಾನದಿಂದ ಅನಿರುದ್ಧಶರೀರದ ವರಿಗೂ ಜೀವಾಕಾರ ದೇಹಗಳು ಆಯಾ ಬಿಂಬದಿಂದ ನಿರ್ಮಿತ. ಇಂಥಾ ಅನಿರುದ್ಧ ಶರೀರವನ್ನು ಮೂಲ ಜಡಪ್ರಕೃತಿಯಿಂದ ನಿರ್ಮಿತವಾದ ವಿಜಾತಿರೂಪದ್ದಾದ, ಸ್ಥೂಲ ದೇಹದಲ್ಲಿ ಜೀವರ ಸಹಿತವಾಗಿ ಇಡೋವನಾಗಿದ್ದಾನೆ ಎಂತ ತಾತ್ಪರ್ಯ. ಈ ಪ್ರಕಾರ ಹದಿನಾಲ್ಕು ಲೋಕಗಳ, ಜೀವರ, ದೇಹಗಳ (ಪೂರ್ವೋಕ್ತ ಪ್ರಕಾರ ದೇಹಸಹಿತ ರನ್ನಾಗಿ ಜೀವರ) ಸೃಷ್ಟಿ ಮಾಡತಾನೆ. ನಿಶ್ಚಲನು–ಈ ಜೀವರಲ್ಲಿ ಅಂತರ್ಗತಬಿಂಬನಾಗಿ, ಅನಾದ್ಯನಂತ ಕಾಲಕ್ಕೂ ಜೀವನ್ನ ಬಿಟ್ಟು ಚಲಿಸದೇ, ತಾನಾಗಿ–ಇವರ ಸ್ವರೂಪೇಂ ದ್ರಿಯಗಳಿಗೆ ನಿಯಾಮಕ ತತ್ವ ದೇವತಾ ತಾನೇ ಆಗಿ, ಇದ್ದು–ಇರೋವನಾಗಿ ಮತ್ತು ಇದರಂತೆ ಸ್ಥೂಲ ದೇಹದಲಿ ತತ್ವಾಭಿಮಾನಿ ದೇವತೆಗಳ ಸಮೇತನಾಗಿ, ಜೀವನ ವ್ಯಾಪ್ತಿ ಸ್ಥೂಲ ದೇಹದಲ್ಲಿ ಮಾಡಿ, ಸ್ಥೂಲ ದೇಹದಲ್ಲಿ ಇದ್ದು, ಸಲಹುವ– ಸಂರಕ್ಷಣೆ ಮಾಡುವ (ಮಕ್ಕಳು ಕಟ್ಟಿದ ಮನೆಗಳು, ಕೆಲವು ಕಾಲದವರಿವಿಗೂ ಅದರ ಸಂಗಡ ಆಟಗಳ ಆಡಿ ಸಲಹಿದೋಪಾದಿಯಲಿ) ತನ್ನಿಂದ ನಿರ್ಮಿತವಾದ್ದರಿಂದ ಅವರ ಸಂಗಡ ಆಟಗಳು ಆಡುತಾ ಸಂರಕ್ಷಣೆ ಮಾಡತಾನೆ. ಎಲರುಣಿಯವೋಲ್–ಎಲರ್– ಗಾಳಿಯನ್ನು, ಉಣಿಯ–ಉಣತಕ್ಕ ಸರ್ಪ, ವೋಲ್–ದೋಪಾದಿಯಲಿ, ನುಂಗುವಗೆ– ನುಂಗತಕ್ಕವನಿಗೆ, ಎಲ್ಲಿಹುದೋ ಸುಖದುಃಖ–ಸುಖದುಃಖಾದಿಗಳು ಎಲ್ಲಿ ಅದೆ ತೋರಿಸಿರಿ ಅಂತ ಸಂಬೋಧನ.

**ತಾ||** ಮಕ್ಕಳು ಆಟಕ್ಕಾಗಿ ಅನಾಯಾಸವಾಗಿ ಉಸುವಿನಿಂದಾಗಲಿ, ಅಲ್ಲದೇ ಮಣ್ಣಿನಿಂದಾಗಲಿ ಚಿಕ್ಕ ಚಿಕ್ಕ ಮನೆಗಳ ಕಟ್ಟಿಕೊಂಡು, ಆ ಮನೆಗಳಿಂದ ಕೆಲವು ಕಾಲ

ಆಟಗಳು ಆಡಿ, ಮುಗಿದ ಮೇಲೆ, ಅನಾಯಾಸದಿಂದ ನಾಶ ಮಾಡುವಂತೆ, ಶ್ರೀಪರ ಮಾತ್ಮ, ತನ್ನ ಇಚ್ಛಾ ಮಾತ್ರದಿಂದ, ಅನಾಯಾಸವಾಗಿ, ಜಗತ್ ಸೃಷ್ಟಿ ಮಾಡಿ, ತನ್ನ ಇಚ್ಛಾ ಮಾತ್ರದಿಂದ ಜಗತ್ಸಂಹಾರ ಮಾಡಿ, ಸರ್ಪವು ಹೇಗೆ ಗಾಳಿಯನ್ನು ಅನಾಯಾಸದಿಂದ ಹೊಟ್ಟೆ ಒಳಗೆ ಸೆಳೆಕೊಳ್ಳುವುದೊ, ತದ್ವತ್ ಶ್ರೀ ಪರಮಾತ್ಮನು ಜಗತ್ತನ್ನು ತನ್ನ ಉದರದಲ್ಲಿ ಇಟ್ಟುಕೊಂಡಿರತಾನೆ (ಯಾವಾಗ ಎಂದರೇ ಪ್ರಳಯ ಕಾಲದಲ್ಲಿ ಇಟ್ಟು ಕೊಂಡು ಮಲಗತಾನೆ), ಇಂಥಾ ಪರಮಾತ್ಮಗೆ ಸುಖದುಃಖಾದಿಗಳು ಎಲ್ಲಿ ಇದೆ ಎಂದರೆ ಸುಖ ದುಃಖಾದಿಗಳು ಇಲ್ಲಾ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಜೀವಾಂತರ್ಗತ ರೂಪಕ್ಕಾಗಲಿ, ದೇಹಾಂತರ್ಗತ ರೂಪಕ್ಕಾಗಲಿ ಅವತಾರಗಳು ಮಾಡಿ, ಸೃಷ್ಟ್ಯಾದಿಗಳು ಮಾಡಿದ ರೂಪಕ್ಕಾಗಲಿ, ಮೂಲ ರೂಪ ಶ್ರೀ ನಾರಾಯಣ ದೇವರಿಗಾಗಲಿ, ಯಾವ ಭಗವದ್ರೂಪಕ್ಕೇ ಆಗಲಿ ಸುಖ ದುಃಖಾದಿಗಳು ಇಲ್ಲ. ತದುಕ್ತಂ ಭಗವದ್ಗೀತಾ ಭಾಷ್ಯೇ. “ಅಚಿಂತ್ಯಶಕ್ತೇಃ ಪದಾರ್ಥ ವೈಚಿತ್ರ್ಯಚ್ಚೇತ್ಯುಕ್ತಂ । ಕೃಷ್ಣರಾಮಾದಿರೂಪಾಣಿ ಪರಿಪೂರ್ಣಾನಿ ಸರ್ವದಾ ॥ ನ ಚಾಣುಮಾತ್ರಂ ಭಿನ್ನಾನಿ ತಥಾಪ್ಯಸ್ಮಾತ್ ವಿಮೋಹಸೀತ್ಯಾದೇಶ್ಚ ನಾರದೀಯೇ ॥ ತಸ್ಮಾತ್ಸರ್ವದಾ ರೂಪೇಷ್ವಪರಿಗಣಿತಾನಂತಗುಣಗಣಂ ನಿತ್ಯನಿರಸ್ತಾಶೇಷದೋಷಂ ಚ ನಾರಾಯಣಾಖ್ಯ ಬ್ರಹ್ಮ ಇತಿ ಸಿದ್ಧಂ” ಎಂತ ಇರುವದರಿಂದ ಪೂರ್ಣ ಸುಖನಾದವ ಶ್ರೀ ಪರಮಾತ್ಮನೆಂದು ತಾತ್ಪರ್ಯ.

**ವೇಷ ಭಾಷೆಗಳಿಂದ ಜನರ ಪ್ರ ।**
**ಮೋಷಗೈಸುವ ನಟಪುರುಷನೋಲ್ ।**
**ದೋಷದೂರನು ಲೋಕದೊಳು ಬಹುರೂಪ ಮಾತಿನಲಿ ॥**
**ತೋಷಿಸುವನವರವರ ಮನದಭಿ ।**
**ಲಾಷೆಗಳ ಪೂರೈಸುತನುದಿನ ।**
**ಪೋಷಿಸುವ ಪೂತಾತ್ಮ ಪೂರ್ಣಾನಂದ ಜ್ಞಾನಮಯ ॥ ೨೯ ॥**

ಶ್ರೀ ಪರಮಾತ್ಮ ಯೋಗ್ಯತಾನುಸಾರ ಅವರವರನ್ನು ಸಂತೋಷಪಡಿಸತಾನೆ ಎಂತ ದೃಷ್ಟಾಂತದಿಂದ ಹೇಳತಾರೆ.

ನಟಪುರುಷನ–ನಾಟ್ಯವಾಡತಕ್ಕ ಪುರುಷ, ತನ್ನ ನೈಜವಾದ ದೇಹದ ಮೇಲೆ, ವೇಷ–ಅನ್ಯವಾದ ವಸ್ತ್ರ ಆಭರಣಗಳ ಧರಿಸಿದವನಾಗಿ, ವೇಷಗಳಿಂದಲೂ, ಭಾಷೆಗಳಿಂದ– ತನ್ನ ನೈಜವಾದ ಭಾಷಾವನ್ನ ಆಚ್ಛಾದನ ಮಾಡಿ, ಅನ್ಯ ಭಾಷೆಗಳಿಂದಲೂ, ಜನರ– ಜನರನ್ನು, ಪ್ರಮೋದಗೈಸುವ–ಅತ್ಯಂತವಾಗಿ ಸಂತೋಷಪಡಿಸತಾನೆ. ಓಲ್–ಈ ನಟ ಪುರುಷನೋಪಾದಿಯಂತೆ, ಅಂದರೆ ಈ ನಟ ಪುರುಷನೋಪಾದಿಯಲಿ, ಲೋಕದೊಳು–ಲೋಕದೊಳಿರತಕ್ಕ ಸರ್ವರಲ್ಲೂ, ದೋಷದೂರನು–ನಿರ್ದೋಷಿಯಾದ ಶ್ರೀಪರ ಮಾತ್ಮ (ವೇಷಧಾರಿ ವೇಷದ ಒಳಗೆ, ವೇಷ ಸಂಬಂಧವಾದ ತನಗೆ ಲೇಪವಿಲ್ಲದೆ, ತನ್ನ

ನೈಜ ಸ್ವಭಾವದಿಂದ ಹೇಗೆ ಇರತಾನೋ ಹಾಗೆ ತದ್ವತ್), ಚರಾಚರಗಳೆಂಬ ವೇಷಧರಿಸಿ ಕೊಂಡು ಅಂತರ್ಗತನಾಗಿ, ಏತಾದೃಶ ವೇಷದೋಷಸಂಬಂಧದಿಂದ ದೂರ ಇರೋವನಾಗಿ ದ್ದಾನೆ ಎಂತ ಅರ್ಥ. ಇಂಥಾ ವೇಷಧಾರಿಯಾದ ಪರಮಾತ್ಮ ಇಂಥಾ ವೇಷಗಳಿಂದ, ಬಹುರೂಪ ಮಾತಿನಲಿ–ಅನೇಕ ವೇಷಗಳ ಧರಿಸಿ, ಆಯಾ ವೇಷಕ್ಕೆ ತಕ್ಕ ಬಹು ಪ್ರಕಾರ ಗಳಾದ ಜಗತ್ಕಾರ್ಯ, ತಾರತಮ್ಯ, ಪಂಚಭೇದ ಸತ್ಯವೆಂತಲೂ, ಪಂಚಭೇದ ತಾರತಮ್ಯ ಮಿಥ್ಯಾ ಎಂತಲೂ, ಸರ್ವಂ ಮಿಥ್ಯಾ, ಅಹಂ ಬ್ರಹ್ಮ ಎಂತಲೂ, ಇತ್ಯಾದಿ ಆಯಾ ವೇಷ ಗಳಿಗೆ ಅನುಗುಣವಾದ, ದೋಷಗಳಾದ, ಮಾತುಗಳಿಗೆ ಸಂಬಂಧಿಸದೆ, ಮಾತುಗಳ ಆಡಿದಂತಾವನಾಗಿ, ಆಯಾ ಜೀವರನ್ನ, ತೋಷಿಸುವನು–ಅದರಿಂದಲೇ ಸಂತೋಷಪಡಿಸ ತಾನೆ. ವೇಷಧಾರಿಯಾದವನು ತಾನು ನೈಜ ಸಂತೋಷದಿಂದ ಹ್ಯಾಂಗಿರತಾನೋ, ತದ್ವತ್, ತಾನು ನಿರ್ಲಿಪ್ತನಾಗಿ ತಾಸು ಸಂತೋಷನಾಗಿರತಾನೆ. ಅವರವರ–ವೇಷಧಾರಿ ಯಾದವನಾದ ಪರಮಾತ್ಮ, ತ್ರಿವಿಧ ಜೀವರ ಸ್ವರೂಪ ಯೋಗ್ಯತಾನುಸಾರ, ಮನದಭಿ- ಲಾಷೆಗಳ–ಮನಸ್ಸಿನಲ್ಲಿ ಇಚ್ಛಾ ಹುಟ್ಟಿಸಿಕೊಟ್ಟು, ಅದರಂತೆ ತಾನು ಮಾತುಗಳಾಡಿ ಅಪೇಕ್ಷೆಯನ್ನು, ಅನುದಿನ ಪೂರೈಸುತ–ಪ್ರತಿದಿನದಲ್ಲೂ ಪೂರ್ಣಮಾಡುತಾ, ಪೋಷಿಸುವ– ಬಾಹ್ಯಕರ್ಮಾನುಸಾರ, ಆಯಾ ಕರ್ಮಗಳಿಗೆ ಫಲರೂಪವಾದ, ಭಾಗ್ಯ ಬಡತನಗಳು, ಅನ್ನೋದಕಾದಿಗಳು ಕೊಟ್ಟು, ಸಂರಕ್ಷಣೆ ಮಾಡತಾನೆ. ಬಾಹ್ಯ ಕರ್ಮಾನುಸಾರ, ಶಿಕ್ಷಣ ವಿಷಯದಲ್ಲಿ, ತ್ರಿವಿಧರಿಗೂ ಒಂದೇ ಪ್ರಕಾರವೇ. ಸ್ವರೂಪಕರ್ಮವ್ಯತ್ಯಾಸ ವಾದ್ದರಿಂದ ತ್ರಿವಿಧರಿಗೆ, ತ್ರಿವಿಧ ಪ್ರಕಾರ, ಫಲಗಳ ಲಿಂಗಭಂಗಾನಂತರ ಕೊಡತಾನೆ. ಪೂತಾತ್ಮ–ಅಪವಿತ್ರಕರವಾದ ಅಧಿಷ್ಠಾನದಲ್ಲಿ ಇದ್ದಾಗ್ಯೂ ಅದರಿಂದ ಅಪೂತನಾಗದೇ ಪವಿತ್ರನಾಗಿ ಇದ್ದಾನೆ. ಪೂರ್ಣಾನಂದ ಜ್ಞಾನಮಯ–ಅನ್ಯೂನವಾದ ಆನಂದವೇನು, ಜ್ಞಾನವೇನು ಇವುಗಳಿಂದ ಸಂಪೂರ್ಣ ಪ್ರಾಚುರ್ಯ ಉಳ್ಳವನು.

**ತಾ||** ನಟಪುರುಷನಾದವ, ಅನ್ಯವಾದ ವೇಷಗಳನ್ನು ಧರಿಸಿದವನಾದಾಗ್ಯೂ, ಅಂದರೆ, ಬಹಿರ್ವೇಷದಿಂದ, ತನ್ನ ನೈಜ ದೇಹ ವಿಕಾರ ಹೊಂದದೇ, ಆಯಾ ವೇಷಕ್ಕೆ ಅನುಗುಣವಾದ ಮಾತುಗಳನಾಡುತಾ, ಜನರನ್ನ ಸಂತೋಷಪಡಿಸುವ ರೀತಿಯಾಗಿ, ಶ್ರೀ ಪರಮಾತ್ಮನು ವಿವಿಧವಾದ, ಸ್ಥಾವರ ಜಂಗಮಾತ್ಮಕ ಪ್ರಾಣಿಗಳಲ್ಲಿ ಇದ್ದರೂ ನಿರ್ಲಿಪ್ತನಾಗಿ, ಅವರವರ ಬಾಹ್ಯಕರ್ಮಾನುಸಾರ, ಭಾಗ್ಯ, ಬಡತನ ಅನ್ನೋದ ಕಾದಿಗಳು ಕೊಟ್ಟು, ಸುಖ ದುಃಖಾದಿಗಳನ್ನು ಅನುಭವಕ್ಕೆ ತಂದು ಕೊಡತಾನೆ. ಸ್ವರೂಪಕರ್ಮಗಳು ವ್ಯತ್ಯಾಸವಾದ್ದರಿಂದ, ಲಿಂಗಭಂಗಾನಂತರ ತ್ರಿವಿಧ ಜೀವರಿಗೂ, ತ್ರಿವಿಧ ಪ್ರಕಾರ ಭೋಗಗಳ ಕೊಡತಾನೆ.

**ಅಧಮ ಮಾನವನೋರ್ವ ಮಂತ್ರಿ ।**
**ಷಧಗಳನು ತಾನರಿತು ಪಾವಕ ।**
**ಉದಕಗಳ ಸಂಬಂಧವಿಲ್ಲದೆ ಇಪ್ಪನದರೊಳಗೆ ॥**

**ಪದುಮಜಾಂಡೋದರನು ಸರ್ವರ ।**
**ಹೃದಯದೊಳಗಿರೆ ಕಾಲಗುಣಕ ।**
**ರ್ಮದ ಕಲುಷ ಸಂಬಂಧವಾಗುವದೇ ನಿರಂಜನಗೆ ॥ ೩೦ ॥**

ಶ್ರೀ ಪರಮಾತ್ಮ ಸರ್ವತ್ರ ನಿರ್ಲಿಪ್ತನಾಗಿದ್ದಾನೆ ಎಂಬೋದಕ್ಕೆ ಸದೃಷ್ಟಾಂತವಾಗಿ ಹೇಳತಾರೆ.

ಓರ್ವ ಮಾನವನು– (ಅಧಮನಾದ) ಒಬ್ಬ ಮನುಷ್ಯನು, ಅಧಮ–ಅಧಮ ದೇವತೆಗಳಿಂದ, ವಿಷ್ಣುಭಕ್ತರಲ್ಲದ, ಅನ್ಯದೇವತಾತ್ಮಕವಾದ, ಮಂತ್ರ–ಕ್ಷುದ್ರ ಮಂತ್ರ ಗಳನ್ನು, ಔಷಧಿಗಳನು–ಮೂಲಿಕಾ ಸಂಬಂಧವಾದ ಔಷಧಗಳನ್ನು, ತಾನರಿತು– ಅದರ ಮರ್ಮಗಳನ್ನು ತಾನು ಅರಿತವನಾಗಿ, ಅದರ ಬಲದಿಂದ, ಅದರೊಳಗೆ–ತಾನು ಅರಿತು ಅದರೊಳಗೆ, ಪಾವಕ–ಅಗ್ನಿಸ್ಥಂಭ ಮಾಡತಕ್ಕದ್ದು ಒಂದು, ಉದಕ–ಜಲಸ್ಥಂಭ ಮಾಡತಕ್ಕದ್ದು ಒಂದು. ಅಂತು ಔಷಧಗಳು ಎರಡು ವಿಧ, ಮಂತ್ರಗಳಲ್ಲಿ ಎರಡು ವಿಧ ವಾದಗಳ, (ಅಗ್ನಿ, ಉದಕಗಳಲ್ಲಿ ಪ್ರವೇಶ ಮಾಡಿ), ಅವುಗಳ, ಸಂಬಂಧವಿಲ್ಲದೆ–ಅಗ್ನಿ ಯಿಂದ ಆಗತಕ್ಕ ದಾಹಕ ಸಂಬಂಧವು, ಉದಕದಿಂದ ಆಗತಕ್ಕ ಶೀತ ಸಂಬಂಧವು, ವಸ್ತ್ರಾದಿಗಳು ತೊಯ್ಯೋಣ ವೊದಲಾದ ವಿಕಾರಗಳಿಂದ ಆಗತಕ್ಕ ಬಾಧೆಗಳ ಸಂಬಂಧ ವಾಗದೆ, ಇಪ್ಪನು–ಅವುಗಳಲ್ಲಿ (ಅಗ್ನಿ, ಉದಕ) ಇರುವನು. ಪದುಮಜಾಂಡೋದರನು– ಅನೇಕ ಬ್ರಹ್ಮಾಂಡಗಳನ್ನು ಉದರದಲ್ಲಿಟ್ಟುಕೊಂಡಿರತಕ್ಕಂಥಾ ಶ್ರೀಹರಿ, ಸರ್ವರ ಹೃದಯ ದೊಳಗಿರೆ–ಸಮಸ್ತ ಪ್ರಾಣಿಗಳ ಚಿದ್ಹೃದಯ, ಸ್ಥೂಲದೇಹ ಹೃದಯ, ಈ ಉಭಯ ಸ್ಥಾನ ದಲ್ಲಿರೋಣದರಿಂದ, ಕಾಲ–ಆಯುಷ್ಕಾಲ ಪರಿಮಿತಿ, ಕರ್ಮ–ಜೀವರು ಭೋಗ ಮಾಡ ತಕ್ಕ ಕರ್ಮಫಲಗಳು, ಗುಣ–ಪ್ರಾಕೃತ ಗುಣತ್ರಯಗಳು, ತಜ್ಜನಿತ ವಿಷಯ ಕರ್ಮಗಳ (ಈ ಮೂವರಲ್ಲಿ), ಕಲುಷ–ದೋಷಗಳು, ನಿರಂಜನಗೆ–ಗುಣಪೂರ್ಣನಾದ ಶ್ರೀಪರ ಮಾತ್ಮಗೆ, ಸಂಬಂಧವಾಗುವದೆ–ಜೀವರ ದೋಷಗಳು ಸಂಬಂಧವಾಗೋದಾ ಅಂದರೆ ಸಂಬಂಧವಾಗೋದೇ ಇಲ್ಲ.

**ತಾ॥** ಅಲ್ಪಮನುಷ್ಯನು ಕ್ಷುದ್ರ ಮಂತ್ರ, ಕ್ಷುದ್ರ ಔಷಧಗಳ, ತಿಳಿದವನಾಗಿ, ಪ್ರತ್ಯಕ್ಷ ವಾಗಿ ಅಗ್ನಿ ಉದಕಗಳ ಪ್ರವೇಶ ಮಾಡಿ, ಅವುಗಳ ನೈಜ ಸ್ವಭಾವ ಗುಣಗಳಿಂದ ವಿಕಾರ ವನ್ನು ಹೊಂದದೇ ನಿರ್ಲಿಪ್ತನಾಗಿ ಹೊರಗೆ ಬರುವಾಗ್ಗೆ, ಇಂಥಾ ಅನೇಕ ಮಂತ್ರಗಳೇನು, ಔಷಧಗಳೇನು, ತತ್ವಾಭಿಮಾನಿ ದೇವತೆಗಳೇನು, ಇನ್ನೂ ಅನೇಕವಾದಂಥಾ ಸ್ಥಾವರ ಜಂಗಮ ಜೀವರುಗಳು, ತುಂಬಿದ ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿ ಮಾಡಿ ಅದರಲ್ಲಿದ್ದು, ಅದರದರ ಸಾಮರ್ಥ್ಯಗಳನ್ನು ತನ್ನ ಅಧೀನ ಮಾಡಿಕೊಂಡು ವ್ಯಕ್ತ ಮಾಡತಾ ತನ್ನ (ಶ್ರೀ ಪರಮಾತ್ಮನ ಉದರದಲ್ಲಿ ಧರಿಸಿದ ಜೀವರುಗಳ ಆಯುಃಪರಿಮಿತಿ, ಕರ್ಮ ಫಲಗಳು, ಪ್ರಾಕೃತ ಕರ್ಮ ಫಲಗಳು, ತಜ್ಜನಿತ ವಿಷಯ ಕರ್ಮಗಳಿಂದ ಹುಟ್ಟುವ ದೋಷಗಳಿಗೆ ಬಿಂಬನಾಗಿದ್ದರೂನೂ, ಪೂರ್ವೋಕ್ತ ಪ್ರಕಾರ, ಮಂತ್ರ ಔಷಧ ತಿಳಿದ ಮನುಷ್ಯನು ಅಗ್ನಿ

ಉಪಕಗಳಲ್ಲಿ ಸಂಬಂಧಪಡದೇ ಹ್ಯಾಂಗೆ ಇದ್ದಾನೋ ತದ್ವತ್ ಗುಣಪೂರ್ಣನಾದ ಶ್ರೀಪರಮಾತ್ಮಗೆ ಜೀವರ ದೋಷಗಳು ಸಂಬಂಧವಾಗೋದಿಲ್ಲ ಎಂತ ತಾತ್ಪರ್ಯ.

**ಒಂದು ಗುಣದೊಳನಂತ ಗುಣಗಳು ।**
**ಒಂದು ರೂಪದೊಳಿಹವು ಲೋಕಗ ।**
**ಳೊಂದು ರೂಪದಿ ಧರಿಸಿ ತದ್ಗತ ಪದಾರ್ಥದೊಳಹೊರಗೆ ॥**
**ಬಾಂದಳದವೊಲಿದ್ದು ಬಹು ಹೆಸ ।**
**ರಿಂದ ಕರೆಸುತ ಪೂರ್ಣಜ್ಞಾನಾ ।**
**ನಂದಮಯ ಪರಿಪರಿ ವಿಹಾರವ ಮಾಡಿ ಮಾಡಿಸುವ ॥ ೩೦ ॥**

ಶ್ರೀ ಪರಮಾತ್ಮನ ರೂಪ ಎಂಥಾದ್ದು ಎಂದರೆ ಹೇಳತಾರೆ.

ಒಂದು ಗುಣವೊಳಗೆ–ಶ್ರೀಪರಮಾತ್ಮನ ಅನಂತಾನಂತ ಅಪರಿಚ್ಛಿನ್ನ ಗುಣಗಳೊಳಗೆ ವಿದ್ಯಮಾನವಾದ ಒಂದು ಗುಣವೊಳಗೆ, ಅನಂತಗುಣಗಳು–ಅಪರಿಮಿತಗುಣಗಳು ಅಪರಿಚ್ಛಿನ್ನವಾಗಿ ಇರೋದಾಗಿ ಅದೆ. ದೃಷ್ಟಾಂತ : ಭೋಜನಮಾಡತಕ್ಕ ದ್ರವರೂಪಪದಾರ್ಥ ಒಂದು, ಅದರಲ್ಲಿ ಷಡ್ರಸಗಳು, ಧನಿಯಾ, ಬೇಳೆ ಮೊದಲಾದ ಅನೇಕ ದ್ರವ್ಯಗಳು ಸೇರಿ ಒಂದು ಸಾರು ಎನತಕ್ಕ ದ್ರವರೂಪ ಪದಾರ್ಥವಾಗುತ್ತದೆ. ಆ ಪದಾರ್ಥದಲ್ಲಿ ವಿದ್ಯಮಾನವಾದ ರಸೋಪೇತ ಅಖಂಡ ಗುಣ ಒಂದು. ತದ್ಗತ ಖಂಡಖಂಡ ಪದಾರ್ಥರಸಗಳ ಗುಣಗಳು ಅನೇಕ. ಏತಾದೃಶವಾದ ಅಖಂಡ ಒಂದು ಗುಣದೊಳಗೆ ಅನಂತಾನಂತ ಗುಣಗಳು ಇವೆ. ಈ ರೀತ್ಯಾ ಅಪರಿಚ್ಛಿನ್ನ ಗುಣಗಳು ಸ್ವಾಖ್ಯಗುಣಗಳು, ಒಂದುರೂಪದೊಳಿಹವು–ಪೂರ್ವೋಕ್ತಪ್ರಕಾರ ಒಂದುರೂಪವೊಳಗೆ ಅನಂತಾನಂತರೂಪಗಳು ಇರೋದಾಗಿ ಇದೆ. ದೃಷ್ಟಾಂತ : ಪದಾರ್ಥಕ್ಕೂ ಪದಾರ್ಥಗತ ಆಮ್ಲಾದಿರಸಕ್ಕೂ ಅವಿಯೋಗವು. ಪೂರ್ವೋಕ್ತ ದ್ರವರೂಪವಾದ ಪದಾರ್ಥ ಒಂದು. ತದ್ಗತ ಗುಣಸಾಂಕೇತ ರಸ ವಿಶೇಷಗಳು ಸೇರಿ ಒಂದು, ಎರಡು ಏಕತ್ರವಿದೆ. ದ್ರವರೂಪವಾದ ಒಂದು ಪದಾರ್ಥದಲ್ಲಿ ಅನೇಕ ಪದಾರ್ಥಗಳು ಸೇರಿ ಒಂದು ಪದಾರ್ಥವೆಂದು ಹೇಗೆ ಕರಿಸುವುದೋ, ತದ್ವತ್ ಒಂದು ರೂಪದಲ್ಲಿ ಅಪರಿಚ್ಛಿನ್ನ 'ವಿಲಕ್ಷಣವಾದ ಅನೇಕ ರೂಪಗಳು ಇರೋದಾಗಿ ಅದೆ. ಈ ದೃಷ್ಟಾಂತದಿಂದ ಒಂದು ಗುಣದಲ್ಲಿ ಅನಂತ ಗುಣಗಳು, ಒಂದು ರೂಪದಲ್ಲಿ ಅನಂತ ರೂಪಗಳು ಇರೋದಾಗಿ ಅದೆ. ಲೋಕಗಳ ಅಂಡಸಹಿತವಾದ ಹದಿನಾಲ್ಕು ಲೋಕಗಳ, ಒಂದು ರೂಪದಿ ಧರಿಸಿ–ಅನಂತಾನಂತ ರೂಪಗಳಲ್ಲಿ ಪ್ರತಿಯೊಂದು ರೂಪದಲ್ಲೂ ಧರಿಸಿದವನಾಗಿ, ತದ್ಗತ – ಧರಿಸಿದ ಲೋಕದಲ್ಲಿ ವಿದ್ಯಮಾನವಾದ ಪದಾರ್ಥವ ಸ್ಥಾವರ ಜಂಗಮಾದಿ ಪದಾರ್ಥಗಳ, ಒಳಹೊರಗೆ–ಒಳಗೂ ಮತ್ತು ಹೊರಗೂ, ಬಾಂದಳದವೊಲಿದ್ದು–ಆಕಾಶದೋಪಾದಿಯಲ್ಲಿ ಇದ್ದು ಎಂದರೇ ಆಕಾಶ ಎಂಬುದು ಘಟದ ಒಳಗೂ ಹೊರಗೂ, ಖರ್ಪರದಲ್ಲೂ, ಅಛಿದ್ರವಾಗಿ ಪೂರ್ಣವಾಗಿ ವ್ಯಾಪಿಸಿ ಇದ್ದಂತೆ, ವ್ಯಾಪ್ತನಾಗಿ ಆಕಾಶದೋಪಾದಿಯಲ್ಲಿ ನಿರ್ಲಿಪ್ತನಾಗಿ ಇದ್ದಾನೆಂತ ಅರ್ಥ. ಘಟಖರ್ಪರದಲ್ಲಿ ಆಕಾಶಕ್ಕೆ

ಅವಕಾಶವಿಲ್ಲವಲ್ಲ ಎಂದರೇ, ಆರ್ದ್ರ ಶುಷ್ಕದಲ್ಲಿ ಜಲವಿದ್ದಂತೆ ತಿಳಿಯಬೇಕು. ಈ ಪ್ರಕಾರ ಇದ್ದು, ಬಹು ಪೆಸರಿನಿಂದ ಕರೆಸುತ, ಅನೇಕ ಹೆಸರಿನಿಂದ ಕರೆಸುತ, ಅಂದರೆ "ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ" ಎಂಬ ವಚನ ಶ್ರೀ ಬ್ರಹ್ಮಸೂತ್ರಭಾಷ್ಯದಲ್ಲಿ ಉದಾಹೃತವಾದ್ದರಿಂದ ಆಯಾ ಅಧಿಷ್ಠಾನಗಳಲ್ಲಿದ್ದು, ಆ ನಾಮ ಗಳೇ ತನ್ನ ನಾಮದಿಂದ ಕರೆಸುತ, ಪೂರ್ಣಜ್ಞಾನಾನಂದಮಯ—ಆಯಾ ಅಧಿಷ್ಠಾನಗಳು ಅಪೂರ್ಣ, ಅಲ್ಪಾನಂದ ಉಳ್ಳದ್ದಾದರೂ, ತದ್ಗತನಾದ, ತಾನು ಪೂರ್ಣಾನಂದ ಜ್ಞಾನಮಯಸ್ವರೂಪನಾಗಿದ್ದು, ಪರಿಪರಿ ವಿಹಾರವ ಮಾಡಿ—ಅನೇಕ ವಿಧದಿಂದ ಇರತಕ್ಕ ಜೀವರ ಅಂತರ್ಗತನಾದ ಶ್ರೀ ಪರಮಾತ್ಮನು ಅನೇಕ ವಿಧವಾದ ಅವರವರ ಸ್ವರೂಪ ಸ್ವಭಾವವನನುಸರಿಸಿ ಅದರಂತೆ ಅವರವರ ಬಾಹ್ಯಾಂತರ ಇಂದ್ರಿಯಾದಿಗಳಲ್ಲಿ ಕರ್ಮ ಸಾಂಕೇತವಾದ ಆಟಗಳ ತಾನು ಆಡಿದವನಾಗಿ, ಮಾಡಿಸುವ—ಜೀವರ ಕಡೆಯಿಂದ ಮಾಡಿಸತಾನೆ.

**ತಾ||** ಭೋಜನಮಾಡತಕ್ಕ ಒಂದು ಪದಾರ್ಥದಲ್ಲಿ ಷಡ್ರಸಗಳು ಸೇರಿ ಒಂದು ದ್ರವಪದಾರ್ಥವಾಗಿ, ಒಂದು ಪದಾರ್ಥ ಎಂತ ಹೇಗೆ ಕರೆಸಿಕೊಳ್ಳುತ್ತದೋ, ಹಾಗೇವೇ ಶ್ರೀ ಪರಮಾತ್ಮನ ಅನಂತಾನಂತ, ಅಪರಿಚ್ಛಿನ್ನಗುಣಗಳೊಳಗೆ ಅಪರಿಮಿತ ಗುಣಗಳು, ಅಪರಿಚ್ಛಿನ್ನವಾಗಿಯೂ, ಒಂದು ರೂಪದೊಳಗೆ ಅನಂತಾನಂತರೂಪಗಳು ಪದಾರ್ಥಕ್ಕೂ ತದ್ಗತ ಆಮ್ಲಾದಿ ರಸಕ್ಕೂ ಹೇಗೆ ಅವಿಯೋಗವೋ, ಆ ಪ್ರಕಾರ ಒಂದು ರೂಪದಲ್ಲಿ ಅಪರಿಚ್ಛಿನ್ನ ವಿಲಕ್ಷಣವಾದ ಅನೇಕ ರೂಪಗಳು ಧರಿಸಿದವರಾಗಿ ಸ್ಥಾವರ ಜಂಗಮಾತ್ಮಕ ಪದಾರ್ಥಗಳ ಒಳಗೂ ಹೊರಗೂ, ಆಕಾಶದೋಪಾದಿಯಲ್ಲಿ ನಿರ್ಲಿಪ್ತನಾಗಿ ಇದ್ದು, ಆಯಾ ಪದಾರ್ಥಗಳ ನಾಮಗಳಾದ ತನ್ನಾಮಗಳಿಂದಲೇ ಕರೆಸುತಾ, ಆಯಾ ಅಧಿಷ್ಠಾನ ಗಳು ಅಪೂರ್ಣವು, ಅಲ್ಪಾನಂದಕರಗಳಾಗಿದ್ದರೂ ತಾನು ಪೂರ್ಣಾನಂದ ಜ್ಞಾನಮಯ ಸ್ವರೂಪನಾಗಿ ಅವರವರ ಸ್ವರೂಪ ಸ್ವಭಾವ ಕರ್ಮವನುಸರಿಸಿ ಕರ್ಮಸಾಂಕೇತವಾದ ಆಟಗಳು ತಾನು ಆಡಿ ಅವರಿಂದಲೂ ಆಡಿಸತಾನೆ ಎಂತ ತಾತ್ಪರ್ಯ.

**ಎಲ್ಲರೊಳು ತಾನಿಪ್ಪ ತನ್ನೊಳ** |
**ಗೆಲ್ಲರನು ಧರಿಸಿಹನು ಅಪ್ರತಿ** |
**ಮಲ್ಲ ಮನ್ಮಥಜನಕ ಜಗದಾದ್ಯಂತಮಧ್ಯಗಳ** ||
**ಬಲ್ಲ ಬಹುಗುಣಭರಿತ ದಾನವ** |
**ದಲ್ಲಣ ಜಗನ್ನಾಥ ವಿಠ್ಠಲ** |
**ಸೊಲ್ಲ ಲಾಲಿಸಿ ಸ್ತಂಭದಿಂದಲಿ ಬಂದ ಭಕುತನಿಗೆ** || ೩೧ ||

ಶ್ರೀ ಪರಮಾತ್ಮನ ಮಹಿಮೆಯನ್ನ ಹೇಳತಾರೆ.

ಎಲ್ಲರೊಳು ತಾನಿಪ್ಪ—ಶ್ರೀ ಪರಮಾತ್ಮನಾದ ತಾನು ರಮಾಸಮೇತನಾಗಿ ಸಮಸ್ತ ಪ್ರಾಣಿಗಳ ಸ್ವರೂಪದಲ್ಲೇನು, ಹಾಗೆ ಸ್ಥೂಲದೇಹದಲ್ಲಿ ತತ್ವದೇವತಾಸಮೇತನಾಗಿರುವನು.

ತನ್ನೊಳಗೆಲ್ಲರನು ಧರಿಸಿಹನು–ಪ್ರಳಯದಲ್ಲಿ ಮುಕ್ತಾಮುಕ್ತ ಸಕಲ ಪ್ರಾಣಿಗಳ ತನ್ನ ಉದರದಲ್ಲಿ ಧರಿಸಿದವನಾಗಿ, ಲಕ್ಷ್ಮ್ಯಾತ್ಮಕ ಉದಕದಲ್ಲಿ ಭೂದೇವಿಯರೆಂಬ ವಟಪತ್ರದಲ್ಲಿ, ದುರ್ಗಾದೇವಿಯರೆಂಬ ಅಂಧಕಾರದಲ್ಲಿ, ಸೃಷ್ಟಿಕಾಲ ಪ್ರಾಪ್ತವಾಗೋವರಿಗೂ ಮಲಗಿರ ತಾನೆ. ಆಗ್ಗೆ ರಮಾಸಮೇತನಾಗಿ ತಾನೊಬ್ಬನೇ ಹೊರತು ಇತರರಾದವರು ಯಾರೂ ಇಲ್ಲ. ಈ ಪ್ರಕಾರ, ಅಪ್ರತಿಮಲ್ಲ–ರಮಾದೇವಿಯರು ಸಮಳಾದ ಕಾಲಕ್ಕೂ ಗುಣತಃ ಅಸಮಳಾದ ಪ್ರಯುಕ್ತ ಇಂಥಾ ರಮಾದೇವಿಯರಿಗೂ ಅಸದೃಶನಾಗಿ, ಸ್ವಸಾಮರ್ಥ್ಯದಿಂದ ಯುಕ್ತನಾದವ. (ಇನ್ನು) ಮನ್ಮಥಜನಕ–ರುದ್ರದೇವರಿಂದ ಭಸ್ಮ ನಾದ ಅನಂಗನಾದ ಮನ್ಮಥನ, ಕೃಷ್ಣಾವತಾರದಲ್ಲಿ ಸಾಂಬನಾಗಿ ಪುತ್ರತ್ವೇನ ಪಡೆದು, ಮನ್ಮಥನಿಗೆ ತಂದೆಯೆಂತ ಕರೆಸಿದವ. ಲಾವಣ್ಯಾದಿಗಳಿಗೆ ಮನ್ಮಥಗೆ ಜನಕಸ್ಥಾನಾಪನ್ನ ನಾದವ. ಲಾವಣ್ಯ ಉಂಟುಮಾಡಿದವ, ಜಗದ–ಅನೇಕ ಬ್ರಹ್ಮಾಂಡಗಳ, ಜೀವರ– ಆದ್ಯಂತಮಧ್ಯಗಳ ಬಲ್ಲ–ಸೃಷ್ಟ್ಯಾದಿ ಅಷ್ಟಕರ್ತೃತ್ವದ ಆದ್ಯಂತಮಧ್ಯಗಳ ತಿಳಿದವ, ಬಹು ಗುಣಭರಿತ–ಅಪರಿಚ್ಛಿನ್ನವಾದ, ಬಹಳವಾದ ಕಲ್ಯಾಣಗುಣಗಳಿಂದ ಪೂರ್ಣನಾದವ, ಪೂರ್ವೋಕ್ತಪ್ರಕಾರ ದೃಷ್ಟಾಂತ. ಇನ್ನೊಂದು ಪ್ರಕಾರ ದೃಷ್ಟಾಂತ : ಒಂದು ಬೀಜ ವನ್ನು ವೃಕ್ಷವಾಗಿ ಮಾಡಿದರೆ ಅದರಿಂದ ಅಸಂಖ್ಯಾತವಾದ ಬೀಜಗಳು ಆದಂತೆ, ಆ ವೃಕ್ಷದ ಬೀಜಗಳ ಗುಣಗಳು ಹೇಗೆ ಅನವಸ್ಥವೋ ಅದರಂತೆ ಒಂದರೊಳಗೆ ಒಂದು, ಅದರೊಳಗೆ ಅನಂತಾನಂತ ರೂಪಗಳು, ಗುಣಗಳು ಇದ್ದಂತೆ, ಈ ಪ್ರಕಾರ ಬಹುರೂಪಗಳು ಗುಣಗಳು ಭರಿತನಾಗಿ ಇರೋವನಾಗಿದಾನೆ. ದಾನವದಲ್ಲಣ–ಭಕ್ತರ ಕಾರ್ಯಗಳಿಗೆ ವಿರೋಧಿ ಗಳಾದ ದೈತ್ಯರ ಸಂಹಾರಮಾಡಿದವ. ಜಗನ್ನಾಥವಿಠ್ಠಲ–ಸರ್ವಜಗತ್ತಿಗೂ ಸ್ವಾಮಿ ಯಾದ, ವಿಠ್ಠಲರೂಪಿಯಾದ ಶ್ರೀ ನರಸಿಂಹದೇವರು, ಸೊಲ್ಲ ಲಾಲಿಸಿ–ಭಕ್ತನಾದ ಪ್ರಹ್ಲಾದನ ಪ್ರಾರ್ಥನೆ ಕೇಳಿದವನಾಗಿ, ಕಂಬದಿಂದಲಿ ಬಂದ–ಸಭಾದಲ್ಲಿದ್ದ ಕಂಬವನ್ನು ಭೇದಿಸಿಕೊಂಡು ಬರೋವನಾಗಿ, ಭಕುತನಿಗೆ–ತನ್ನ ಭಕ್ತನಾದ ಪ್ರಹ್ಲಾದನ್ನ ಉದ್ಧಾರ ಮಾಡೋವನಾಗಿದ್ದಾನೆ. ಶ್ರೀ ನರಸಿಂಹದೇವರ ದೃಷ್ಟಾಂತ ಯಾಕೆ ಹೇಳಬೇಕೆಂದರೆ ಪ್ರಮಾಣ :– "ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ । ಅದೃಶ್ಯತಾತ್ಯದ್ಭುತರೂಪಮುದ್ವಹರ್ ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಂ ॥" ಎಂತ ಭಾಗವತ ಸಪ್ತಮಸ್ಕಂಧೋಕ್ತಿರೀತ್ಯಾ ವ್ಯಾಪ್ತತ್ವ ಶ್ರೀಹರಿಗೆ ಹೇಳಿ ಶ್ರೀ ನೃಸಿಂಹದೇವರ ದೃಷ್ಟಾಂತ ಹೇಳೋವರಾಗಿದ್ದಾರೆ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ವ್ಯಾಪ್ತಿಸಂಧಿವ್ಯಾಖ್ಯಾನಂ ಸಂಪೂರ್ಣಂ**

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ನಾಲ್ಕನೆಯ ಸಂಧಿ

## ಭೋಜನರಸವಿಭಾಗ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣಾದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ವನಜಜಾಂಡದೊಳುಳ್ಳಖಿಳ ಚೇ |**
**ತನರು ಭುಂಜಿಪ ಚತುರವಿಧಭೋ |**
**ಜನಪದಾರ್ಥದಿ ಚತುರವಿಧ ರಸರೂಪ ತಾನಾಗಿ ||**
**ಮನಕೆ ಬಂದುದನುಂಡುಣಿಸಿ ಸಂ |**
**ಹನನಕುಪಚಯಕರಣಕಾನಂ |**
**ದನಿಮಿಷರಿಗಾತ್ಮಪ್ರದರ್ಶನ ಸುಖವನೀವಹರಿ || ೧ ||**

**ಉಪೋದ್ಘಾತ :**– ತ್ರಿವಿಧ ಜೀವರ ಲಕ್ಷಣ, ಶ್ರೀ ಪರಮಾತ್ಮಗೂ, ಜೀವರಿಗೂ ಭೇದಗಳ ಹೇಳಿದವರಾಗಿ ಈ ಸಂಧಿಯಲ್ಲಿ ಸ್ಥೂಲದೇಹಗತ ಬಿಂಬರೂಪಿ ಪರಮಾತ್ಮ ಚರಾಚರ ಜೀವರು ಭೋಜನ ಮಾಡುವ ಸ್ಥೂಲ ಪದಾರ್ಥಗಳ ರಸಾನುಸಂಧಾನ ಕ್ರಮ, ಉಪಾಸನಾನುಸಂಧಾನ ಕ್ರಮವನ್ನ ಹೇಳಥಾರೆ.

**ಟೀಕಾ :**

ವನಜದಾಂಡದೊಳು – ಉದಕದಲ್ಲಿ ಉತ್ಪನ್ನವಾದ ಕಮಲದಲ್ಲಿ ಚತುರ್ಮುಖ ಬ್ರಹ್ಮನಿಂದ ಅಭಿಮನ್ಯಮಾನವಾದ ಅಂಡಾಕಾರವಾದ ಬ್ರಹ್ಮಾಂಡ ಸುವರ್ಣಾತ್ಮಕ ವಾದದ್ದು. ಹದಿನಾಲ್ಕು ಲೋಕಾತ್ಮಕ ಹದಿನಾಲ್ಕು ದಳಯುಕ್ತವಾದದ್ದು. ಇದು ಶ್ರೀ ಪದ್ಮನಾಭದೇವರ ನಾಭಿ ಕಮಲದಲ್ಲಿ ಉತ್ಪನ್ನವಾಗಿ ಅದರಲ್ಲಿ ಸಂಸೃಷ್ಟಿ ದೇಹದಿಂದ ಉತ್ಪನ್ನವಾಗಿ ಚತುರ್ಮುಖಗಳಾಗಿರುವ ಬ್ರಹ್ಮಾಭಿಮನ್ಯಮಾನವಾದ ಬ್ರಹ್ಮಾಂಡ ದೊಳು, ಉಳ್ಳ–ಸಂಸೃಷ್ಟ ದೇಹಗಳಿಂದ ಯುಕ್ತರಾಗಿ ಇರತಕ್ಕ, ಅಖಿಲ ಚೇತನರು– ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರು (ಚೇತನ ಶಬ್ದ ಸ್ಥಾವರ ಜೀವರ ವ್ಯಾವರ್ತನ

ಮಾಡತದೆ. "ಭುಂಜಿಪ" ಎನತಕ್ಕ ಪದ ಮುಂದೆ ಇರೋಣದರಿಂದ ಸ್ಥಾವರ ಜೀವರು ಉದಕವನ್ನು ಭೋಜನ ಮಾಡತವೆ. ಆದ್ದರಿಂದ ಉಭಯ ಜೀವರು ಗ್ರಾಹ್ಯ. ವೃಕ್ಷಾದಿಗಳಿಗೆ ಸ್ವಪ್ನಾವಸ್ಥಾ ಮಾತ್ರವೇ ಆದ್ದರಿಂದ ಚೇತನರು ದಿಕ್ಪ್ರದರ್ಶನವೂ) ಭುಂಜಿಪ–ಅವರವರ ಯೋಗ್ಯತಾನುಸಾರ ಶ್ರೀ ಪರಮಾತ್ಮನಿಂದ ನಿಯಮಿತವಾದ ಭೋಜನ ಮಾಡತಕ್ಕ, ಚತುರವಿಧ ಭೋಜನ ಪದಾರ್ಥದಿ–ನಾಲ್ಕು ವಿಧ ಪದಾರ್ಥಗಳೊಳು (ಅದು ದಾವದೆಂದರೆ :– ೧. ಪೃಥಕ್ ತಂಡುಲಾದಿ ದ್ರವ್ಯಗಳು, ಇನ್ನೂ ಕಠಿಣಗಳಾದ ಸಾರ ದ್ರವ್ಯಗಳ ದಂತಗಳಿಂದ ಅಗಿದು ತಿಂಬೋ ಪದಾರ್ಥಗಳಿಗೆ ಖಾದ್ಯ ಎಂತ ನಾಮ. ೨. ದ್ರವ್ಯರೂಪವಾದ ರಸಾಯನಾದಿ ಪದಾರ್ಥಗಳು, ಪಾನಕದಂತೆ ಕುಡಿಯುವ ಪದಾರ್ಥಗಳಿಗೆ ಪೇಹ್ಯ ಎಂತ ನಾಮ. ೩. ಅಗ್ನಿ, ಉದಕಗಳಿಂದ ಪಕ್ವವಾಗಿ ಮೆತ್ತಗೆ ಪಚನವಾಗಿದ್ದರನ್ನ ನಾಲಿಗೆಯಿಂದ ಹೊರಳಿಸಿ ತಿಂಬುವ ಪದಾರ್ಥಗಳಿಗೆ ಚೋಷ್ಯ ಎಂತ ನಾಮ. ೪. ನಾಲಿಗೆಗೆ ಸ್ಪರ್ಶ ಮಾಡಿ ಚಪ್ಪರಿಸಿ ರಸ ತಿಳಕೊಂಬೋ ಚಟ್ನಿ ಮೊದಲಾದ ಹಸಿ ಪದಾರ್ಥಗಳಿಗೆ ಲೇಹ್ಯ ಎಂತ ನಾಮ). ಈ ನಾಲ್ಕು ಸುಚೇತನ ಜೀವರು ಭುಂಜಿಸತಕ್ಕ ಪದಾರ್ಥಗಳು. ವೃಕ್ಷಾದಿಗಳಲ್ಲಿ ಪಾನ ಮಾತ್ರವೇ. ಈ ಪ್ರಕಾರ ಚತುರ್ವಿಧದಿಂದ ಇರತಕ್ಕ, ಭೋಜನಪದಾರ್ಥದಿ–ಭೋಜನಕ್ಕೆ ಯೋಗ್ಯವಾದ ಜಡರೂಪವಾದ ಏತಾದೃಶ ಪದಾರ್ಥಗಳಲ್ಲಿ ಒಂದು ಒಂದರಲಿ, ಒಂದೊಂದು ರುಚಿ ಮೇರೆಗೆ ನಾಲ್ಕು ರುಚಿಗಳು ಅವೆ. ಈ ರುಚಿ ಎಂಬುದು ಷಡ್ರಸಗಳಲ್ಲಿ ಸೇರದು. ಆದರೂ ಎರಡು ಮೂರು ರಸಗಳು ಕಲೆತು ಒಂದು ಅಖಂಡ ಪದಾರ್ಥವಾಗಿ ತದ್ಗತ ರಸ ರುಚಿ ಎಂತ ಎನಿಸತದೆ. ಇಂಥಾ ರಸವೆಂತ ಕೇವಲ ನಿರ್ಧಾರ ಶಕ್ಯವಲ್ಲದ ರಸಕ್ಕೆ 'ರುಚಿ' ಎಂತ ನಾಮ. ಇಂಥಾ ರಸಗಳಲ್ಲಿ, ಚತುರವಿಧ ರಸರೂಪನಾಗಿ–ಆಮ್ಲಾದಿ ಆರು ವಿಧ ಜಡ ರಸಗಳಲ್ಲಿ ಕುಶಲನಾದ ಶ್ರೀ ಪರಮಾತ್ಮ ರುಚಿಸಾಂಕೇತವಾದ ಪೂರ್ವೋಕ್ತ ನಾಲ್ಕು ರಸ ತದನ್ಯ ಈ ಆಮ್ಲಾದಿ ಆರು ರಸಗಳು ಹ್ಯಾಂಗೆ ಅದೋ ಹಾಂಗೆ ತದಾಕಾರದಿಂದ ರಸಾಖ್ಯ ರೂಪಗಳ ಧರಿಸಿ ರಸಾಕಾರ ತಾನೇ ಆಗಿ ಅಂತರ್ಗತನಾಗಿ ಇದ್ದಾನೆ. ಚತುರವಿಧ ರಸ ಯಾಕೆ ಹೇಳಿದರೆಂದರೇ ಎಪ್ಪತ್ತೆರಡು ಸಾವಿರ (೭೨೦೦೦) ರಸವಿಭಾಗ ಮುಂದೆ ಹೇಳತಾರೆ. ಆ ರಸಗಳು ಎಂಥಾದ್ದು ಎಂದರೇ ದಿಕ್ಪ್ರದರ್ಶನ ಮಾಡಿದರು. ಈ ಪ್ರಕಾರ ರಸಯುಕ್ತವಾದ ಪದಾರ್ಥಗಳ, ಮನಕೆ–ದೇಹಾಂತರ್ಗತನಾದ ಬಿಂಬರೂಪಿಯಾದ ಶ್ರೀಹರಿ ತನ್ನ ಮನಸ್ಸಿಗೆ, ಬಂದುದನ–ದಾವ ಪದಾರ್ಥವಾದರೆ ದೇಹಧಾರಿಗಳಿಗೆ ಭೋಜನಮಾಡಿಸಬೇಕೆಂದು ಮನಸ್ಸು ಬರತದೋ ಆ ಬಂದ ಪದಾರ್ಥವನ್ನು, ಉಂಡು–ಪದಾರ್ಥಗತ ತನ್ನ ಸ್ವರೂಪಭೂತ ರಸ, ದೇಹಗತ ದೇಹಾಕಾರವಾದ ತನ್ನ ಪುರುಷರೂಪದಿಂದ ಉಂಡು (ತದನಂತರ ಜೀವನ ದ್ವಾರಾ, ದೇವತೆಗಳ ದ್ವಾರಾ), ಉಣಿಸಿ–ದೇಹಕ್ಕೆ ಉಣಿಸಿ (ಆ ಉಣಿಸಿದ ಪದಾರ್ಥವಿಭಾಗ ಹ್ಯಾಂಗೆಂದರೆ), ಸಂಹನನಕೆ–ಜಡರಸ ಜಡದೇಹಕ್ಕೆ, ಉಪಚಯ–ಉಪಚಯ ಮಾಡಿ (ಉಪಚಯ ಅಂದರೆ ಚಣಕಾದಿಗಳು ಉದಕದಲ್ಲಿ ನೆನೆ ಹಾಕಿದರೆ ಉದಕಕಾರಣದಿಂದ ಪದಾರ್ಥ ತೊಯಿದು ಉಬ್ಬುತ್ತದೆ. ಇದಕ್ಕೆ ಉಪಚಯ ಎಂತ

ನಾಮ) ಕರಣಕಾನಂದ–ದೇಹದಲಿ ಪ್ರಕಾಶತೋ ವ್ಯಾಪ್ತನಾದ ಜೀವನ ಇಂದ್ರಿಯಗಳಿಗೆ ತನ್ನ ದೇಹಕ್ಕೆ ಉಪಚಯವಾದದ್ದರನ್ನ ನೋಡಿ ಆನಂದ (ಇವಗೆ ಸ್ವಾಖ್ಯರಸವಿಲ್ಲವಾದ್ದರಿಂದ ನೋಡಿ ಸಂತೋಷಪಡ್ತೋಣವೇ ಜೀವಗೆ ಸ್ವಾಖ್ಯ), ಅನಿಮಿಷರಿಗೆ–ದೇಹಾಕಾರರಾದ ತತ್ವದೇವತೆಗಳಿಗೆ, ಆತ್ಮಪ್ರದರ್ಶನ–ಅವರೂನೂ ತಮ್ಮ ತಮ್ಮ ಸ್ಥೂಲದೇಹದಿಂದಲೇ ಅಧಿಷ್ಠಾನಗತರಾಗಿ ಇರುತ್ತಾರಾದ್ದರಿಂದ ರಸಗತ ರಸಾಖ್ಯ ದೇಹಕ್ಕೂ ದೇಹಗತ ದೇಹಾಕಾರವಾದ, ವ್ಯಾಪ್ತವಾದ ದೇಹಕ್ಕೂ ಪ್ರಕರ್ಷೇಣ ದರ್ಶನ ಮಾಡಿಸಿ ಅವರವರಲ್ಲಿ ಐಕ್ಯ ಐದಿಸಿ ಇಂಥಾ ಆತ್ಮಪ್ರದರ್ಶನವಾದ, ಸುಖವನೀವ ಹರೀ–ಶ್ರೀಬಿಂಬರೂಪನಾದ ಪರಮಾತ್ಮ ಸುಖವನ್ನ ಕೊಡತಾನೆ.

**ತಾ||** ಶ್ರೀ ಪರಮಾತ್ಮ ತನ್ನ ಸ್ವಾಖ್ಯರಸವೆಂಬ ಭಗವದ್ರೂಪವನ್ನ ಬಿಂಬರೂಪವಾದ ಭಗವದ್ರೂಪದಲ್ಲಿ ಲಯ ಐದಿಸಿ ರಮಾಬ್ರಹ್ಮಾದಿಗಳ ಭುಕ್ತರಸ ಅವರ ದ್ವಾರಾ ಅವರಿಗೆ ಭೋಜನ ಮಾಡಿಸಿ 'ನಾನು ಭೋಜನ ಮಾಡಿದೆ'ನೆಂಬ ಜ್ಞಾನ ದ್ವಾರಾ ಜೀವೇಂದ್ರಿಯಗಳಿಗೆ ಸಂತೋಷಪಡಿಸಿ ಜಡರಸ ದೇಹಕ್ಕೆ ಉಪಚಯ ಮಾಡತಾನೆ. ಜಡವಾದ ಶುಭಾಶುಭರಸ ಪರಮಾತ್ಮ ಸ್ವೀಕರಿಸೋದಿಲ್ಲ ಎಂತ ತಾತ್ಪರ್ಯ.

**ವಿಶೇಷಾರ್ಥ** :– "ಸ್ವರೂಪೇಣೈವ ಶಕ್ತೋsಪಿ ಜೀವದೇಹಸ್ಥಿತೋ ಹರಿಃ| ಭುಂಕ್ತೇ ತತ್ತದ್ಗುಣಾನ್ ವಿಷ್ಣುರ್ನೈವ ದೋಷಾನ್ ಕಥಂಚನ ||" ಎಂಬಂಥಾ ಬೃಹದ್ಭಾಷ್ಯಾನುಸಾರ ಜೀವರು ಉಣತಕ್ಕಂಥಾ ಮೇಲೆ ಹೇಳಿದ ಚತುರ್ವಿಧ ರಸರೂಪಗಳು ಶ್ರೀ ಪರಮಾತ್ಮ ಉಂಡು ಜೀವರಿಗೆ ಉಣಸತಾನೆಂದು ಹೇಳತಾರೆ. ಮತ್ತು "ಚತುರ್ಧಾ ಸರ್ವಭೋಕ್ತಾರಂ" ಎಂಬ ಮಾಂಡೂಕ್ಯಭಾಷ್ಯಾನುಸಾರ ನೇತ್ರದಲ್ಲಿ ವಿಶ್ವನಾಗಿ ನಿಂತು, ಜಾಗ್ರತಿ ಸಂಬಂಧ ಸ್ಥೂಲರಸವು, ಕಂಠದಲ್ಲಿ ತೈಜಸನಾಗಿ ನಿಂತು, ಸ್ವಪ್ನಸಂಬಂಧ ಪ್ರವಿವಿಕ್ತರಸವು, ಹೃದಯದಲ್ಲಿ ಪ್ರಾಜ್ಞನಾಗಿ ನಿಂತು ಸೃಷ್ಟಿಸಿದ ಅನಿತ್ಯ ಆನಂದರಸವು, "ವಿಷ್ಣುಸ್ತು ತುರ್ಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ" ಎಂಬೋ ಛಾಂದೋಗ್ಯಭಾಷ್ಯಾನುಸಾರ ಬ್ರಹ್ಮರಂಧ್ರಸ್ಥಾನದಲ್ಲಿ ತುರ್ಯನಾಮಕನಾಗಿ ನಿಂತು ಸಾತ್ವಿಕಜೀವಸಂಬಂಧಸ್ವರೂಪಭೂತ ಆನಂದರಸವು ಏವಂ ರೀತ್ಯಾ ಚತುರ್ವಿಧ ರಸಗಳೂನೂ, ಚತುರ್ವಿಧರೂಪನಾಗಿ ಉಂಡುಣಿಸುವನೆಂತಲೂ ಹೇಳತದೆ. ಇದೇ ವಿಷಯದಲ್ಲಿ ಮಂಡೂಕಭಾಷ್ಯ ವಿವರಣವಾಕ್ಯ :– ಚತುರ್ಧೇತಿ ವಿಶ್ವಾದಿರೂಪೇಣ ಚತುರ್ಧಾ ನೇತ್ರಾದಿಸ್ಥಾನೇಷು ಸ್ಥಿತ್ವಾ ಸರ್ವವಿಷಯಭೋಕ್ತಾರಮಿತ್ಯರ್ಥಃ| ವಕ್ಷ್ಯತೇ ಚೈತತ್ ಸ್ಥೂಲಭುಕ್ ಪ್ರವಿವಿಕ್ತಭುಗಾನಂದ ಭುಗಿತಿ | ನನು ತುರ್ಯಸ್ಯ ಭೋಗಾನುಕ್ತೇಶ್ಚತುರ್ಧಾ ಸರ್ವಭೋಕ್ತಾರಮಿತಿ ಕಥಮುಕ್ತಮಿತಿ ಚೇತ್ ಆನಂದಾನುಭುಗಿತ್ಯಸ್ಯ ತುರ್ಯೇsಪಿ ಗ್ರಾಹ್ಯತ್ವಾದಿತ್ಯಾಶಯಾತ್" ಎಂತ ಅದೆ. ಇದಲ್ಲದೆ "ಸೃಜತ್ಯನಿತ್ಯಸೌಖ್ಯಂ ತು ಸ್ವಸಂಗಾತ್ತಾಮಸೇಷ್ವಜಃ| ಸುಪ್ತಿಕಾಲೇಷು ಭಗವಾನ್ ತತ್ಸುಖಂ ಪ್ರಾಕೃತಂ ಸ್ಮೃತಂ||" ಎಂತ ಗರುಡಪುರಾಣೋಕ್ತಿ ರೀತಿಯಾಗಿ ರಾಜಸತಾಮಸರಿಗೆ ಸೃಷ್ಟಿಸಿ ತೋರಿಸಿದಂಥಾ ಪ್ರಾಕೃತಾನಂದರಸ ಪ್ರಾಜ್ಞ ಸ್ವೀಕರಿಸುತ್ತಾನೆಂತಲೂ, ಸಾತ್ವಿಕ ಜೀವರ ಸ್ವರೂಪಭೂತ

ಆನಂದರಸ ತುರ್ಯ ಸ್ವೀಕರಿಸುತ್ತಾನೆಂತಲೂ, ಮಂಡೂಕಭಾಷ್ಯದ ಭಾವವನ್ನು ಶ್ರೀ ಪುರಂದರದಾಸರಾಜರು, ಅವರು ಮಾಡಿರುವ ಸುಳಾದಿಯಲ್ಲಿ "ನಿತ್ಯಾನಿತ್ಯವೆಂದು ಆನಂದ ದ್ವಿವಿಧಾವೈಯಾ ಚಿತ್ತದಿ ಕೇಳೋ ಮನುಜಾ ಈ ರಹಸ್ಯವ। ಸುಪ್ತಿಲಿ ದ್ವಿವಿಧ (ರಾಜಸ ತಾಮಸರಿಗೆ) ಸೃಷ್ಟಿಸಿ ತೋರಿಸಿದ ಅನಿತ್ಯಸುಖವನ್ನು ಪ್ರಾಜ್ಞನೇ ಸ್ವೀಕರಿಪ, ಸತ್ಯ ಜೀವ ಸ್ವರೂಪಭೂತ ಸುಖ ನಿತ್ಯದಿ ಸ್ವೀಕರಿಪ ತುರ್ಯ ದೇವ ಭೃತ್ಯವತ್ಸಲ ಶ್ರೀ ಪುರಂದರ ವಿಠಲನು ಆಪ್ತರ ಪಾಲಿಪನು ತಿಳಿಯಲು ಮುದದಿಂದ" ಈ ಪ್ರಕಾರ ಹೇಳಿದ್ದಾರಾದ ಪ್ರಯುಕ್ತ ಭಕ್ತಾಗ್ರೇಸರರು ಪರಮಾಂತರ್ಯಾರ್ಥ ಉಪಾಸನ ಮಾಡಬೇಕೆಂತ ದಾಸ ರಾಯರ ಹೃದಯವಾಗಿದೆ ಎಂತ ತಾತ್ಪರ್ಯ.

**ನೀಡದಂದದಲಿಪ್ಪ ಲಿಂಗಕೆ।**
**ಷೋಡಶಾತ್ಮಕ ರಸವಿಭಾಗವ।**
**ಮಾಡಿ ಷೋಡಶ ಕಲೆಗಳಿಗೆ ಉಪಚಯಗಳನೆ ಕೊಡುತ।**
**ಕ್ರೋಡ ಎಪ್ಪತ್ತೆರಡು ಸಾವಿರ।**
**ನಾಡಿಗತ ದೇವತೆಗಳೊಳಗಿ।**
**ದ್ದಾಡುತಾನಂದಾತ್ಮ ಚರಿಸುವ ಲೋಕದೊಳು ತಾನು ॥ ೨ ॥**

ಜಡಸ್ಥ ರಸಕ್ಕೆ ಉಪಚಯವು ಅದಕ್ಕಾಗಿ ರಸವಿಭಾಗಗಳ ಹೇಳತಾರೆ.

ನೀಡದಂದದಲಿಪ್ಪ–ಗೂಡಿನೋಪಾದಿಯಲ್ಲಿ ಇರತಕ್ಕ ಎಂದರೇ ಜೀವನ ಅನಾದಿ ಲಿಂಗೋಪಾದಾನದಿಂದ ಸೂಕ್ಷ್ಮಸೃಷ್ಟಿಯಲ್ಲಿ ಪರಿಣಮಿಸಿದ ಅನಿರುದ್ಧಶರೀರಸಹಿತವಾಗಿ ಜೀವ ಆವಾಸನಾಗಿ ಇರುವ ಮೂಲ ಜಡಪ್ರಕೃತಿ ಉಪಾದಾನದಿಂದ ನಿರ್ಮಿತವಾದ ಗೂಡುಸದೃಶವಾದ ಸ್ಥೂಲದೇಹವು, ಲಿಂಗಕೆ–ಅನಾದಿಲಿಂಗವೆಂದು ತಾತ್ಪರ್ಯವಲ್ಲ. ಪ್ರಕೃತ ಪ್ರಸಕ್ತಿ ಅನಾದಿಲಿಂಗದೇಹಕ್ಕಲ್ಲ. ಭೋಜನಮಜ್ಜನಾದಿಗಳು ಮಾಡತಕ್ಕ ದೇಹದ ಪ್ರಸಕ್ತಿ. ಸ್ಥೂಲದೇಹವೆಂದು ತಾತ್ಪರ್ಯ ಮತ್ತು ಲಿಂಗ ಎಂದರೆ ಗುರ್ತು. ಮನುಷ್ಯ ಎಂತಲೂ, ಪಶು ಎಂತಲೂ ಗುರ್ತು ತೋರಿಸಿಕೊಡತಕ್ಕದ್ದು ಸ್ಥೂಲದೇಹ ವಾದ ಪ್ರಯುಕ್ತ ಲಿಂಗಪದ ಸ್ಥೂಲದೇಹಕ್ಕೆ ಸಾಂಕೇತವು. ಉಪಚಯಾಪಚಯಗಳಿಂದ ವೃದ್ಧಿಹ್ರಾಸಾದಿಗಳು ಕಾಣತಕ್ಕದ್ದು ಸ್ಥೂಲದೇಹಕ್ಕೇ ಹೊರತು ಅನಾದಿಲಿಂಗಕ್ಕಲ್ಲ. ಅತ ಏವ ಇಂಥಾ ಸ್ಥೂಲಶರೀರಕ್ಕೆ, ಷೋಡಶಾತ್ಮಕ ರಸವಿಭಾಗ ಮಾಡಿ–ಷೋಡಶ–ಹದಿನಾರು ಸಂಖ್ಯಾಕವಾದ, ಆತ್ಮಕ–ಷೋಡಶಕಳೆಗಳು ಯದಾತ್ಮಕವೋ ತದಾತ್ಮಕ, ರಸ– ಭೋಜನಮಾಡತಕ್ಕ ಪಂಚಭೂತಾತ್ಮಕ ದ್ರವ್ಯಗತ ಸಂಸೃಷ್ಟರಸಗಳ, ವಿಭಾಗವ ಮಾಡಿ– ಅದದಕ್ಕೆ ಸೇರತಕ್ಕ ರಸಗಳ ಅಧಿಕಾರಿ ಭೋಜನಮಾಡಿದ ನಂತರ ಪ್ರತ್ಯೇಕ ಪ್ರತ್ಯೇಕ ಮಾಡಿ, ಷೋಡಶಕಳೆಗಳಿಗೆ "ಕಳಾಶ್ಚ ಪಂಚಭೂತಾನಿ ಜ್ಞಾನಕರ್ಮೇಂದ್ರಿಯಾಣಿ ಚ। ಪಂಚ ಪಂಚ ಮನಶ್ಚೇತಿ ಷೋಡಶೋಕ್ತಾ ಮಹರ್ಷಿಭಿಃ ॥" ಇತಿ ಭಾಗವತ ಪ್ರಥಮ ಸ್ಕಂಧ ವಿಜಯಧ್ವಜೀಯ ವ್ಯಾಖ್ಯಾನ (ಹದಿನಾರು ಕಳೆಗಳು: ಪಂಚ ಜ್ಞಾನೇಂದ್ರಿಯಗಳು,

ಪಂಚ ಕರ್ಮೇಂದ್ರಿಯಗಳು, ಪಂಚಭೂತಗಳು, ಮತ್ತು ಮನಸ್ಸು, ಅಂತು (೧೬) ಹದಿನಾರು). ಇದರಲ್ಲಿ ಪಂಚಭೂತಗಳ ಪ್ರಾಚುರ್ಯವಿಶೇಷಗಳಿಗೆ, ಉಪಚಯಗಳನ್ನು– ದಾವ ದಾವ ಕಳಾದಲ್ಲಿ ದಾವದು ಪ್ರಾಚುರ್ಯ, ದಾವದು ಅಪ್ರಾಚುರ್ಯವೋ ಅದದನು ಸರಿಸಿ ವಿಭಾಗವಮಾಡಿದ ಒಂದು ಕಳಾಕ್ಕೆ ಉಪಚಯವಾಗತಕ್ಕ ರಸ, ಆ ಕಳಾಕ್ಕೆ ಅದರಂತೆ ಸೇರಿಸಿ ಪೂರ್ವೋಕ್ತ ಚಣಕ ಉದಕ ದೃಷ್ಟಾಂತದೋಪಾದಿಯಲ್ಲಿ ಪ್ರತಿ ಪ್ರತಿ ಕಳಾಕ್ಕೂ ಉಪಚಯಗಳನ್ನ, ಕೊಡುತಾ–ದೇಹಾಂತರ್ಗತನಾಗಿ ಶ್ರೀ ಪರಮಾತ್ಮ ಕೊಡುತ್ತಾ, ಕ್ರೋಡ–ಶ್ರೀ ವರಾಹರೂಪಿಯಾದ ಪರಮಾತ್ಮ, ಎಪ್ಪತ್ತೆರಡುಸಾವಿರ ನಾಡಿಗತ–ಹಾಂಗೆ (೭೨೦೦೦) ದ್ವಾಸಪ್ತತಿಸಹಸ್ರ ನಾಡಿಗಳಿಗೆ ಉಪಚಯವಾಗತಕ್ಕ ೭೨೦೦೦ ರಸಗಳ ವಿಭಾಗ ಮಾಡಿ ನಾಡಿಗಳಿಗೆ ಉಪಚಯಗಳನ್ನ ಕೊಡುತಾ ಇನ್ನು ಈ ನಾಡೀಗತ, ಉಪ ಲಕ್ಷಣಯಾ ಷೋಡಶಕಳಾಗತ, ದೇವತೆಗಳ–ನಾಡಿ ಅಭಿಮಾನಿ, ಕಳಾಭಿಮಾನಿ, ಒಳಗಿದ್ದು– ಒಳಗೆ ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ ಇದ್ದು, ಆಡುತಾ–ವಿಭಾಗವ್ಯಾಪಾರ ದಿಂದಲೂ, ಆಯಾ ದೇವತೆಗಳ ಕೂಡಾ ದೇಹದಲ್ಲಿ ಆಡುತಾ, ಆನಂದಾತ್ಮ–ಆನಂದ ಸ್ವರೂಪಿಯಾದ ಸ್ಥೂಲದೇಹಗತ ಬಿಂಬರೂಪಿ ಪರಮಾತ್ಮ, ತಾನು ಚರಿಸುವನು–ತಾನು ಇಂಥಾ ಉಪಚಯದಿಂದ ದೇಹಕ್ಕೆ ಬಲಪ್ರದನಾಗಿ ದೇಹದ್ವಾರಾ ಸಂಚಾರ ಮಾಡಿಸು ವನು. ಲೋಕದೊಳು–ಹದಿನಾಲ್ಕು ಲೋಕದೊಳು ವಿದ್ಯಮಾನರಾದ ತ್ರಿವಿಧ ಜೀವರ ದೇಹದೊಳು ಈ ಪ್ರಕಾರ ಶ್ರೀಪರಮಾತ್ಮ ದೇಹದೊಳು ತಾನು ಸಂಚರಿಸುತ ಇರತಾನೆ.

**ತಾ||** ವರಾಹರೂಪಿಯಾದ ಶ್ರೀ ಪರಮಾತ್ಮ (೭೨,೦೦೦) ಎಪ್ಪತ್ತೆರಡು ಸಾವಿರ ನಾಡಿಗತ ತತ್ವೇಶರಲ್ಲೂ ವ್ಯಾಪ್ತನಾಗಿದ್ದು ಆನಂದಸ್ವರೂಪನಾಗಿ ಲೋಕದಲ್ಲಿ ಸಂಚರಿಸುವ ನೆಂದು ತಾತ್ಪರ್ಯ.

**ವಿಶೇಷಾರ್ಥ :–** ಜೀವರು ಪ್ರತ್ಯಕ್ಷದಲ್ಲಿ ಭೋಜನ ಮಾಡತಕ್ಕದ್ದು ಪೃಥ್ವಿ ಸಾಂಕೇತವಾದ ಅನ್ನ, ಅಪ್ ಸಾಂಕೇತವಾದ ಉದಕ, ತೇಜಃ ಸಾಂಕೇತವಾದ ತೇಜಃ ಪ್ರಾಚುರ್ಯವಾದ ಘೃತ ತೈಲಾದಿಗಳು. ಆಕಾಶ ವಾಯುಗಳು ಈ ಮೂರರಲಿ ವಿದ್ಯ ಮಾನಗಳಾಗಿ ಅವೆ. ಅಗೋಚರ, ಪ್ರತ್ಯಕ್ಷ ಭೋಜನಾರ್ಹವಲ್ಲ. ಪದಾರ್ಥತ್ರಯಗಳ ದ್ವಾರಾ ಭೋಜನ ಮಾಡಿ ದೇಹಗತ ಆಕಾಶವಾಯುಗಳಿಗೆ ಸೇರತಾ ಇರತದೆ. ಅನ್ನದ ಮಲ ಅಮೇಧ್ಯವು. ಉದಕದ ಮಲ ಮೂತ್ರವು. ತೇಜೋಮಲ ರೇತಸ್ಸು ಮೊದಲಾದ ಶುಕ್ಲ ಶೋಣಿತವು. ವಾಯುಮಲ ಅಪಾನ ವಾಯು. ಬಾಹ್ಯ ವಾಯು ಆಕಾಶಗಳಿಗೆ ಉಪಚಯ ಉಂಟು. ಬಾಹ್ಯವಾಯು ಸ್ಪರ್ಶದಿಂದ ಆಪ್ಯಾಯನವು. ಬಾಹ್ಯ ಆಕಾಶ ಜನ ಸಂಬಂಧವಿಲ್ಲದೇ ಅವಕಾಶವಿದ್ದರೆ ದೇಹಕ್ಕೆ ಆಪ್ಯಾಯನ. ಇಂಥಾ ಸೂಕ್ಷ್ಮೋಪಚಯ ಉಂಟು ಮಾಡಥಾನೆ. ಅಲಕ್ಷ್ಯದಿಂದ ತೋರೋದಿಲ್ಲ ಎಂತ ತಾತ್ಪರ್ಯ.

**ವಾರಿವಾಚ್ಯನು ವಾರಿಯೊಳಗಿ |**
**ದ್ದಾರು ರಸವೆಂದೆನಿಸಿ ಮೂವ |**
**ತ್ತಾರು ಸಾವಿರ ಸ್ತ್ರೀಪುರುಷನಾಡಿಯೊಳು ತದ್ರೂಪ ||**

**ಧಾರಕನು ತಾನಾಗಿ ಸರ್ವಶ ।**
**ರೀರಗಳಲಿ ಅಹರ್ಜ್ಞರಾತ್ರಿ ವಿ ।**
**ಹಾರ ಮಾಳ್ಪನು ಬೃಹತಿಯೆಂಬ ಸುನಾಮದಿಂ ಕರೆಸಿ ॥ ೩ ॥**

ದೇಹಗತ ನಾಡಿಸ್ಥ ಭಗವದ್ರೂಪಗಳ ಹೇಳಥಾರೆ.

ವಾರಿಯೊಳಗಿದ್ದು—ವಾರಿ ಎಂದರೆ ಉದಕ, ಈ ಉದಕಕ್ಕೆ ಅಭಿಮಾನಿಯಾದ ವರುಣಾಂತರ್ಗತನಾದ ಶ್ರೀಹರಿನಾಮಕ ಪರಮಾತ್ಮ ಉದಕದೊಳಗೆ ಅಖಂಡ ರೂಪದಿಂದ ತದಾಕಾರನಾಗಿದ್ದು, ವಾರಿವಾಚ್ಯನು—ವಾರಿ ಎಂತ ಕರಿಸತಕ್ಕ ಅಂತರ್ಗತ ಶ್ರೀ ಪರಮಾತ್ಮನು, ಆರು ರಸವೆಂದೆನಿಸಿ—ಆರು ರಸಗಳು ಉದಕವನ್ನಾಶ್ರಯಿಸಿ ಅವೆ. ಈ ಆರು ರಸಗಳು ದಾವವೆಂದರೆ :—

| ರಸಗಳ ಹೆಸರು | ಅಭಿಮಾನಿ ದೇವತೆಗಳು | ಭಗವದ್ರೂಪಗಳು |
|---|---|---|
| ೧. ಉಪ್ಪು | ನಿರ್ಋತಿ | ಜನಾರ್ದನ |
| ೨. ಹುಳಿ | ಗೌರೀದೇವಿ ; ಪಾರ್ವತೀ | ದಾಮೋದರ |
| ೩. ಖಾರ | ದಕ್ಷಪ್ರಜಾಪತಿ | ನೃಸಿಂಹ |
| ೪. ಸಿಹಿ | ಇಂದ್ರ | ವಾಸುದೇವ |
| ೫. ಕಹಿ | ಯಮ | ಅನಿರುದ್ಧ |
| ೬. ಒಗರು | ಭಾಗೀರಥಿ ದೇವಿ | ಹರಿನಾಮಕ ಪರಮಾತ್ಮ |

| | |
|---|---|
| ೧. ಪೃಥ್ವಿಯಲ್ಲಿ ಸರ್ವ ಗಂಧಾಶ್ರಯವು<br>೨. ಅಪ್ಪಿನಲ್ಲಿ ಸರ್ವ ರಸಾಶ್ರಯವು<br>೩. ತೇಜದಲ್ಲಿ ಸರ್ವ ರೂಪಾಶ್ರಯವು<br>೪. ವಾಯುವಿನಲ್ಲಿ ಸರ್ವ ಸ್ಪರ್ಶಾಶ್ರಯವು<br>೫. ಆಕಾಶದಲ್ಲಿ ಸರ್ವ ಶಬ್ದಾಶ್ರಯವು | ಇದು ನೇಮವಾದ್ದರಿಂದ ಸರ್ವರಸಕ್ಕೂ ಉದಕ ಆಶ್ರಯವು. |

ಷಡ್ರಸಗಳು ದಾವ ದಾವ ಅಧಿಷ್ಠಾನವನ್ನು ಆಶ್ರಯಿಸಿ ಅದೋ, ಅದೆಲ್ಲಾ ಉದಕಾಶ್ರಯವದೆ. ಅಲ್ಲೆಲ್ಲಾ ಶ್ರೀ ಪರಮಾತ್ಮ ವಾರಿ ಅಂತರ್ಗತನಾಗಿ ವಾರಿ ವಾಚ್ಯನಾಗಿ ಇದ್ದಾನೆ. ಈ ಪ್ರಕಾರ ವಾರಿ ಆಶ್ರಯ ಮಾಡಿ ಇರುವ ಪೂರ್ವೋಕ್ತ ಲವಣಾದಿ ಆರು ರಸಗಳಲ್ಲಿ ತದಾಕಾರನಾಗಿ ಇದ್ದು ಆರು ರಸವೆಂತ ಎನಿಸಿ ತನ್ನಾಮದಿಂದ ಕರಿಸಿ ವಾರಿ ಒಳಗೂ ತದ್ಗತ ಆರು ರಸಗಳ ಒಳಗೂ ಇದ್ದು ಪೂರ್ವೋಕ್ತ ಪ್ರಕಾರ ರಸಪದವಾಚ್ಯನೆಂತೆನಿಸಿ ೭೨,೦೦೦ ರಸವಿಭಾಗ ಮಾಡಿ ಅಷ್ಟರಲ್ಲಿ ಅಷ್ಟು ರೂಪಗಳಿಂದ ಇದ್ದು ಆಯಾ

ರಸಗಳ ದೇಹಗತ ಎಪ್ಪತ್ತೆರಡು ಸಾವಿರ ನಾಡಿ ಒಳಗೆ ಭೋಜನಾದಿಗಳಿಂದ ಉಪಚಯ ಮಾಡಥಾನೆ. ಮತ್ತು ದೇಹಗತ ೭೨,೦೦೦ (ಎಪ್ಪತ್ತೆರಡುಸಾವಿರ) ನಾಡಿಗಳಿಗೆ, ಮೂವತ್ತಾರು ಸಾವಿರ–(೩೬,೦೦೦) ಎಡಭಾಗಗತನಾಡಿಗಳು ಇವರಲ್ಲಿ ಸ್ತ್ರೀ–ಪರಮಾತ್ಮ ಸ್ತ್ರೀ ರೂಪದಿಂದಲೂ, ನಾಡಿಯೊಳು–ಬಲಭಾಗಗತ ೩೬,೦೦೦ ನಾಡಿಯಲ್ಲಿ, ಪುರುಷ–ಪುರುಷ ರೂಪದಿಂದಲೂ, ತದ್ರೂಪ–ನಾಡಿಗಳ ಆಕಾರ ದಾವುದೋ ತದಾಕಾರದಿಂದಲೂ ಖಂಡರೂಪಗಳು, ಸ್ತ್ರೀಪುರುಷರೂಪಗಳು, ತದಾಕಾರ ರೂಪ, ಅಖಂಡ ರೂಪ, ಉಭಯ ಪ್ರಕಾರದಿಂದಲೂ ಇದ್ದು, ಧಾರಕನು ತಾನಾಗಿ–ನಾಡಿಗಳಿಗೆ ಆಧಾರಭೂತನು ತಾನಾಗಿ ಇದಾನೆ. ಮತ್ತು ಸರ್ವಶರೀರಗಳಲಿ–ಸಮಸ್ತ ಜೀವರ ದೇಹಗಳಲ್ಲಿ ವಿದ್ಯಮಾನಗಳಾದ, ಅಹಸ್ಸು–ಹಗಲು ಸಾಂಕೇತದಿಂದ ಕರೆಸತಕ್ಕ ಪೂರ್ವೋಕ್ತ ಬಲಭಾಗಗತ ಪುರುಷಾಭಿಮಾನಿ ನಾಡಿಗಳು, ೩೬,೦೦೦, ರಾತ್ರಿ–ರಾತ್ರಿ ಸಾಂಕೇತದಿಂದ ಕರೆಸತಕ್ಕ ಪೂರ್ವೋಕ್ತ ಎಡ ಭಾಗಗತ ಸ್ತ್ರೀ ಅಭಿಮಾನಿಗಳು ೩೬,೦೦೦, ಮನುಷ್ಯರ ಆಯಸ್ಸು ನೂರು ವರ್ಷಕ್ಕೆ ಹಗಲು ೩೬,೦೦೦, ರಾತ್ರಿ ೩೬,೦೦೦, ಅಂತು ೭೨,೦೦೦ (ಎಪ್ಪತ್ತೆರಡುಸಾವಿರ) ನಾಡಿ ಗಳಲ್ಲಿ ಇಷ್ಟು ರೂಪಗಳಿಂದ ಇದ್ದು ಸೂರ್ಯ ಚಂದ್ರಾದಿಗಳು ಸಂಚಾರ ಮಾಡಿ ಆಯಸ್ಸು ಕ್ಷೀಣ ಮಾಡಿದಂತೆ ತಾನೂನೂ ಇದೇ ರೀತ್ಯಾ ಸಂಚಾರ ಮಾಡಿ ಆಯಸ್ಸು ಕ್ಷೀಣ ಮಾಡತಾ ಇರಥಾನೆ. ಈ ಪರಮಾತ್ಮ ದಾವ ನಾಮದಿಂದ ಕರಿಸಿ ಈ ವ್ಯಾಪಾರ ಮಾಡ ಥಾನೆ ಎಂದರೆ, ಬೃಹತೀ ಎಂಬ–ಛಂದಸ್ಸು (೧೧) ಹನ್ನೊಂದು ಅಕ್ಷರದಿಂದ ಯುಕ್ತ ವಾದದ್ದು. ಇಂಥಾ ಬೃಹತೀ ಸಾಂಕೇತವಾದ ದೇವಋುಕ್ಕುಗಳು (೧೦೦) ನೂರು ಋುಕ್ಕು ಪ್ರತಿಪಾದ್ಯನಾಗಿ ಬೃಹತೀನಾಮವಾಚ್ಯನಾಗಿ ಇರಥಾನೆ. ಇದರಲ್ಲಿ ದಕ್ಷಿಣಭಾಗಗತ (ಬಲಭಾಗ) ೩೬,೦೦೦ ನಾಡಿಗಳಲ್ಲಿ ಬೃಹತೀ ಸಹಸ್ರ ಸ್ವರಾಕ್ಷರ ನಾಮಗಳಿಂದಲೂ, ವಾಮಭಾಗ (ಎಡಭಾಗ) ಗತ ೩೬,೦೦೦ ನಾಡಿಗಳಲ್ಲಿ ಬೃಹತೀ ಸಹಸ್ರ ವ್ಯಂಜನಾಕ್ಷರ ನಾಮಗಳಿಂದಲೂ ಇದಾನೆ. ೩೬,೦೦೦ ಸ್ವರಾಕ್ಷರ ವಾಚ್ಯ ರೂಪಗಳು ೩೬,೦೦೦ ವ್ಯಂಜನಾಕ್ಷರ ವಾಚ್ಯ ರೂಪಗಳು; ಸ್ವರಾಕ್ಷರಗಳು ಅ ಆರಂಭ ಮಾಡಿ ಅಃ ವರಿಗೆ, ಕ ಆರಂಭ ಮಾಡಿ ಕ್ಷ ವರಿಗ್ಯೂ ವ್ಯಂಜನಾಕ್ಷರಗಳೆಂದೂ ಸಾಂಕೇತವು. ಇದಕ್ಕೆ ಪ್ರಮಾಣವು: – "ದ್ವಾಸಪ್ತತಿಸಹಸ್ರನಾಡೀಷು ಬೃಹತೀಸಹಸ್ರವಾಚ್ಯಾನಿ ದ್ವಾಸಪ್ತತಿ ಸಹಸ್ರರೂಪಾಣಿ | ತತ್ರಾಪಿ ದಕ್ಷಿಣಭಾಗಸ್ಥಷಟ್‌ತ್ರಿಂಶತ್ಸಹಸ್ರನಾಡೀಷು ಬೃಹತೀ ಸಹಸ್ರಸ್ವರಾಕ್ಷರವಾಚ್ಯಾನಿ ಷಟ್‌ತ್ರಿಂಶತ್ಸಹಸ್ರರೂಪಾಣಿ ವಾಮಭಾಗಸ್ಥಷಟ್‌ತ್ರಿಂಶ ತ್ಸಹಸ್ರನಾಡ್ಯಸ್ತು ಬೃಹತೀಸಹಸ್ರವ್ಯಂಜನಾಕ್ಷರವಾಚ್ಯಾನಿ ಷಟ್‌ತ್ರಿಂಶತ್ಸಹಸ್ರರೂಪಾ ಣೀತಿ ವಿವೇಕಃ ||" ಇತಿ ಷೋಡಶೀ. ಸುನಾಮದಿಂದಕರಿಸಿ–ಈ ಪ್ರಕಾರ ಸಮೀಚೀನ ವಾದ ಸುನಾಮದಿಂದ ಕರಿಸಿ ೭೨,೦೦೦ ನಾಡಿಗತನಾಗಿ, ವಿಹಾರಮಾಳ್ಪನು–ಅಲ್ಲಲ್ಲಿದ್ದು ನಾಡಿ ಸಂರಕ್ಷಣೆ, ದೇಹ ಸಂರಕ್ಷಣೆ ಮಾಡತಾ ಇರತಾನೆ ಎಂತ ತಾತ್ಪರ್ಯ.

**ತಾ||** ಶ್ರೀ ಪರಮಾತ್ಮನು ನೀರಿನಲ್ಲಿ ಆರು ರಸ ಎನಿಸಿ ಸರ್ವರ ಶರೀರದಲ್ಲಿದ್ದಂಥಾ ೩೬,೦೦೦ ಸ್ತ್ರೀನಾಡಿ, ೩೬,೦೦೦ ಪುರುಷ ನಾಡಿಗಳಲ್ಲೂ ತನ್ನಾಮ ತದ್ರೂಪ ತದಾ ಕಾರನಾಗಿ ಇದ್ದು ದೇಹವನ್ನ ಸಂರಕ್ಷಣೆ ಮಾಡಥಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಶ್ರೀ ಪರಮಾತ್ಮ ಕ್ಷೀರ ಮೊದಲಾದ ರಸ ಪದಾರ್ಥಗಳಲ್ಲಿ ವಿಶದಾದಿ ಭಗವದ್ರೂಪದಿಂದ ಹ್ಯಾಂಗೆ ವ್ಯಾಪ್ತನೋ ತದ್ವತ್ ವಾರಿ ಒಳಗೆ ತದ್ವಾಚ್ಯನಾಗಿ ದ್ರವ್ಯರೂಪದಿಂದ ಷಡ್ರಸ ಎಂದು ಎನಿಸಥಾನೆ ಎಂಬೋದರಲ್ಲಿ ವಿಜಯರಾಯರು ತಾವು ಮಾಡಿದಂಥಾ ರಸವಿಭಾಗ ಸುಳಾದಿಯಲ್ಲಿ ಹೇಳಿದ್ದಾರೆ. "ಕ್ಷೀರಾವೇ ಮೊದಲಾದ ಪದಾರ್ಥ ನಿಕರಾದಿ ಶ್ರೀ ರಮಾಪತಿ ತಾನು ವಿಶದಾದಿ ರೂಪದಿಂದ ಧಾರಾಳವಾಗಿ ನಿಂತು ಬಹುರೂಪನೆನಿಸಿಕೊಂಡು ಸಾರಾವೇ ಸ್ವೀಕರಿಪ ತೆರದಲ್ಲಿ ನಿರುತದಿ ವಾರೀಲಿ ಆರು ರಸವೆನಿಸುವ ದ್ರವನಾಗಿ ಮಾರಜನಕ ವಿಜಯವಿಠ್ಠಲನ ದಯಪಡಿವ ಧೀರರು ತಿಳಿದಿದನು ಅನುಭವಿಸುವದು ನಿತ್ಯಾ ||"

**ಆರು ರಸ ಸತ್ವಾದಿ ಭೇದದಿ |**
**ಆರು ಮೂರಾಗಿಹವು ಸಾರಾ |**
**ಸಾರ ನೀತಾಪ್ರಚುರ ಖಂಡಾಖಂಡ ಚಿತ್‌ಪ್ರಚುರ ||**
**ಈರಧಿಕ ಎಪ್ಪತ್ತು ಸಾವಿರ |**
**ಮೂರಮಣನೆ ರಸಾಖ್ಯರೂಪ ಶ |**
**ರೀರದಲಿ ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಪುದು || ೪||**

ರಸವಿಭಾಗ ತಿಳಿದು ಭೋಜನ ಮಾಡಬೇಕೆಂದು ಹೇಳಥಾರೆ.

ಆರು ರಸ ಸತ್ವಾದಿ ಭೇದದಲಿ–ಪೂರ್ವೋಕ್ತ ಆಮ್ಲಾದಿ ಷಡ್ರಸಗಳು, ಸತ್ವಗುಣ, ರಜೋಗುಣ, ತಮೋ ಗುಣಗಳಿಂದ ಯುಕ್ತವಾಗಿ ಅದೆ. ಗುಣಭೇದಗಳ ಅನುಸರಿಸಿ ರಸಭೇದಗಳೂನು. ಅದೇ ಪ್ರಕಾರ ಭೇದಗಳಿಂದ ಯುಕ್ತವಾಗಿ ಪ್ರತಿಯೊಂದು ರಸದಲ್ಲೂನು, ಆರು ಮೂರಾಗಿಹವು–(೧೮) ಹದಿನೆಂಟು ರಸಗಳಾಗಿ ಅದೆ. ಸಾರಾಸಾರ– ಅದರಲ್ಲಿ ಸಾರರಸ ಸತ್ವಗುಣಾಶ್ರಯ ಮಾಡಿದ್ದು, ಅಸಾರ ರಜೋಗುಣ, ತಮೋಗುಣ ಆಶ್ರಯ ಮಾಡಿದ್ದು. ಅದರಲ್ಲಿ ತಮೋಗುಣ ಆಶ್ರಯ ಮಾಡಿದ್ದು ರಸಸಾರ ತಮವು ಎಂತ ತಿಳಿಯಬೇಕು. ಈ ಪ್ರಕಾರ ಷಡ್ರಸಗಳಲ್ಲಿ, ನೀತ–ಪ್ರತಿ ಪ್ರತಿ ರಸದಲ್ಲಿ ಇರೋಣ ಎಂಬುದು ನೀತವಾದದ್ದು. ಆದರೆ ಅದರ ಒಳಗೆ ಸರ್ವವು ಸಂಸೃಷ್ಟಗಳಾದ್ದರಿಂದ ಈ ಪ್ರಕಾರ ನೀತವಾಗಿ ಇರುತ್ತವೆ. ಅಪ್ರಚುರ– ಅಂಡಗತಗಳು ಸಂಸೃಷ್ಟಗಳಾದ್ದರಿಂದ ಪ್ರತಿಯೊಂದು ರಸಕ್ಕೂ ಅಸಂಸೃಷ್ಟವಲ್ಲದೇ ಪ್ರತಿ ಒಂದು ರಸದಲ್ಲೂ ಆರಾರು ರಸಗಳು ಸಂಸೃಷ್ಟಗಳಾಗಿ ಅವೆ. ಅದರಲ್ಲಿ ಐದು ರಸಗಳಿಗೆ ಅಪ್ರಚುರ, ಒಂದು ರಸಕ್ಕೆ ಮಾತ್ರ ಪ್ರಚುರ ಹ್ಯಾಂಗೆ ಅಂದರೆ ಆಮ್ಲದಲ್ಲಿ ಆಮ್ಲರಸ ಪ್ರಚುರ. ಅವಶಿಷ್ಟ ಐದು ರಸಗಳು ಅಪ್ರಚುರ ಆದ್ದರಿಂದ ಐದು ರಸಗಳು ವ್ಯಕ್ತವಾಗಿ ತಿಳಿಯೋದಿಲ್ಲ. ಖಂಡಾಖಂಡ– ೧. ಖಂಡ–ಬ್ಯಾರೆ ಬ್ಯಾರೆ ಆಗಿ ಇರೋವರಿಗೂ ಖಂಡರಸ ಎಂತ ಕರಿಸೋದಾಗತದೆ. ೨. ಅಖಂಡ–ಆರು ರಸಗಳು ಸೇರಿ ಒಂದು ಭೋಜನ ಯೋಗ್ಯ ಪದಾರ್ಥ ನಿರ್ಮಿತವಾದರೆ ಅಖಂಡವೆಂದು (ಅಖಂಡ ರಸವೆಂದು)

ಕರೆಸೋದಾಗತದೆ. ಅಂತರ್ಭೇದ ವಿವಕ್ಷೆಯಾ ಖಂಡಗಳು. ಸಮೂಹ ವಿವಕ್ಷೆಯಾ ಅಖಂಡ. ಮೇಳನ ವಿವಕ್ಷೆಯಾ ಷಡ್ರಸಗಳೂ ಸೇರಿ ೭೨,೦೦೦ ರಸಗಳು ಆಗೋದಾಗ ತದೆ. ಆಗೋ ಬಗೆ ಹ್ಯಾಂಗೆ ಅಂದರೆ ಸಂಧ್ಯಂತರವಾದ ಸ್ಥಾವರಜಂಗಮಸಂಧಿ ೭ನೇ ಶ್ಲೋಕದಲ್ಲಿ ವಿವರ ಮಾಡಿದ ಸುರುಚಿ, ರುಚಿರ, ಸುಗಂಧ, ಶುಚಿ ಎಂತ ನಾಲ್ಕು ರಸ ವನ್ನು ಷಡ್ರಸವಾದ ಆರರಿಂದ ಗುಣಿಸಿದರೆ (೨೪) ಇಪ್ಪತ್ತುನಾಲ್ಕು ಆಗತದೆ. ಇದರಲ್ಲಿ ಸಾತ್ವಿಕಾದಿ (೩) ಮೂರು ಗುಣ, ಮೂರಿನಿಂದ ಗುಣಿಸಿದರೆ ೭೨ ಆಗತದೆ. ವಿಶ್ವಾದಿ ರೂಪಗಳ ಸೇರಿಸಿಕೊಂಡರೆ ೭೨,೦೦೦ ರಸಗಳು ಭಗವದ್ರೂಪಗಳು ಆಯಿತು. ಇದು ಒಂದು ಪ್ರಕಾರ ವಿಭಾಗ. ಒಂದೊಂದು ರಸದಲ್ಲಿ ಎರಡು ಪ್ರಕಾರ ರಸವಾಗಿ, ಅರು ಎರಡುಗಳು ಹನ್ನೆರಡು ರಸವಾಗಿ, ಹನ್ನೆರಡು ಆರುಗಳು ಎಪ್ಪತ್ತೆರಡು ವಿಶ್ವಾದಿರೂಪ ಗಳು ಸೇರಿಸಿದರೆ ೭೨,೦೦೦ ರಸಗಳು ಭಗವದ್ರೂಪಗಳು ಆಗತದೆ. ಇನ್ನೂ ಅನೇಕ ವಿಧ ಮಾರ್ಗಾನುಸಂಧಾನವಿದೆ. ಈ ಪ್ರಕಾರ ಪ್ರತಿ ಪ್ರತಿ ರಸದಲ್ಲೂ ಪರಮಾತ್ಮನಿಂದ ಸೃಷ್ಟಿ ಕಾಲದಲ್ಲಿ ಸಂಸೃಷ್ಟಿಗಳು ಮಾಡಲ್ಪಟ್ಟಿದೆ. ಅದದು ಪ್ರಚುರ ರಸವೆಂದು ಅದೇ ಲೋಕರಿಗೆ ಗೋಚರವೂ, ತದನ್ಯ ತದಭಿಮಾನಿದೇವತೆಗಳಿಗೆ ಗೋಚರವೂ ಮಾನುಷ ಗೋಚರವಲ್ಲ. ಈ ಪ್ರಕಾರ ಖಂಡಾಖಂಡ ರಸಗಳು, ಚಿತ್ಪ್ರಚುರ–ಈ ಎಪ್ಪತ್ತೆರಡು ರಸಗಳಲ್ಲಿ, ಚಿತ್–ಚಿದಾನಂದ ಸ್ವರೂಪಿಯಾದ ಗುಣಪೂರ್ಣನಾದ ಶ್ರೀ ಪರಮಾತ್ಮ, ಪ್ರಚುರ–ಆಯಾ ರಸಗಳಂತೆ ಅಧಿಷ್ಠಾನಗತನಾಗಿ ಇದ್ದು ಆಯಾ ರಸಗಳ ಪ್ರಚುರ ಮಾಡುತಾ ರಸ ಎಂದರೆ " ರಸಶಬ್ದೇನ ವಿಶೇಷಣಾತ್ ತತ್ತತ್ಸಾರಭೂತಂ ಚಿನ್ಮಾತ್ರಮೇ ವೋಚ್ಯತೇ " ಎಂತ ಶ್ರೀ ಬ್ರಹ್ಮಸೂತ್ರ ಭಾಷ್ಯದಲ್ಲಿ ವಿವರ ಇರುವದರಿಂದ, ಈರಧಿಕ–ಎಪ್ಪತ್ತುಸಾವಿರ–೭೨,೦೦೦, ಮಾರಮಣನ–ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ, ರಸಾಖ್ಯರೂಪ– ರಸ–ಸಂಸೃಷ್ಟ ರಸಾಂರ್ಗತಗಳಾಗಿ ರಸ ಎಂತ, ಆಖ್ಯ–ಪ್ರಸಿದ್ಧಗಳಾದ, ರೂಪ–(೭೨,೦೦೦) ಎಪ್ಪತ್ತೆರಡು ಸಾವಿರ ರೂಪಗಳು, ಶರೀರದಲ್ಲಿ–ಸ್ಥೂಲ ಶರೀರದಲ್ಲಿ ವಿದ್ಯಮಾನಗಳಾದ ೭೨,೦೦೦ ನಾಡಿಗಳಲ್ಲಿ ಪ್ರತಿ ನಾಡಿಯಲಿ ಒಂದೊಂದು ರೂಪದ ಮ್ಯಾರಿಗೆ ೭೨,೦೦೦ ರೂಪಗಳು, ಭೋಜ್ಯಸುಪದಾರ್ಥದಿ–ಸಮೀಚೀನಗಳಾದ ಅನಿಷಿದ್ಧಗಳಾದ ಭೋಜನಾರ್ಹವಾದ ಪ್ರತಿ ಪ್ರತಿ ಪದಾರ್ಥದಲ್ಲೂ ಎಪ್ಪತ್ತೆರಡು ಸಾವಿರ ರಸಗಳ, ಎಪ್ಪತ್ತೆರಡು ಸಾವಿರ ಭಗವದ್ರೂಪಗಳ, ತಿಳಿದು–ಅನುಸಂಧಾನ ಮಾರ್ಗದಿಂದ ತಿಳಿದು, ಭುಂಜಿಪುದು–ಭೋಜನ ಮಾಡುವುದು ಎಂತ ತಾತ್ಪರ್ಯ.

**ತಾ||** ಪ್ರತಿಪದಾರ್ಥದಲ್ಲೂ ೧೬ ಕಳಾಕ್ಕೆ ಉಪಚಯವಾಗತಕ್ಕ ರಸಭೇದಗಳು ೭೨೦೦೦ ನಾಡಿಗಳಿಗೆ ಉಪಚಯವಾಗತಕ್ಕ ರಸಭೇದಗಳು ಇರೋದಾಗಿ ಅದದು ಅದದಕ್ಕೆ ಸೇರತದೆ. ಪ್ರಥಮಶ್ಲೋಕದ ಮೇರೆಗೆ ದೇಹಗತ ದೇವತೆಗಳಿಗೆ, ದೈತ್ಯರಿಗೆ, ನಿತ್ಯಸಂಸಾರಿ ಗಳಿಗೆ ಜೀವಗೆ ಸೇರುವ ಕ್ರಮ ತಿಳಿಯಬೇಕು. ದೇಹದಲ್ಲಿ ೧) ಸತ್ವಗುಣಾಶ್ರಿತರು ದೇವತೆಗಳು ಸತ್ವರಸ, ೨) ರಜೋಗುಣಾಶ್ರಿತರು ನಿತ್ಯಸಂಸಾರಿಗಳು ರಜೋರಸ,

೩) ತಮೋಗುಣಾಶ್ರಿತರು ದೈತ್ಯರು ತಾಮಸರಸ. ಈ ಪ್ರಕಾರ ರಸಗಳಲ್ಲಿ ದೇಹದಲ್ಲಿ ಅಭಿಮಾನಿಗಳಾಗಿ ಇದ್ದಾರೆ. ಅವರವರಿಗೆ ಆಯಾ ರಸಗಳು ಸೇರೋದಾಗತದೆ ಎಂಬ ಅನುಸಂಧಾನದಿಂದ ಭೋಜನಮಾಡತಕ್ಕದ್ದು ಎಂತ ತಾತ್ಪರ್ಯ.

**ವಿಶೇಷಾರ್ಥ** :– ಆರು ರಸ ಲಾವದೆಂದರೆ :– ಮಧುರ, ಆಮ್ಲ, ಲವಣ, ಕಟು, ಕಷಾಯ, ತಿಕ್ತ ಎಂಬ ಆರು ರಸಗಳ ಒಳಗೆ ಸಾರದಿ ಷಡ್ರಸಗಳು ಅವೆ. ಇದಕ್ಕೆ ಪ್ರಮಾಣ :– ಶ್ರೀವಿಜಯದಾಸರಾಯರ ಸುಳಾದಿ. "ವಾರೀಲಿ ಮಧುರವೇ ಪ್ರಾಮುಖ್ಯ ವೆನಿಪುದು ಸಾರುವೆ ಮಧುರಾದಿಗತ ಸಾರಾಸಾರ, ನೀತಾನೀತ, ಖಂಡಾಖಂಡ ಮೂರೆರಡು ರಸಗಳು ಇಪ್ಪದಯ್ಯಾ, ಧೀರರು ತಿಳಿವದು ಸತ್ವಾದಿ ಭೇದದಿಂದ ಮೂರಾರು ರಸ ವೆನಿಸಿ ರಾಜಿಪದು ವಾರಿಜನಯನ ಸಿರಿವಿಜಯವಿಠಲ ತಾನೆ ಸಾರಭೂತವಾದ ಚಿತ್ರಚುರ ಸ್ವೀಕರಿಪಾ". ಈ ಅರ್ಥವನ್ನು ಶ್ರೀಜಗನ್ನಾಥದಾಸರಾಯರು ಪದ್ಯರೂಪವಾಗಿ ಹೇಳಿದ್ದಾರೆ. ಈ ಸಾರಾಖ್ಯ ರಸದಲ್ಲಿ ಶುಭಾಶುಭವೆಂತಲೂ, ಶುಭದಲ್ಲಿ ಪ್ರಾಕೃತ, ಅಪ್ರಾಕೃತ ಎಂತಲೂ, ಆ ಅಪ್ರಾಕೃತದಲ್ಲಿ ಖಂಡಾಖಂಡವೆಂತಲೂ ರಸಗಳು ಇರುತ್ತವೆ. ಪ್ರಮಾಣ : "ಶುಭಾಶುಭವಿಭೇದೇನ ಸಾರೋ ಹಿ ದ್ವಿವಿಧೋ ಮತಃ । ಹರಿಸ್ತತ್ರ ಶುಭಂ ಸಾರಂ ಸ್ವೀಕರೋತಿ ನ ಚಾಪರಂ ॥ ಶುಭಸಾರೋ ದ್ವಿಧಾ ಪ್ರೋಕ್ತಃ ಪ್ರಾಕೃತೋಽಪ್ರಾಕೃತಸ್ತಥಾ । ಅಪ್ರಾಕೃತರಸೋ ನಾಮ ಪದಾರ್ಥಾಕಾರರೂಪತಃ ॥ ಚಿದಾನಂದಸ್ವರೂಪ ಸ್ವರೂಪಮೇವ ನ ಚಾಪರಃ । ಅಪ್ರಾಕೃತರಸಸ್ಯಾಪಿ ದ್ವೈವಿಧ್ಯಂ ಸರ್ವಸಮ್ಮತಂ ॥" ಖಂಡಾಖಂಡರೂಪಾಭ್ಯಾಮಿತಿ ಪ್ರಮೇಯಮಾಲಿಕಾ. ಈ ಸಾರಾಖ್ಯ ಒಂದು ರಸದಲ್ಲಿ ಶುಭಾದಿರಸಗಳು ಇರೋದಲ್ಲದೇ ಶ್ರೀ ಪರಮಾತ್ಮಭೋಗಾರ್ಹವಾದಂಥಾ ಅನಂತಾನಂತ ರಸಗಳು ಅವೆಯೆಂದು ಹೇಳತಪೆ. ಪ್ರಮಾಣ :– ಶ್ರೀಮಜ್ಜಯತೀರ್ಥೀಯ ಪ್ರಮೇಯ ದೀಪಿಕಾ – "ಏಕೈಕಜಾತೀಯೇಪಿ ರಸಜಾತೀಯೇಷ್ವೇವ ವಿಶದ, ಸ್ಥಿರ, ತೀಕ್ಷ್ಣಾದಿ ಹೃದ್ಯಾದಿ ವೈಲಕ್ಷಣ್ಯವತ್ ಅವಾಂತರಾನಂತವೈಲಕ್ಷಣ್ಯೋಪೇತಾನಿ ರಸಾನಿವರ್ತಂತೇ ॥" ಈ ಅನಂತಾನಂತ ರಸಗಳು ಶ್ರೀಹರಿ ಒಬ್ಬನೇ ಸ್ವೀಕರಿಸತಾನೆ. ರಮಾಬ್ರಹ್ಮಾದಿಗಳಿಗೆ ಸಿಗೋದಿಲ್ಲ. ಇದಕ್ಕೆ ಪ್ರಮಾಣ :– "ಅನಂತೇಂದ್ರಿಯಸಂಭೋಗ್ಯಾನ್ ಅತರ್ಕ್ಯಾಂಶ್ಚ ರಮಾದಿಭಿಃ । ಪೃಥಕ್ ಪೃಥಗನಂತಾನ್ವಿಜಾತೀಯಾಂಶ್ಚ ಸರ್ವತಃ । ಸ್ವಯಮೇವ ಹರಿರ್ಭುಂಕ್ತೇ ಸರ್ವಾನ್ ಸರ್ವವಿಲಕ್ಷಣಾನ್ ॥" ಇತಿ.

**ಕ್ಷೀರಗತ ರಸರೂಪಗಳು ಮು ।**
**ನ್ನೂರು ಮ್ಯಾಲೈವತ್ತುನಾಲಕು ।**
**ಚಾರು ಘೃತಗತರೂಪಗಳು ಇಪ್ಪತ್ತರೊಂಭತ್ತು ॥**
**ಸಾರ ಗುಡದೊಳಗೈದು ಸಾವಿರ ।**
**ನೂರವೊಂದು ಸುರೂಪ ದ್ವಿಸಹ ।**
**ಸ್ವಾರೆರಡು ಶತ ಪಂಚವಿಂಶತಿ ರೂಪ ಫಲಗಳಲಿ ॥ ೫ ॥**

ಪೂರ್ವೋಕ್ತ ಆಮ್ಲಾದಿ ಆರು ರಸಗಳಿಗೆ ಅಧಿಷ್ಠಾನಭೂತಗಳಾದ ಫಲಾದಿಗಳು, ತದ್ಗತ ರಸಗಳು ಪಕ್ವವಾಗಬೇಕಾದರೆ ಆದಿಯಾರಭ್ಯ ಅಂತ್ಯದವರಿಗೆ, ಅದರದರಲ್ಲಿ ವ್ಯಕ್ತವಾಗತಕ್ಕ ರಸಗಳಿಗೆ ಸಾಂಕೇತನಾಮಗಳ ಅಕ್ಷರವಾಚ್ಯ ಭಗವದ್ರೂಪಗಳ ಹೇಳತಾರೆ.

ಕ್ಷೀರಗತರಸರೂಪಗಳು–ಒಂದು ಫಲವಾಗಬೇಕಾದರೆ ಪ್ರಥಮದಲ್ಲಿ ಎಳೇ ಹೀಚು ಕಾಯಿಯಾಗಿ ಇರೋ ಕಾಲದಲ್ಲಿ ವಿದ್ಯಮಾನ ರಸ ದಾವದದೇ ಅದಕ್ಕೆ ಕ್ಷೀರರಸ ಎಂತ ಸಾಂಕೇತ. ಅದಕ್ಕೆ ಪ್ರತಿನಾಮ 'ವಿಶದ' ಎಂತ ಹೆಸರು. ಈ ವಿಶದ ಸಾಂಕೇತ ರಸಗತ, ರಸಪದವಾಚ್ಯ ಭಗವದ್ರೂಪಗಳು ಎಷ್ಟು ಎಂದರೆ, ಮುನ್ನೂರು ಮತ್ತೈವತ್ತುನಾಲಕು– ವಿಶದ ಎಂಬ ಅಕ್ಷರತ್ರಯ ಸಾಂಕೇತದಿಂದ ಮುನ್ನೂರಐವತ್ತುನಾಲ್ಕು ಆಗತದೆ. (ವಿ–೪, ಶ–೫, ದ–೩ =೩೫೪ ರೂಪಗಳು). ಬಲದಿಂದ ಎಡಕ್ಕೆ ಲೆಕ್ಕಮಾಡಬೇಕು, "ಅಂಕಾನಾಂ ವಾಮತೋ ಗತಿಃ" ಎಂತ, ಚಾರುಘೃತರಸರೂಪಗಳು–ಅದೇ ಫಲ ಪೂರ್ವದ ಕಿಂತಲೂ ಸ್ವಲ್ಪ ಕಾಲಾನಂತರ ಬಲಿತ ಮ್ಯಾಲೆ ಆಗ ಇರತಕ್ಕ ರಸಕ್ಕೆ ಘೃತರಸ ಎಂತ ಸಾಂಕೇತ. ಪ್ರತಿನಾಮ 'ಸ್ಥಿರ' ಎಂತ. ಈ ಸ್ಥಿರಸಾಂಕೇತವಾದ ರಸಗತ ರಸಪದವಾಚ್ಯ ರೂಪಗಳು, ಇಪ್ಪತ್ತೊಂಬತ್ತು–ಮನೋಹರಗಳಾದಂಥಾದ್ದು ಇಪ್ಪತ್ತೊಂಬತ್ತು ರೂಪಗಳು (ಸ್ಥಿ–೯, ರ–೨ = ೨೯ ರೂಪಗಳು). ಸ್ಥಿರ ಎಂಬ ಅಕ್ಷರ ಸಾಂಕೇತರೂಪಗಳು ಅಕ್ಷರದ್ವಯ ಸೇರಿದ್ದು. ಬಲದಿಂದ ಎಡಕ್ಕೆ ಲೆಕ್ಕಮಾಡಬೇಕು. ಸಾರಗುಡದೊಳು – ಈ ಪೂರ್ವೋಕ್ತ ಫಲ ಇನ್ನು ಸ್ವಲ್ಪ ಹೆಚ್ಚುಕಾಲ ಬಲಿತ ಕಾಲದಲ್ಲಿ ಇರತಕ್ಕ ರಸಕ್ಕೆ 'ಗುಡರಸ' ಎಂತ ಸಾಂಕೇತ. ಇದಕ್ಕೆ ಪ್ರತಿನಾಮ 'ತೀಕ್ಷ್ಣ' ಎಂತ. ಈ ತೀಕ್ಷ್ಣ ಸಾಂಕೇತವಾದ ರಸಗತ, ರಸಪದವಾಚ್ಯರೂಪಗಳು ಐದುಸಾವಿರದನೂರ ಒಂದು ರೂಪ. (ತೀ–೧, ಕ್ಷ–೧೦, ಣ–೫ =೫೧೦೧). ತೀಕ್ಷ್ಣವೆಂಬ ಅಕ್ಷರಸಂಖ್ಯಾ ಭಗವದ್ರೂಪ. ಬಲದಿಂದ ಎಡಕ್ಕೆ ಲೆಕ್ಕಮಾಡಬೇಕು. ಶ್ರೀಪರಮಾತ್ಮನ ಸಮೀಚೀನವಾದ ಸಾರಭೂತ ರೂಪಗಳು ಇರೋದಾಗಿ ಅದೆ. ದ್ವಿಸಹಸ್ರಾರೆರಡುಶತಪಂಚವಿಂಶತಿರೂಪ—ದ್ವಿಸಹಸ್ರ–(೨೦೦೦) ಎರಡುಸಾವಿರ, ಆರೆರಡುಶತ–(೮೦೦) ಎಂಟುನೂರು, ಪಂಚವಿಂಶತಿ–(೨೫) ಇಪ್ಪತ್ತೈದು ರೂಪಗಳು, ಫಲ–ಚೆನ್ನಾಗಿ ಪಕ್ವಾನಂತರ ಇರತಕ್ಕ ರಸ ದಾವದದೆ, ಅದಕ್ಕೆ ಫಲರಸ ಎಂತ ಸಾಂಕೇತ. ಪ್ರತಿನಾಮ 'ನಿರಹರ' ಎಂತ. (ನಿ–೫, ರ–೨, ಹ–೪, ರ–೨ =೨೮೨೫ ರೂಪಗಳು. ಗಳಲಿ–ಈ ಪೂರ್ವೋಕ್ತ ನಾಲ್ಕು ರಸಗಳಲ್ಲಿ ವರ್ಣ ಸಾಂಕೇತ ರೂಪಗಳು, ಖಂಡ ರೂಪಗಳು, ತದಾಕಾರ ರೂಪಗಳು, ಅಖಂಡ ರೂಪಗಳು, ಉಭಯುವಿಧರೂಪಗಳು ಇರೋದಾಗಿ ಅದೆ. ೬೨೦೦೦ ರಸಭೇದಗಳು ಹ್ಯಾಂಗೆ ಆಯಿತೆಂದರೆ ಅನೇಕ ಪ್ರಕಾರ ವಿಷಯದಿಂದ ಆರು ರಸಗಳು ಪರಸ್ಪರ ಮೇಳನವಾಗಿ ಸಂಸೃಷ್ಟಗಳ ದಸಿಯಿಂದ ರಸಭೇದಗಳು ಉಂಟಾಗಿ ೬೨೦೦೦ ರಸಗಳು ಆಗೋದಾಗಿ ಅದೆ. ಆ ಭೇದಗಳು ಅಭಿಮಾನಿ ದೇವತೆಗಳಿಗೆ ವೇದ್ಯವು. ಶ್ರೀ ಪರಮಾತ್ಮನೇ ಬಲ್ಲ. ಪ್ರಾಚುರ್ಯಾಪ್ರಾಚುರ್ಯದಿಂದ ಇರೋದಾಗಿ ಅದೆ ಎಂತ ತಾತ್ಪರ್ಯ.

**ವಿಶದ ಸ್ಥಿರ ತೀಕ್ಷ್ಣಣವು ನಿರಹರ ।**
**ರಸಗಳೊಳು ಮೂರೈದು ಸಾವಿರ ।**
**ತ್ರಿಶತನವ ರೂಪಗಳ ಚಿಂತಿಸಿ ಭುಂಜಿಪುದು ವಿಷಯ ॥**
**ಶ್ವಸನ ತತ್ತ್ವೇಶರೊಳಗಿದ್ದೀ ।**
**ಪೆಸರಿನಿಂದಲಿ ಕರೆಸುವನು ಧೀ ।**
**ನಿಸಿದರೀ ಪರಿ ಮನಕೆ ಪೊಳೆವನು ಬಲ್ಲ ವಿಬುಧರಿಗೆ ॥ ೬ ॥**

ಈ ಪ್ರಕಾರ ಭಗವದ್ರೂಪಗಳ ತಿಳಿದು ಭುಂಜಿಸಬೇಕು ಎಂತ ಹೇಳತಾರೆ.

| | | |
|---|---|---|
| ೧. | ವಿಶದ—ವಿಶದರಸ ಪ್ರತಿನಾಮ ಕ್ಷೀರ | ೩೫೪ ರೂಪಗಳು |
| ೨. | ಸ್ಥಿರ—ಸ್ಥಿರರಸ ಪ್ರತಿನಾಮ ಘೃತರಸ | ೨೯ ರೂಪಗಳು |
| ೩. | ತೀಕ್ಷ್ಣ—ಈ ರಸದ ಪ್ರತಿನಾಮ ಗುಡರಸ | ೫೧೧೧ ರೂಪಗಳು |
| ೪. | ನಿರಹರ—ಈ ರಸದ ಪ್ರತಿನಾಮ ಫಲರಸ | ೨೮೨೫ ರೂಪಗಳು |
| | ರಸಗಳೊಳು—ಮೇಲ್ಕಂಡ ರಸಗಳಲ್ಲಿ ಅಂತು | ೮೩೦೯ ರೂಪಗಳು |

| | |
|---|---|
| ಮೂರೈದು ಸಾವಿರ—ಮೂರು+ಐದು=ಎಂಟುಸಾವಿರ | ೮೦೦೦ |
| ತ್ರಿಶತ—ಮುನ್ನೂರು .... .... | ೩೦೦ |
| ನವ—ಒಂಭತ್ತು .... .... | ೯ |
| ಅಂತು | ೮೩೦೯ ರೂಪಗಳು |

ರೂಪಗಳ ಚಿಂತಿಸಿ – ಮೇಲೆ ಹೇಳಿದ (೮೩೦೯) ಎಂಟುಸಾವಿರದಮುನ್ನೂರಒಂಭತ್ತು ಭಗವದ್ರೂಪಗಳ ಭೋಜನಮಾಡತಕ್ಕ ಪ್ರತಿಯೊಂದು ಫಲರೂಪವಾದ ಪದಾರ್ಥದಲ್ಲೂ ಆಲೋಚಿಸಿ ತಿಳಿದು, ಭುಂಜಿಪುದು—ಭೋಜನ ಮಾಡುವುದು (ಪೂರ್ವೋಕ್ತ ಪ್ರಕಾರ ನಾಲ್ಕು ವಿಧ ರಸಗಳು ವೃಕ್ಷಗತ ಫಲಾಂತರ್ಗತನಾಗಿ ಪರಮಾತ್ಮ ಇದ್ದು ಪೂರ್ವೋಕ್ತ ಪ್ರಕಾರ ರಸಗಳು ಅಭಿವ್ಯಕ್ತಿ ಮಾಡತಾನೆ. ಅನಭಿವ್ಯಕ್ತಿಯಾಗಿ ಬಾಲ್ಯದಲ್ಲಿ ಇದ್ದ ಪುಂಸ್ತ್ವ, ಯೌವನಕಾಲದಲ್ಲಿ ಅಭಿವ್ಯಕ್ತಿ ಮಾಡಿದಂತೆ ಇದ್ದು ಅನಭಿವ್ಯಕ್ತವಾಗಿ ಅದೆ.) ವಿಷಯ—ಭೋಜನಕ್ಕೆ ವಿಷಯವಾದ ಅನಿಷಿದ್ಧ ಪದಾರ್ಥಗಳೆಂದೂ ತಾತ್ಪರ್ಯ. ಆಯಾ ಭಗವದ್ರೂಪಗಳ ಚಿಂತಿಸಬೇಕಾದರೆ, ಶ್ವಸನ ತತ್ತ್ವೇಶರೊಳಗಿದ್ದು—ತತ್ತ್ವೇಶರು—ಪ್ರತಿ ಪ್ರತಿ ಪದಾರ್ಥದಲ್ಲೂ ಚತುರ್ವಿಂಶತಿ ತತ್ತ್ವಗಳು, ತದಭಿಮಾನಿಗಳಾದ ದೇವತೆಗಳು, ತಾರತಮ್ಯಾನುಸಾರ ಗೋಳಕತ್ವೇನ ಇದ್ದಾರೆ. ಅದರಲ್ಲಿ, ಶ್ವಸನ—ವಿಜ್ಞಾನತತ್ತ್ವಾಭಿಮಾನಿ ವಾಯುದೇವರು ನೀಚಕ್ರಮದಿಂದ ಉತ್ತಮರಲ್ಲಿ ಅಂತ್ಯಗೋಳಕನೂ, ಇಂಥಾ ವಾಯುದೇವರು, ಒಳಗಿದ್ದು—ವಾಯುಗೋಳಕಾಂತರ್ಗತನಾಗಿ ಇದ್ದವನಾಗಿ, ಈ ಪೆಸರಿನಿಂದಲಿ ಕರೆಸುವನು—ವಿಶ್ವದ ಸ್ಥಿರಾದಿ ನಾಮಗಳಿಂದ ಅಖಂಡರಸರೂಪನಾಗಿ ಇದ್ದು, ವರ್ಣ

ಸಾಂಕೇತದಿಂದ ಖಂಡರೂಪನಾಗಿ, ವರ್ಣಸಾಂಕೇತ ನಾಮಗಳಿಂದ ಕರಿಸತಾನೆ. ತದ್ವತ್ ದೇಹಾಂತರ್ಗತನಾಗಿಯೂ ಇದ್ದಾನೆ. ಈ ಪೂರ್ವೋಕ್ತ ನಾಲ್ಕು ವಿಧ ರಸಗಳಿಗೆ ದೃಷ್ಟಾಂತ, ದೇಹದಲ್ಲಿ ಹ್ಯಾಂಗೆಂದರೆ :– ಬಾಲ್ಯ, ಯೌವನ, ಕೌಮಾರ, ವಾರ್ಧಿಕ್ಯ ನಾಲ್ಕು ಕಾಲದಲ್ಲಿ ನಾಲ್ಕು ವಿಧ ರಸವಿಶೇಷದಿಂದ ಯುಕ್ತವಾಗಿ ಇರುತ್ತದೆ. ತದ್ವತ್ ಫಲಾದಿಗಳಲ್ಲಿ ಬಾಲ್ಯ, ಯೌವನ, ಕೌಮಾರ, ವಾರ್ಧಿಕ್ಯ ಈ ನಾಲ್ಕು ಕಾಲದಲ್ಲಿ ನಾಲ್ಕು ವಿಧ ರಸವಿರುತ್ತದೆ ಎಂತ ತಾತ್ಪರ್ಯ. ಉಭಯತ್ರದಲಿ ಈ ಪ್ರಕಾರ ನಾಮ ಗಳಿಂದ ಕರಿಸುತ, ಧೇನಿಸಿದರೀಪರಿ–ಅನುಸಂಧಾನದಿಂದ ಈ ಪ್ರಕಾರ ತನ್ನ ಮನೋ ವಾಸನಾದಿಂದ ಧ್ಯಾನಮಾಡಿದರೆ, ಮನಕೆ ಪೊಳೆವನು–ಮನಸ್ಸಿಗೆ ಹೊಳೆಯತಾನೆ. ಬಲ್ಲ– ದಾರಿಗೆಂದರೆ ಅನುಸಂಧಾನಮಾರ್ಗ ಗುರುಗಳಿಂದ ಛಂದಾಗಿ ಅರಿತು ಅಹಂಮಮತಾದಿಗಳ ತ್ಯಜಿಸಿ ತಾರತಮ್ಯ, ಪಂಚಭೇದ, ಮಾಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹ ಶ್ರೀ ಪರಮಾತ್ಮನಲ್ಲಿ ಮಾಡುವಂಥಾ, ವಿಬುಧರಿಗೆ–ಭಗವದ್ಭಕ್ತರಿಗೆ (ದಾರ್ಢ್ಯವಿಲ್ಲದವರಿಗೆ ಮನಸ್ಸಿಗೆ ಹೊಳೆಯೋದಿಲ್ಲ).

**ವಿಶೇಷಾರ್ಥ :–** ವಿಶದಾದಿ ಪ್ರತಿನಾಮ ಕ್ಷೀರಾದಿ ನಾಲ್ಕು ರಸಗಳು ದಾವ ದೆಂದರೆ :– ಆಮ್ಲಾದಿ ಆರು ರಸಗಳು ಲೋಕದಲ್ಲಿ ಪ್ರಸಿದ್ಧ ರಸಗಳು, ತದನ್ಯ ವ್ರೀಹ್ಯಾದಿ (ಬಿದಿರಕ್ಕಿ) ಫಲಶಾಖಾದಿ ಅನೇಕ ಜಾತಿ ಫಲಾದಿಗತ ರಸಗಳು ಎಷ್ಟು ಪ್ರಕಾರವೆಂದರೆ (೧) ವಿಶದ–ಕ್ಷೀರಗತ ರಸಸದೃಶಯುಕ್ತವಾದದ್ದು ಕೆಲವು, (೨) ಘೃತರಸಸದೃಶಯುಕ್ತ ವಾದದ್ದು ಕೆಲವು, (೩) ತೀಕ್ಷ್ಣ–ಗುಡರಸಸದೃಶಯುಕ್ತವಾದದ್ದು ಕೆಲವು, (೪) ನಿರಹರ– ಫಲರಸಸದೃಶಯುಕ್ತವಾದದ್ದು ಕೆಲವು, ಅಂದರೆ ಫಲರಸ ಛಂದಾಗಿ ಪಕ್ವಾನಂತರ ಪೂರ್ಣ ರಸಯುಕ್ತವಾಗಿ ಭೋಜನಕ್ಕೆ ಉಪಯೋಗವಾಗಿ ಇರುವ ರಸವುಳ್ಳದ್ದು ಕೆಲವು. ಅಂತು ಈ ದಿಕ್ಪ್ರದರ್ಶನದಿಂದ ಆಮ್ಲಾದಿ ಪ್ರಸಿದ್ಧರಸಗಳು ಆರು ರಸಗಳೋಪಾದಿ ನಾಮನಿರ್ಣಯ ಮಾಡೋಡಕ್ಕೆ ಶಕ್ಯವಲ್ಲ. ಅನೇಕವಿಧ ರಸಗಳು ಅನೇಕವಿಧ ಪದಾರ್ಥಗಳಲ್ಲಿ ಇರೋ ದಾಗಿ ಅದೆ. ಏತಾದೃಶ ರಸಗಳು ಯಾವತ್ತು ಆರು ರಸಗಳಲ್ಲಿ ಅಂತರ್ಭೂತಗಳೆಂದು ತಾತ್ಪರ್ಯ. ೮೩೦೯ ಭಗವದ್ರೂಪಗಳು ಚಿಂತಿಸಬೇಕೆಂಬೋದಕ್ಕೆ ಪ್ರಮಾಣ : ಗುರುವೃತ್ತ – " ನವಾಧಿಕತ್ರಿಶತಕೈಃ ವಸುಸಂಖ್ಯಾಸಹಸ್ರಕೈಃ | ವಿಶದಾದಿರಸಸ್ಥಾನಿ ಜ್ಞೇಯಾನಿ ಚ ಬುಭುಕ್ಷುಭಿಃ || " ಇತಿ. ಮೇಲೆ ಹೇಳಿದ ವಿಶದಾದಿ ರಸಗಳು ಕ್ಷೀರಾದಿ ಪದಾರ್ಥಗತವೆಂಬೋದಕ್ಕೆ ಪ್ರಮಾಣ :– ಐತರೇಯಭಾಷ್ಯ "ವಿಶದಂ ಕ್ಷೀರಮಾಧುರ್ಯಂ ಸ್ಥಿರಮಾಜ್ಯಸ್ಯ ತೀಕ್ಷ್ಣಕಂ | ಗುಡಸ್ಯ ಪನಸಾದೀನಾಂ ನಿರಾಹಾರ್ಯಭಿಧೀಯತೇ || " ಈ ಪದಾರ್ಥಗಳಲ್ಲಿ ತನ್ನಾಮ, ತದ್ರೂಪ, ತದಾಕಾರನಾಗಿದ್ದಾನೆಂದು ಚಿಂತಿಸಬೇಕೆಂದು ತಾತ್ಪರ್ಯ.

**ಕಪಿಲ ನರಹರಿ ಭಾರ್ಗವತ್ರಯ |**
**ವಪುಷನೇತ್ರದಿ ನಾಸಿಕಾಸ್ಯದಿ |**
**ಶಫರನಾಮಕ ಜಿಹ್ವೆಯಲಿ ದಂತದಲಿ ಹಂಸಾಖ್ಯ ||**

**ತ್ರಿಪದಿಪಾದ್ಯಹಯಾಸ್ಯ ವಾಚ್ಯದೊ।**
**ಳಪರಿಮಿತ ಸುಖಪೂರ್ಣ ಸಂತತ**
**ಕೃಪಣರೊಳಗಿದ್ದವರವರ ರಸ ಸ್ವೀಕರಿಸಿ ಕೊಡುವ ॥ ೭ ॥**

ದೇಹಧಾರಿ ದ್ವಾರಾ ದೇಹದಿಂದ ಭೋಜನ ಮಾಡತಕ್ಕ ಕ್ರಮವನ್ನ ಹೇಳತಾರೆ.

ಕಪಿಲ–ಕಪಿಲನಾಮಕ ಶ್ರೀ ಪರಮಾತ್ಮ, ವಪುಷ–ಉಂಗುಷ್ಟ ಆರಂಭಮಾಡಿ ಶಿರಪರಿಯಂತ ಸ್ಥೂಲದೇಹಾಕಾರನಾಗಿ ಮಾನುಷ ಪಶ್ವಾದಿ ಶಬ್ದವಾಚ್ಯನಾಗಿ ತ್ವಗಿಂದ್ರಿಯಾಂತರ್ಗತನಾಗಿ ಇರೋವನಾಗಿದ್ದಾನೆ. ನರಹರಿ–ಶ್ರೀ ನರಸಿಂಹರೂಪಿ ಪರಮಾತ್ಮ, ನೇತ್ರದಿ–ನೇತ್ರದ್ವಯಗಳಲ್ಲಿದ್ದಾನೆ. ಭಾರ್ಗವ–ಶ್ರೀಪರಶುರಾಮದೇವರು, ನಾಸಿಕಾಸ್ಯದಿ–ನಾಸಿಕ–ಮೂಗಿನ, ಆಸ್ಯದಿ–ಮುಖಭೂತವಾದ ದ್ವಾರದ್ವಯಗಳಲ್ಲಿ ಇದ್ದಾನೆ. ತ್ರಯ–ಈ ಮೂರು ಭಗವದ್ರೂಪಗಳು ಮೂರು ಇಂದ್ರಿಯಗಳಲ್ಲಿ ಭೋಜನಾದಿಗಳಿಗೆ ಸಾಧನ ಭೂತವಾದ ಕಾರ್ಯಪ್ರೇರಕರಾಗಿ ಇದ್ದಾರೆ. (ಒಂದು ಪದಾರ್ಥ ಭೋಜನಮಾಡಬೇಕಾದರೆ ಕಠಿಣ, ಮೃದು, ಶೀತೋಷ್ಣಗಳು ತಿಳಿಯಬೇಕು. ಅದು ತ್ವಗಿಂದ್ರಿಯದ ಕಾರ್ಯ. ತದ್ಗತನಾಗಿ ಕಪಿಲನಾಮಕ ಪರಮಾತ್ಮ ತಿಳಸತಾನೆ.ನಂತರ ಆ ಪದಾರ್ಥಗಳ ವರ್ಣಭೇದಗಳೇನು, ಭೋಜನೋದ್ದೇಶ್ಯ ನೋಡೋಣವೇನು, ನೇತ್ರಗಳಿಗೆ ಪದಾರ್ಥ ಸೌಷ್ಠವ ಇಂಪಣವಾಗಿದೆಯೇ ಇಲ್ಲವೇ ಎಂತ ಇತ್ಯಾದಿ ವ್ಯಾಪಾರಗಳು ನೇತ್ರೇಂದ್ರಿಯದಲ್ಲಿ ನೃಸಿಂಹರೂಪಿ ಪರಮಾತ್ಮ ಇದ್ದು ಆ ಕಾರ್ಯ ನಡಸತಾನೆ. ನಾಸಿಕೇಂದ್ರಿಯದಲ್ಲಿ ಪರಶುರಾಮದೇವರು ಇದ್ದು ಭೋಜನದ್ರವ್ಯಗತ ಸುಗಂಧದುರ್ಗಂಧಗಳ ತಿಳಸತಾನೆ. ಶಫರನಾಮಕ ಜಿಹ್ವೆಯಲಿ–ಮಚ್ಛರೂಪೀ ಪರಮಾತ್ಮ ಜಿಹ್ವಾಂತರ್ಗತನಾಗಿ ಸುರಸ ದುಷ್ಟರಸಗಳ ಪ್ರಾಚುರ್ಯಾಪ್ರಾಚುರ್ಯಗಳ ತಿಳಸತಾನೆ. ದಂತದಲಿ ಹಂಸಾಖ್ಯ–ಮುಖಗತ ಹಲ್ಲುಗಳಲ್ಲಿ ಹಂಸರೂಪೀ ಪರಮಾತ್ಮ ಇದ್ದು ಕಠಿಣದ್ರವ್ಯಗಳ ದಂತಗಳ ದ್ವಾರಾ ಅಗಿಸಿ ರಸವ್ಯಕ್ತಿಮಾಡಿ ಕಂಠದ್ವಾರಾ ಉದರಪ್ರವೇಶಕ್ಕೆ ಅನುಕೂಲಮಾಡಿಕೊಡತಾನೆ. ತ್ರಿಪದಿಪಾದ್ಯ– ತ್ರಿಪದಿ–ಮೂರು ಪಾದವುಳ್ಳದ್ದು ತ್ರಿಪದಿ ಎಂತ ಸಾಂಕೇತವು. ನಾಲ್ಕು ವೇದಗಳು ನಾಲ್ಕು ಪಾದ. ಅದರಲ್ಲಿ ಅಥರ್ವಣ ವೇದ ವ್ಯತಿರಿಕ್ತವಾಗಿ ಋಗಾದಿ ವೇದಗಳಿಂದ ಮತ್ತು ಗಾಯತ್ರಿ ಪಾದತ್ರಯಗಳಿಂದ, ಪಾದ್ಯ–ಪ್ರತಿಪಾದ್ಯನಾದ, ಹಯಾಸ್ಯ–ಶ್ರೀಹಯಗ್ರೀವದೇವರು, ವಾಚ್ಯದೊಳು–ಮುಖದಲ್ಲಿ ಇದ್ದವನಾಗಿ ಭೋಜನಪದಾರ್ಥಗಳಿಗೆ ಮುಖದಲ್ಲಿ ಅವಕಾಶ ಕೊಡತಾನೆ. ಅಪರಿಮಿತ ಸುಖಪೂರ್ಣ–ಅಪರಿಚ್ಛಿನ್ನವಾದ ಆನಂದವೇ ಶರೀರವಾಗಿ ಸುಗುಣಗಳಿಂದ ಪೂರ್ಣನಾದವನಾದ್ದರಿಂದ ಆಯಾ ಅಧಿಷ್ಠಾನ–ಗತ ಅಪರಿಮಿತ ಸುಖಪೂರ್ಣಗಳಾದ, ತನ್ನ ಸ್ವಾಖ್ಯಗಳ ತಾನು ಸ್ವೀಕರಿಸುತಾ, ಕೃಪಣರೊಳಗಿದ್ದು–ದೇಹದೊಳಗೆ ಇದ್ದು ಎಂತ ಒಂದು ಅರ್ಥ, ನಿಷ್ಕಿಂಚನರು ಎಂತಲೂ ಒಂದು ಅರ್ಥ, ದೇವತೆಗಳು ಎಂತಲೂ ಅರ್ಥ. ಪ್ರಕೃತ ಕೃಪಣನಾದ ಅನ್ನಾತುರನಾಗಿ ಜಠರಾಗ್ನಿಯ ಪ್ರಜ್ವಲನದಿಂದ ಅನ್ನಾಕಾಂಕ್ಷನಾಗಿ ಇದ್ದ ಪುರುಷನಲ್ಲಿ ಪೂರ್ವೋಕ್ತರೂಪಗಳಿಂದ

ಇದ್ದವನಾಗಿ, ಅವರವರ–ಆಯಾ ಪ್ರಾಣಿಗಳಾದ ಮಾನುಷಪಶ್ವಾದಿ ಜೀವರ ಭೋಜ್ಯ ಪದಾರ್ಥಗಳ, ರಸ–ತದ್ಗತ ರಸಗಳ, ಸ್ವೀಕರಿಸಿ–ತನ್ನ ರಸಗಳ ತಾನು ಸ್ವೀಕರಿಸಿ, ಸಂತತ–ಯಾವಾಗಲೂ, ಈವ–ಅವರವರ ರಸ ಅವರವರಿಗೆ ಕೊಡತಾನೆ.

**ತಾ||** ಅಧಿಕಾರಿಗಳು ದಾವದು ಭಕ್ಷಣ ಮಾಡಿದ ಕಾಲಕ್ಕೂ ಮೇಲೆ ಹೇಳಿದ ಪ್ರಕಾರ ಆಯಾ ಇಂದ್ರಿಯಗತ ಭಗವದ್ರೂಪಗಳ ವ್ಯಾಪಾರ ಅನುಸಂಧಾನ ಪೂರ್ವಕ ವಾಗಿ ಭೋಜನ ಮಾಡಬೇಕು. ಅದೇ ಪ್ರಕಾರ ಅನ್ಯರಿಗೆ ಭೋಜನ ಮಾಡಿಸಿದರೂ ಈ ಅನುಸಂಧಾನ ಮಾಡಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಕಪಿಲ ಎಂಬ ಪದಕ್ಕೆ ಅರ್ಥ :– " ಕಂ ಸುಖಂ ಪಿಬತೀತ್ಯಾ ನಂದಾನುಭವಾತ್ ಲಾತ್ಸರ್ವಾದಾನಾಚ್ಚ ಕಪಿಲಃ " ಇತಿ.

**ನಿರುಪಮಾನಂದಾತ್ಮ ಹರಿ ಸಂ |**
**ಕರುಷಣ ಪ್ರದ್ಯುಮ್ನರೂಪದಿ |**
**ಇರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಯೆನಿಸಿ ||**
**ಕರೆಸುವನು ನಾರಾಯಣನಿರು |**
**ದ್ಧರಡುನಾಮದಿ ಭೋಜ್ಯವಸ್ತುಗ |**
**ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ || ೮ ||**

ಜೀವರ ದೇಹಗಳಲ್ಲಿದ್ದು ಭೋಜನ ಮಾಡುವ ಶಕ್ತಿ ಕೊಡತಕ್ಕ ಭಗವದ್ರೂಪ ಗಳನ್ನು ಭೋಜ್ಯ ಪದಾರ್ಥಗಳಲ್ಲಿಟ್ಟು, ಜೀವಗೆ ತೃಪ್ತಿಯನ್ನು ಉಂಟು ಮಾಡುವ ಭಗ ವದ್ರೂಪಗಳನ್ನು ಈ ಶ್ಲೋಕದಿಂದ ಹೇಳಥಾರೆ.

ಭೋಜನ ಶಕ್ತಿ ಕೊಡುವ ರೂಪ, ಪದಾರ್ಥ ದ್ವಾರಾ ತರ್ಪಕ (ತೃಪ್ತಿ ಕೊಡತಕ್ಕ) ರೂಪಗಳ ಹೇಳಥಾರೆ.

ನಿರುಪಮಾನಂದಾತ್ಮ–ನಿರುಪಮ–ಉಪಮಾನ ರಹಿತನಾದ, ಆನಂದ–ಸಂತೋಷ ಸಮೂಹವೂ, ಆತ್ಮ–ಶರೀರವಾಗಿ ಉಳ್ಳ ಹಾಂಗೆ ಬಲಜ್ಞಾನಾದಿಗಳು ದಿವ್ಯ ಸೌಂದರ್ಯ ರೂಪಗಳು ಉಳ್ಳ, ಹರಿ–ಪರಮಾತ್ಮನು ಮನದಲ್ಲಿ, ಸಂಕರುಷಣ–ಸಂಕರ್ಷಣ ದೇವರು, ಜ್ಞಾನೇಂದ್ರಿಯಗಳಲ್ಲಿ, ಪ್ರದ್ಯುಮ್ನ–ಪ್ರದ್ಯುಮ್ನ, ಕರ್ಮೇಂದ್ರಿಯಗಳಲ್ಲಿ, ರೂಪದಿ–ಈ ಮೂರು ರೂಪಗಳಿಂದ, ಭೋಕ್ತೃಗಳೊಳಗೆ–ಭೋಕ್ತೃಗಳು ದೇಹ ಅಧಿಷ್ಠಿತ ಜೀವ, ತತ್ವದೇವತೆಗಳಾದ ದೇವ, ದೈತ್ಯ, ನಿತ್ಯ ಸಂಸಾರಿಗಳು ಇಷ್ಟು ಮಂದಿ ಒಂದೇ ಪದಾರ್ಥ ಗತ ತಮ್ಮ ತಮ್ಮ ಭೋಜನೋಪಯೋಗ್ಯಗಳ ಭೋಜನ ಮಾಡತಕ್ಕವರು ಆದ್ದರಿಂದ ಏತಾದೃಶ ಭೋಕ್ತೃಗಳು ಪೂರ್ವೋಕ್ತ ಇಂದ್ರಿಯಗಳ ಒಳಗಿದ್ದು, ತತ್–ಅವರವರ ಆಯಾ ಇಂದ್ರಿಯಗತಗಳಾದ್ದರಿಂದ, ಶಕ್ತಿದನು–ಪೂರ್ವೋಕ್ತ ರೂಪತ್ರಯಗಳಿಂದ ಅವ ರವರ ಯೋಗ್ಯವಾದ ಶಕ್ತಿಗಳ ತನ್ನ ವ್ಯತಿರಿಕ್ತ ಅನಭಿವ್ಯಕ್ತಿಯಾಗಿ ಇರುವದರನ್ನ

ವ್ಯಕ್ತಮಾಡಿ ಕೊಡತಕ್ಕವನು ಎಂತ, ಎನಿಸಿ–ಅನಿಸಿವವನಾಗಿ, ಇರುತಿಹನು–ದೇಹದಲ್ಲಿ ಇರೋವನಾಗಿ ಇದ್ದಾನೆ. ಸ್ವಾತಂತ್ರ್ಯೇಣ ಭೋಜನಾದಿಕ್ರಿಯಾಶಕ್ತಿಹೀನರಾದ (ಶೂನ್ಯರಾದ) ಪ್ರಯುಕ್ತ ಈ ಪ್ರಕಾರ ಕರಿಸೋವನಾಗಥಾನೆ. ಜ್ಞಾನಶಕ್ತಿ ಎಂತಲೂ, ಕರ್ಮಶಕ್ತಿ ಎಂತಲೂ, ಇಚ್ಛಾಶಕ್ತಿ ಎಂತಲೂ ಕರಿಸಥಾನೆ ಎಂತ ಅರ್ಥ. ನಾರಾಯಣನು–ನಾರಾಯಣ ಎಂತಲೂ, ಅನಿರುದ್ಧ–ಅನಿರುದ್ಧ ಎಂತಲೂ, ಎರಡು ನಾಮದಿ–ಈ ಎರಡು ನಾಮಗಳಿಂದ, ಭೋಜ್ಯವಸ್ತುಗ–ಭೋಜನಕ್ಕೆ ಯೋಗ್ಯವಾದ ಅನ್ನದಲಿ ನಾರಾಯಣ, ಉದಕದಲಿ ಅನಿರುದ್ಧ, ಈ ಎರಡರಲಿ ಎರಡು ರೂಪದಿಂದ ಇರತಕ್ಕವನಾಗಿ, ನಿರುತ-ತರ್ಪಕನಾಗಿ–ನಿರಂತರ ಕ್ಷುತ್ತು ತೃಷಾದಿಗಳ ಶಮನ ಮಾಡತಕ್ಕದ್ದು, ತೃಪ್ತಿಗೆ ಹೇತು ಭೂತವಾದದ್ದು ದಾವದೋ ಅದಕ್ಕೆ ತರ್ಪಕ ಎಂತ ನಾಮ. ಆ ಎರಡು ಗುಣ ಅನ್ನೋದ ಕಾದಿಗಳಲ್ಲಿ ಅದೆ. ಆದ್ದರಿಂದ ತರ್ಪಕವಾಯಿತು. ಅವುಗಳಿಗೆ ಸ್ವತಃ ತರ್ಪಕ ಶಕ್ತಿ ಇಲ್ಲ. ಆದ್ದರಿಂದ ಅದರಲ್ಲಿ ತರ್ಪಕ ಶಬ್ದ ವಾಚ್ಯನಾಗಿದ್ದು, ತೃಪ್ತಿಯನು–ಪೂರ್ವೋಕ್ತ ಪ್ರಕಾರ ಜಿಹ್ವೆ, ದಂತಾದಿಗಳಲ್ಲಿದ್ದು, ಭೋಜನ ಮಾಡಿಸಿ ಕ್ಷುತ್ ಪಿಪಾಸಾದಿಗಳ ಹೋಗಲಾಡಿಸಿ ತೃಪ್ತಿಯನ್ನು, ಚೇತನಕೆ–ಸರ್ವಜೀವರಿಗೆ, ಈವ–ಅನ್ನೋದಕಾದಿಗಳಿಂದ ಅಂತರ್ಗತ ನಾಗಿ ಇದ್ದು ತೃಪ್ತಿ ಪಡಿಸೋವನಾಗಥಾನೆ.

**ತಾ||** ಸಚ್ಚಿದಾನಂದ ಸ್ವರೂಪಿಯಾದ ಶ್ರೀ ಪರಮಾತ್ಮ ತ್ರಿವಿಧ ಜೀವರೂ ಸ್ವಾತಂತ್ರ್ಯೇಣ ಭೋಜನಾದಿಕ್ರಿಯಾಶಕ್ತಿಶೂನ್ಯರಾದ ಪ್ರಯುಕ್ತ ಮನದಲ್ಲಿ ಹರಿ ರೂಪಕನಾಗಿಯೂ, ಜ್ಞಾನೇಂದ್ರಿಯಗಳಲ್ಲಿ ಸಂಕರ್ಷಣರೂಪನಾಗಿಯೂ, ಕರ್ಮೇಂದ್ರಿಯಗಳಲ್ಲಿ ಪ್ರದ್ಯುಮ್ನರೂಪನಾಗಿಯೂ, ತ್ರಿವಿಧ ಜೀವರ ಇಂದ್ರಿಯಗಳಲ್ಲಿದ್ದು ಜ್ಞಾನಶಕ್ತಿ ಎಂತಲೂ, ಕರ್ಮಶಕ್ತಿ ಎಂತಲೂ, ಇಚ್ಛಾಶಕ್ತಿ ಎಂತಲೂ ಕರಿಸಿ ಆಯಾ ಇಂದ್ರಿಯಗಳ ಯೋಗ್ಯತಾತಾರತಮ್ಯಾನುಸಾರ ಭೋಜ್ಯಗಳಾದ ಅನ್ನದಲಿ ನಾರಾಯಣ ರೂಪದಿಂದಲೂ, ಪಾನಕ್ಕೆ ಯೋಗ್ಯವಾದ ಉದಕದಲ್ಲಿ ಅನಿರುದ್ಧ ರೂಪದಿಂದಲೂ, ತರ್ಪಕ ಶಬ್ದವಾಚ್ಯನಾಗಿ ಜೀವರ ಜಿಹ್ವೆ, ದಂತಾದಿಗಳಲ್ಲಿದ್ದು ಭೋಜನ ಮಾಡಿಸಿ, ಕ್ಷುತ್ಪಿ ಪಾಸಾದಿಗಳನ್ನು ಹೋಗಲಾಡಿಸಿ ತೃಪ್ತಿಯನ್ನ ಒಡಿಸಥಾನೆ. ಹ್ಯಾಂಗೆಂದರೆ ದೇಹಗತ ತ್ರಿವಿಧ ತತ್ವೇಶರಿಗೆ ಆತ್ಮ ಪ್ರದರ್ಶನದಿಂದಲೂ ವ್ಯಾಪ್ತನಾದ ಜೀವಗೆ ನೋಡಿ ಸಂತೋಷ ದಿಂದಲೂ, ದೇಹಕ್ಕೆ ಉಪಚಯರೂಪದಿಂಪಲೂ ಜಠರಾಗ್ನಿಗೆ ಅಗ್ನಿ ಪ್ರಜ್ವಲನರಹಿತಾದಿ ಗಳಿಂದಲೂ ತೃಪ್ತಿಯ ಪಡಿಸಥಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಮೇಲೆ ಹೇಳಿದ್ದಕ್ಕೆ ಪ್ರಮಾಣ : "ಸಂಕರ್ಷಣಶ್ಚ ಪ್ರದ್ಯುಮ್ನೌ ತತ್ರ ಭೋಕ್ತೃಷು ಸಂಸ್ಥಿತೌ | ಭೋಕ್ತೃಶಕ್ತಿಪ್ರದೌ ನಿತ್ಯಂ ಭೋಕ್ತಾರೌ ಚ ವಿಶೇಷತಃ || ೧ || ನಾರಾಯಣಾನಿರುದ್ಧೌ ತು ಭೋಜ್ಯವಸ್ತುಷು ಸಂಸ್ಥಿತೌ | ತರ್ಪಕೌ ಸರ್ವಜೀವಾನಾಂ ತಸ್ಮಾದ್ಭೋಜ್ಯೌ ನ ಚಾನ್ಯಥೇತಿ || ೨ ||

**ವಾಸುದೇವನು ಒಳಹೊರಗೆ ಅವ |**
**ಕಾಶ ಕೊಡುವ ನಭಸ್ಥನಾಗಿ ರ |**
**ಮಾಸಮೇತ ವಿಹಾರವಾಳ್ಪನು ಪಂಚರೂಪದಲಿ ||**
**ಆ ಸರೋರುಹಸಂಭವಭವ |**
**ವಾಸವಾದ್ಯಮರಾದಿಚೇತನ |**
**ರಾಶಿಯೊಳಗಿಹನೆಂದು ಅರಿತವನೆ ಕೋವಿದನು || ೯ ||**

ಇನ್ನೂ ಭೋಜನಕ್ಕೆ ಅವಕಾಶ ಕೊಡತಕ್ಕವನು ವಾಸುದೇವನೆಂದು ಹೇಳಥಾರೆ.

ವಾಸುದೇವನು–ವಾಸುದೇವ ರೂಪಿಯಾದ ಶ್ರೀ ಪರಮಾತ್ಮನು, ರಮಾಸಮೇತ–ತನ್ನ ಪತ್ನಿಯಾದ ಮಾಯಾದೇವಿಯಿಂದ ಯುಕ್ತನಾಗಿ, ನಭಸ್ಥನಾಗಿ–ಕಂಠಗತ ಆಕಾಶದಲಿ ವಿದ್ಯಮಾನನಾಗಿ, ಒಳಗೆ–ಭೋಜನ ಮಾಡಿದ ದ್ರವ್ಯಗಳು ಉದರ ಪ್ರವೇಶಕ್ಕೂ, ಹೊರಗೆ–ಒಳಗೆ ಪ್ರವೇಶವಾಗಿ ಅದರ ಮತ್ತು ಉದರಗತ ಆಕಾಶದಲ್ಲೂ, ಬಹಿರ್ಗತ ಮುಖದಲ್ಲಿ ವಿದ್ಯಮಾನವಾದ ಆಕಾಶದಲ್ಲೂ ಇದ್ದು, ಅನ್ನೋದಕಾದಿ ಭೋಜನಕ್ಕೂ ಉದರದಲಿ ಧಾರಣೆಗ್ಯೂ, ಅವಕಾಶ ಕೊಡುವ–ವಿರಾಮ ಕೊಡಥಾನೆ. ವಿಹಾರ–ಮಾಳ್ಪನು–ಗುಣಪೂರ್ಣನಾದ ಒಬ್ಬ ಪರಮಾತ್ಮನೇ ತನ್ನ ಅನೇಕ ಅಭಿನ್ನಾಂಶ ರೂಪಗಳಿಂದ ಪೂರ್ವೋಕ್ತ ಪ್ರಕಾರ ಪ್ರಾಣಿಗಳ ಸಂರಕ್ಷಣಾರ್ಥ ಆಟಗಳ ಆಡೋವನಾಗಿದ್ದಾನೆ. ಪಂಚರೂಪದಲಿ–ಪೂರ್ವೋಕ್ತ ಅನಿರುದ್ಧಾದಿ ಐದು ರೂಪಗಳಿಂದ ಎಂತ ಅರ್ಥ ಮತ್ತು (ಪಂಚ–೧. ಬ್ರಹ್ಮಾದಿ ಋಜುಗಳು, ೨. ರುದ್ರಾದಿ ಶತಸ್ಥಾಂತ, ೩. ಕರ್ಮಜ ಪುಷ್ಕರಾಂತ, ೪. ಆಜಾನಜರು, ದೇವ ಗಂಧರ್ವಾಂತ, ೫. ಮಾನುಷರು ತೃಣಾಂತ ಈ ಐದು ವಿಧ ಜೀವರಲಿ) ರೂಪದಲಿ ಪೂರ್ವೋಕ್ತ ಹರಿ ಸಂಕರುಷಣಾದಿ ಆರು ರೂಪಗಳಿಂದ ವಿಹಾರ ಮಾಡಥಾನೆ (ವಿವಿಕ್ಷಾ ಭೇದದಿಂದ ಐದು, ಆರು, ಎರಡು ಪ್ರಕಾರ ಗ್ರಾಹ್ಯವು), ಆ ಸರೋರುಹಸಂಭವ–ಈ ಪೂರ್ವೋಕ್ತ ಜೀವರಲಿ, ಪದ್ಮನಾಭದೇವರ ನಾಭಿ ಕಮಲದಿಂದ ಉತ್ಪನ್ನರಾದ ಬ್ರಹ್ಮದೇವರು ಇವರಿಂದ ಸರ್ವ ಋಜುಗಳೂ ಗ್ರಾಹ್ಯ. ಭವ–ಪಾರ್ವತೀಪತಿಯಾದ ರುದ್ರದೇವರು, ವಾಸವ–ಶಚೀಪತಿಯಾದ ಇಂದ್ರದೇವರು, ಆದಿ–ಮೊದಲಾದ, ಅಮರ–ನಾಲ್ಕು ವಿಧರಾದ ದೇವತೆಗಳು ದೇವಗಂಧರ್ವರ ಪರಿಯಂತ, ಆದಿ–ದೇವತಾಸಮೂಹವೇ ಆದಿಯಾಗಿ, ಚೇತನ–ತದನ್ಯರಾದ ಐದನೇವರಾದ ಪೂರ್ವೋಕ್ತ ನಿರಂಶ ತೃಣಾಂತ ಸರ್ವಚೇತನರ, ರಾಶಿಯೊಳಗೆ–ಇಂಥಾ ಐದು ವಿಧ ಸಮೂಹದೊಳಗೆ ಪೂರ್ವೋಕ್ತಪ್ರಕಾರ, ಇಹನೆಂದು–ಇದ್ದಾನೆ ಎಂದು, ಅರಿತವನೆ–ತಿಳಿದು ಅನುಷ್ಠಾನ ಮಾಡತಕ್ಕವನೇ, ಕೋವಿದನು – ಸಮರ್ಥನಾದ ಜ್ಞಾನಿಯು, ಇವನೇ ಭಗವದ್ಭಕ್ತನು ಎಂತ ತಾತ್ಪರ್ಯ.

**ವಿಶೇಷಾರ್ಥ :**–ಉಕ್ತಂ ಚ ಐತರೇಯೇ "ಅವಕಾಶಪ್ರದೋ ನಿತ್ಯಂ ವಾಸುದೇವೋ ನಭಸ್ಥಿತಃ | ಪಂಚರೂಪಾತ್ಮಕಂ ವಿಷ್ಣುಂ ಯ ಉಪಾಸ್ತೇ ಸದೈವ ಹಿ || " ಇತಿ.

**ವಾಸುದೇವನು ಅನ್ನದೊಳು ನಾ ।**
**ನಾ ಸುಭಕ್ಷ್ಯದಿ ಸಂಕರುಷಣ ಕೃ ।**
**ತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ್ಧ ॥**
**ಆ ಸುಪರ್ಣಾಂಸಗನು ಸೂಪದಿ ।**
**ವಾಸವಾನುಜ ಶಾಕದೊಳು ಮೂ ।**
**ಲೇಶ ನಾರಾಯಣನು ಸರ್ವತ್ರದಲಿ ನೆಲಸಿಹನು ॥ ೧೦ ॥**

ಭೋಜನಕ್ಕೆ ಸಿದ್ಧವಾದ ಪಚನವಾದ ಪದಾರ್ಥಗತ ಭಗವದ್ರೂಪಗಳ ಅನುಸಂಧಾನಕ್ರಮ ಹೇಳತಾರೆ.

ವಾಸುದೇವನು – ಮಾಯಾನಾಮಕ ಲಕ್ಷ್ಮೀದೇವೇರ ಪತಿಯಾದ ಶ್ರೀ ವಾಸುದೇವನು, ಅನ್ನದೊಳು–ತಂಡುಲದಿಂದ ಪಚನವಾದ ಅನ್ನದಲ್ಲಿ ಇದ್ದಾನೆ. ಪೂರ್ವದಲ್ಲಿ ಫಲರೂಪವಾದ ವ್ರೀಹ್ಯಾದಿಗಳಲ್ಲಿ ಭಗವದ್ರೂಪಗಳ ಹೇಳಿ ಈಗ ಪಚನವಾದ ಪದಾರ್ಥಗಳಲ್ಲಿ ಭಗವದ್ರೂಪಗಳ ಹೇಳತಾರೆ. ಕಾರಣವೇನೆಂದರೆ, ಸರ್ವಪದಾರ್ಥಗಳೂ ಈಶ್ವರನಿಂದ ರಚಿತವಾದದ್ದು. ಆಯಾ ಪದಾರ್ಥಗಳು ತದಂತರ್ಗತ ಭಗವದಧೀನ. ಆದಕಾರಣದಿಂದ ಸರ್ವತ್ರ ಭಗವದ್ರೂಪ ಚಿಂತನ ಇರಬೇಕೆಂತ ಅರ್ಥ. ನಾನಾಸುಭಕ್ಷ್ಯದಿ–ಅನೇಕ ವಿಧವಾದ ಅನಿಷಿದ್ಧಗಳಾದ ಲಾಡು, ಹೋಳಿಗೆ ಮೊದಲಾದ ಭಕ್ಷ್ಯಗಳಲ್ಲಿ, ಸಂಕರುಷಣ–ಜಯನಾಮಕ ಲಕ್ಷ್ಮೀದೇವೇರ ಪತಿಯಾದ ಸಂಕರ್ಷಣರೂಪೀ ಪರಮಾತ್ಮ ಇದ್ದಾನೆ. ಕೃತೀಶ–ಕೃತಿನಾಮಕ ಲಕ್ಷ್ಮೀದೇವೇರ ಪತಿಯಾದ ಪ್ರದ್ಯುಮ್ನರೂಪಿ ಪರಮಾತ್ಮ, ಪರಮಾನ್ನದೊಳು – ಉತ್ತಮವಾದ ಕ್ಷೀರದಿಂದ ಯುಕ್ತವಾಗಿ, ಗೋಧಿ ಅಥವಾ ತಂಡುಲಾದಿಗಳು ಯುಕ್ತವಾಗಿ, ದಿವ್ಯಶರ್ಕರದಿಂದ ಯುಕ್ತವಾಗಿರುವ ಸುವಾಸಿತವಾದ ಪಾಯಸದಲ್ಲಿ ಇರೋವನಾಗಿದ್ದಾನೆ. ಘೃತದೊಳಗೆ–ತುಪ್ಪದಲ್ಲಿ, ಇಪ್ಪ ಅನಿರುದ್ಧ–ಶಾಂತಿನಾಮಕ ಲಕ್ಷ್ಮೀದೇವೇರ ಪತಿಯಾದ ಅನಿರುದ್ಧನಾಮಕ ಪರಮಾತ್ಮ ಇದ್ದಾನೆ. ಆ ಸುಪರ್ಣಾಂಸಗನು– ಆ ಎಂದರೆ ಅಹಂಕಾರತತ್ವಾಭಿಮಾನಿಯಾದ ಗರುಡದೇವನು ಎಂತ ಅರ್ಥ. ಆ ಗರುಡದೇವರ ಭುಜದ ಮ್ಯಾಲೆ ಕೂತುಕೊಂಡು ಸಂಚಾರ ಮಾಡತಕ್ಕ ಶ್ರೀ ಕೃಷ್ಣದೇವರು, ಸೂಪದಿ–ತೊವ್ವೆಯೊಳಗೆ ಇರೋವನಾಗಿದ್ದಾನೆ. ವಾಸವಾನುಜ–ಉಪೇಂದ್ರನಾಮಕ ಶ್ರೀ ಪರಮಾತ್ಮ, ಶಾಕದೊಳು–ಕಾಯಿಗಳಿಂದಲೂ ತೊಪ್ಪಲುಗಳಿಂದಲೂ ಪಚನಮಾಡಿದ ಪಲ್ಯಗಳಲ್ಲಿ ಇದ್ದಾನೆ. ಮೂಲೇಶ–ಅವತಾರ ರೂಪಗಳಿಗೆ ಮೂಲಭೂತನಾದ ಲಕ್ಷ್ಮೀದೇವೇರ ಪತಿಯಾದ ಅಂಶಿಸಾಂಕೇತನಾದ, ನಾರಾಯಣನು–ಶ್ರೀನಾರಾಯಣದೇವರು, ಸರ್ವತ್ರದಲಿ–ಭಗವದ್ರೂಪಗಳು ಹೇಳದೇ ಇರುವ ಭೋಜನಕ್ಕೆ ಯೋಗ್ಯವಾದ, ಗೊಜ್ಜು, ಕೋಸುಂಬರಿ, ಮೊದಲಾದ ಅನೇಕ ಪದಾರ್ಥಗಳಲ್ಲಿ, ನೆಲಸಿಹನು–ಅಂತರ್ಗತನಾಗಿ ಇದ್ದಾನೆ. ಸಮಸ್ತಭೋಜನಪದಾರ್ಥಗಳಲ್ಲೂ ಇದ್ದಾನೆ.

**ತಾತ್ಪರ್ಯ :—**

| ಭೋಜನಪದಾರ್ಥಗಳು | | ಅಂತರ್ಗತ ಭಗವದ್ರೂಪಗಳು |
|---|---|---|
| ಅನ್ನ | .... | ವಾಸುದೇವಮೂರ್ತಿ |
| ಸುಭಕ್ಷ್ಯಾದಿಗಳು | .... | ಸಂಕರ್ಷಣ |
| ಪರಮಾನ್ನ | .... | ಪ್ರದ್ಯುಮ್ನ |
| ಘೃತ | .... | ಅನಿರುದ್ಧ |
| ತೊವ್ವೆ | .... | ಶ್ರೀಕೃಷ್ಣ |
| ಶಾಕ | .... | ಉಪೇಂದ್ರ |
| ಸರ್ವಭೋಜ್ಯಗಳಲ್ಲಿ | .... | ಶ್ರೀ ನಾರಾಯಣ |

ಈ ಪ್ರಕಾರ ಅಂತರ್ಗತನಾಗಿದ್ದಾನೆ ಎಂದು ಅನುಸಂಧಾನಪೂರ್ವಕ ಭೋಜನ ಮಾಡಬೇಕು.

**ವಿಶೇಷಾರ್ಥ** :— ಮೇಲೆ ಹೇಳಿದ್ದಕ್ಕೆ ಪ್ರಮಾಣ :—" ವಾಸುದೇವಸ್ತು ಚಾನ್ನಸ್ಥೋ ಭಕ್ಷ್ಯೇ ಸಂಕರ್ಷಣಸ್ತಥಾ | ಪ್ರದ್ಯುಮ್ನಃ ಪರಮಾನ್ನಸ್ಥೋ ಹ್ಯನಿರುದ್ಧೋ ಘೃತೇ ಸ್ಥಿತಃ | ನಾರಾಯಣಸ್ತು ಸರ್ವತ್ರ || " ಇತಿ ಐತರೇಯೇ.

ಪ್ರದ್ಯುಮ್ನಪದಕ್ಕೆ ನಿರ್ವಚನ :— " ಪ್ರಕೃಷ್ಟಂ ದ್ಯುಮ್ನಂ ಹಿರಣ್ಯಮೇವ ರೂಪಂ ಯಸ್ಯ ಸಃ ಪ್ರದ್ಯುಮ್ನಃ || "

ಅನಿರುದ್ಧ ಪದಕ್ಕೆ :— " ನ ಕೇನಾಪಿ ನಿರುದ್ಧ ಇತ್ಯನಿರುದ್ಧಃ | ಅನೋ ಮುಖ್ಯಪ್ರಾಣಃ | ಸೋಸ್ಯಾಸ್ತೀತ್ಯನೀ | ತೇನಾನಿನಾ ಮುಖ್ಯಪ್ರಾಣಪ್ರಸಾದವತಾ ಪುರುಷೇಣ ರುದ್ಧಾಃ ವಶೀಕೃತಾ ಇತಿ ವಾ ಅನಿರುದಃ ಸಂಸಾರಿಮುಕ್ತಾಸ್ತಾನ್ ದದಾತಿ ಧಾರಯತಿ ಪೋಷಯತಿ ವಾ ಅನಿರುದ್ಧಃ " ಇತಿ ||

ಸಂಕರ್ಷಣ ಎಂದರೆ : " ಸಮ್ಯಕ್ ಪಾಪಕರ್ಷಣಶೀಲತ್ವಾತ್ಸಂಕರ್ಷಣಃ " ಇನ್ನೂ " ಸಮೀಚೀನಂ ಕರಂ ಸನೋತಿ ದದಾತಿ ಇತಿ ವಾ ಸಂಕರ್ಷಣಃ | " ಎಂತ. ಈ ಪ್ರಕಾರ ಶ್ರೀ ಭಾಗವತ ಪ್ರಥಮ ವಿಜಯಧ್ವಜೀಯ ಟೀಕಾದಲ್ಲಿ ಉಕ್ತವಾಗಿದೆ.

**ಅಗಣಿತಾತ್ಮ ಸುಭೋಜನ ಪದಾ |**
**ರ್ಥಗಳ ಒಳಗೆ ಅಖಂಡವಾದೊಂ |**
**ದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ ||**
**ಜಗದಿ ಜೀವರ ತೃಪ್ತಿಪಡಿಸುವ**
**ಸ್ವಗತಭೇದವಿವರ್ಜಿತನ ಇ |**
**ರ್ಬಗೆಯ ರೂಪವನರಿತು ಭುಂಜಿಸಿ ಅರ್ಪಿಸವನಡಿಗೆ || ೧೧ ||**

ಭೋಜನ ಮಾಡಿದ್ದನ್ನ ಶ್ರೀ ಪರಮಾತ್ಮನ ಪಾದಕ್ಕೆ ಸಮರ್ಪಿಸಬೇಕು ಎಂತ ಹೇಳತಾರೆ.

ಸುಭೋಜನಪದಾರ್ಥಗಳ ಒಳಗೆ_ಭೋಜನಕ್ಕೆ ಯೋಗ್ಯಗಳಾದ, ಅನಿಷಿದ್ಧಗಳಾದ ಪದಾರ್ಥಗಳಲ್ಲಿ, ಅಖಂಡವಾದ_ಪದಾರ್ಥಾಕಾರ ತನ್ನಾಮದಿಂದ ಅಖಂಡರೂಪವೊಂದು, ಅದರಲ್ಲಿ ದೃಷ್ಟಾಂತಕ್ಕಾಗಿ ಅಖಂಡರೂಪವಾದ ಒಂದು ಅಗಳು, ಅದರಲ್ಲಿ ಅಗಳಿನ ಆಕಾರ ದಂತೆ ಅಖಂಡರೂಪವೊಂದು, ಒಂದಗಳಿನೊಳು_ಅಖಂಡರೂಪವಾದ ಒಂದು ಅಗಳಿನೊಳು, ಅನಂತಾಂಶದಿಂದಲಿ_ ಅನಂತ_ಅನೇಕ ತುಂಡು ತುಂಡು ಭಾಗಗಳು ಮಾಡಿದರೆ, ಅಂಶ ದಿಂದಲಿ_ಅದರೊಳಗೆ ಅಂಶಸಾಂಕೇತವಾದ ಒಂದು ಭಾಗದಲಿ ಇಂಥಾ ಪರಿಮಿತಿಯಿಂದ, ಅಗಣಿತಾತ್ಮ_ ಅಗಣಿತ_ಗಣಿತಕ್ಕೆ ಅರ್ಹವಲ್ಲದ, ಆತ್ಮ_ಸಾಕಾರ ಸಾವಯವವುಳ್ಳವ ನಾಗಿ ಶ್ರೀ ಪರಮಾತ್ಮ ಅನಂತಾನಂತಗಳಾದ, ಸ್ವಾಭಿನ್ನಗಳಾದ, ಅತ್ಯಂತಾಭಿನ್ನಗಳಾದ, ಗುಣಪೂರ್ಣಗಳಾದ ಖಂಡರೂಪಗಳುಳ್ಳವ, ಖಂಡನೆಂವೆನಿಸಿ_ಒಂದಗಳಿನಲ್ಲಿ ತದಾಕಾರ ಅಖಂಡರೂಪ ಖಂಡರೂಪಗಳು ಅನಂತದಿಂದ ಯುಕ್ತವಾಗಿ, ಜಗದಿ_ಈ ಚತುರ್ದಶ ಲೋಕದಲ್ಲಿ ಇರುವ, ಜೀವರ_ಪ್ರಾಣಿಗಳ ಆಹಾರಗಳಲ್ಲಿ ಪೂರ್ವೋಕ್ತಪ್ರಕಾರ ಖಂಡಾ ಖಂಡರೂಪಗಳಾಗಿ ಇದ್ದು ಮತ್ತು ಹರಿಗೆ, ತೃಪ್ತಿಪಡಿಸುವ_ಪಾಂಚಭೌತಿಕ ದೇಹದಲ್ಲಿ ಖಂಡಾಖಂಡರೂಪಗಳಿಂದ ಇದ್ದು ಭೋಜನದ್ವಾರಾ ತನ್ನ ಸ್ವಾಖ್ಯಗಳ ತಾನು ಸ್ವೀಕರಿಸಿ ಅವರವರಿಗೆ ತೃಪ್ತಿಪಡಿಸುವ (ಪ್ರಥಮಶ್ಲೋಕದಂತೆ), ಸ್ವಗತಭೇದವಿವರ್ಜಿತನ_ ಸ್ವಗತ_ ತನ್ನಲ್ಲಿ ತನ್ನ ಅವಯವಗಳಿಗೆ, ತನ್ನ ರೋಮಾದಿ ನಖಗಳಿಗೆ, ಗುಣಗಳಿಗೆ, ಏತಾದೃಶ ಯಾವತ್ತಕ್ಕೆ, ಭೇದ_ಒಂದಕ್ಕೊಂದು ಪರಸ್ಪರ ಭೇದದಿಂದ, ವಿವರ್ಜಿತನ_ವಿಶೇಷಾಕಾರ ವಾಗಿ ವರ್ಜಿತನಾದ ಶ್ರೀ ಪರಮಾತ್ಮನ (ಜೀವಗೂ ಜೀವೇಂದ್ರಿಯಗಳಿಗೂ ಪರಸ್ಪರ ಅಭೇದಗಳೇವೇ, ಶ್ರೀ ಪರಮಾತ್ಮನ ಅಭೇದ ಅಂಥಾದ್ದಲ್ಲ. ದೇವರ ಸರ್ವೇಂದ್ರಿಯ ವ್ಯಾಪಾರ, ಒಂದು ಇಂದ್ರಿಯ ಮಾಡತದೆ. ಈ ರೀತ್ಯಾ ಸರ್ವೇಂದ್ರಿಯಗಳು ಸರ್ವೇಂ ದ್ರಿಯಗಳ ವ್ಯಾಪಾರ ಮಾಡತದೆ. ಇಂಥಾ ಅಭೇದ ಶ್ರೀ ಪರಮಾತ್ಮಂದು. ಜೀವನ ಅಭೇದ ಎಂಬುದು ಜೀವನೂನೂ ಚಿದಾನಂದಮಯನು. ಅವನ ಅವಯವವೂ ಚಿದಾ ನಂದಮಯವು. ಇಷ್ಟುಮಾತ್ರದಿಂದ ಅಭೇದ ಉಳ್ಳವನು. ಇಂದ್ರಿಯವ್ಯಾಪಾರ ಮಾತ್ರ ಭಿನ್ನವು). ಈ ಪ್ರಕಾರ ಸ್ವಗತಭೇದವಿವರ್ಜಿತನಾದ ಶ್ರೀ ಪರಮಾತ್ಮನ, ಇರ್ಬಗೆಯ_ ಎರಡು ಪ್ರಕಾರವಾದ ಎಂದರೆ, (೧) ಪದಾರ್ಥಗತ ಅಖಂಡರೂಪ ಒಂದು, ಖಂಡರೂಪ ಒಂದು, (೨) ದೇಹಗತ ಖಂಡರೂಪ ಒಂದು, ಅಖಂಡರೂಪ ಒಂದು, ಅಂತು ಎರಡು ಪ್ರಕಾರ, ರೂಪವನರಿತು_ಭಗವದ್ರೂಪಗಳು ಅರಿತು, ಭುಂಜಿಸಿ_ಭೋಜನ ಮಾಡಿದವ ನಾಗಿ, ಅವನಡಿಗೆ_ ಶ್ರೀ ಬಿಂಬರೂಪಿಯಾದ ಪರಮಾತ್ಮನ ಪಾದಗಳಿಗೆ, ಅರ್ಪಿಸು_ ದೇಹಾಂತರ್ಗತ ಪದಾರ್ಥಾಂತರ್ಗತ ಭಗವದ್ರೂಪಗಳಿಗೆ ಪರಸ್ಪರ ಮೇಳನರೂಪವಾದ (ಭೇದವಿಲ್ಲವೆಂದು) ಅನುಸಂಧಾನದಿಂದ ಅರ್ಪಿಸೋವನಾಗು ಎಂತ ತಾತ್ಪರ್ಯ.

**ತಾ||** ಶ್ರೀ ಪರಮಾತ್ಮ ಸಾಕಾರ ಸಾವಯವವುಳ್ಳವನಾಗಿಯೂ, ಅನಂತಾನಂತ ಗಳಾದ ಖಂಡಾಖಂಡರೂಪಗಳಿಂದ ಜೀವರು ಭೋಜನ ಮಾಡತಕ್ಕ ಖಂಡಾಖಂಡ ಪದಾರ್ಥಗಳಲ್ಲಿಯೂ, ಪಾಂಚಭೌತಿಕ ಸ್ಥೂಲದೇಹದಲ್ಲಿಯೂ ಪೂರ್ವೋಕ್ತ ಪ್ರಕಾರ ಇದ್ದು ಭೋಜನದ್ವಾರಾ ತನ್ನ ಸ್ವಾಖ್ಯರಸವನ್ನು ಸ್ವೀಕರಿಸಿ ಅವರವರ ಯೋಗ್ಯತಾನುಸಾರ ಪ್ರಥಮಶ್ಲೋಕದಲ್ಲಿ ಹೇಳಿದ ರೀತಿಯಾಗಿ ತೃಪ್ತಿಪಡಿಸತಾನೆ. ಈ ಪ್ರಕಾರ ಪದಾರ್ಥಗತ ಖಂಡರೂಪ ಒಂದು, ಅಖಂಡರೂಪ ಒಂದು, ದೇಹಗತ ಖಂಡರೂಪ ಒಂದು, ಅಖಂಡ ರೂಪ ಒಂದು, ಅಂತೂ ಈ ಎರಡು ಪ್ರಕಾರ ಭಗವದ್ರೂಪಗಳು ಇರುತ್ತವೆ ಎಂತಲೂ, ಆಯಾ ರೂಪಗಳಿಗೆ ಭೇದವಿಲ್ಲವೆಂತಲೂ ಪದಾರ್ಥಗಳ ಭೋಜನ ಮಾಡಿ ಶ್ರೀ ಪರ ಮಾತ್ಮನ ಪಾದಗಳಿಗೆ ಅರ್ಪಿಸೋವನಾಗಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಪ್ರಮೇಯಮಾಲಿಕಾ ಗ್ರಂಥದಲ್ಲಿ " ತತ್ರ ಪ್ರಥಮರೂಪಾಣಿ ಖಂಡಾಖಂಡಸ್ವರೂಪತಃ | ಕವಳಾದಿಸ್ವರೂಪೇಣ ದ್ವಿವಿಧಾನಿ ವಿಶೇಷತಃ | ಭುಜ್ಯಮಾನ ಪದಾರ್ಥೇಷು ಸಂತ್ಯೇವ ವಿವಿಧಾನಿ ಚ " ಇತಿ. ಭಗವಂತನ ಗುಣರೂಪಕ್ರಿಯೆಗಳಿಗೆ ಭೇದವಿಲ್ಲವೆಂಬುದಕ್ಕೆ ಪ್ರಮಾಣ :– " ವಿಷ್ಣೋರೇವ ಸ್ವರೂಪಾಣಾಂ ತದ್ಗುಣಾನಾಂ ತಥೈವ ಚ | ತಥೈವ ಶಿರಆದೀನಾಂ ನೈವ ಭೇದೋಽಸ್ತಿ ಕಶ್ಚನ || " ಈ ರೀತಿ ಪ್ರಮಾಣವಚನ ಅದೆ.

**ಈ ಪರಿಯಲರಿತುಂಬ ನರ ನಿ |**
**ತ್ಯೋಪವಾಸಿ ನಿರಾಮಯನು ನಿ |**
**ಷ್ಪಾಪಿ ನಿತ್ಯ ಮಹತ್ಸುಯಜ್ಞಗಳಾಚರಿಸಿದವನು ||**
**ಪೋಪದಿಪ್ಪುದು ಬಪ್ಪುದೆಲ್ಲ ರ |**
**ಮಾಪತಿಗಧಿಷ್ಠಾನವೆನ್ನು ಕೃ |**
**ಪಾಪಯೋನಿಧಿ ಮಾತನಾಲಿಸುತಿಹ ಜನನಿಯಂತೆ || ೧೨ ||**

ಪೂರ್ವೋಕ್ತ ಪ್ರಕಾರ ಅನುಸಂಧಾನದಿಂದ ಭೋಜನ ಮಾಡಿದ ಪುರುಷ ಏನಂತ ಕರಿಸಥಾನೆ ಎಂದರೆ ಹೇಳಥಾರೆ.

ಈ ಪರಿಯಲಿ–ಈ ಪೂರ್ವೋಕ್ತ ಪ್ರಕಾರದಿಂದ, ಅರಿತು–ದೇಹಗತ, ಪದಾರ್ಥಗತ ಭಗವದ್ರೂಪಗಳ ಅನುಸಂಧಾನದಿಂದ ಐಕ್ಯ ಚಿಂತನದಿಂದಲೂ, ಪಂಚ ಪ್ರಾಣಾಗ್ನಿಹೋತ್ರ ಖಂಡ ಪ್ರಕಾರದಿಂದಲೂನೂ ಸರ್ವತ್ರ ಭಗವಚ್ಚಿಂತನಿ ಇಂದಲೂನೂ, ಉಂಬ ನರ– ಭೋಜನ ಮಾಡತಕ್ಕ ಮನುಷ್ಯ, ನಿತ್ಯೋಪವಾಸಿ–ಪ್ರತಿದಿನದಲ್ಲೂ ಉಪವಾಸಿ ಎಂತ ಕರೆಸಥಾನೆ. (ಹ್ಯಾಂಗೆ ಅಂದರೆ ದೇಹಧಾರಿಯಾದ ನಿರಂಶ ಜೀವಗೆ ಸೇರತಕ್ಕ ರಸ ಪದಾರ್ಥಗಳಲ್ಲಿ, ಇಲ್ಲಿ ನಿರಂಶನಾದ ಪ್ರಯುಕ್ತ, ಈ ಲಕ್ಷಣದಿಂದ ನಿತ್ಯೋಪವಾಸಿ. ಇನ್ನೂ ಪ್ರತಿದಿನದಲ್ಲೂ, ನಿತ್ಯವಾದ ಸ್ವರೂಪದಲ್ಲೂ, ಬಾಹ್ಯದಲ್ಲೂ, ಶ್ರೀ ಪರಮಾತ್ಮನ ಸಮೀಪದಲ್ಲಿ ಆವಾಸ ಉಳ್ಳ ಸ್ವರೂಪ ಜ್ಞಾನ ಉಳ್ಳವನು ಎಂತ ಅರ್ಥ), ನಿರಾಮಯ–

ಶ್ರೀ ಪರಮಾತ್ಮನಲ್ಲಿ ದ್ವೇಷವೆಂಬ ರೋಗರಹಿತನು, ನಿಷ್ಪಾಪಿ–ಪಾಪಗಳಿಂದ ರಹಿತ ನಾದವನು, ನಿತ್ಯ–ಪ್ರತಿ ಪ್ರತಿ ದಿನದಲ್ಲೂ, ಮಹತ್–ಶ್ರೇಷ್ಠಗಳಾದ, ಸಮೀಚೀನ ಗಳಾದ, ಸುಯಜ್ಞಗಳ–ಭಗವತ್ಪ್ರೀತಿಕರಗಳಾದ ಯಜ್ಞಗಳು, ಆಚರಿಸಿದವನು–ಮಾಡಿ ದವನು ಎಂತ ಕರಿಸಥಾನೆ. ಇಂಥಾ ಅಧಿಕಾರಿಗೆ, ಪೋಪದು–ಅಹಂಮಮ ಎಂಬದೂನೂ, ಅಜ್ಞಾನವೂನೂ ಹೋಗೋದಾಗತದೆ. ಇಪ್ಪದು–ಶ್ರೀ ಪರಮಾತ್ಮ ಸ್ವತಂತ್ರ, ನಾನು ಅವನ ಅಧೀನ ಅಸ್ವತಂತ್ರ ಎಂಬ ಜ್ಞಾನಾನುಷ್ಠಾನವಿರತದೆ. ಇದರಿಂದ ಹೃದಯಗತ ಶ್ರೀ ಪರಮಾತ್ಮ, ಬಪ್ಪದು–ಅಪರೋಕ್ಷಾರ್ಥ ಬರೋವನಾಗಥಾನೆ, ಮತ್ತು ಜ್ಞಾನ, ಭಕುತಿ, ವೈರಾಗ್ಯಗಳು ಅತಿಶಯವಾಗಿ ಮನಸ್ಸಿಗೆ ಒದಗಿ ಬರೋದಾಗತದೆ. ರಮಾಪತಿ ಯಧಿಷ್ಠಾನವನ್ನು–ಪತಿ–ಸರ್ವಸ್ವಾಮಿಯಾದ ಜೀವಾಂತರ್ಗತನಾದ ಬಿಂಬ, ರಮಾ– ರಮಾದೇವೇರ, ಅಧಿಷ್ಠಾನ–ಅಧಿಷ್ಠಿತನಾಗಿದ್ದು, ಎನ್ನ–ಸ್ವರೂಪ ದೇಹದಲಿ ಇಚ್ಛಾದಿ ಗಳು ಹುಟ್ಟಿಸಿ ಆ ಇಚ್ಛಾವನ್ನ ಬಾಹ್ಯ ಸ್ಥೂಲ ದೇಹದಲಿ ವ್ಯಾಪ್ತನಾದ ಜೀವಗೆ ಇಚ್ಛಾ ಹುಟ್ಟಿಸಿ ಬ್ರಹ್ಮಾದಿ ತತ್ವೇಶರ ದ್ವಾರಾ ಸ್ಥೂಲ ದೇಹದಿಂದ ಕಾರ್ಯಗಳ ನಡೆಸಥಾನೆ ಎಂತ ಸರ್ವದಾ ಅನುಷ್ಠಾನಾನುಸಂಧಾನದಿಂದ ಅಂಬೋವನಾಗು. ಇದರಿಂದ ಶ್ರೀ ಪರ ಮಾತ್ಮನು ಎಂಥಾವನೆಂದರೆ, ಕೃಪಾಪಯೋನಿಧಿ–ತನ್ನ ಕೃಪಾದಿಂದ ತನ್ನ ವಿಷಯಕವಾದ ಜ್ಞಾನಾದಿಗಳೆಂಬೋ ಹಾಲನ್ನ ಸಮುದ್ರ ಸದೃಶನಾಗಿ ಪಾನ ಮಾಡಿಸತಕ್ಕ ಇಂಥಾ ಶ್ರೀ ಪರಮಾತ್ಮ, ಮಾತನಾಲಿಸುತಹ–ಭಕ್ತರು ಮಾಡುವ ಪ್ರಾರ್ಥನಾ ರೂಪವಾದ ಮಾತುಗಳನ್ನ ಕರ್ಣಪುಟಗಳಿಂದ ಕೇಳುತ್ತಾ ದೇಹ ಜೀವಾಂತರ್ಗತನಾಗಿ ಇದಾನೆ. ಇಂಥಾ ದೇವರು, ಜನನಿಯಂತೆ–ಲೋಕ ಜನನಿಯಾದ ರಮಾದೇವೇರ ಮಾತು ದಾವ ಪ್ರಕಾರ ಆಲೈಸಥಾನೋ ಅದರಂತೆ ಭಕ್ತರ ಯೋಗ್ಯತಾನುಸಾರ ಅವರವರ ಮಾತುಗಳ ಕೇಳಥಾನೆ ಹೊರತು ವಿಮುಖನಾಗೋದಿಲ್ಲ ಎಂತ ತಾತ್ಪರ್ಯ.

**ತಾ||** ಪೂರ್ವೋಕ್ತ ಕ್ರಮದಿಂದ ಅನುಸಂಧಾನ ಪೂರ್ವಕ ದೇಹಗತ ಪದಾರ್ಥಗತ ಭಗವದ್ರೂಪಗಳ ಐಕ್ಯ ಚಿಂತನಿಯಿಂದಲೂ ಪಂಚಪ್ರಾಣಾಗ್ನಿಹೋತ್ರ ಖಂಡ ಪ್ರಕಾರ ದಿಂದಲೂನೂ, ಸರ್ವತ್ರ ಭಗವಚ್ಚಿಂತನಿಯಿಂದಲೂ, ಭೋಜನ ಮಾಡತಕ್ಕ ಮನುಷ್ಯನು 'ನಿತ್ಯ ಉಪವಾಸಿ' ಎಂತಲೂ, ಪಾಪಗಳಿಂದ ರಹಿತನಾದವನು ಎಂತಲೂ, ಪ್ರತಿದಿನ ದಲ್ಲೂ ಸಮೀಚೀನಗಳಾದ, ಭಗವತ್ಪ್ರೀತಿಕರಗಳಾದ ಯಜ್ಞಗಳು ಮಾಡಿದವನೆಂತಲೂ ಕರೆಸಥಾನೆ. ಇಂಥಾ ಅಧಿಕಾರಿಗೆ ಅಹಂಮಮತಾದಿಗಳು ಹೋಗಿ ಜೀವ ಅಸ್ವತಂತ್ರ, ದೇವ ನಿಜಸ್ವತಂತ್ರ ಎಂಬ ಜ್ಞಾನ ಹುಟ್ಟಿ ಶ್ರೀ ಪರಮಾತ್ಮನ ಅಪರೋಕ್ಷೀಕರೆಸಥಾನೆ. ಇಂಥಾ ಭಕ್ತಗೆ ಶ್ರೀ ಪರಮಾತ್ಮ ವಿಮುಖನಾಗದೆ ಅವನು ಮಾಡುವ ಸ್ತೋತ್ರಗಳನ್ನು ಕರ್ಣಪುಟಗಳಿಂದ ಕೇಳಥಾ ಇರಥಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಮೇಲೆ ಭಗವತ್ಪ್ರೀತಿಕರಗಳಾದ ಯಜ್ಞಗಳು ಎಂದರೆ ಅದು ಭೋಜನ ಯಜ್ಞವನ್ನು ಕುರಿತು ಹೇಳಿದ್ದು. ಅದು ದಾವದೆಂದರೆ ಈ ದೇಹವೇ ಯಜ್ಞ

ಶಾಲಾ, ಈ ಯಜ್ಞದ ಕುಂಡ ಬಾಯಿ, ಅಗ್ನಿಗಳು ದಾವದೆಂದರೆ, "ಮುಖೇ ಆಹವನೀಯಾಗ್ನಿಃ ಹೃದಯೇ ಗಾರ್ಹಪತ್ಯಂ ನಾಭೌ ದಕ್ಷಿಣಾಗ್ನಿಃ ದಕ್ಷಿಣಕುಕ್ಷೌ ಸುರಭಿಃ ಉತ್ತರಕುಕ್ಷೌ ಸೋಮಾಗ್ನಿಃ ||" ಇವು ಪಂಚಾಗ್ನಿಗಳು. ಪ್ರಾಣಾಪಾನಾದಿ ಮುಖ್ಯ ಪ್ರಾಣಾದಿರೂಪಗಳೇ ಹೋತಾ ಉದ್ಗಾತಾದಿ ಋತ್ವಿಕ್ಕುಗಳು, ಆಹುತಿ ಕೊಡತಕ್ಕ ಸ್ರುಕು, ಸ್ರುವಗಳು ಬಾಹು. ಭೋಜನ ದ್ರವ್ಯಗಳು ಆಹುತಿ ಪದಾರ್ಥಗಳು, ಜೀವ ಯಜಮಾನ, ಬುದ್ಧಿ ಎಂಬವಳೇ ಪತ್ನಿ, ದೇಹಗತರಾದ ತತ್ವೇಶರು ಮತ್ತು ಶ್ರೀ ಪರಮಾತ್ಮ ಬ್ರಾಹ್ಮಣರು. ಯಜ್ಞಪಶುಗಳು ಅರಿಷಡ್ವರ್ಗಗಳು, ಅಹಂಮಮತಾದಿಗಳು. ಮಧ್ಯೆ ಮಧ್ಯೆ ಪಾನ ಮಾಡತಕ್ಕ ಉದಕ ಪರಿಷಿಂಚಾಮಿ. ಪ್ರಾಣಾಗ್ನಿಹೋತ್ರ ಖಂಡ ಪ್ರಕಾರದಿಂದ ಭಗವಚ್ಚಿಂತನ ಮಾಡಬೇಕು. ಈ ರೀತಿ ಭೋಜನ ಮಾಡಬೇಕು.

ಈ ವಿಷಯದಲ್ಲಿ ಶ್ರೀ ವಿಜಯದಾಸರಾಯರು ಎರಡು ಸುಳಾದಿಗಳನ್ನು ಮಾಡಿದ್ದಾರೆ. ದಾವದೆಂದರೆ, ೧. ಪಂಚಪ್ರಾಣಾಗ್ನಿ ಸುಳಾದಿ; ೨. ಪ್ರಾಣಾಗ್ನಿಹೋತ್ರ ಸುಳಾದಿ, ಮೇಲೆ ಹೇಳಿದ ಪಂಚಪ್ರಾಣಾಗ್ನಿಹೋತ್ರ ಖಂಡದ ವಿವರವೇ ಅವುಗಳಲ್ಲಿ ಇರುತ್ತವೆ. ಆದರೆ ಪಂಚಪ್ರಾಣಾಹುತಿ ಸುಳಾದಿಯಲ್ಲಿ ಮೊದಲ ನುಡಿ ಏನು ಹೇಳಥಾರೆಂದರೆ :–

ಆಹುತಿಕೊಡುವುದು ಪಂಚಪ್ರಾಣರಿಗೆ ಸಂ
ದೇಹ ಮಾಡದಲೆ ಮನಸು ಪೂರ್ವಕದಿಂದ
ದೇಹದೊಳಗೆ ಐದು ಸ್ಥಾನಂಗಳು ತಿಳಿದು
ಸ್ವಾಹಾಲೋಲನ ಪ್ರೀತಿ ಬಡಿಸಿ ಉಣಿಸು
ಆಹಾರ ಮೆಲುವಾಗ ಮರೆಯಲಾಗದು ಅತಿ
ಸ್ನೇಹಭಾವದಿಂದ ಸರ್ವದಲ್ಲಿ
ಮಹಪುಣ್ಯ ಬಪ್ಪುದು ಮಾಡಿದ ಅಘಾರಣ್ಯ
ದಹನವಾಗುವುದು ತಡವಿಲ್ಲದೆ
ಗಹನವಿದು ಕೇಳಿ ಕಂಡವರಿಗಿಲ್ಲ
ಇಹಲೋಕದಲ್ಲಿ ಸಿದ್ಧಾಂತ ತಿಳಿದು
ಮೋಹಕಶಾಸ್ತ್ರ ಜರಿದು ಮದ ಮತ್ಸರ ಹರಿದು
ಕುಹಕ ಬುದ್ಧಿ ಬಿಟ್ಟು ಉಚಿತದಲ್ಲಿ
ಶ್ರೀಹರಿ ವೈಶ್ವಾನರನೆಂಬೋ ನಾಮ ಚತುರ
ವ್ಯೂಹಗಳಿಪ್ಪವೆನ್ನು ಅಲ್ಲಿಗಲ್ಲಿ
ಬಹಳಾಧಿಷ್ಠಾನದಲ್ಲಿ ಶುಭಸಾರ ಭುಂಜಿಸುವ
ದ್ರೋಹಿಮಾನವರ ತೊರೆದು ತಿಳಿಯಗೊಡದಲೆ
ಅಹಂಕಾರ ಮಮಕಾರ ತೊರೆದು ದೈನ್ಯದಲ್ಲಿ ದಾ

ಸೋಽಹಂ ಎಂದವಗೆ ಫಲದಾಯಕ ಕಾಣೋ
ದೇಹಿ ದೇಹಗಳಲ್ಲಿ ಪೂರ್ಣನಾಗಿ ಇಪ್ಪ ವಾರಿ
ರುಹಲೋಚನ ನಮ್ಮ ವಿಜಯವಿಠ್ಠಲನು ಅನು
ಗ್ರಹ ಮಾಡುವನರ್ಪಿತವ ಕೈಕೊಂಡು ‖ ೧ ‖

ಈ ತೆರದಿ ಭುಂಜಿಸಿದ ಮಾನವ ತನ್ನ
ಜಾತಿಯೊಳಗೆ ಅಧಿಕನಾಹನು.
ತಾ ತೃಪ್ತಿಯಾಗಿ ಉಂಡ ಮಿಕ್ಕ ಎಂಜಲು
ದೂತ ಚಾಂಡಾಲ ಶ್ವಾನ ನಾನಾ ಯೋನಿ
ಜಾತರಿಗೆ ಕೊಡೆ ಅವರಲ್ಲಿ ಇದ್ದ
ಜಾತವೇದಸನು ತೃಪ್ತಿಯಾಗುವನಯ್ಯಾ
ಭೂತಳದೊಳಗೆ ಇದನು ತಿಳಿದವನು ಧನ್ಯನೋ
ಪಾತಕದವನಲ್ಲ ಆತನಿಗೆ ಸಲ್ಲಾ
ವಾತದೇವನ ದಯಪಡೆದು ಮಹಾಕೀ
ರುತಿವಂತನಾಹ ಜ್ಞಾನವಂತನಾಹ
ಪೂತುರೆ ಮುಕ್ತಿಲಿ ಸುಖಸಾಂದ್ರದೊಳಗಿಪ್ಪ,
ಮಾತಿಗೆ ಗತಿ ಈವ **ವಿಜಯವಿಠ್ಠಲರೇಯಾ**
ನೂತನ ನೂತನ ಮಹಿಮೆಯ ತೋರುವ ‖ ೧೦ ‖

## " ಪ್ರಾಣಾಗ್ನಿಹೋತ್ರ ಸುಳಾದಿ "

ನಿತ್ಯಸಂತೃಪ್ತ ಸರ್ವಸಾರಭೋಕ್ತ ಪುರು
ಷೋತ್ತಮ ಅಚಿಂತ್ಯ ಮಹಿಮಾ ಭಕ್ತವತ್ಸಲ
ಸತ್ಯಸಂಕಲ್ಪ ಹರಿಗೆ ನಾಮೋಪಚಾರದಿಂದ
ಭಕ್ತಿವೆಗ್ಗಳನಾಗಿ ಮಜ್ಜನಾದಿಯ ಮಾಡಿ
ಚಿತ್ತನಿರ್ಮಲದಿಂದ ನಾನಾ ಸೌಖ್ಯವಾಗಿದ್ದ
ಉತ್ತಮ ಪದಾರ್ಥ ಸುಪಕ್ವಗೈಸಿ |
ಆತ್ಮನ ಮುಂಭಾಗದಲ್ಲಿ ಇರಿಸಿ ಸ್ತೋತ್ರಗಳಿಂದ
ತುತ್ತು ಸಮರ್ಪಿಸಿ ಧ್ಯಾನಮಾಡಿ
ತೆತ್ತಿಗ ನಾನೆಂದು ಅಡಿಗಡಿಗೆ ಹಿಗ್ಗಿ ತನ್ನ
ಸತ್‌ಪ್ರವರ್ತಿಗಳಿಗೆ ಹರಿಯೇ ಎಂದು
ವಿಸ್ತಾರವಾಗಿ ತಿಳದು ನಿಜವಾಗಿ ಶ್ರೀ ಬ್ರಹ್ಮಾದಿ ದೇ
ವತ್ತೆಗಳಿಗೆ ಸನಕಾದಿಗಳಿಗೆ

ಮತ್ತೆ ಶುಕ ಮೊದಲಾದ ಅವತಾರ ಜನಕೆ ತಾ
ರತಮ್ಯದಿಂದ ಕೊಡಲಿಬೇಕೋ ಮನುಜ
ಇತ್ತರೆ ನಿನ್ನಿಂದ ಅವರವರು ಕೈಕೊಂಡು ಮಾ
ರುತ್ತ ಪರಿಯಂತ ಒಪ್ಪಿಸಿ ಕೊಡುವರೋ
ಅತ್ತಣ ಕಾರ್ಯ ಕೇಳಿ ಲಕುಮಿ ದ್ವಾರದಿಂದ
ಉತ್ತಮ ಶ್ಲೋಕನು ಕೈಕೊಂಬನಯ್ಯಾ
ಪ್ರತ್ತೀಕದಲ್ಲಿ ಮನಸು, ಅಗ್ನಿಯಲ್ಲಿ ವಾಕು
ಆತ್ಮದಲ್ಲಿ ಗಾತ್ರಧ್ಯಾನ ಅವಧಾನ
ಭುಕ್ತಿ ಚಿತ್ರ ವಿಚಿತ್ರ ಉಂಟು | ಇದರೊಳಗನುಭವ
ಪುತ್ರ ಜನಕರೊಬ್ಬ ಸುಂದರ ನಾರಿಯ
ಹತ್ತಲಿ ಇದ್ದವಳ ಸ್ಪರ್ಶಮಾಡಿದರಾಗ
ಮಾತೃಭಾವ ಒಬ್ಬನಿಗೆ, ಪತ್ನೀಭಾವ ಒಬ್ಬನಿಗೆ
ಅತ್ಯಂತವಾಗಿಪ್ಪುದು ವಿವೇಕರಿಗೆ
ತತ್ವೇಶ ಜೀವಿಗಿಲ್ಲ ಸಮಸ್ತರಸದ ಜ್ಞಾನ |
ಪ್ರತ್ಯೇಕ ಪ್ರತ್ಯೇಕ ಇಪ್ಪುದಯ್ಯಾ
ಚಿತ್ತದಲಿ ನೋಡುವುದನುಭವ
ಮಾತ್ರ ಬೇರೆ ಉಂಟು ವಿರೋಧವಿಲ್ಲ
ಹೊತ್ತು ಹೊತ್ತಿಗೆ ಇದನೆ ಸ್ಮರಿಸಿ ವೇಗಾದಿಂದಲಿ
ತೀರ್ಥದಾನವ ಮಾಡಿ ಜ್ಞಾನಿಗಳೊಡನೆ
ಸುತ್ತ ಬಳಗದ ಕೂಡೆ ಕುಳಿತು ಭಗ
ವತ್ಪಾದಿ ಪೆತ್ತ ದೇವನ ಸ್ಮರಣೆ ಮಾಡಿಕೊಳ್ಳುತಾ |
ಆತ್ಮಯಜ್ಞವ ಮಾಡೊ ತುಲಸಿ ಮಿಳಿತದಲ್ಲಿ
ಹತ್ತೆಂಟು ದಳ ನಿನಗೆ ಸತತ ಬೇಕೋ
ಹತ್ತದೆನೆ ಸಲ್ಲ ಕೇಶಾದಿ ದೋಷದಿಂದ
ಮೃತ್ಯು ಬರುತಿದ್ದರು ನಿವಾರಣ
ಸತ್ಯ ಮಾನವನೆ ನೀ ತುಲಸಿ ಮಿಶ್ರರಹಿತ
ತುತ್ತು ತೆಗೆದುಕೊಂಡರೆ ವಮನಕ್ಕೆ ಸರಿಯೋ
ಎತ್ತಲಾದರೆ ಏನು ತುಲಸಿ ಕರ್ಣಗಳಲ್ಲಿ
ನಿತ್ಯ ಧರಿಸಿದ್ದರು ಆ ಮನುಜ
ಉತ್ತಮನೇ ಸರಿ ಚಂಡಾಲ ಸ್ಪರ್ಶವಾಗೆ
ತತ್ತಳಿಸುವ ಪವಿತ್ರ ಕಾಣೋ
ಅರ್ಥಿಪುರುಷಾ ನಮ್ಮ **ವಿಜಯವಿಠಲರೇಯ**
ಮುಕ್ತಿಯ ಕೊಡುವನೋ ಈ ಪರಿ ಚಿಂತಿಸಿದರೆ || ೧ ||

ಹದಿನೆಂಟು ದಳ ಹ್ಯಾಂಗೆಂದರೆ :– "ಚತುಃಕರ್ಣೇ ಮುಖೇ ಚೈಕಂ ನಾಭಾವೇಕಂ ತಥೈವ ಚ | ಶಿರಸ್ಯೇಕಂ ತಥಾ ಪ್ರೋಕ್ತಂ ತೀರ್ಥೇ ತ್ರಯಂ ಉದಾಹೃತಂ || ಅನ್ನೋಪರಿ ತಥಾ ಪಂಚ ಭೋಜನಾಂತೇ ದಳತ್ರಯಂ | ಏವಂ ಶ್ರೀ ತುಳಸೀ ಗ್ರಾಹ್ಯಾ ಅಷ್ಟಾದಶ ದಳಾ ಸದಾ ||" ಅರ್ಥ :– ಕಿವಿಯಲ್ಲಿ ನಾಲ್ಕು ದಳ, ಬಾಯಿಯಲ್ಲಿ ಒಂದು ದಳ, ನಾಭಿಯಲ್ಲಿ ಒಂದು ದಳ, ಶಿರಸ್ಸಿನಲ್ಲಿ ಒಂದು ದಳ, ತೀರ್ಥದಲ್ಲಿ ಮೂರು ದಳ, ಅನ್ನದ ಮ್ಯಾಲೆ ಐದು ದಳ, ಭೋಜನಾಂತರದಲ್ಲಿ ಮೂರು ದಳ. ಅಂತು ೧೮ ದಳ.

**ಆರೆರಡು ಸಾವಿರದ ಮೇಲೆ |**
**ನ್ನೂರ ಐವತ್ತೊಂದು ರೂಪದಿ |**
**ಸಾರಭೋಕ್ತ ನಿರುದ್ಧ ದೇವನು ಅನ್ನಮಯನೆನಿಪ ||**
**ಮೂರೆರಡುವರೆಸಾವಿರದ ಮೇಲ್ |**
**ಮೂರಧಿಕ ನಾಲ್ವತ್ತು ರೂಪದಿ |**
**ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ || ೧೩ ||**

ಇದುವರೆಗೂ ಭೋಜನಾನುಸಂಧಾನಕ್ರಮ ಹೇಳಿದವರಾಗಿ, ಈಗ ದೇಹಗತ ಅನ್ನಮಯ, ಪ್ರಾಣಮಯ ಕೋಶಗತ ಭಗವದ್ರೂಪಗಳ ಹೇಳತಾರೆ.

ಅನ್ನಮಯ–ಅನ್ನದಿಂದ ಪ್ರಚುರವಾದದ್ದು ದಾವದೋ ಅದಕ್ಕೆ ಅನ್ನಮಯ ಎಂತ ಸಾಂಕೇತವು. ಇದ್ಯಂಬದೇ ದೇಹಗತ ಪೃಥಿವೀ, ಅಪ್. ಇದರಲ್ಲಿ ಕೋಶಗಳೆರಡು. ೧. ಪ್ರಥಮಕೋಶದಲ್ಲಿ ವಾಯು, ಜಿಹ್ವೆ, ರಸ, ಅಪ್ಪು. ಎರಡನೇ ಕೋಶದಲ್ಲಿ ಉಪಸ್ಥ, ಗಂಧ, ಘ್ರಾಣ, ಪೃಥ್ವಿ. ಈ ಎಂಟರಿಂದ ಯುಕ್ತವಾದದ್ದು ಅನ್ನಮಯಕೋಶ, ದೇಹಾಧಾರ ಕೋಶವು. ಈ ಕೋಶಾಭಿಮಾನಿ ಅನಿರುದ್ಧ. ಈ ಕೋಶಾಂತರ್ಗತ ನಾಗಿದ್ದು, ಭೂದೇವೇರು, ಶನೈಶ್ಚರ, ವರುಣ ಮೊದಲಾದ ಇವರುಗಳಿಂದ ಪೂಜಿತ ನಾಗಿದ್ದಾನೆ. ಅಕ್ಷರಸಂಖ್ಯಾರೂಪಗಳು ೬೨೫೧ ಆಗತದೆ. ಹ್ಯಾಂಗೆಂದರೆ ಅ–೧, ನಿ–೫, ರು–೨, ದ್ಧ–೬ =೬೨೫೧. ಬಲದಿಂದ ಎಡಕ್ಕೆ ಲೆಕ್ಕ. ಸಾರಭೋಕ್ತ–ಸ್ಥೂಲದೇಹದಲ್ಲಿ ಪೃಥ್ವೀಸಾಂಕೇತವಾದ ಅನ್ನಮಯ ಕೋಶದಲ್ಲಿ ಇದ್ದು ಜೀವಭುಕ್ತ ಪ್ರಾಕೃತಾನ್ನ ತ್ಯಜಿಸಿ, ತನ್ನ ಸ್ವಾಖ್ಯವಾದ ಸಾರಭೂತವಾದದ್ದರನ್ನ ಭೋಜನ ಮಾಡ ತಕ್ಕ, ಅನಿರುದ್ಧದೇವನು–ಅನಿರುದ್ಧನಾಮಕ ಪರಮಾತ್ಮನು, ಆರೆರಡುಸಾವಿರದ ಮೇಲೆ–ಆರೆರಡು–ಎಂಟು ಸಾವಿರದ ಮೇಲೆ, ಇನ್ನೂರಐವತ್ತೊಂದು – (೨೫೧) ಇನ್ನೂರಐವ ತ್ತೊಂದು ರೂಪಗಳಿಂದ, ರೂಪದಿ–ಅಂತು ೬೨೫೧ ರೂಪಗಳಿಂದ ಇದ್ದಾನೆ. (ಕೋಶ ಎಂದರೆ ಪೂರ್ವೋಕ್ತ ವಾಯು ಉಪಸ್ಥಾದಿಗಳು ಇರತಕ್ಕ ಸ್ಥಾನವಿಶೇಷಕ್ಕೆ ಕೋಶ ಎಂತ ನಾಮವು), ಪ್ರಾಣಮಯ–ಪ್ರಾಣಾಧಾರವಾದ ಉದಕ ಪ್ರಾಚುರ್ಯವಾದ ಪ್ರಾಣಮಯ ಕೋಶ. ಇದರಲ್ಲಿ ವಿದ್ಯಮಾನಗಳು : ೧. ಪ್ರಥಮಕೋಶದಲ್ಲಿ ಪಾಣಿ, ಸ್ಪರ್ಶ, ತ್ವಕ್, ವಾಯು. ೨. ಎರಡನೇ ಕೋಶದಲ್ಲಿ ಪಾದ, ರೂಪ, ಚಕ್ಷು, ತೇಜ ಅಂತು ಎಂಟು.

ಇಷ್ಟರಿಂದ ಯುಕ್ತವಾದದ್ದು ದಾವದೋ ಅವಕ್ಕೆ ಪ್ರಾಣಮಯ ಕೋಶ ಎಂತ ನಾಮ, ಪ್ರಾಣಾಧಾರಕೋಶವು. ಈ ಕೋಶಾಭಿಮಾನಿ ಪ್ರದ್ಯುಮ್ನನಾಮಕ ಪರಮಾತ್ಮ. ಈ ಕೋಶಾಂತರ್ಗತನಾಗಿದ್ದು ಮರೀಚಿ, ವಾಯು, ಅಗ್ನಿ, ಗಣಪತಿ ಮೊದಲಾದ ತತ್ವಾಭಿಮಾನಿ ದೇವತೆಗಳಿಂದ ಪೂಜಿತನಾಗಿದ್ದಾನೆ. ಎಷ್ಟು ರೂಪಗಳಿಂದ ಎಂದರೆ, ಮೂರೆರಡು ಸಾವಿರ–(೫೦೦೦) ಐದುಸಾವಿರ, ವರೇ(ಸಾವಿರ)–(೫೦೦) ಐದುನೂರ ಮ್ಯಾಲಿ, ನಾಲ್ವತ್ತು–(೪೦) ನಲವತ್ತು, ಇದರ ಮ್ಯಾಲೆ, ಮೂರಧಿಕ–ಅಧಿಕವಾಗಿ ಮೂರು ಅಂತು ೫೫೪೩. ಪ್ರ–೩, ದ್ಯು–೪, ಮ–೫, ನ–೫. ಬಲದಿಂದ ಎರಕ್ಕೆ ೫೫೪೩. ಅಂತು ೫೫೪೩ ರೂಪಗಳು ಆಯಿತು. ರೂಪದಿ–ಇಷ್ಟು ರೂಪಗಳಿಂದ, ತೋರುತಿಹ–ತನ್ನ ಪೂಜಾ ಮಾಡತಕ್ಕ ದೇವತೆಗಳಿಗೆ ತೋರುತ್ತ ಪ್ರಾಣಮಯ ಕೋಶದಲ್ಲಿ ಇದ್ದಾನೆ. ಜಗದೊಳು–ಪ್ರಾಣಿಗಳ ಸ್ಥೂಲದೇಹದೊಳು, ಪ್ರದ್ಯುಮ್ನನು–ಪ್ರದ್ಯುಮ್ನ ನಾಮಕ ಪರಮಾತ್ಮ, ಆಗಿ–ಪ್ರಾಣಮಯ ಕೋಶದಲ್ಲಿ ಅಖಂಡರೂಪನಾಗಿ ಇನ್ನು ಅಕ್ಷರಸಾಂಕೇತದಿಂದ ಖಂಡರೂಪನಾಗಿ ಇರೋವನಾಗಿ ಇದ್ದಾನೆ.

**ತಾ||** ಶ್ರೀ ಪರಮಾತ್ಮ ಅನಿರುದ್ಧರೂಪದಿಂದ ಸ್ಥೂಲದೇಹದಲ್ಲಿ ಪೃಥ್ವೀಸಾಂಕೇತ ಅನ್ನಮಯಕೋಶದಲ್ಲಿ ೮೫೫೧ ಖಂಡಾಖಂಡ ರೂಪಗಳಿಂದ ಇದ್ದು ಜೀವಭುಕ್ತ ಪ್ರಾಕೃತಾನ್ನವನ್ನ ತ್ಯಜಿಸಿ, ತನ್ನ ಸ್ವಾಖ್ಯವಾದ ಸಾರಭೂತವಾದದ್ದರನ್ನ ಭೋಜನಮಾಡಿ ಅನ್ನಮಯನೆಂದು ಕರಿಸತಾನೆ. ಹಾಂಗೆ ಶ್ರೀ ಪರಮಾತ್ಮನು ಪ್ರದ್ಯುಮ್ನರೂಪದಿಂದ ಪ್ರಾಣಾಧಾರವಾದ ಉದಕ ಪ್ರಾಚುರ್ಯವಾದ ಪ್ರಾಣಮಯಕೋಶದಲ್ಲಿ ೫೫೪೩ ರೂಪಗಳಿಂದ ಇದ್ದು ಮೇಲೆ ಹೇಳಿದ ಪ್ರಕಾರ ಮರೀಚಿ ಮೊದಲಾದವರಿಂದ ಪೂಜೆಯ ಕೈಕೊಂಡು ತನ್ನ ರೂಪ ತೋರಿಸುತಾ ಪ್ರಾಣಮಯ ಎಂದು ಕರಸತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಗುರುವೃತ್ತ ಪ್ರಮಾಣ :– "ಏಕೋತ್ತರಪಂಚಾಶತ್ಸಹಿತಾ ದ್ವಿಶತಾದಿಕೈಃ | ವಸುಸಾಹಸ್ರಸಂಖ್ಯಾಕೈ ರೂಪಾಣ್ಯನು ಸದಾ ಸ್ಮರ || ಅನಿರುದ್ಧಸ್ಯ ಸಾರಸ್ಯ ಭೋಕ್ತುರನ್ನಮಯಸ್ಯ ಚೇತಿ ||೧|| ತ್ರಿಚತ್ವಾರಿಂಶದಧಿಕೈಃ ಸಾರ್ಧೈಃ ಪಂಚಸಹಸ್ರಕೈಃ | ಮಿತಾನಿ ಸ್ಮರ ಶ್ರೀಕಂಠ ಪ್ರದ್ಯುಮ್ನಸ್ಯ ಮಹಾತ್ಮನಃ ||" ಇತಿ.

**ಎರಡು ಕೋಶದ ಒಳಹೊರಗೆ ಸಂ |**
**ಕರುಷಣೈದು ಸುಲಕ್ಷದರವ |**
**ತ್ತೆರಡುಸಾವಿರದೇಳಧಿಕಶತರೂಪಗಳ ಧರಿಸಿ |**
**ಕರೆಸಿಕೊಂಬ ಮನೋಮಯನು ಎಂ |**
**ದರ ವಿದೂರನು ಈರೆರಡು ಸಾ |**
**ವಿರದ ಮುನ್ನೂರಾದ ಮೇಲ್ನಾಲ್ಕಧಿಕ ಎಪ್ಪತ್ತು || ೧೪ ||**

ಮನೋಮಯಕೋಶದ ವಿಚಾರ ಹೇಳತಾರೆ.

ಎರಡು–ಎರಡು ಸಂಖ್ಯಾಕವಾದ, ಕೋಶದ–ಪೃಥ್ವೀಸಾಂಕೇತ ಅನ್ನಮಯಕೋಶ, ಅಪ್ಪುಸಾಂಕೇತವಾದ ಪ್ರಾಣಮಯಕೋಶ, ಅಂತೂ ಈ ಎರಡು ಕೋಶಗಳ, ಒಳ

ಹೊರಗೆ_ಒಳಗೆ_ಒಳಗೆ ಈ ಪೂರ್ವೋಕ್ತ ತತ್ವಗಳು ಅಂತರ್ಭೂತಗಳಾಗಿ ಅವೆ. ಈ ತತ್ವಗಳ, ಹೊರಗೆ_ಆವರಣರೂಪವಾಗಿ ಅನ್ನಮಯ, ಪ್ರಾಣಮಯ ಕೋಶಗಳು ಅವೆ ಎಂತ ಅರ್ಥ. (ಮನೋಮಯಕೋಶವು ಮನಸ್ಸಿಗೆ ಆಧಾರಭೂತವಾದ ಕೋಶವು. ಈ ಕೋಶಕ್ಕೆ ಮನೋಮಯಕೋಶ ಎಂತ ನಾಮ.) ಮನೋಮಯವು ಮನಸ್ಸು ತೇಜೋರೂಪ ವಾದದ್ದು. ಈ ಕೋಶವು ತೇಜಃಪ್ರಾಚುರ್ಯದಿಂದ ತೇಜಃಕೋಶ ಎಂತ ಕರಿಸೋಣಾಗಿ ಅದೆ. (ಇದರಲ್ಲಿ) ಕೋಶಗಳು ಎರಡು. ಇವು ದಾವುವೆಂದರೆ :_ ಪ್ರಥಮಕೋಶದಲ್ಲಿ ೧. ಅಂತಃಕರಣ, ೨. ಅಹಂಕಾರ, ೩. ಚಿತ್ತ, ೪. ಬುದ್ಧಿ, ೫. ಮನಸ್ಸು, ೬. ಅಹಂಕಾರತತ್ವ. ಎರಡನೇ ಕೋಶದಲ್ಲಿ ೧. ವಾಕ್ಕು, ೨. ಶ್ರೋತ್ರ, ೩. ಶಬ್ದ, ೪. ಆಕಾಶ. ಅಂತು ಹತ್ತು (೧೦) ಕೋಶಗಳು. ಇಷ್ಟರಿಂದ ಯುಕ್ತವಾದದ್ದು ದಾವದೋ ಇದೇ ಮನೋಮಯ ಕೋಶ ಎಂತ ನಾಮವು. ಈ ಕೋಶಾಭಿಮಾನಿ ಸಂಕರ್ಷಣನಾಮಕ ಪರಮಾತ್ಮ ಈ ಕೋಶಾಂತರ್ಗತನಾಗಿದ್ದು ಇಂದ್ರದೇವರು, ರುದ್ರ ದೇವರು ಮೊದಲಾದ ತತ್ವಾಭಿಮಾನಿದೇವತೆಗಳಿಂದ ಪೂಜಿತನಾಗಿ ಇದ್ದಾನೆ. ಸಂಕರುಷಣ_ ಸಂಕರ್ಷಣ ನಾಮಕ ಪರಮಾತ್ಮ, ಐದು ಸುಲಕ್ಷದ_(ಅಂದರೆ ೫ ಲಕ್ಷದ), ಅರವತ್ತೆರಡು ಸಾವಿರದ_ಸಮೀಚೀನಗಳಾದ ಐದು ಲಕ್ಷದ ಅರವತ್ತೆರಡು ಸಾವಿರದ ಮ್ಯಾಲೆ, ಶತ ಏಳಧಿಕ_ನೂರ ಮ್ಯಾಲೆ ಏಳು ಎಂದರೆ ೫,೬೨,೧೦೭ ಸಂಖ್ಯಾಕವಾದ, ರೂಪಗಳ ಧರಿಸಿ_ ರೂಪಗಳ ಧರಿಸಿದವನಾಗಿ ಎಂದು, ಕರೆಸಿಕೊಂಬ_ಮನೋಮಯನೆಂದು ಕರಿಸೋವ ನಾಗತಾನೆ (ಅಖಂಡ ರೂಪ ಮನೋಮಯರೂಪ. ಖಂಡರೂಪಗಳು ಅಕ್ಷರಸಾಂಕೇತ ರೂಪಗಳು. (ಸಂಕರಷಣ ಸಂ_೭೦, ಕ_೧, ರ_೨, ಷ_೬, ಣ_೫ =೫೬೨೧೦೭, ಬಲದಿಂದ ಎಡಕ್ಕೆ ಲೆಕ್ಕಮಾಡಬೇಕು) ಭಗವದ್ರೂಪಗಳು. ಇಲ್ಲಿಗೆ ಮನೋಮಯಕೋಶ ಆಯಿತು. ಇನ್ನು ವಿಜ್ಞಾನಮಯಕೋಶ ಹೇಳತಾರೆ. ಈ ವಿಜ್ಞಾನಮಯಕೋಶ ವಾಯುಪ್ರಾಚುರ್ಯವಾದದ್ದು. ಇದರಲ್ಲಿ ಮಹತ್ತತ್ವವದೆ. ಈ ಕೋಶದಲ್ಲಿ ಅರವಿದೂರನು_ ದೂಷದೂರನಾದ, ಗುಣಪೂರ್ಣನಾದ ವಾಸುದೇವರೂಪಿ ಪರಮಾತ್ಮ ಮತ್ತು ದೋಷ ರೂಪವಾದ ಲಿಂಗದೇಹವನ್ನು ದೂರಮಾಡಿ ಮೋಕ್ಷಪ್ರದನಾದವನು, ಇಂಥಾ ವಾಸು ದೇವನು, ಈರೆರಡುಸಾವಿರ_(೪೦೦೦) ನಾಲ್ಕುಸಾವಿರದ, ಮುನ್ನೂರು_(೩೦೦) ಆದ ಮ್ಯಾಲೆ, ಎಪ್ಪತ್ತು ನಾಲ್ಕಧಿಕ_ಎಪ್ಪತ್ತುನಾಲ್ಕು, ಅಂತು ೪೩೭೪ ಭಗವದ್ರೂಪಗಳು. ಹ್ಯಾಂಗೆಂದರೆ, ವಾ_೪, ಸು_೭, ದೇ_೩, ವ_೪, ಬಲದಿಂದ ಎಡಕ್ಕೆ ಆಗತಕ್ಕದ್ದು ೪೩೭೪ ಸಂಖ್ಯಾರೂಪಗಳು. ವಿಜ್ಞಾನಮಯರೂಪ ಅಖಂಡರೂಪ, ಅಕ್ಷರಸಂಖ್ಯಾರೂಪ ಖಂಡರೂಪ. ಈ ಉಭಯುವಿಧದಿಂದ ವಿಜ್ಞಾನಮಯಕೋಶದಲ್ಲಿ ವಾಸುದೇವ ಇದ್ದು ತದ್ಗತ ಬ್ರಹ್ಮ, ವಾಯು, ತತ್ವಾಭಿಮಾನಿ ದೇವತೆಗಳಿಂದ ಪೂಜಿತನಾಗಿ ಇದ್ದಾನೆ.

**ತಾ||** ಮನೋಮಯಕೋಶ ಸ್ಥಾನದಲ್ಲಿ ೫೬೨೧೦೭ ರೂಪದಿಂದ ಸಂಕರುಷಣಾಖ್ಯ ಹರಿ ಖಂಡಾಖಂಡರೂಪಗಳಿಂದ ಇದ್ದು, ಇಂದ್ರ, ರುದ್ರ ವೊದಲಾದ ತತ್ವಾಭಿಮಾನಿ ದೇವತೆಗಳಿಂದ ಪೂಜಿತನಾಗಿದ್ದಾನೆ ಎಂತಲೂ, ವಿಜ್ಞಾನಮಯಕೋಶದಲ್ಲಿ ೪೫೭೪

ರೂಪಗಳಿಂದ ವಾಸುದೇವರೂಪಿ ಪರಮಾತ್ಮ ಬ್ರಹ್ಮ ವಾಯುಗಳಿಂದ ಪೂಜಿತನಾಗಿದ್ದಾನೆ ಎಂತಲೂ ತಾತ್ಪರ್ಯ.

**ವಿಶೇಷಾರ್ಥ :–** ಪ್ರಮಾಣ :– "ಕೋಶದ್ವಯಸ್ಯ ಬಾಹ್ಯಾಂತರ್ಗತಸ್ಯ ಪರಮಾತ್ಮನಃ । ಸಂಕರ್ಷಣಾಖ್ಯರೂಪಾಣಿ ಚಿಂತನೀಯಾನಿ ಚೇಶ್ವರ ॥ ದ್ವ್ಯತ್ರೈಃ ಷಷ್ಠಿಸಾಹಸ್ರೈಃ ಸಪ್ತಾಧಿಕಶತಾಧಿಕೈಃ । ಪಂಚಲಕ್ಷಮಿತಾನ್ಯೇವ ವಾಸುದೇವಸ್ಯ ಚಾರ್ಭಕ ॥೧॥ ಚತುಸ್ಸಪ್ತತಿಯುಕ್ತೈಶ್ಚ ತ್ರಿಶತೈಶ್ಚ ಸಹಸ್ರಕೈಃ । ಚತುರ್ಭಿಶ್ಚ ಸ್ವರೂಪಾಣಿ ನ ವಿಸ್ಮರ ಕದಾಚನ ॥" ಇತಿ.

**ರೂಪದಿಂ ವಿಜ್ಞಾನಮಯನೆಂ ।**
**ಬೀ ಪೆಸರಿನಿಂ ವಾಸುದೇವನು ।**
**ವ್ಯಾಪಿಸಿಹ ಮಹದಾದಿತತ್ವವ ತತ್ಪತಿಗಳೊಳಗೆ ॥**
**ಈ ಪುರುಷನಾಮಕನ ಶುಭಸ್ವೇ ।**
**ದಾಪಳೆನಿಸಿ ರಮಾಂಬ ತಾ ಬ್ರ ।**
**ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು ॥ ೧೫ ॥**

ಅವಶಿಷ್ಟ ವಿಜ್ಞಾನಮಯಕೋಶವೂ, ಆನಂದಮಯಕೋಶ ವಿಚಾರವೂ ಹೇಳಥಾರೆ.

ರೂಪದಿಂ–ಪೂರ್ವೋಕ್ತ ಳ೩೭೪ಳ ರೂಪದಿಂದ, ವಿಜ್ಞಾನಮಯನೆಂಬ–ವಾಯು ಸಾಂಕೇತವಾದ ವಿಜ್ಞಾನಮಯ ಕೋಶದಲಿ ತದಾಕಾರ ಅಖಂಡ ರೂಪನಾಗಿ ವಿಜ್ಞಾನ ಮಯ ಎಂತ, ಈ ಪೆಸರಿನಿಂದ–ಈ ಕೋಶ ನಾಮದಿಂದ, ವಾಸುದೇವನು–ವಾಸುದೇವ ರೂಪಿ ಪರಮಾತ್ಮನು, ವ್ಯಾಪಿಸಿಹ–ವ್ಯಾಪ್ತನಾಗಿದಾನೆ. ವಿಜ್ಞಾನಮಯ ಕೋಶದ ವಿಚಾರ ಮುಗಿಯಿತು. ಇನ್ನು ಆನಂದಮಯ ಕೋಶದ ವಿಚಾರ ಹೇಳಥಾರೆ. ಆನಂದಕ್ಕೆ ಆಧಾರಭೂತವಾದದ್ದು, ಆನಂದಮಯ ಕೋಶ. ಇದೇ ಆಕಾಶಪ್ರಚುರವಾದ ಆಕಾಶ ಕೋಶವು. ಇದರಲ್ಲಿ ನಾರಾಯಣದೇವರು ಇದ್ದಾನೆ. ಈ ಆನಂದಮಯ ಕೋಶದಲ್ಲಿ ತತ್ವ ದಾವುದು ಎಂದರೆ ಮಹತ್ತತ್ವ ಆರಂಭ ಮಾಡಿ ಆದಿಶಬ್ದದಿಂದ, ಮಹದಾದಿ ತತ್ವವ–ಪೃಥ್ವೀತತ್ವ ಪರಿಯಂತ ಯಾವತ್ತೂ ತತ್ವವ ಅತಿಕ್ರಮಿಸಿದ ಅವ್ಯಕ್ತ ತತ್ವವು ಇರೋದಾಗಿ.ಅದೆ. ಈ ತತ್ವಾಭಿಮಾನಿ ದಾರೆಂದರೆ :– ಈ ಪುರುಷನಾಮಕನ– ವಾಸುದೇವಗೆ ಪುರುಷ ಎಂತ ನಾಮ ಉಂಟು. ಈ ವಾಸುದೇವನ, ಶುಭ–ಮಂಗಳಕರ ಳಾದ ನಾರಾಯಣ ದೇವರ ಪತ್ನಿಯಾದ ಲಕ್ಷ್ಮೀದೇವೇರು, ಸ್ವೇದಾಪಳೆನಿಸಿ–ಅಂಡದ ಹೊರಗೆ ಸೂಕ್ಷ್ಮ ಸೃಷ್ಟಿ ಕಾಲದಲ್ಲಿ ಪುರುಷನಾಮಕ ಬ್ರಹ್ಮನ ಸೃಷ್ಟಿಗೋಸ್ಕರ ಬ್ರಹ್ಮ ದೇವರ ಮಹತ್ತತ್ವದ ವೀರ್ಯತ್ವೇನ ವಾಸುದೇವನು ಧರಿಸಿ ತನ್ನ ಪತ್ನಿಯಾದ ಮಾಯಾ ದೇವೇರಲ್ಲಿ ಅಂಥಾ ವೀರ್ಯವನ್ನ ಸೇಚನ ಮಾಡೋ ಕಾಲದಲ್ಲಿ ಆ ದೇವರ ಅಂಗದಿಂದ, ಸ್ವೇದ–ಬೆವರು ಎನಿಸತಕ್ಕ, ಆಪಳು–ಉದಕ ರೂಪ ಎಂತ, ಎನಿಸಿ–ತಾನೇ ಸಾಕ್ಷಾತ್ಕಾರ

ದಿಂದ ಎನಿಸಿ ಬೆವರೋದಕದಿಂದ ಅಭಿವ್ಯಕ್ತಿ ಆಗಿ, ರಮಾಂಬ–ಜಗತ್ತಿಗೆ ತಾಯಿಯಾದ ಲಕ್ಷ್ಮೀದೇವೇರು, ತಾ–ತಾನು (ಲಕ್ಷ್ಮೀದೇವೇರು) ಬ್ರಹ್ಮಾಪರೋಕ್ಷಿಗಳಾದವರ–ಸ್ವರೂಪ ಹೃದಯಗತ ಬಿಂಬನಾದ ಗುಣಪೂರ್ಣನಾದ ಶ್ರೀ ಪರಮಾತ್ಮನ ಪ್ರತ್ಯಕ್ಷದಿಂದ ಕಂಡವರಾದ ಅಂಥ ಜೀವನ್ಮುಕ್ತರಾದವರ, ಅಂಗಾಂಗ–ಅನಾದಿಯಿಂದ ಸಂಸಾರಕ್ಕೆ ಕಾರಣವಾಗಿ ಬಂಧಕರೂಪದಿಂದ ಇರತಕ್ಕ ಲಿಂಗದೇಹವನ್ನು, ಕೆಡಿಸುವಳು–ವ್ಯಕ್ತಳಾಗಿ ಸ್ವೇದೋದಕದಿಂದ ನಂತರ ಆ ಉದಕದಿಂದ (ರೂಪದಿಂದ) ವಿರಜಾನದಿ ಎಂತ ಕರಿಸಿದವಳಾಗಿ ತನ್ನ ಪತಿಯಾದ ನಾರಾಯಣ ದೇವರ ಆಜ್ಞಾದಿಂದ ಸ್ನಾನ ಮಾಡಿದವರ ಲಿಂಗ ದೇಹವನ್ನು ಕೆಡಿಸೋವಳಾಗಥಾಳೆ. ಆ ಲಿಂಗ ದೇಹಗಳು ಜೀವರಿಂದ ದೂರವಾಗಿ ವಿರಜಾನದಿಯಲ್ಲಿ ತೇಲತಾ ಇರತದೆ. ಪ್ರಳಯಕಾಲದಲ್ಲಿ ಪುನಃ ಆ ವಿರಜಾನದಿ ರಮಾದೇವೇರಲ್ಲಿ ಸೇರೋ ಕಾಲಕ್ಕೆ ಆಕೆ ಉದರ ಪ್ರವಿಷ್ಟವಾಗೋದಾಗತದೆ. ಲಿಂಗಭಂಗವೇ ಹೊರತು ಲಿಂಗದೇಹಕ್ಕೆ ನಾಶವಿಲ್ಲ. ಇಂಥಾವಳಾದ, ತತ್ಪತಿಗಳೊಳಗೆ–ಪೂರ್ವೋಕ್ತ ಅನ್ನಮಯಾದಿ ವಿಜ್ಞಾನಮಯಾಂತ ಕೋಶಗತ, ತತ್ಪತಿಗಳಿಗೆ–ಪತಿಗಳಾದ, ಕ್ಷರರಾದ ಬ್ರಹ್ಮಾದಿ ದೇವತೆಗಳೊಳಗೆ ಸೇರದ ಅಕ್ಷರಳಾದ ನಾರಾಯಣದೇವರ ಪತ್ನಿ ತತ್ವಾಭಿಮಾನಿ ರಮಾದೇವೇರಿಂದ ಆನಂದಮಯಕೋಶಗತ ಪರಮಾತ್ಮ ಪೂಜಿತನಾಗಿ ಇದ್ದಾನೆ.

ಲಕ್ಷ್ಮ್ಯಾತ್ಮಕ ವಿರಜಾನದಿ ಶ್ರೀ ಪರಮಾತ್ಮನ ಬೆವರಿನಿಂದ ಜನಿತಳು ಎಂಬುದಕ್ಕೆ ಪ್ರಮಾಣ :– ಪ್ರಧಾನಪರಮವ್ಯೋಮ್ನೋರಂತರಾ ವಿರಜಾ ನದೀ ದೇವಾಂಗಸ್ವೇದ ಜನಿತೇತಿ ಪ್ರಕಾಶ ಸಂಹಿತಾಯಾಂ. ಇನ್ನೂ ಅವಶಿಷ್ಟ ವಿಚಾರ ಮುಂದಿನ ಶ್ಲೋಕದಲ್ಲಿ ಹೇಳಥಾರೆ ಆದಕಾರಣ ತಾತ್ಪರ್ಯ ಇಲ್ಲಿ ಬರೆಯಲಿಲ್ಲ.

**ಐದುಸಾವಿರ ನೂರ ಇಪ್ಪ ।**
**ತ್ರೈದು ನಾರಾಯಣನ ರೂಪವ ।**
**ತಾ ಧರಿಸಿಕೊಂಡನುದಿನದಿ ಆನಂದಮಯನೆನಿಪ ॥**
**ಐದು ಲಕ್ಷದ ಮೇಲೆ ಎಂಭ ।**
**ತ್ರೈದು ಸಾವಿರ ನಾಲ್ಕು ಶತಗಳ ।**
**ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ॥ ೧೬ ॥**

ಅವಶಿಷ್ಟ ಆನಂದಮಯ ಕೋಶದ ವಿಚಾರ ಹೇಳಥಾರೆ.

ನಾರಾಯಣನ–ಅಕ್ಷರ ಸಾಂಕೇತವಾದ ನಾರಾಯಣನ ರೂಪಗಳು, ಐದುಸಾವಿರ–ನೂರ ಇಪ್ಪ ತ್ರೈದು–೫,೧೨೫, ರೂಪವ ತಾ ಧರಿಸಿಕೊಂಡು—ನಾ–೫, ರಾ–೨, ಯ–೧, ಣ–೫–೫,೧೨೫ (ಬಲದಿಂದ ಎಡಕ್ಕೆ) ಇಷ್ಟು ರೂಪವ ನಾರಾಯಣನಾದ ತಾನು ಧರಿಸಿಕೊಂಡು ಲಕ್ಷ್ಮೀದೇವೇರಿಂದ ಸಮೇತನಾಗಿ, ಅನುದಿನದಿ–ಪ್ರತಿದಿನದಲ್ಲೂ, ಆನಂದ–ಮಯನೆನಿಪ–ಆನಂದಮಯ ಕೋಶದಲ್ಲಿ ತದಾಕಾರನಾಗಿ ಅಖಂಡ ರೂಪದಿಂದ ಆನಂದ ಮಯನೆಂತಲೂ, ಖಂಡ ರೂಪದಿಂದ ಅಕ್ಷರವಾಚ್ಯನಾಗಿಯೂ ಎನಿಸಿ ಇರೋವನಾಗಿ

ದಾನೆ. ಅಂತು (೫) ಕೋಶಗತ ಭಗವದ್ರೂಪಗಳು, ವೊತ್ತ ಸಂಖ್ಯಾ ಎಷ್ಟು ಎಂದರೆ, ಐದು ಲಕ್ಷದ ವ್ಯಾಲಿ–೫,೦೦,೦೦೦ ವ್ಯಾಲಿ, ಎಂಭತ್ತೈದು ಸಾವಿರ–೮೫,೦೦೦, ನಾಲ್ಕು ಶತಗತ–ನಾಲ್ಕು ನೂರುಗಳು (೪೦೦). ಅಂತು ೫,೦೦,೦೦೦ + ೮೫,೦೦೦ + ೪೦೦ = ೫,೮೫,೪೦೦, ಐದು ಲಕ್ಷದ ಎಂಭತ್ತೈದು ಸಾವಿರದ ನಾನೂರು ರೂಪಗಳು ಆಯಿತು. ಇಷ್ಟು ರೂಪಗಳ ಧರಿಸಿದವನಾಗಿ, ವಿರಿಂಚಾಂಡದೊಳು–ಬ್ರಹ್ಮಾಂಡದೊಳಗೇನು, ಅದರಲ್ಲಿ ವಿದ್ಯಮಾನರಾದ ಅನ್ನಮಯಾದಿ, ಐದು ಕೋಶಾತ್ಮಕ–ಐದು ಕೋಶಾತ್ಮಕದಿಂದ ಪ್ರಚುರವಾದ ಪ್ರಾಣಿಗಳ ಸ್ಥೂಲ ದೇಹಗಳಲ್ಲಿ, ತುಂಬಿಹನು–ಅನಿರುದ್ಧಾದಿ ಐದು ರೂಪಗಳಿಂದ ಖಂಡಾಖಂಡವಾಗಿ ತುಂಬಿಕೊಂಡು ಇರೋವನಾಗಿ ಇದಾನೆ. ಒಟ್ಟು ಭಗವದ್ರೂಪಗಳ ವಿವರ :–

| ಸಂಖ್ಯಾ | ಅಖಂಡ ರೂಪ | ಖಂಡ ರೂಪಗಳು | ಕೋಶಗಳ ಹೆಸರು | |
|---|---|---|---|---|
| ೧ | ೧ | ೮,೨೫೧ | ಅನ್ನಮಯಕೋಶ | ಅನಿರುದ್ಧ |
| ೨ | ೧ | ೫,೫೪೩ | ಪ್ರಾಣಮಯಕೋಶ | ಪ್ರದ್ಯುಮ್ನ |
| ೩ | ೧ | ೫,೬೨,೧೦೭ | ಮನೋಮಯಕೋಶ | ಸಂಕರ್ಷಣ |
| ೪ | ೧ | ೪,೩೭೪ | ವಿಜ್ಞಾನಮಯಕೋಶ | ವಾಸುದೇವ |
| ೫ | ೧ | ೫,೧೨೫ | ಆನಂದಮಯಕೋಶ | ನಾರಾಯಣ |
| ೫ | ೫ | ೫,೮೫,೪೦೦ | ೫ | ೫ |

| ಕೋಶಗಳ ಹೆಸರು | ಭಗವದ್ರೂಪಗಳು | ಕೋಶಗಳಲ್ಲಿ ನಡೆಸತಕ್ಕ ಕಾರ್ಯ |
|---|---|---|
| ೧ ಅನ್ನಮಯ | ಅನಿರುದ್ಧ | ಪ್ರಾಣಿಗಳಿಗೆ ಕ್ಷುತ್ತು ಉಂಟುಮಾಡಿ ಕೊಡತಕ್ಕವ |
| ೨ ಪ್ರಾಣಮಯ | ಪ್ರದ್ಯುಮ್ನ | ಭೋಜನ ಪದಾರ್ಥಗಳ ಚಿಂತನಿ ಮಾಡಿಸತಕ್ಕವ |
| ೩ ಮನೋಮಯ | ಸಂಕರ್ಷಣ | ಅದರ ಪ್ರಯತ್ನ ಮಾಡಿಸುವ |
| ೪ ವಿಜ್ಞಾನಮಯ | ವಾಸುದೇವ | ನಾನಾ ಪ್ರಕಾರ ಪಚನಾದಿಗಳು ಮಾಡಿಸಿ ಅದನ್ನು ಜತನ ಮಾಡುವ |
| ೫ ಆನಂದಮಯ | ನಾರಾಯಣ | ಅದರನ್ನ ಭೋಜನ ಮಾಡಿಸಿ ಆನಂದ ಬಡಿಸುವ |

**ವಿಶೇಷಾರ್ಥ :**– ೫೧೨೫ ರೂಪದಿಂದ ನಾರಾಯಣ ಆನಂದಮಯನೆನಿಸುವನು. ಉಕ್ತಂ ಚ ಗುರುವೃತ್ತೌ :— "ಪಂಚವಿಂಶತ್ಯಧಿಕಶತಂ ಯುತಂ ಪಂಚಸಹಸ್ರಕೈಃ | ನಾರಾಯಣಸ್ಯ ರೂಪೈಶ್ಚ ಆನಂದಮಯ ಈರ್ಯತೆ||" ಇತಿ. ೫,೮೫,೪೦೦ ಭಗವದ್ರೂಪ ಗಳು ಎಂಬ ಪದಕ್ಕೆ ಪ್ರಮಾಣ :— "ಚತುಶ್ಶತಾಧಿಕೈಃ ಪಂಚಾಶೀತಿಸಹಸ್ರಸಂಯುಕ್ತೈಃ | ಪಂಚಲಕ್ಷಸುರೂಪೈಸ್ತು ಬ್ರಹ್ಮಾಂಡೇ ಪಂಚಕೋಶಗೈಃ ||" ಇತಿ ಗುರುವೃತ್ತೌ. ಈ ರೀತಿ ಪ್ರಮಾಣ ಅದೆ.

**ನೂರವೊಂದು ಸುರೂಪದಿಂ ಶಾಂ |**
**ತೀರಮಣ ತಾನನ್ನನೆನಿಪ್ಪೆ |**
**ನೂರ ಮೇಲ್ಮೂರಧಿಕದಶ ಪ್ರಾಣಾಖ್ಯ ಪ್ರದ್ಯುಮ್ನ ||**
**ತೋರುತಿಹನೈವತ್ತ ಐದು ವಿ |**
**ಕಾರ ಮನದೊಳು ಸಂಕರುಷಣನೈ |**
**ನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ || ೧೭ ||**

ಪೂರ್ವದಲ್ಲಿ ಕೋಶಾಂತರ್ಗತ ಭಗವಂತನ ವಿಚಾರ ಹೇಳಿದರು. ಈಗ ಆಯಾ ಕೋಶಾಕಾರದಿಂದ ಇರತಕ್ಕ ಭಗವದ್ರೂಪಗಳ ವಿಚಾರವನ್ನ ಹೇಳತಾರೆ. ದೃಷ್ಟಾಂತ ಸಂಪುಟ ಒಂದು, ಸಂಪುಟ ಭಗವದ್ರೂಪ ಒಂದು. ಪೂರ್ವದಲ್ಲಿ ಹೇಳಿದ್ದು ಸಂಪುಟಗತ ಪರಮಾತ್ಮನ ವಿಚಾರ. ಅವನವನ ೫ ಕುಂಜರವತ್ ಖಂಡನೂ ಹೌದು, ಅಖಂಡನೂ ಹೌದು ಎಂಬುದು ಪೂರ್ವೋಕ್ತವು. ಪ್ರಥಮದಲ್ಲಿ ಹೇಳಿದ ಕೋಶಗತ ಭಗವದ್ರೂಪಗಳ ಕಾರ್ಯ ಕ್ಷುದಾದಿ ಜನಕಗಳ ಕಾರ್ಯ. ವರ್ತಮಾನ ಕೋಶಾಕಾರ ಭಗವದ್ರೂಪಗಳ ಕಾರ್ಯ. ಕೋಶಾಧಾರ ಕೋಶಸಂರಕ್ಷಣೆ ಕಾರ್ಯವೂ.

ನೂರವೊಂದು ಸ್ವರೂಪದಿಂ–೧೦೧ ಸ್ವರೂಪದಿಂದ (ನೂರಾವಂದು) ಎಂದರೆ ಅಕ್ಷರ ಸಾಂಕೇತದಿಂದ ನೂರಾಒಂದು ತನ್ನ ಸ್ವಾಖ್ಯರೂಪದಿಂದ, ಶಾಂತೀರಮಣ–ಶಾಂತೀ ನಾಮಕ ಲಕ್ಷ್ಮೀದೇವೇರಿಗೆ ಪತಿಯಾದ ಅನಿರುದ್ಧನಾಮಕ ಪರಮಾತ್ಮ, ತಾ ಅನ್ನನೆನಿಪ– ತಾನು ಅನ್ನಸಾಂಕೇತವಾದ ಕೋಶದಲ್ಲಿ ತದಾಕಾರದಿಂದ ಇದ್ದು ತನ್ನಾಮವಾದ ಅನ್ನ ಎಂತ ಎನಿಸತಾನೆ. ಅ–೧, ನ್ನ–೧೦ =೧೦೧ ಬಲದಿಂದ ಎಡಕ್ಕೆ ಲೆಕ್ಕ. ಅಕ್ಷರ ಸಾಂಕೇತದಿಂದ ಆಗೋ ರೂಪಗಳು ಬಲದಿಂದ ಎಡಕ್ಕೆ ಆಗತಕ್ಕದು ನೂರಾ ಒಂದು ರೂಪಗಳು. ಅಕ್ಷರದ್ವಯಕ್ಕೂ ದಶಾಸಂಖ್ಯಾ ಎಂತ ಅರ್ಥ. ಈಗ ಹೇಳತಕ್ಕ ಕೋಶಾ ಕಾರ ಅಖಂಡರೂಪವು. ನವನಾರೀಕುಂಜರ ದೃಷ್ಟಾಂತದಿಂದ ಖಂಡಾಖಂಡಗಳು ಉಭಯವೂ ತಿಳಿಯಬೇಕು. ಐನೂರು ಮೇಲೆ–(೫೦೦) ಐದುನೂರು ಮ್ಯಾಲೆ, ದಶ– (೧೦) ಹತ್ತು, ಮೂರಧಿಕ–ಮೂರು, ಪ್ರಾಣಾಖ್ಯ–ಪ್ರಾಣ ಎಂತ ಸಾಂಕೇತವಾದ ಕೋಶದಲ್ಲಿ, ತದಾಕಾರನಾಗಿ ತನ್ನಾಮದಿಂದ ಪ್ರಸಿದ್ಧನಾಗಿ, ಪ್ರಾಣ ಎಂತ, ಪ್ರ–೩, ಅ–೧, ಣ–೫ ಬಲದಿಂದ ಎಡಕ್ಕೆ ಲೆಕ್ಕ =(೫೧೩) ಐದುನೂರ ಹದಿಮೂರು ರೂಪಗಳು.

ಪ್ರದ್ಯುಮ್ನ–ಕೃತಿನಾಮಕ ಲಕ್ಷ್ಮೀದೇವೇರ ಪತಿಯಾದ ಪ್ರದ್ಯುಮ್ನನಾಮಕ ಪರಮಾತ್ಮ, ತೋರುತಿಹ–ಪೂರ್ವೋಕ್ತಪ್ರಕಾರ ಖಂಡರೂಪಗಳಿಂದ ಇದ್ದು ತದಭಿಮಾನಿಗಳಿಗೆ ತನ್ನ ರೂಪಗಳ ತೋರಿಸುತಾ ಇದ್ದಾನೆ. ಐವತ್ತೈದು–(೫೫) ಐವತ್ತೈದು ಸಂಖ್ಯಾಕವಾದ ರೂಪಗಳಿಂದ, ವಿಕಾರ–ಪ್ರಾಣಿಗಳ ನಾನಾ ಪ್ರಕಾರವಾಗಿ ವಿಕಾರಗೊಳಿಸತಕ್ಕ, ಮನದೊಳು–ಮನಸ್ಸಾಂಕೇತವಾದ ಮನಃಕೋಶದಲ್ಲಿ ತದಾಕಾರನಾಗಿ ಮನಃಶಬ್ದವಾಚ್ಯನಾಗಿ ಅಕ್ಷರರೂಪೀ ಪರಮಾತ್ಮ ಜಯನಾಮಕ ಲಕ್ಷ್ಮೀದೇವೇರಿಂದ ಸಹಿತನಾಗಿ ಇದ್ದಾನೆ. ಮ–೫, ನ–೫ =೫೫. ಐದುನೂರು (೫೦೦), ಅಶೀತಿ–ಎಂಭತ್ತು (೮೦), ಚತುರ–ನಾಲ್ಕು, ಅಂತು ಐನೂರಎಂಭತ್ತನಾಲ್ಕು ಖಂಡರೂಪಗಳಿಂದ, ವಿಜ್ಞಾನಾತ್ಮ–ವಿಜ್ಞಾನಕೋಶದಲ್ಲಿ ವಿಜ್ಞಾನಶಬ್ದವಾಚ್ಯನಾಗಿ ವಿಜ್ಞಾನಕೋಶದೋಪಾದಿಯಲ್ಲಿ ತದಾಕಾರದಿಂದಲೂ ಇದ್ದಾನೆ. ದಾರು ಎಂದರೆ, ವಿಶ್ವಾಖ್ಯ–ವಿಶ್ವನಾಮಕ ಪರಮಾತ್ಮ. ಇವಗೆ ವಾಸುದೇವ ಎಂತ ನಾಮವೂ ಉಂಟು. ಸರ್ವ ನಾಮವೂ ಪರಮಾತ್ಮನ ನಾಮವು. ಆದಕಡಿಯಿಂದ ಮಾಯಾನಾಮಕ ಲಕ್ಷ್ಮೀದೇವೇರಿಗೆ ಪತಿಯಾದ ವಾಸುದೇವ ವಿಜ್ಞಾನಕೋಶದಲ್ಲಿ ಇದ್ದಾನೆ. ವಿ–೪, ಜ್ಞಾ–೮, ನ-೫ ಅಕ್ಷರಸಾಂಕೇತದಿಂದ ಆಗೋ ರೂಪಗಳು ಐನೂರ ಎಂಭತ್ತನಾಲ್ಕು (೫೮೪) ಎಂತ ತಾತ್ಪರ್ಯ.

**ಮೂರು ಸಾವಿರದರ್ಧಶತ ಮೇ ।**
**ಲೀರಧಿಕ ರೂಪಗಳ ಧರಿಸಿ ಶ ।**
**ರೀರದೊಳಗಾನಂದಮಯ ನಾರಾಯಣಾಹ್ವಯನು ॥**
**ಈರೆರಡು ಸಾವಿರದ ಮೇಲ್ಮು ।**
**ನ್ನೂರ ಐದು ಸುರೂಪದಿಂದಲಿ ।**
**ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ ॥ ೧೮ ॥**

ಆನಂದಮಯ ಕೋಶದ ವಿಚಾರ ಹೇಳಥಾರೆ.

ಮೂರು ಸಾವಿರ–೩,೦೦೦, ಅರ್ಧಶತಮೇಲ್–(೫೦) ಐವತ್ತರ ಮೇಲೆ, ಈರಧಿಕ–ಎರಡು (೨) ಹೆಚ್ಚು, ಅಂತು (೩,೦೫೨) ಮೂರು ಸಾವಿರದ ಐವತ್ತೆರಡು ಸಂಖ್ಯಾಕ, ರೂಪಗಳ ಧರಿಸಿ–ಇಷ್ಟು ರೂಪಗಳನ್ನ ಧರಿಸಿ, ನಾರಾಯಣ–ನಾರಾಯಣ ದೇವರು ಕೋಶನಾಮದಿಂದ, ಆನಂದ–ಎಂತ ಕರಿಸಿದವನಾಗಿ ತದಾಕಾರದಿಂದ ಖಂಡಾಖಂಡ ರೂಪದಿಂದ ಇದ್ದಾನೆ. ಆ–೩, ನಂ–೫೦, ದ–೨ ಬಲದಿಂದ ಎಡಕ್ಕೆ ೩೦೫೨ ರೂಪಗಳಿಂದ ತನ್ನ ಪತ್ನಿಯಾದ ಲಕ್ಷ್ಮೀದೇವೇರಿಂದ ಸಮೇತನಾಗಿ ಇದ್ದಾನೆ. ಅಂತು ಐದು ಕೋಶಗತ ಅಕ್ಷರ ಸಾಂಕೇತದಿಂದ ಆಗೋ ಭಗವದ್ರೂಪಗಳ ಮೊತ್ತ ಎಷ್ಟು ಎಂದರೆ, ಈರೆರಡು–ಸಾವಿರದ ಮೇಲ್–(೪,೦೦೦) ನಾಲ್ಕು ಸಾವಿರದ ಮ್ಯಾಲೆ, ಮುನ್ನೂರ ಐದು–೩೦೫ ಅಂತು ಒಟ್ಟು ಸಂಖ್ಯಾ (೪,೩೦೫) ನಾಲ್ಕು ಸಾವಿರದ ಮುನ್ನೂರ ಐದು, ಸ್ವರೂಪದಿಂದಲಿ–ಸಮೀಚೀನಗಳಾದ, ಇಷ್ಟು ರೂಪಗಳಿಂದ, ಭಾರತೀಶನ–ಭಾರತೀಪತಿ ವಾಯು

ದೇವರ, ಒಳಿಪ್ಪ–ಅಂತರ್ಗತನಾಗಿ ಇದಾನೆ ಎಂತ ತಾತ್ಪರ್ಯ. ಕೋಶದಲ್ಲಿ ತದಾಕಾರ ಎಂಥಾದೆಂದರೆ (ದೃಷ್ಟಾಂತ), ನವನೀತಸ್ಥ–ಬೆಣ್ಣೆ ಎಂಬ ಕೋಶಸಾಂಕೇತ ಅಧಿಷ್ಠಾನದಲಿ, ಘೃತದಂತೆ–ತುಪ್ಪ ಹ್ಯಾಂಗೆ ತದಾಕಾರದಿಂದ ಇರತಪೋ ಆ ಪ್ರಕಾರ ವ್ಯಾಪಿಸಿ ಇದ್ದಾನೆ ಎಂತ ತಾತ್ಪರ್ಯ.

**ತಾ||** ಮೂರು ಸಾವಿರದ ಐವತ್ತೆರಡು ರೂಪದಿಂದ ಆನಂದ ಎಂತ ಎನಿಸಿಕೊಂಡು ಅನ್ನಾದಿ ಪಂಚಕೋಶದಲಿ ನಾಲ್ಕು ಸಾವಿರದ ಮುನ್ನೂರೈದು ಸಮೀಚೀನ ರೂಪಗಳಿಂದ ಭಾರತೀದೇವೇರ ಪತಿಯಾದ ವಾಯುದೇವರ ಅಂತರ್ಗತನಾಗಿ ಆಯಾ ಕೋಶದಲ್ಲಿ ತದಾಕಾರನಾಗಿ ತುಪ್ಪ ಹ್ಯಾಂಗೆ ತದಾಕಾರದಿಂದ ಬೆಣ್ಣೆಯಲ್ಲಿ ವ್ಯಾಪಿಸಿಕೊಂಡಿರತಮೋ ತದ್ವತ್ ವ್ಯಾಪ್ತನಾಗಿದಾನೆ ಎಂತ ತಾತ್ಪರ್ಯ.

**ಮೂರಧಿಕವೈವತ್ತು ಪ್ರಾಣ ಶ |**
**ರೀರದೊಳಗನಿರುದ್ಧ ನಿಪ್ಪ್ಯ |**
**ನೂರು ಹನ್ನೊಂದಧಿಕಪಾನದೊಳಿಪ್ಪ ಪ್ರದ್ಯುಮ್ನ ||**
**ಮೂರನೇ ವ್ಯಾನದೊಳಗೈದರಿ |**
**ನೂರು ರೂಪದಿ ಸಂಕರುಷಣೈ |**
**ನೂರ ಮೂವತ್ತೈದುದಾನದೊಳಿಪ್ಪ ಮಾಯೇಶ || ೧೯ ||**

ಈ ಕೋಶಾಕಾರ ಕೋಶನಾಮದಿಂದ ಇರತಕ್ಕ ಪರಮಾತ್ಮನೇ ಅಧಿಷ್ಠಾನ ಭೂತವಾದ ಮುಖ್ಯಪ್ರಾಣರೂಪಗಳಾದ ಪ್ರಾಣಾಪಾನಾದಿ ಪಂಚರೂಪಾಂತರ್ಗತ ತದಾಕಾರ ತನ್ನಾಮವಾಚ್ಯ ಅಖಂಡರೂಪ ಹಾಂಗೆ ಖಂಡರೂಪಗಳ ಹೇಳಥಾರೆ.

ಐವತ್ತು–೫೦ ಸಂಖ್ಯಾದ ಮ್ಯಾಲೆ, ಮೂರಧಿಕ–ಅಧಿಕ ಮೂರು ಅಂತು (೫೩) ಐವತ್ತಮೂರು, ಪ್ರಾಣ–ಮುಖ್ಯಪ್ರಾಣರೂಪಗಳಾದ ಪ್ರಾಣಾಪಾನಾದಿ ಪಂಚರೂಪದೊಳಗೆ ಪ್ರಾಣರೂಪಿಯಾದ ಶ್ರೀ ವಾಯುದೇವರ, ಶರೀರದೊಳಗೆ–ಅನ್ನಮಯ ಕೋಶಗತ ತದಾಕಾರ ಮಹತ್ತತ್ವಾತ್ಮಕ ಸ್ಥೂಲಶರೀರದೊಳಗೆ, ಅನಿರುದ್ಧನು–ಅನಿರುದ್ಧ ನಾಮಕ ಪರಮಾತ್ಮ ಪ್ರಾಣಾಕಾರನಾಗಿ ಅಖಂಡ ರೂಪದಿಂದ ಪ್ರಾಣಪದವಾಚ್ಯನಾಗಿ ಇದ್ದಾನೆ, ಮತ್ತು ಪ್ರಾಣಸಾಂಕೇತವಾದ ಖಂಡರೂಪಗಳಿಂದಲೂ ಇದ್ದಾನೆ. ಪ್ರಾ–೩ (ಪ+ರ ೧+೨=೩), ಣ–೫, ಬಲದಿಂದ ಎಡಕ್ಕೆ ೫೩ ಅಕ್ಷರಸಾಂಕೇತದಿಂದ ಆಗೋ ಪ್ರಾಣಪದ ವಾಚ್ಯನಾದ ಅನಿರುದ್ಧನು ಖಂಡರೂಪಗಳಿಂದ, ಇಪ್ಪ–ಇರೋವನಾಗಿದಾನೆ. ಐನೂರು–(೫೦೦) ಐದುನೂರು, ಹನ್ನೊಂದಧಿಕ–(೧೧) ಹನ್ನೊಂದು ಅಧಿಕವಾಗಿ ಅಂದರೆ (೫೧೧) ಐನೂರಹನ್ನೊಂದು ರೂಪಗಳಿಂದ, ಅಪಾನದೊಳಿಪ್ಪ–ಐನೂರಹನ್ನೊಂದು ರೂಪಗಳಿಂದ ಅಪಾನನಾಮಕ ವಾಯುದೇವರಲ್ಲಿ ತದಾಕಾರನಾಗಿ ಇರತಕ್ಕ ಅಪಾನಶಬ್ದವಾಚ್ಯನಾದ, ಪ್ರದ್ಯುಮ್ನ–ಅಖಂಡರೂಪದಿಂದಲೂ, ಅಕ್ಷರಸಾಂಕೇತವಾದ ಖಂಡರೂಪದಿಂದಲೂ ಪ್ರದ್ಯುಮ್ನ ಇದ್ದಾನೆ. ಅ–೧, ಪಾ–೧, ನ–೫ ಬಲದಿಂದ ಎಡಕ್ಕೆ (೫೧೧) ಐನೂರ ಹನ್ನೊಂದು ರೂಪಗಳು. ಮೂರನೇ–ವಾಯುದೇವರ ಮೂರನೇ ರೂಪವಾದ ಮೂರನೇ ಕೋಶವಾದ ಮನೋಮಯಕೋಶದಲ್ಲಿ ತದಾಕಾರನಾಗಿ ಇರತಕ್ಕ, ವ್ಯಾನದೊಳಗೆ–

ವ್ಯಾನನಾಮಕ ವಾಯುದೇವರ ಒಳಗೆ, ಐದು ಸಂಖ್ಯಾದ ಮ್ಯಾಲೆ, ಅರೆನೂರು–(೫೦) ಎಂತ ಅರ್ಥ (ಐದರೆನೂರು ಎಂದರೆ ಐದು+ಅರೆನೂರು ಎಂದರೆ ನೂರು ಅರ್ಥ ಅಂದರೆ ೫೦. ಅಂದರೆ ೫+೫೦=೫೫ ರೂಪಗಳು ಆಯಿತು, ರೂಪದಿ–ಖಂಡರೂಪದಿಂದಲೂ, ಅಖಂಡರೂಪದಿಂದಲೂ ಇರೋವನಾಗಿದ್ದಾನೆ. ದಾರೆಂದರೆ ಸಂಕರುಷಣ–ಸಂಕರ್ಷಣ ರೂಪಿ ಪರಮಾತ್ಮ. ಐದುನೂರಮೂವತ್ತೈದು–(೫೩೫) ಐದುನೂರಮೂವತ್ತೈದು ಖಂಡ ರೂಪಗಳಿಂದ, ಉದಾನದೊಳಿಪ್ಪ–ವಿಜ್ಞಾನಮಯ ಕೋಶದಲ್ಲಿ ತದಾಕಾರನಾಗಿ ಇರತಕ್ಕ ಉದಾನ ವಾಯುದೇವರ ಒಳಗೆ ಇದ್ದಾನೆ. ಮಾಯೇಶ–ಮಾಯಾಪತಿಯಾದ ವಾಸುದೇವ ನಾಮಕ ಪರಮಾತ್ಮ ಎಂತ ಅರ್ಥ. ಉ–೫, ದಾ–೩, ನ–೫ ಬಲದಿಂದ ಎಡಕ್ಕೆ ೫೩೫ ಖಂಡಾಖಂಡ ರೂಪಗಳಿಂದ ಇದ್ದಾನೆ ಎಂತ ತಾತ್ಪರ್ಯ. ೧೯ ಮತ್ತು ೨೦ ಈ ಎರಡು ಶ್ಲೋಕಗಳ ಒಂದೇ ಅನ್ವಯದಿಂದ ತಾತ್ಪರ್ಯ ಬರೆಯಲ್ಪಡುತ್ತದೆ.

**ಮೂಲನಾರಾಯಣನು ಐವ ।**
**ತ್ತೇಳಧಿಕ ಐನೂರು ರೂಪವ ।**
**ತಾಳಿ ಸರ್ವತ್ರದಿ ಸಮಾನನೊಳಿಪ್ಪ ಸರ್ವೇಶ ॥**
**ಲೀಲೆಗೈವನು ಸಾವಿರದ ಮೇ ।**
**ಲೇಳು ನೂರ್ಹನ್ನೊಂದು ರೂಪವ ।**
**ತಾಳಿ ಪಂಚಪ್ರಾಣರೊಳು ಲೋಕಗಳ ಸಲಹುವನು ॥ ೨೦ ॥**

ಸಮಾನಾಂತರ್ಗತ ನಾರಾಯಣನ ವಿಚಾರವೂ ಮೊತ್ತ ಭಗವದ್ರೂಪಗಳೂನೂ ಹೇಳತಾರೆ.

ಮೂಲನಾರಾಯಣನು – ಮೂಲರೂಪಿ ನಾರಾಯಣದೇವರು, ಐನೂರು ಐವತ್ತೇಳಧಿಕ–(೫೫೭) ಐನೂರಐವತ್ತೇಳು, ರೂಪವ ತಾಳಿ–ಅಕ್ಷರಸಾಂಕೇತದಿಂದ ಅಗತಕ್ಕ ಖಂಡರೂಪಗಳಿಂದ, ಎಂದರೇ ಸ–೭, ಮಾ–೫, ನ–೫, ಬಲದಿಂದ ಎಡಕ್ಕೆ ೫೫೭ ರೂಪಗಳು. ಇಷ್ಟು ರೂಪಗಳಿಂದ ಯುಕ್ತನಾಗಿ, ಸಮಾನನೊಳಿಪ್ಪ–ಆನಂದಮಯಕೋಶದೊಳು ತದಾಕಾರನಾಗಿ ಖಂಡಾಖಂಡ ರೂಪಗಳಿಂದ ಇದ್ದಾನೆ. ಸರ್ವೇಶ ಸರ್ವತ್ರದಿ–ಸರ್ವತ್ರ ವಿದ್ಯಮಾನರಾದ ಪ್ರಾಣಿಗಳ ಸ್ಥೂಲದೇಹದಲ್ಲಿ (ಅಂದರೆ ತದ್ಗತ ಪಂಚಕೋಶಗತ ತದಾಕಾರ ಪಂಚಪ್ರಾಣರೂಪಾಂತರ್ಗತನಾಗಿ ಖಂಡಾಖಂಡ ರೂಪಗಳಿಂದ ಶ್ರೀಪರಮಾತ್ಮ ಇದ್ದಾನೆ.) ಲೀಲೆಗೈವನು–ಆಯಾ ಕೋಶಕಾರ್ಯಗಳು ದಾವದೋ ಅದರಂತೆ ಮಾಡುತಾ ಸುಖದಿಂದ ಇದ್ದವನಾಗಿ, ಪಂಚಪ್ರಾಣರೊಳು–ಪ್ರಾಣಾದಿ ಪಂಚಪ್ರಾಣದಲ್ಲಿ ಇದ್ದು, ಲೋಕಗಳ–ಜೀವರುಗಳನ್ನ, ಸಲಹುವನು–ಸಂರಕ್ಷಣ ಮಾಡುವನು. (ಅಂತು ಪಂಚಕೋಶಾಂತರ್ಗತ ಪಂಚಪ್ರಾಣಾಧಿಷ್ಠಿತ ಭಗವದ್ರೂಪಗಳು), ಸಾವಿರದ ಮ್ಯಾಲೆ ಏಳು ನೂರ್ಹನ್ನೊಂದು–(೧೭೧೧) ಸಾವಿರದ ಏಳುನೂರಹನ್ನೊಂದು, ರೂಪವ ತಾಳಿ–ರೂಪಗಳಿಂದ ಇದ್ದವನಾಗಿ ಲೋಕಸಂರಕ್ಷಣ ಮಾಡತಾ ಇರುತ್ತಾನೆ ಎಂತ ತಾತ್ಪರ್ಯ.

**ತಾ॥** ಅನ್ನಮಯಾದಿ ಪಂಚಕೋಶವೂ ಪ್ರಾಣಾದಿ ಪಂಚಕೋಶದ ವಿವರವೂ ಈ ಕೆಳಗಿನ ಪ್ರಕಾರ ತಿಳಿಯಬೇಕು.

ದೇವರ, ಒಳಿಪ್ಪ–ಅಂತರ್ಗತನಾಗಿ ಇದಾನೆ ಎಂತ ತಾತ್ಪರ್ಯ. ಕೋಶದಲ್ಲಿ ತದಾಕಾರ ಎಂಥಾದೆಂದರೆ (ದೃಷ್ಟಾಂತ), ನವನೀತಸ್ಥ–ಬೆಣ್ಣೆ ಎಂಬ ಕೋಶಸಾಂಕೇತ ಅಧಿಷ್ಠಾನದಲಿ, ಘೃತದಂತೆ–ತುಪ್ಪ ಹ್ಯಾಂಗೆ ತದಾಕಾರದಿಂದ ಇರತಪೋ ಆ ಪ್ರಕಾರ ವ್ಯಾಪಿಸಿ ಇದ್ದಾನೆ ಎಂತ ತಾತ್ಪರ್ಯ.

**ತಾ||** ಮೂರು ಸಾವಿರದ ಐವತ್ತೆರಡು ರೂಪದಿಂದ ಆನಂದ ಎಂತ ಎನಿಸಿಕೊಂಡು ಅನ್ನಾದಿ ಪಂಚಕೋಶದಲಿ ನಾಲ್ಕು ಸಾವಿರದ ಮುನ್ನೂರೈದು ಸಮೀಚೀನ ರೂಪಗಳಿಂದ ಭಾರತೀದೇವೇರ ಪತಿಯಾದ ವಾಯುದೇವರ ಅಂತರ್ಗತನಾಗಿ ಆಯಾ ಕೋಶದಲ್ಲಿ ತದಾಕಾರನಾಗಿ ತುಪ್ಪ ಹ್ಯಾಂಗೆ ತದಾಕಾರದಿಂದ ಬೆಣ್ಣೆಯಲ್ಲಿ ವ್ಯಾಪಿಸಿಕೊಂಡಿರತಮೋ ತದ್ವತ್ ವ್ಯಾಪ್ತನಾಗಿದಾನೆ ಎಂತ ತಾತ್ಪರ್ಯ.

**ಮೂರಧಿಕವೈವತ್ತು ಪ್ರಾಣ ಶ |**
**ರೀರದೊಳಗನಿರುದ್ಧ ನಿಪ್ಪೈ |**
**ನೂರು ಹನ್ನೊಂದಧಿಕಪಾನದೊಳಿಪ್ಪ ಪ್ರದ್ಯುಮ್ನ ||**
**ಮೂರನೇ ವ್ಯಾನದೊಳಗೈದರೆ |**
**ನೂರು ರೂಪದಿ ಸಂಕರುಷಣೈ |**
**ನೂರ ಮೂವತ್ತೈದುದಾನದೊಳಿಪ್ಪ ಮಾಯೇಶ || ೧೯ ||**

ಈ ಕೋಶಾಕಾರ ಕೋಶನಾಮದಿಂದ ಇರತಕ್ಕ ಪರಮಾತ್ಮನೇ ಅಧಿಷ್ಠಾನ ಭೂತವಾದ ಮುಖ್ಯಪ್ರಾಣರೂಪಗಳಾದ ಪ್ರಾಣಾಪಾನಾದಿ ಪಂಚರೂಪಾಂತರ್ಗತ ತದಾಕಾರ ತನ್ನಾಮವಾಚ್ಯ ಅಖಂಡರೂಪ ಹಾಂಗೆ ಖಂಡರೂಪಗಳ ಹೇಳಥಾರೆ.

ಐವತ್ತು–೫೦ ಸಂಖ್ಯಾದ ಮ್ಯಾಲೆ, ಮೂರಧಿಕ–ಅಧಿಕ ಮೂರು ಅಂತು (೫೩) ಐವತ್ತಮೂರು, ಪ್ರಾಣ–ಮುಖ್ಯಪ್ರಾಣರೂಪಗಳಾದ ಪ್ರಾಣಾಪಾನಾದಿ ಪಂಚರೂಪದೊಳಗೆ ಪ್ರಾಣರೂಪಿಯಾದ ಶ್ರೀ ವಾಯುದೇವರ, ಶರೀರದೊಳಗೆ–ಅನ್ನಮಯ ಕೋಶಗತ ತದಾಕಾರ ಮಹತ್ತತ್ವಾತ್ಮಕ ಸ್ಥೂಲಶರೀರದೊಳಗೆ, ಅನಿರುದ್ಧನು–ಅನಿರುದ್ಧ ನಾಮಕ ಪರಮಾತ್ಮ ಪ್ರಾಣಾಕಾರನಾಗಿ ಅಖಂಡ ರೂಪದಿಂದ ಪ್ರಾಣಪದವಾಚ್ಯನಾಗಿ ಇದ್ದಾನೆ, ಮತ್ತು ಪ್ರಾಣಸಾಂಕೇತವಾದ ಖಂಡರೂಪಗಳಿಂದಲೂ ಇದ್ದಾನೆ. ಪ್ರಾ–೩ (ಪ+ರ ೧+೨=೩), ಣ–೫, ಬಲದಿಂದ ಎಡಕ್ಕೆ ೫೩ ಅಕ್ಷರಸಾಂಕೇತದಿಂದ ಆಗೋ ಪ್ರಾಣಪದವಾಚ್ಯನಾದ ಅನಿರುದ್ಧನು ಖಂಡರೂಪಗಳಿಂದ, ಇಪ್ಪ–ಇರೋವನಾಗಿದಾನೆ. ಐನೂರು–(೫೦೦) ಐದುನೂರು, ಹನ್ನೊಂದಧಿಕ–(೧೧) ಹನ್ನೊಂದು ಅಧಿಕವಾಗಿ ಅಂದರೆ (೫೧೧) ಐನೂರಹನ್ನೊಂದು ರೂಪಗಳಿಂದ, ಅಪಾನದೊಳಿಪ್ಪ–ಐನೂರಹನ್ನೊಂದು ರೂಪಗಳಿಂದ ಅಪಾನನಾಮಕ ವಾಯುದೇವರಲ್ಲಿ ತದಾಕಾರನಾಗಿ ಇರತಕ್ಕ ಅಪಾನಶಬ್ದವಾಚ್ಯನಾದ, ಪ್ರದ್ಯುಮ್ನ–ಅಖಂಡರೂಪದಿಂದಲೂ, ಅಕ್ಷರಸಾಂಕೇತವಾದ ಖಂಡರೂಪದಿಂದಲೂ ಪ್ರದ್ಯುಮ್ನ ಇದ್ದಾನೆ. ಅ–೧, ಪಾ–೧, ನ–೫ ಬಲದಿಂದ ಎಡಕ್ಕೆ (೫೧೧) ಐನೂರಹನ್ನೊಂದು ರೂಪಗಳು. ಮೂರನೇ–ವಾಯುದೇವರ ಮೂರನೇ ರೂಪವಾದ ಮೂರನೇ ಕೋಶವಾದ ಮನೋಮಯಕೋಶದಲ್ಲಿ ತದಾಕಾರನಾಗಿ ಇರತಕ್ಕ, ವ್ಯಾನದೊಳಗೆ–

**ತ್ರಿನವತಿ ಸ್ವರೂಪಾತ್ಮಕನಿರು ।**
**ದ್ಧನು ಸದಾ ಯಜಮಾನನಾಗಿ ।**
**ದ್ದನಲ ಯಮ ಸೋಮಾದಿ ಪಿತೃದೇವತೆಗಳಿಗೆ ಅನ್ನ ॥**
**ನೆನಿಪನಾ ಪ್ರದ್ಯುಮ್ನ ಸಂಕರು ।**
**ಷಣ ವಿಭಾಗವ ಮಾಡಿಕೊಂ ।**
**ಡುಣಿಪ ನಿತ್ಯಾನಂದಭೋಜನದಾಯಿ ತುರ್ಯಾಹ್ವ ॥ ೨೧ ॥**

ಪೂರ್ವೋಕ್ತ ಅನಿರುದ್ಧಾದಿ ಭಗವದ್ರೂಪಗಳು ಭೋಜನಾದಿ ವ್ಯಾಪಾರಗಳು ಮಾಡುವ ಅಧಿಕಾರಿಯ ದೇಹಗತವಾಗಿದ್ದೂನೂ ತನ್ನ ಪಿತೃಗಳನ್ನ ಕೂಡಾ ಸಂರಕ್ಷಣ ಮಾಡತಾರೆ ಎಂತ ಹೇಳತಾರೆ. ಅಧಿಕಾರಿಯ ಪಾಂಚಭೌತಿಕ ಸ್ಥೂಲದೇಹ, ಮಾತಾ ಪಿತೃಗಳದು ಆಯಿತು. ಈ ದೇಹಗತ ಜೀವನೇನೋ ಮಾತಾಪಿತೃಜೀವನಲ್ಲ, ಬ್ಯಾರೆ ಜೀವ. ಆದ್ದರಿಂದ ದೇಹದಿಂದ ಮಾಡಿದ ಕರ್ಮಗಳೊಳಗೆ ಪಿತೃಗಳಿಗೂ ಭಾಗವದೆ. ದೇಹ ವಿವಕ್ಷಯಾ ಎಂತ ತಿಳಿಯಬೇಕು. ಯಾಕೆಂದರೆ, ನಮ್ಮ ಮಾತಾಪಿತೃಗಳು ನಮಗೆ ದೇಹದತ್ತರು ಮಾತ್ರ. ಈ ಸ್ಥೂಲದೇಹ ಬರಲಿಕ್ಕೆ ನಿಮಿತ್ತ ಕಾರಣ. ಸ್ಥೂಲ ದೇಹಗತ ಜೀವ ಅವರದ್ದಲ್ಲ. ಜೀವ ಬ್ಯಾರೆ. ಜೀವನಿಗೆ ಸಂಬಂಧವಾದ ಸ್ಥೂಲದೇಹ ಅವರ ಮೂಲಕ ಬಂದದ್ದು. ಕರ್ಮ ಮಾಡತಕ್ಕವ ಅನ್ಯನಾದ ಜೀವ, ಆದ್ದರಿಂದ ಕರ್ಮ ಮಾಡಿದ್ದಕ್ಕೆ ಇವಗೂ ಭಾಗ ಇರೋದಾಗಿ ಅದೆ. ಅಂತು ಉಭಯರಿಗೂ ಭಾಗ ಉಂಟು. ಅನುಸಂಧಾನದಿಂದ ಭೋಜನಮಾಡಿದ ಪುಣ್ಯ ತನ್ನ ಪಿತೃಗಳಿಗೆ, ಪಿತೃದೇವತೆಗಳಿಗೆ, ಜೀವಗೆ ವಿಭಾಗಕ್ರಮ ಹೇಳಬೇಕಾಗಿ ಪಿತೃಪ್ರಕ್ರಿಯಾ ಪ್ರಸಕ್ತವೆಂದು ತಿಳಿಯಬೇಕು.

ತ್ರಿನವತಿ–ತೊಂಬತ್ತಮೂರು, ಸ್ವರೂಪಾತ್ಮಕ– ಸ್ವ–ಸ್ವಕೀಯಗಳಾದ, ರೂಪಾತ್ಮಕ–ಈ ೯೩ ರೂಪಗಳು ಉಳ್ಳ (ಪಿತೃದೇವತೆಗಳಿಗೆ, ಪಿತೃಗಳಿಗೆ, ದೇಹಧಾರಿಯಾದ ಜೀವಗೆ ಸ್ವಾಮಿಯಾದ ತದಾತ್ಮಕನಾಗಿ ತನ್ನಾಮದಿಂದ ಕರಿಸಿ ಅಂತರ್ಗತನಾದ), ಅನಿರುದ್ಧನು–ಅನಿರುದ್ಧರೂಪಿ ಶ್ರೀ ಪರಮಾತ್ಮನು (೯೩ ರೂಪ ದಾವದೆಂದರೆ ಅಧಿಕಾರಿಯ. ಶರೀರದ ವಿಚಾರ ಹೇಳತಾರೆ. ಅಧಿಕಾರಿಯ ಶರೀರ ಉತ್ಪತ್ತಿ ಹ್ಯಾಂಗೆಂದರೆ :–

| | |
|---|---|
| ೧. ಪಿತನ ರೇತಸ್ಸು | ೧. ಮಾತೃಶುಕ್ಲ |
| ೨. ಪಿತಾಮಹನ ರೇತಸ್ಸು | ೨. ಮಾತಾಮಹಿ ಶುಕ್ಲ |
| ೩. ಪ್ರಪಿತಾಮಹನ ರೇತಸ್ಸು ಅಂತು ಮೂರು. | ೩. ಮಾತಾಪ್ರಪಿತಾಮಹಿ ಶುಕ್ಲ ಅಂತು ಮೂರು. |

ಈ ಪ್ರಕಾರ (೬) ವಿಧದಿಂದ ಈ ದೇಹನಿರ್ಮಾಣ. ಈ ರೇತಸ್ಸಂಬಂಧ ಪರಂಪರಾ ದಿಂದ ಬಂದು ದೇಹದಲ್ಲಿ ಸಂಬಂಧಪಟ್ಟಿರುತ್ತದೆ. ಆ ರೇತಸ್ಸಂಬಂಧದಿಂದ ಸೂತಕಾದಿ ಗಳು, ರೇತಸ್ಸಂಬಂಧ ತಪ್ಪಿದಾಗ ಸೂತಕವಿಲ್ಲ. ಗೋತ್ರದಾಯಾದಿಗಳೆಂತ ಕರಿಸತಾರೆ. ಪಿತನ ರೇತಸ್ಸು ದೇಹಕ್ಕೆ ಸಂಬಂಧಿಸಿ ಇರೋಣದ್ದರಿಂದ ಪಿತೃದೇವತೆಗಳಾದ ವಸುದೇವತೆ

ಗಳು (೮) ಎಂಟು ಮಂದಿ ದೇಹಗತನ ಪಿತೃರೇತೋಂಶವನ್ನ ಆಶ್ರಯಿಸಿ ಇದ್ದಾರೆ. ಪಿತಾಮಹನ ರೇತೋಂಶವನ್ನ ಏಕಾದಶರುದ್ರರು ಆಶ್ರಯಿಸಿ ಇದ್ದಾರೆ. ಹಾಂಗೆ ಪ್ರಪಿತಾಮಹನ ರೇತೋಂಶವನ್ನು ದ್ವಾದಶಾದಿತ್ಯರು ಆಶ್ರಯಿಸಿ ಇದ್ದಾರೆ. ಇಷ್ಟು ದೇವತೆಗಳು ದೇಹದಲ್ಲಿ ಆಯಾ ರೇತಸ್ಸುಗಳ ಆಶ್ರಯಿಸಿ ಇದ್ದಾರೆ. ಈ ಮೂವತ್ತೊಂದು ಮಂದಿಯಲ್ಲಿ ಅನಿರುದ್ಧರೂಪಗಳು (೯೩) ತೊಂಬತ್ತುಮೂರು ರೂಪಗಳು ಇರೋದಾಗಿ ಅದೆ. ಹ್ಯಾಂಗೆಂದರೆ ಒಬ್ಬೊಬ್ಬರ ಶರೀರ

೧. ವೈಕಾರಿಕ ಸಾಂಕೇತವಾದ ಮನಸ್ಸು
೨. ತೈಜಸ ಸಾಂಕೇತವಾದ ದಶೇಂದ್ರಿಯಗಳು
೩. ತಾಮಸ ಸಾಂಕೇತವಾದ ಪಂಚಭೂತಗಳು

ಅಂತು ಮೂರು ಅಹಂಕಾರಗಳಿಂದ ಯುಕ್ತವಾದದ್ದು. ಈ ಪ್ರಕಾರ ೩೧ ಮಂದಿ ದೇವತೆಗಳಲ್ಲಿ ಸೇರಿಸಿ ಗುಣಿಸಿದರೆ ಮೂವತ್ತೊಂದು ಮೂರುಗಳು (೯೩) ತೊಂಬತ್ತುಮೂರು ಆಗತದೆ. ಒಂದೊಂದರಲ್ಲಿ ಒಂದೊಂದು ಅನಿರುದ್ಧನ ರೂಪದ ಮೇರಿಗೆ ೯೩ ಅನಿರುದ್ಧನ ರೂಪಗಳು. ತ್ರಿನವತಿಸ್ವರೂಪಾತ್ಮಕ ಅನಿರುದ್ಧನು ಎಂಬುದಕ್ಕೆ ಇದು ತಾತ್ಪರ್ಯ. ಅನಲ—ಅನ್ಯಪಿತೃದೇವತೆಗಳಾದ ಅಗ್ನಿದೇವರು ಪಿತೃರೇತೋಭಾಗದಲ್ಲಿ, ಸೋಮ—ಚಂದ್ರದೇವರು ಪ್ರಪಿತಾಮಹನ ರೇತೋಭಾಗದಲ್ಲಿ ಇರೋವರಾಗಿದ್ದಾರೆ. ಆದಿ—ಆದಿಶಬ್ದದಿಂದ, ಪೂರ್ವೋಕ್ತ ವಸುರುದ್ರಾದಿತ್ಯಸಾಂಕೇತರಾದವರು ಗ್ರಾಹ್ಯ. ದೇವತೆಗಳಿಗೆ—ಈ ಯಾವತ್ತೂ ದೇವತೆಗಳಿಗೆ, ಪಿತೃ—ಪಿತೃ, ಪಿತಾಮಹ, ಪ್ರಪಿತಾಮಹ ಈ ತ್ರಿವಿಧ ಪಿತೃಗಳಿಗೆ, ಅನಿರುದ್ಧನು ಸದಾ—ನಿರಂತರದಲ್ಲೂ, ಯಜಮಾನನಾಗಿ—ನಿಯಾಮಕಸ್ವಾಮಿಯಾಗಿ, ಇದ್ದು—ಪೂರ್ವೋಕ್ತ ದೇವತಾಸಹಿತನಾಗಿ ಸ್ಥೂಲದೇಹದಲ್ಲಿ ಇದ್ದು ಅಧಿಕಾರಿಯಿಂದ ಪುಣ್ಯಕರ್ಮಗಳ ಮಾಡಿಸಿ, ೩ ವಸುರುದ್ರಾದಿ, ೩ ಅನಲಸೋಮಾದಿ, ೩ ಪಿತೃಪಿತಾಮಹಾದಿ ಒಂಭತ್ತು ಮಂದಿಗೆ ಸೇರತಕ್ಕ ಪುಣ್ಯಸಮೂಹಾಖ್ಯ ಅನ್ನದೊಳು ತದ್ವಾಚ್ಯನಾಗಿ ಒಂದೊಂದಂಶದಿಂದ ಅನಿರುದ್ಧ ಇದ್ದು, ಅನ್ನನೆನಿಸ—ಅನ್ನ ಎಂತ ಕರಿಸತಾನೆ. ಆ ಪ್ರದ್ಯುಮ್ನ—ಆ ಅನಿರುದ್ಧನೇ ಪ್ರದ್ಯುಮ್ನರೂಪದಿಂದ ದೇವಭಾಗ ಬ್ಯಾರೆ, ಪಿತೃಭಾಗ ಬ್ಯಾರೆಯಾಗಿ ಎರಡು ಪ್ರಕಾರ ವಿಭಾಗಮಾಡತಾನೆಂದು ತಾತ್ಪರ್ಯ. ಸಂಕರುಷಣ—ಈ ಅನಿರುದ್ಧನೇ ಸಂಕರ್ಷಣ ರೂಪದಿಂದ, ವಿಭಾಗವ ಮಾಡಿ—ದೇವಭಾಗ ೬, ಪಿತೃಭಾಗ ೩, ಈ ಪ್ರಕಾರ ಒಂಬತ್ತು ಭಾಗ ಮಾಡಿದ ನಂತರ, ತುರ್ಯಾಹ್ವ — ಅನಿರುದ್ಧನೇ ತುರ್ಯ ಎಂತ ನಾಮವಾಚ್ಯ ವಾಸುದೇವರೂಪದಿಂದ, ಕೊಂಡು—ಈ ಒಂಭತ್ತುಭಾಗವೂ ತೆಗೆದುಕೊಂಡವನಾಗಿ, ಉಣಿಪ—ಪಿತೃಭಾಗ ಅಗ್ನಿದ್ವಾರಾ, ಪಿತಾಮಹನ ಭಾಗ ಯಮನ ದ್ವಾರಾ, ಪ್ರಪಿತಾಮಹನ ಭಾಗ ಸೋಮನ ದ್ವಾರಾ ಆಯಾ ಪಿತೃಗಳು ಎಲ್ಲಿ ಇದ್ದಾರೋ ಅಲ್ಲಿ ಅವರಿಗೆ ಇವರ ದ್ವಾರಾ ಉಣಿಸೋವನಾಗತಾನೆ. ಆರು ಭಾಗ ಆಯಾ ದೇವತೆಗಳಿಗೆ ಕೊಡತಾನೆ. ಅನಲ, ಯಮ, ಸೋಮಾದಿ ದೇವತೆಗಳು, ಅಧಿಕಾರಿ ಪ್ರತಿದಿನದಲ್ಲಿ ಮಾಡಿದ

ಕರ್ಮದೊಳಗೆ ಪಿತ್ರಾದಿ ಮೂರು ಮಂದಿಗೆ ಸೇರತಕ್ಕ ಪುಣ್ಯಗಳ ವಾಸುದೇವನ ಆಜ್ಞಾದಿಂದ ಅವರವರು ಅವರವರಿಗೆ ಸೇರಿಸೋ ಕಾರ್ಯದಲ್ಲಿ ಇರತಾರೆ. ನಿತ್ಯಾನಂದಭೋಜನದಾಯಿ–ಈ ಪ್ರಕಾರ ಅನುಸಂಧಾನಯುಕ್ತರಿಗೆ, ನಿತ್ಯ–ನಿತ್ಯವಾದ, ಆನಂದ–ಆನಂದಸ್ವರೂಪವನ್ನ, ಭೋಜನ–ಭೋಜನಕ್ಕೋಸ್ಕರ, ವಾಸುದೇವ, ದಾಯಿ–ಕೊಡೋವನಾಗತಾನೆ. ಪೂರ್ವೋಕ್ತ ಪುಣ್ಯದೊಳಗೆ ೧೦ನೆ ಭಾಗ ಅಧಿಕಾರಿ ಭಾಗ. ಪುಣ್ಯ ಅಧಿಕಾರಿಗೆ ಕೊಡ ತಾನೆ ಎಂತ ತಾತ್ಪರ್ಯ. ಪೂರ್ವದಲ್ಲಿ ತಾಯಿವರ್ಗದಲ್ಲಿ ಹೇಳಿದ ಮಾತಾಪ್ರಪಿತಾಮಹಿ ಎಂಬವಳು ಮಾತಾಮಹಿಗೆ ತಾಯಿ ಎಂತ ಅರ್ಥ.

**ಷಣ್ಣವತಿನಾಮಕನು ವಸು ಮೂ ।**
**ಗಣ್ಣ ಭಾಸ್ಕರರೊಳಗೆ ನಿಂತು ಪ್ರ ।**
**ಪನ್ನರನುದಿನ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ॥**
**ಪುಣ್ಯಕರ್ಮವ ಸ್ವೀಕರಿಸಿ ಕಾ ।**
**ರುಣ್ಯಸಾಗರನಾ ಪಿತೃಗಳಿಗ ।**
**ಗಣ್ಯ ಸುಖವಿತ್ತವರ ಪೊರೆವನು ಎಲ್ಲ ಕಾಲದಲಿ ॥ ೨೨ ॥**

ಪಿತೃಗಳಿಗೆ ಸ್ವಾಮಿಯಾದ ಗದಾಧರನ ಪ್ರೀತ್ಯರ್ಥವಾಗಿ ಷಣ್ಣವತಿ ಶ್ರಾದ್ಧಾಖ್ಯ ಪುಣ್ಯಸಾಂಕೇತವಾದ ಅನ್ನ ವಿಭಾಗಮಾಡಿ ಸೇರಿಸೋ ಕ್ರಮ ಹೇಳತಾರೆ.

ಷಣ್ಣವತಿನಾಮಕನು–(೯೬) ತೊಂಬತ್ತಾರು ನಾಮ ಉಳ್ಳ ಅನಿರುದ್ಧನಾಮಕ ಪರಮಾತ್ಮನು. ಷಣ್ಣವತಿ ಶ್ರಾದ್ಧಗಳು ದಾವದೆಂದರೆ ವಿವರ :

೧೪ ಮನ್ವಾದಿಗಳು

೧೬ ಮಹಾಲಯ (ಪಿತೃಪಕ್ಷ)

೪ ಯುಗ ಹುಟ್ಟಿದ ದಿನಗಳು

೧೨ ಮೇಷಾದಿ ಪರ್ವಕಾಲಗಳು

೧೨ ಅಮಾವಾಸ್ಯೆಗಳು

೧೩ ವ್ಯತೀಪಾತಗಳು

೧೩ ವೈಧೃತಿಗಳು

೧೨ ತಿಸ್ರಾಷ್ಟಕಗಳು

ಒಟ್ಟು ೯೬ ಅಂತು (೯೬) ತೊಂಬತ್ತಾರು. ಪ್ರಮಾಣ :—"ಅಮಾಮನುಯುಗ ಕ್ರಾಂತಿವ್ಯತೀಪಾತಮಹಾಲಯಾಃ ತಿಸ್ರಾಷ್ಟಕಾ ಇಮಾಃ ಪ್ರೋಕ್ತಾಃ ಪುಣ್ಯಾವತ್ಯಃ ಪ್ರಕೀರ್ತಿತಾಃ ॥" ಈ ಷಣ್ಣವತಿ ಶ್ರಾದ್ಧನಾಮಗಳಿಂದ ಕರೆಸುತ, ವಸು–ಅಷ್ಟವಸು ಗಳೊಳಗೆ ಅಹಂಕಾರತ್ರಯದಲ್ಲಿ ಪ್ರದ್ಯುಮ್ನ ೨೪ ರೂಪಗಳಿಂದಲೂ, ಮೂಗಣ್ಣ–ಮೂರು

ನೇತ್ರಗಳು ಉಳ್ಳ ರುದ್ರನೇ ಮೊದಲಾದ ಏಕಾದಶ ರುದ್ರರ ಅಹಂಕಾರತ್ರಯದಲ್ಲಿ ೩೩ ಸಂಕರುಷಣರೂಪದಿಂದಲೂ, ಭಾಸ್ಕರರ—ದ್ವಾದಶಾದಿತ್ಯರ ಅಹಂಕಾರತ್ರಯದಲಿ ವಾಸುದೇವ ೩೬ ರೂಪದಿಂದಲೂ, ಅನಲ, ಯಮ, ಸೋಮಾದಿಗಳಲ್ಲಿ (೩) ಮೂರು ರೂಪದಿಂದಲೂ, ಈ ಪ್ರಕಾರ ಅಂತು ೯೬ ರೂಪದಿಂದಲೂ ಅಧಿಕಾರಿ ಶರೀರದಲ್ಲಿ ಇರತಕ್ಕ, ಒಳಗೆ ನಿಂತು—ಪೂರ್ವೋಕ್ತ ದೇವತೆಗಳಲ್ಲಿ ನಿಂತು, ಪ್ರಸನ್ನರು-ಅನುಸಂಧಾನ ತಿಳಿದ ಜ್ಞಾನಿಗಳು, ಅನುದಿನ—ಪಿತೃಗಳಿಗೆ ಒಂದು ವರುಷ ಒಂದು ದಿನ ಸಾಂಕೇತವು. ಆದ್ದರಿಂದ ದಿನ ಸಾಂಕೇತವಾದ ಪ್ರತಿ ವರುಷದಲ್ಲೂ, ನಿಷ್ಕಪಟ—ಕಾಪಟ್ಯದಿಂದ ರಹಿತವಾದ, ಸದ್ಭಕ್ತಿಯಲಿ—ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹರೂಪ ಭಕ್ತಿ ಶ್ರೀ ಪರಮಾತ್ಮನಲ್ಲೂ, ಪಿತೃಗಳಲ್ಲೂನೂ, ಮಾಳ್ಪ—ಮಾಡತಕ್ಕ, ಪುಣ್ಯಕರ್ಮವ ಸ್ವೀಕರಿಸಿ—ಪುಣ್ಯರೂಪವಾದ ಪಿತೃಕರ್ಮವನ್ನು ಸ್ವೀಕಾರಮಾಡಿ (ಅನಿರುದ್ಧನು), ಕಾರುಣ್ಯಸಾಗರ—ಸಂಪೂರ್ಣ ಅಂತಃಕರಣ ಉಳ್ಳ, ಅಗಣ್ಯಸುಖಿನ—ಅಗಣಿತಸುಖರೂಪಿಯಾದ ಈ ಅನಿರುದ್ಧರೂಪಿಯಾದ ಪರಮಾತ್ಮ, ಆ ಪಿತೃಗಳಿಗೆ—ಈ ಅಧಿಕಾರಿ ಯಾವ ರೇತಸ್ಸಿನಿಂದ ಉತ್ಪನ್ನವಾಗಿ ಇದ್ದಾನೋ ಆ ಪಿತೃಗಳಿಗೆ, ಇತ್ತು—ಅಗ್ನಿ, ಯಮಾದಿಗಳ ದ್ವಾರಾ ಇತ್ತು, ಅವರ—ಆ ಪಿತೃಗಳನ್ನೇನು, ಕಾರ್ಯಮಾಡಿದ ಅಧಿಕಾರಿಯನ್ನೇನು ಛಂದಾಗಿ, ಪೊರೆವನು—ಜ್ಞಾನ ಭಕ್ತ್ಯಾದಿಗಳೇನು, ಐಶ್ವರ್ಯವೇನು, ಪುತ್ರಪೌತ್ರಾದಿಗಳನ್ನು ಕೊಟ್ಟು ಸಂರಕ್ಷಿಸುವನು, ಎಲ್ಲ ಕಾಲದಲಿ—ಸದಾ ಕಾಲದಲಿ (ಸರ್ವ ಕಾಲದಲಿ) ಎಂತ ತಾತ್ಪರ್ಯ. ಇದು ಕಾಲ ಶ್ರಾದ್ಧ ವ್ಯತಿರಿಕ್ತ ಅನ್ಯಶ್ರಾದ್ಧ ವಿಚಾರ ಎಂತ ತಾತ್ಪರ್ಯ.

**ಸುತಪನೇಕೋತ್ತರಸುಪಂಚಾ ।**
**ಶತವರಣ ಕರುಣದಿ ಚತುರ್ವಿಂ ।**
**ಶತಿಸುತತ್ತ್ವದಿ ಧಾತುಗಳೊಳಗಿದ್ದವಿರತನಿರುದ್ಧ ॥**
**ಜತನ ಮಾಳ್ಪನು ಜಗದಿ ಜೀವ ।**
**ಪ್ರತತಿಗಳ ಷಣ್ಣವತಿನಾಮಕ ।**
**ಚತುರಮೂರ್ತಿಗಳರ್ಚಿಸುವರದರಿಂದ ಬಲ್ಲವರು ॥ ೨೩ ॥**

ಅನುಸಂಧಾನ ಅರಿತವರು ಪಿತೃಕಾರ್ಯಗಳಲ್ಲಿ ಅನಿರುದ್ಧಾದಿ ರೂಪಗಳ ಈ ಪ್ರಕಾರ ಅರ್ಚಿಸತಾರೆ ಎಂತ ಹೇಳತಾರೆ.

ಸುತಪ—"ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ" ಎಂತ ಸಹಸ್ರ ನಾಮದಲ್ಲಿ ಉಕ್ತಿ ಇರುವದ್ದರಿಂದ ಶ್ರೀ ಪರಮಾತ್ಮನಿಂದ ಸೃಜ್ಯರಾದ ಪ್ರಾಣಿಗಳು ಯಾವತ್ತೂನೂ ಪರಮಾತ್ಮಗೆ ಪುತ್ರರೆಂದು ಕರೆಸತಾರೆ. ಹ್ಯಾಂಗೆಂದರೆ, ಸುತ—ಪ ಎಂತ ಪದ. ಸುತ—ಬ್ರಹ್ಮಾದಿ ಜೀವರನ್ನ, ಪ—ಪಾಲನಮಾಡತಕ್ಕ ದೇವರು. ಏಕೋತ್ತರಸುಪಂಚಾಶತ ವರಣ—ಅಕಾರಾದಿ ಕ್ಷಕಾರಾಂತ ಐವತ್ತೊಂದು ಅಕ್ಷರವ್ಯಾಪ್ಯವಾಗಿ ಅಂದರೆ ಚಕ್ರಾಬ್ಜಾದಿತ ಮಂಡಲ ಸಾಂಕೇತವಾದ ಕಂಕಣಾಕಾರ ಚಕ್ರ ಹೃದಯ ಅಷ್ಟದಳ ಕಮಲಕ್ಕೆ ವಲಯಾ

ಕಾರದಿಂದ ಇರತಕ್ಕ ಐವತ್ತೊಂದು (೫೧) ದಳ ಕಮಲದಲ್ಲಿ ಅಜಾದಿ ಐವತ್ತೊಂದು ರೂಪದಿಂದ ಇದ್ದಾನೆ. ಮತ್ತು ದೇಹಗತವಾದ

೪ (ಮೂಲಾಧಾರದಲ್ಲಿ) ಗುದಸ್ಥಾನಗತ ಚತುರ್ದಳ ಕಮಲದಲ್ಲಿ 'ಕ' ಆರಂಭ ಮಾಡಿ 'ಘ' ವರಿಗೂ ನಾಲ್ಕು ವರ್ಣಗಳು

೬ ನಾಭಿ ಷಟ್‌ದಳ ಕಮಲದಲ್ಲಿ 'ಙ' ಆರಂಭಮಾಡಿ 'ಞ' ವರಿಗೂ ಆರು ವರ್ಣಗಳು

೮ ಹೃದಯ ಅಷ್ಟದಳ ಕಮಲದಲ್ಲಿ 'ಟ' ಆರಂಭಮಾಡಿ 'ದ' ವರಿಗೂ ಎಂಟು ವರ್ಣಗಳು

೧೬ ಕಂಠದಲ್ಲಿ ಷೋಡಶದಳ ಕಮಲದಲ್ಲಿ 'ಧ' ಆರಂಭಮಾಡಿ 'ಳ' ವರಿಗೂ ಹದಿನಾರು ವರ್ಣಗಳು

೪ ಭ್ರೂಮಧ್ಯದಲ್ಲಿ ಚತುರ್ದಳ ಕಮಲದಲ್ಲಿ ಅ, ಆ, ಅಂ, ಅಃ ಎಂಬ ನಾಲ್ಕು ವರ್ಣಗಳು

೧೨ ಶಿರದಲ್ಲಿ ದ್ವಾದಶದಳ ಕಮಲದಲ್ಲಿ 'ಇ' 'ಈ' ಆರಂಭಮಾಡಿ 'ಔ' ವರಿಗೂ ಹನ್ನೆರಡು ವರ್ಣಗಳು

೧ ಶಿರಬ್ರಹ್ಮರಂಧ್ರದಲ್ಲಿ ದ್ವಾದಶದಳ ಕರ್ಣಿಕಾಮಧ್ಯದಲ್ಲಿ 'ಕ್ಷ' ವರ್ಣ ಒಂದು ಅಂತು (೫೧) ಐವತ್ತೊಂದು. ಈ ಪ್ರಕಾರ ಕಮಲಗಳಲ್ಲಿ ಅಜಾದಿ ರೂಪದಿಂದ ದೇಹದಲ್ಲಿ ಇದ್ದಾನೆ. ಮತ್ತು ಕರಣದಿ_ಏಕಾದಶೇಂದ್ರಿಯಗಳಲ್ಲಿ ಶಕ್ತಿಪ್ರತಿಷ್ಠಾದಿ (೧೧) ಹನ್ನೊಂದು ರೂಪಗಳು, ಚತುರ್ವಿಂಶತಿಸುತತ್ವದಿ_೨೪ ತತ್ವಗಳಲ್ಲಿ ಸಮೀಚಿನವಾದ ಕೇಶವಾದಿ ಇಪ್ಪತ್ತುನಾಲ್ಕು ಭಗವದ್ರೂಪಗಳು. ಇದರಲ್ಲಿ ಏಕಾದಶೇಂದ್ರಿಯಗಳು ಸೇರಿ ಅದೆ. ಮೇಲೆ ಕರಣದಿ ಎಂಬದರಲ್ಲಿ ಏಕಾದಶೇಂದ್ರಿಯಗಳು ಬಂದಿವೆ. ಪುನರುಕ್ತಿ ಆಗತದಲ್ಲಾ ಎಂದರೆ ಪ್ರಥಮದಲ್ಲಿ ಹೇಳಿದ್ದು ಇಂದ್ರಿಯಗಳು. ಈಗ ಎರಡನೇ ಸಾರಿ ಹೇಳಿದ್ದು ಇಂದ್ರಿಯ ಗೋಳಕಗಳು ಎಂತ ತಾತ್ಪರ್ಯ.

ಇನ್ನು ಧಾತುಗಳು_ತ್ವಗಾದಿ ಏಳು ಧಾತುಗಳು. ಇದರಲ್ಲಿ ಅನಿರುದ್ಧಾದಿ ೫ ರೂಪಗಳು, ವಸಿಷ್ಠನಾಮಕ ಪರಮಾತ್ಮ ೧, ಹಂಸನಾಮಕ ಪರಮಾತ್ಮ ೧, ಅಂತು (೭) ಏಳು ಅಂದರೆ ಸಪ್ತ ಧಾತುಗಳಲ್ಲಿ ಸಪ್ತ ಭಗವದ್ರೂಪಗಳು. ಇನ್ನು ಉಪಲಕ್ಷಣಯಾ ತ್ರಿಗುಣಗತ ಭಗವದ್ರೂಪಗಳಾದ ವಿಷ್ಣು, ಬ್ರಹ್ಮ, ಶಿವ ಈ ಮೂರು ಭಗವದ್ರೂಪಗಳು. ಅಂತು ೪೫ ಭಗವದ್ರೂಪಗಳು (೧೧+೨೪+೭+೩=೪೫). ಅಂತು ಒಟ್ಟು ಮೊತ್ತ ಷಣ್ಣವತಿ ರೂಪಗಳು ೯೬, ಅಜಾದಿ ರೂಪಗಳು ೫೧, ಶಕ್ತಿ ಪ್ರತಿಷ್ಠಾದಿ ಕೇಶವಾದಿ ತ್ವಗಾದಿ ರೂಪಗಳು ೪೫. ಅಂತು ಒಟ್ಟು ರೂಪಗಳು ೧೬೨. ಒಳಗಿದ್ದು_ದೇಹದೊಳಗೆ ಇದ್ದು, ಅವಿರತ_ಆದ್ಯಂತಶೂನ್ಯನಾದ ಅಂದರೆ ಆದಿಮಧ್ಯಾಂತರಹಿತನಾದ ಅಪರಿಚ್ಛಿನ್ನನಾದ

ಅನಿರುದ್ಧ – ನಿರ್ಲಿಪ್ತನಾದ ಅನಿರುದ್ಧನು, ಜತನಮಾಳ್ಪನು – ತತ್ವೇಶರ ದ್ವಾರಾ ಸಂರಕ್ಷಣ ಮಾಡತಾನೆ. ಜಗತಿ–ಈ ಜಗತ್ತಿನಲ್ಲಿ ಈ ಪ್ರಕಾರ ಅನುಸಂಧಾನಯುಕ್ತರಾದ, ಜೀವಪ್ರತತಿಗಳ–ಭಗವದ್ಭಕ್ತರನ್ನ ಎಂತ ಅರ್ಥ. ಅದರಿಂದ–ಆದ್ದರಿಂದ ಇಂಥಾ ಜ್ಞಾನಿಗಳಾದ, ಬಲ್ಲವರು–ಭಗವದ್ಭಕ್ತರಾದವರು, ಷಣ್ಣವತಿನಾಮಕರ–೯೬ ಪೂರ್ವೋಕ್ತ ಷಣ್ಣವತಿ ಶ್ರಾದ್ಧಕಾಮಿಯಾದ ಅನಿರುದ್ಧನ, ಚತುರಮೂರ್ತಿಗಳು–ಅನಿರುದ್ಧ ಅನಿರುದ್ಧ ೧, ಅನಿರುದ್ಧ ಪ್ರದ್ಯುಮ್ನ ೨, ಅನಿರುದ್ಧ ಸಂಕರ್ಷಣ ೩, ಅನಿರುದ್ಧ ವಾಸುದೇವ ೪ (ಈ ನಾಲ್ಕು ಮೂರ್ತಿಗಳ), ಅರ್ಚಿಸುವರು–ಈ ಚತುರ್ಮೂರ್ತಿಗಳ ಪಿತೃಕಾರ್ಯಗಳಲ್ಲಿ ಪೂಜಾ ಮಾಡುವರು ಅಂತ ಅರ್ಥ. ಪಿತೃಯಜ್ಞ ಎಂತ ಹೇಳತಕ್ಕ ಕರ್ಮಗಳು. ಅಧಿಕಾರಿಯಾದವನು ಪೂರ್ವೋಕ್ತ ಕಾಲಗಳಲ್ಲಿ ಮಾಡಿ ಶ್ರಾದ್ಧಖಂಡ ಪ್ರಕಾರವೂನೂ ಅವಶ್ಯ ಮಾಡಬೇಕೆಂತ ತಾತ್ಪರ್ಯ. ಪ್ರತಿ ಸಾಂವತ್ಸರಿಕಶ್ರಾದ್ಧವಿಷಯ ಪಿತೃಗಣಸಂಧಿಯಲ್ಲಿ ವಿವರವಾಗಿ ಹೇಳಲ್ಪಟ್ಟಿದೆ.

**ಅಂಬುಜಜಾಂಡೋದರನು ವಿಪಿನದಿ ।**
**ಶಬರಿಯೆಂಜಲನುಂಡು ಗೋಕುಲ ।**
**ದಬಲೆಯರನೊಲಿಸಿದನು ಋಷಿಪತ್ನಿಯರು ಕೊಟ್ಟನ್ನ ॥**
**ಸುಭುಜ ತಾ ಭುಂಜಿಸಿದ ಸ್ವರಮಣ ।**
**ಕುಬುಜೆಗಂಧಕೆ ವಲಿದ ಮುನಿಗಣ ।**
**ವಿಬುಧಸೇವಿತ ಬಿಡುವನೇ ನಾವಿತ್ತ ಕರ್ಮಫಲ ॥ ೨೪ ॥**

ಭಕ್ತರಾದ ಅಧಿಕಾರಿಗಳು ಅರ್ಪಿಸಿದ ಕರ್ಮಫಲ ಸ್ವೀಕರಿಸತಾನೆ ಎಂತ ಹೇಳತಾರೆ.

ಅಂಬುಜಜಾಂಡ :—ಈ ವರ್ತಮಾನ ಬ್ರಹ್ಮಾಂಡವೂ ಇನ್ನೂ, ಉದರನು–ಅನಂತಾನಂತ ಬ್ರಹ್ಮಾಂಡಗಳ ಉದರದಲ್ಲಿ ಧರಿಸಿ ಇರುವಂಥ ಶ್ರೀ ಸೀತಾಪತಿಯಾದ ರಾಮಚಂದ್ರ ದೇವರು, ವಿಪಿನದಿ–ದಂಡಕಾರಣ್ಯದಲಿ "ಪಂಪಾಯಾಃ ಪಶ್ಚಿಮೇ ತೀರೇ ವೀರೌ ವಿವಿಶತುಃ ಶುಭಮ್। ಆಲೋಕ್ಯ ಲೋಕನಾಥಂ ತಂ ಸಾನುಜಂ ಸ್ವಾಶ್ರಮಾಗತಮ್॥ ಶಬರೀ ಪೂಜಯಾಮಾಸ ಫಲಮೂಲೈಃ ತಪಸ್ವಿನೀ ॥" ಎಂತ ಸಂಗ್ರಹ ರಾಮಾಯಣ ಉಕ್ತಿ ಇರುವದ್ದರಿಂದ ಇಂಥಾ, ಶಬರೀ–ಶಬರೀನಾಮಕ ಸ್ತ್ರೀ, ಎಂಜಲನುಂಡ–ಹಲ್ಲಿನಿಂದ ಕಚ್ಚಿ ಎಂಜಲುಮಾಡಿದ್ದ ಫಲಗಳು ಶ್ರೀರಾಮಚಂದ್ರದೇವರಿಗೆ ಬಹು ಸಂತೋಷವಾಯಿತು. ಫಲಗಳು ಎನತಕ್ಕದ್ದು ದಿವ್ಯವಾಗಿ, ಮಧುರವಾಗಿ, ಸುವಾಸಿತವಾಗಿ ಅದೋ ಅಲ್ಲವೋ ನೋಡಿ ಕೊಡಬೇಕಂತ ಭಕ್ತಿಯಿಂದ ದಿವ್ಯಫಲಗಳ ಕೊಟ್ಟಳೇ ಹೊರ್ತು, ತಾನು ಎಂಜಲು ಮಾಡಿದ್ದೆನು, ಎಂಜಲುಫಲಗಳ ಕೊಟ್ಟೆ ಎಂತ ಕೊಟ್ಟವಳಲ್ಲ. ಆದಕಡಿಯಿಂದ ಭಕ್ತಿ ಇರುವದ್ದರಿಂದ ಫಲಗಳು ಶುದ್ಧವಾಯಿತು. ತದ್ವತ್ ಬಿಂಬಕ್ರಿಯಾನುಸಂಧಾನದಿಂದ, ನಿಷಿದ್ಧಕರ್ಮ ಭಕ್ತಿಪೂರ್ವಕ, ಅರ್ಪಿಸಿದರೆ ಅದರನ ಶಬರೀ ಫಲವತ್ ಸ್ವೀಕರಿಸತಾನೆ. ಮತ್ತು ಶಬರೀ ಕೊಟ್ಟ ಫಲಗತ ತನ್ನ ಸ್ವಾಖ್ಯ ತಾನು ಭೋಜನಮಾಡಿ ಜಠರನ ಉದರದಲ್ಲಿ

ಬ್ರಹ್ಮಾಂಡಗಳು ಧರಿಸಿದೋಪಾದಿಯುಲಿ ಇಡತಾನೆ ಎಂತಲೂ ತಾತ್ಪರ್ಯವೇ. ಗೋಕುಲದಬಲೆಯರನು–ಗೋಕುಲಸ್ಥಾನದಲ್ಲಿ ಇದ್ದಂಥಾ ಗೋಪೀ ಸ್ತ್ರೀಯರಿಗೆ, ಒಲಿಸಿದನು–ತನ್ನಲ್ಲಿ ಮನಸ್ಸು ಇರುವಂತೆ ಮಾಡಿ ಅವರ ಸಂಗಡ ಕ್ರೀಡಾದಿಗಳನ್ನು ಮಾಡಿದನು. ಋಷಿಪತ್ನಿಯರು ಕೊಟ್ಟನ್ನ–"ತಾಃ ಷಡ್ವಿಧಾನ್ನಪರಿಪೂರ್ಣಕರಾಃ ಸಮೇತಾಃ ಪ್ರಾಪ್ತಾ ವಿಸೃಜ್ಯ ಪತಿಪುತ್ರಸಮಸ್ತಬಂಧೂನ್ ಆತ್ಮಾರ್ಚನೈಕಪರಮಾ ವಿಸಸರ್ಜ ಕೃಷ್ಣ ಏಕಾ ಪತಿಪ್ರವಿಧೃತಾ ಪದಮಾಪ ವಿಷ್ಣೋಃ || ೬೦ || ಭುಕ್ತ್ವಾsಥ ಗೋಪಸಹಿತೋ ಭಗವಾಂಸ್ತದನ್ನಂ ರೇಮೇ ಚ ಗೋಕುಲಮವಾಪ್ಯ ಸಮಸ್ತನಾಥಃ ||" ಎಂತ ನಿರ್ಣಯ ೧೩ನೇ ಅಧ್ಯಾಯದಲ್ಲಿ ಉಕ್ತವಾಗಿರುವುದರಿಂದ ಇಂಥಾ ಅನ್ನವನ್ನ, ಸುಭುಜ–ತನ್ನ ಸ್ವಾಖ್ಯವಾದ ಅನ್ನವನ್ನ ಭೋಜನಮಾಡತಕ್ಕವ ಅಷ್ಟರನ್ನ, ತಾ ಭುಂಜಿಸಿದ–ತಾನು ಭೋಜನ ಮಾಡಿದನು. "ಸುಭುಜೋ ದುರ್ಧರೋ ವಾಗ್ಮೀ" ಎಂತ ವಿಷ್ಣುಸಹಸ್ರನಾಮೋಕ್ತೇಃ. ಕುಬುಜೆ ಗಂಧಕೆ ವಲಿದ–"ಗಚ್ಛನ್ ದದರ್ಶ ವನಿತಾಂ ನರದೇವಯೋಗ್ಯಮಾದಾಯ ಗಂಧಮಧಿಕಂ ಕುಟಿಲಾಂ ವ್ರಜಂತೀಂ || ತೇನಾರ್ಥಿತಾ ಸಪದಿ ಗಂಧಮದಾತ್ತ್ರಿವಕ್ರಾ ತೇನಾಗ್ರಜೇನ ಸಹಿತೋ ಭಗವಾಲ್ಲಿಲಿಂಪೇ ||" ಎಂತ ಕುಬುಜೆ ಕೊಟ್ಟ ಗಂಧಕ್ಕೆ ಒಲಿದವನಾದ, ಸ್ವರಮಣ–ಶ್ರೀ ಪರಮಾತ್ಮ ಪ್ರತಿಪದಾರ್ಥಗಳಲ್ಲಿ ತನ್ನ ಸ್ವಾಖ್ಯರಸಾತ್ಮಕ ಭಗವದ್ರೂಪಗಳಿಂದ ಪರಿದೃಶ್ಯಮಾನ ಭಗವದ್ರೂಪಗಳಲ್ಲಿ ಐಕ್ಯ ಹೊಂದತಾನೆ. ಆದ್ದರಿಂದ ಭುಂಜಿಸಿದ ಎಂತ ಪ್ರಯೋಗದ ಅರ್ಥ. ಅಂದರೆ ಈ ರೀತಿ ತಾತ್ಪರ್ಯ ಎಂತ ತಿಳಿಯಬೇಕು. ಸ್ವರಮಣವಿಶೇಷವಾಕ್ಯವೆಂದರೆ ಪೂರ್ವೋಕ್ತಗಳೆಲ್ಲಾ ಶ್ರೀ ಪರಮಾತ್ಮಗೆ ಅಭಿನ್ನವಾದದ್ದೇ. ಆದಕಡಿಯಿಂದ ಶ್ರೀ ಪರಮಾತ್ಮ ತನ್ನ ರೂಪಗಳಿಂದ ತನಗೆ ಅಭಿನ್ನಗಳಾದ ಪದಾರ್ಥಾಂತರ್ಗತ ಭಗವದ್ರೂಪಗಳಿಗೆ ನಿವೇದನರೂಪ ಐಕ್ಯವೂನೂ ಹೊಂದತಾನೆ. ತನಗೆ ಭಿನ್ನಗಳಾದ ಜಡರೂಪವಾದ ಪದಾರ್ಥಗಳ ಅರ್ಪಿಸಿದರೆ ಅದರನ್ನ ಬ್ರಹ್ಮಾಂಡಗಳ ಉದರದಲ್ಲಿ ಧರಿಸಿದೋಪಾದಿಯಲ್ಲಿ ಧರಿಸಿ ಇರತಾನೆ. ಆದಕಡಿಯಿಂದ ಸ್ವರಮಣ ಪ್ರಯೋಗ ಮಾಡಿದ್ದಾರೆ ಎಂತ ತಾತ್ಪರ್ಯ. ಮುನಿಗಣವಿಬುಧಸೇವಿತ–ಅಸಂಪ್ರಜ್ಞಸಮಾಧಿಯಿಂದ ಯುಕ್ತವಾದ ಋಷಿಗಳಿಂದ ಸೇವಿತನಾದ ಪರಮಾತ್ಮ, ನಾವಿತ್ತ ಕರ್ಮಫಲ–ನಾವುಗಳು ಪೂಜೋಪಯೋಗ್ಯವಾದಂಥಾ ನಿವೇದನರೂಪವಾದಂಥಾ ಪದಾರ್ಥಗಳ ಅರ್ಪಿಸಬೇಕಾದರೆ ಪದಾರ್ಥಗಳಲ್ಲಿ ಅಭಿಮಾನಿದೇವತಾಪೂರ್ವಕ ಭಗವತ್‌ಚಿಂತನಮಾಡಿ ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ ಪೂರ್ವಕ ಅನುಸಂಧಾನದಿಂದ "ಸ್ವಾಮೀ, ನಿನ್ನ ಸ್ವಾಖ್ಯಗಳ ನೀನು ಸ್ವೀಕಾರಮಾಡು" ಎಂತ ಕೊಟ್ಟರೆ ಅಂಥಾ ಕರ್ಮಫಲವನ್ನ, ಬಿಡುವನೆ–ಸ್ವೀಕಾರಮಾಡದೆ ಬಿಡೋನೇ ? ಎಂದರೆ ಬಿಡೋದಿಲ್ಲ, ತಕ್ಷಣ ಸ್ವೀಕಾರ ಮಾಡತಾನೆ ಎಂತ ತಾತ್ಪರ್ಯ.

**ಗಣನೆಯಿಲ್ಲದ ಪರಮಸುಖ ಸ |**
**ದ್ಗುಣಗಣಂಗಳ ಲೇಶಲೇಶಕೆ |**
**ಎಣೆಯೆನಿಸದು ರಮಾಬ್ಜಭವಶಕ್ರಾದಿಗಳ ಸುಖವು ||**

**ಉಣುತುಣುತ ಮೈಮರೆದು ಕೃಷ್ಣಾ |**
**ರ್ಪಣವೆನಲು ಕೈಕೊಂಬನರ್ಭಕ |**
**ಜನನಿ ಭೋಜನ ಸಮಯದಲಿ ಕೈನಡ್ಡುವಂದದಲಿ || ೨೫ ||**

ರಮಾಬ್ರಹ್ಮಾದಿಗಳ ಸುಖ ಶ್ರೀ ಪರಮಾತ್ಮನ ಸುಖಲೇಶಕ್ಕೆ ಸರಿ ಆಗೋದಿಲ್ಲ ಎಂತಲೂ, ಶ್ರೀ ಪರಮಾತ್ಮ ಸುಖಪೂರ್ಣನೆಂತಲೂ ಹೇಳತಾರೆ.

ಪರಮ–ಸರ್ವೋತ್ತಮನಾದ ಶ್ರೀ ನಾರಾಯಣದೇವರ, ಗಣನೆಯಿಲ್ಲದ–ಎಣಿಸ ಲಿಕ್ಕೆ ಅಸಾಧ್ಯವಾದ, ಆದ್ಯಂತಗಳು ಶೂನ್ಯವಾದ ಅಪರಿಚ್ಛಿನ್ನಗಳಾದ, ಸುಖ–ಸುಖ ಗಳೇನು, ಸಂತೋಷಗಳೇನು, ಸದ್ಗುಣಗಣಂಗಳ–ನಿರ್ದುಷ್ಟಗಳಾದ ಮಂಗಳಕರಗಳಾದ ಗುಣಸಮೂಹಗಳ ಒಳಗೆ, ಲೇಶಲೇಶಕೆ–ಕೇವಲ ಸ್ವಲ್ಪವಾದ ಅಲ್ಪದೊಳಗೆ ಅತ್ಯಲ್ಪ ಸುಖಕ್ಕೇನು, ಗುಣಕ್ಕೇನು, ರಮಾ–ಲಕ್ಷ್ಮೀದೇವೇರು, ಅಬ್ಜಭವ–ಬ್ರಹ್ಮದೇವರು, ಶಕ್ರ–ಇಂದ್ರದೇವರು, ಆದಿಗಳ–ಇವರೇ ಮೊದಲಾದ ದೇವತೆಗಳ, ಸುಖವು–ಸ್ವರೂಪ ಸುಖಗಳು, ಗುಣಗಳು, ಎಣೆ ಎನಿಸದು–ಪ್ರಕೃತ ಸೇರಿಸಿದರೂ ಸಮಾನ ಎಂತ ಕರಸೋ ದಿಲ್ಲ. ಮತ್ತು ಆದಿಶಬ್ದದಿಂದ ರಮಾದಿ ತೃಣಾಂತ ಮುಕ್ತಿಯೋಗ್ಯ ಜೀವರ ಸ್ವರೂಪಾ ನಂದಸ್ವರೂಪಗುಣಗಳು ಮೊತ್ತ ಸೇರಿದರೂ ಶ್ರೀ ಪರಮಾತ್ಮನ ಲೇಶವಾದ ಗುಣಕ್ಕೂ, ಸುಖಕ್ಕೂ ಸಮಾನವಾಗಲಾರದು. ಇದು ಹೇಳೋದಕ್ಕೆ ಕಾರಣವೇನೆಂದರೆ ಮೋಕ್ಷದಲ್ಲಿ ಜೀವನೂ ಪೂರ್ಣಾನಂದ ಎಂತಲೂ, ಪರಮಾತ್ಮನೂ ಪೂರ್ಣಾನಂದ ಎಂತಲೂ ಕರಿಸೋವರಾಗಿದ್ದಾರೆ. ಶ್ರೀ ಪರಮಾತ್ಮನ ಅನಂತಪೂರ್ಣತ್ವಕ್ಕೆ ವೈಲಕ್ಷಣ್ಯವೇನೆಂದರೆ ದೃಷ್ಟಾಂತ :– ಸಮುದ್ರೋದಕ ಸಮಾನ ಪರಮಾತ್ಮನ ಸುಖ ಆನಂದ ಗುಣಗಳು. ಥಾಲಿ, ತಂಬಿಗಿ ಕೊಡ ಇವುಗಳಲ್ಲಿ ಉದಕ ಪೂರ್ಣವಾಗಿ ಇರುವದ್ದರಿಂದ ಯೋಗ್ಯತಾನು ಸಾರ ಪೂರ್ಣತ್ವ ಇವುಗಳಿಗೂ ಬಂತು. ಆದರೆ ಉದಕ ಪೂರ್ಣ ಎಲ್ಲಾದಕ್ಕೂ ಅದೆ. ಉದಕ ವಿವಕ್ಷಯಾ ತಾರತಮ್ಯವದೆ. ತಂಬಿಗಿ, ಥಾಲಿ ಸಮಾನ ಜೀವರಲ್ಲಿ ಪೂರ್ಣತ್ವ ಎನತಕ್ಕದ್ದು ಎಲ್ಲಾದಕ್ಕೂ ಇದ್ದಾಗ್ಯೂ ಪಾತ್ರೆಗಳೂ, ಪಾತ್ರೆಗಳಲ್ಲಿ ಇರುವ ಉದಕವೂ ಸಮುದ್ರಕ್ಕೆ ಸಮಾನವಾಗಲಿಲ್ಲ. ಸಮುದ್ರದ ಪರಿಮಿತಿಯೂ ತದ್ಗತ ಉದಕವೂ ಅಪರಿ ಚ್ಛಿನ್ನಗಳು. ಜೀವರೋಪಾದಿಯಲ್ಲಿ ಇರುವ ಪಾತ್ರೆಗಳಲ್ಲಿರುವ ಉದಕ, ಪಾತ್ರೆಗಳಲ್ಲಿ ಅಪರಿಚ್ಛಿನ್ನಗಳು. ಆದಕಡಿಯಿಂದ ಬ್ರಹ್ಮಾದಿ ಜೀವರ ಆನಂದಗುಣ ಶ್ರೀ ಪರಮಾತ್ಮನ ಆನಂದಗುಣಗಳಿಗೆ ಸಮಾನವಾಗಲಾರದು. ಆದರೂ ಜೀವರು ಅವರವರು ತಾರತಮ್ಯಾನು ಸಾರ ಗುಣಪೂರ್ಣರೇವೇ. ಉಣುತುಣುತ–ಇಂಥಾ ಶ್ರೀ ಪರಮಾತ್ಮನ ಮಹಾಮಹಿಮಾ ಅನುಷ್ಠಾನದಿಂದ ಭೋಜನ ಮಾಡುತಾ ಮಾಡುತಾ, ಮೈಮರೆದು–ದೇಹೇಂದ್ರಿಯಾದಿ ಗಳಿಂದ ಬಾಹ್ಯವಿಷಯಗಳ ಮರೆತು ಆ ತತ್ಕಾಲ ಆನಂದವನ್ನು, ಕೃಷ್ಣಾರ್ಪಣವೆನಲು– ಶ್ರೀಕೃಷ್ಣಾರ್ಪಣ ಎಂದ ಮಾತ್ರಕ್ಕೆ, ಕೈಕೊಂಬ–ಅದರನ್ನ ಸ್ವೀಕಾರಮಾಡತಾನೆ. ಹ್ಯಾಂಗೆಂದರೆ, ಜನನಿ–ತಾಯಿಯಾದವಳು, ಭೋಜನಸಮಯದಲಿ–ಭೋಜನಮಾಡತಾ

ಇರತಕ್ಕ ಕಾಲದಲ್ಲಿ, ಅರ್ಭಕ–ಬಾಲಕನಾದವ, ಕೈವಡ್ಡುವಂದದಲಿ–ಹಸ್ತವನ್ನು ನೀಡುವ್ದೋಪಾದಿಯಲ್ಲಿ, ತಾಯಿ ತಾನು ಭೋಜನಮಾಡೋ ಪದಾರ್ಥ ಬಾಲಕನ ಅಪೇಕ್ಷಾ ತಿಳಿದು ತಾನು ಭೋಜನ ಮಾಡುವ ಪದಾರ್ಥಗಳನ್ನ ಕೇವಲ ಪ್ರೇಮಾತಿಶಯದಿಂದ ಕೊಡುವ್ದೋಪಾದಿಯಲ್ಲಿ ಭಗವದ್ಭಕ್ತರಾದವರು ಶ್ರೀ ಪರಮಾತ್ಮನಲ್ಲಿ ಅಂತಃಕರಣದಿಂದ ಕೊಟ್ಟ ಕರ್ಮಫಲಗಳನ್ನ ಅವಶ್ಯವಾಗಿ ಸ್ವೀಕಾರಮಾಡತಾನೆ. ಉಭಯತ್ರರಿಗೂ ಪ್ರೇಮಾತಿಶಯಗಳು ಇರುವದ್ದರಿಂದ ಸ್ವೀಕಾರಮಾಡತಾನೆ ಎಂತ ತಾತ್ಪರ್ಯ.

**ಜೀವಕೃತ ಕರ್ಮಗಳ ಬಿಡದೆ ರ ।**
**ಮಾವರನು ಸ್ವೀಕರಿಸಿ ಫಲಗಳ ।**
**ನೀವನಧಿಕಾರಾನುಸಾರದಲವರಿಗನವರತ ।**
**ಪಾವಕನು ಸರ್ವಸ್ವ ಭುಂಜಿಸಿ ।**
**ತಾ ವಿಕಾರವನೈದನೊಮ್ಮೆಗೆ ।**
**ಪಾವನಕೆ ಪಾವನನೆನಿಪ ಹರಿಯುಂಬುದೇನರಿದು ॥ ೨೬ ॥**

ಅನಾದಿಕರ್ಮವನುಸರಿಸಿ ಫಲಗಳ ಕೊಡತಾನೆ ಎಂತ ಹೇಳತಾರೆ.

ಜೀವಕೃತ–ರಾಶಿಯಿಂದ ಸೃಷ್ಟಿಗೆ ಬಂದಂಥಾ ತ್ರಿವಿಧಜೀವರು ಮಾಡುವಂಥಾ ಕರ್ಮಗಳನ್ನು, ಬಿಡದೆ–ಅನಾದ್ಯನಂತಕಾಲಕ್ಕೂ ಬಿಡದೆ ಜೀವರಿಗೆ ಬಿಂಬಭೂತನಾದ ರಮಾವರನು–ಲಕ್ಷ್ಮೀಪತಿಯಾದ ಪರಮಾತ್ಮನು, ಕರ್ಮಗಳ–ಅನೇಕ ವೈಚಿತ್ರ್ಯಗಳಾದ ಅನಾದಿಲಿಂಗದ ತೃತೀಯ ಪರಿಚ್ಛೇದಗತ ಅನಾದಿಕರ್ಮಗಳ, ಸ್ವೀಕರಿಸಿ–ಸೃಷ್ಟಿಪ್ರಾರಂಭದಲ್ಲಿ ಸ್ವೀಕಾರಮಾಡಿ, ತದ್ದ್ವಾರಾ ಆಗಾಮಿ ಸಂಚಿತಗಳು ಬೆಳಸಿ, ಸಾಧನ ಪೂರ್ತಿ ಮಾಡಿಸಿ, ಅವರಿಗೆ–ಆಯಾ ತ್ರಿವಿಧ ಜೀವರಿಗೆ, ಅನವರತ–ನಿರಂತರ ಅವಿಚ್ಛಿನ್ನವಾಗಿ ಭೋಗಮಾಡತಕ್ಕ, ಫಲಗಳ–(ಲಿಂಗಭಂಗಾನಂತರ) ಆಗತಕ್ಕ ಫಲಗಳ, ಅಧಿಕಾರಾನುಸಾರದಲಿ–ಮುಕ್ತಿಯೋಗ್ಯರಿಗೆ ಸುಖ, ತಮೋಯೋಗ್ಯರಿಗೆ ದುಃಖ, ನಿತ್ಯಸಂಸಾರಿಗಳಿಗೆ ಮಿಶ್ರಫಲ, ಅವರವರ ಸ್ವರೂಪಾಧಿಕಾರಾನುಸಾರದಲ್ಲಿ, ಈವ–ಕೊಡೋವನಾಗತಾನೆ–. ಪ್ರಳಯಕಾಲದಲ್ಲಿ ಚರಾಚರ ಸರ್ವವೂ ಭೋಜನ ಮಾಡತಾನೆ. ಇದರಿಂದ ವಿಕಾರ ಐದೋದಿಲ್ಲ. ಇದಕ್ಕೆ ದೃಷ್ಟಾಂತ:– ಪಾವಕನು–ಅಗ್ನಿಯಾದವನು, ಸರ್ವಸ್ವ ಭುಂಜಿಸಿ–ಸರ್ವವೂ ಭೋಜನ ಮಾಡಿ, ತಾ–ತಾನು, ವಿಕಾರವನೈದನೊಮ್ಮೆಗೆ–ವಿಕಾರವನ್ನು ದಾವ ಕಾಲದಲ್ಲಾದರೂ ಐದೋದಿಲ್ಲ. ಅಗ್ನಿದೇವರು ಸ್ವಚ್ಛನಾಗಿರುತ್ತಾನೆ. ಇದರ ದೃಷ್ಟಾಂತದಿಂದ, ಪಾವನಕೆ–ಇಂಥಾ ಶುದ್ಧನಾಗಿ ಇರುವ ಅಗ್ನಿಗೆ, ಪಾವನನೆನಿಪ–ವಿಕಾರ ಐದದೆ ಪಾವನನಾಗಿ ಇರುವಂತೆ ಶಕ್ತಿ ಕೊಟ್ಟು ಪಾವನ ಎಂತ ಎನಿಸತಕ್ಕ, ಹರಿ–ಶ್ರೀ ಪರಮಾತ್ಮನು, ಸಮಸ್ತವೂ ಭೋಜನಮಾಡಿ ವಿಕಾರ ಐದದೆ ಇರುವ ಶ್ರೀ ದೇವರು, ಉಂಬುದೇನರಿದೂ–ಜೀವರು ಕೊಟ್ಟಂಥಾದ್ದು ಭೋಜನ ಮಾಡುವುದು ಏನು ಆಶ್ಚರ್ಯ ? ಎಂದರೆ ಆಶ್ಚರ್ಯವಲ್ಲ.

**ತಾ||** ಸೃಷ್ಟಿ ಪ್ರಾರಂಭದಿಂದ ತ್ರಿವಿಧ ಜೀವರು ಮಾಡುವಂಥಾ ಅನಾದಿ ಲಿಂಗದ ತೃತೀಯ ಪರಿಚ್ಛೇದಗತ ವಿವಿಧ ವಿಚಿತ್ರಗಳಾದ ಅನಾದಿ ಕರ್ಮಗಳನ್ನ ಜೀವರ ಬಿಂಬನಾದ ಶ್ರೀ ಪರಮಾತ್ಮನು ಅನಾದಿಯಿಂದ ಬಿಡದೆ ಸ್ವೀಕರಿಸಿ ಆ ಅನಾದಿ ಕರ್ಮಗಳ ದ್ವಾರಾ ಆಗಾಮಿ ಸಂಚಿತಗಳನ್ನು ವೃದ್ಧಿಮಾಡಿ ಸಾಧನ ಪೂರ್ತಿ ಮಾಡಿಸಿ ಲಿಂಗಭಂಗಾನಂತರ ಅವಿಚ್ಛಿನ್ನವಾಗಿ ಭೋಗ ಮಾಡತಕ್ಕ ಆಯಾ ಜೀವರ ಅಧಿಕಾರಾನುಸಾರದಲಿ ಎಂದರೆ ಮುಕ್ತಿಯೋಗ್ಯರಿಗೆ ಸುಖವೂ, ತಮೋಯೋಗ್ಯರಿಗೆ ದುಃಖವೂ, ನಿತ್ಯಸಂಸಾರಿಗಳಿಗೆ ಮಿಶ್ರಫಲವೂ ಕೊಟ್ಟು ಪ್ರಳಯ ಕಾಲದಲ್ಲಿ ಚರಾಚರ ಸರ್ವಪ್ರಪಂಚವೂ ನುಂಗಿದಾಗ್ಯೂ ವಿಕಾರ ಐದದೇ ಇರತಾನೆ. ಹ್ಯಾಂಗೆಂದರೆ ಶ್ರೀ ಪರಮಾತ್ಮ ಕೊಟ್ಟ ಶಕ್ತಿಯಿಂದ ಅಗ್ನಿ ದೇವರು ಸಮಸ್ತವನ್ನೂ ಭುಂಜಿಸಿ ವಿಕಾರವನ್ನೈದೋದಿಲ್ಲ. ಇಂಥಾ ಶಕ್ತಿಪ್ರದನಾದ ಪರಮಾತ್ಮ ಜೀವರು ಕೊಟ್ಟಂಥಾ ಪದಾರ್ಥವನ್ನು ಭುಂಜಿಸಿ ವಿಕಾರವನ್ನೈದದೇ ಇರುವುದು ಏನು ಆಶ್ಚರ್ಯ, ಆಶ್ಚರ್ಯವಲ್ಲ.

**ಕಲುಷಜಿಹ್ವೆಗೆ ಸುಷ್ಠು ಭೋಜನ ।**
**ಜಲ ಮೊದಲು ವಿಷದೋರುವುದು ನಿ ।**
**ಷ್ಕಲುಷ ಜಿಹ್ವೆಗೆ ಸುರಸ ತೋರುವುದೆಲ್ಲ ಕಾಲದಲಿ ।**
**ಸುಲಲಿತಾಂಗಗೆ ಸಕಲ ರಸ ಮಂ ।**
**ಗಳವೆನಿಸಿತಿಹುದನ್ನಮಯ ಕೈ ।**
**ಕೊಳದೆ ಬಿಡುವನೆ ಪೂತನಿಯ ವಿಷಮೊಲೆಯನುಂಡವನು ||೨೭||**

ಶ್ರೀ ಪರಮಾತ್ಮನಲ್ಲಿ ದ್ವೇಷ ಸ್ನೇಹಕ್ಕೆ ಕಾರಣವೂ, ಸಕಲ ರಸವೂ ದೇವರಿಗೆ ಶುಭರಸ ಎಂತ ಹೇಳತಾರೆ.

ಕಲುಷಜಿಹ್ವೆಗೆ–ರೋಗಾದಿ ಉಪದ್ರವಗಳಿಂದ ಕಲುಷದಿಂದ ಯುಕ್ತವಾದ ನಾಲಿಗೆ ಉಳ್ಳ ಪುರುಷನಿಗೆ, ಸುಷ್ಠು–ಸುರಸೋಪೇತಗಳಾದ, ಭೋಜನ–ಭೋಜನಕ್ಕೆ-ಯೋಗ್ಯಗಳಾದ, ಜಲ ಮೊದಲು–ನೀರು ಮೊದಲು ಯಾವತ್ತು ಪದಾರ್ಥಗಳು, ವಿಷದೋರುವುದು–ಕಹಿಯಾಗಿ ತೋರೋದಾಗತದೆ. ನಿಷ್ಕಲುಷಜಿಹ್ವೆಗೆ–ರೋಗಾದ್ಯುಪದ್ರವಗಳಿಂದ ರಹಿತವಾದ ಕಲುಷದಿಂದ ದೂರವಾದ ಪುರುಷನ ಜಿಹ್ವೆಗೆ, ಸುರಸ ತೋರುವುದು–ಪೂರ್ವೋಕ್ತ ಭೋಜನ ಪದಾರ್ಥಗಳು ಯಾವತ್ತು ಯಥಾವಸ್ಥಿತಿಯಿಂದ ಸಮೀಚೀನವಾದ ರಸವಾಗಿ ತೋರತದೆ. (ತದ್ವತು ಶ್ರೀ ಪರಮಾತ್ಮನೆಂಬೋ ಸುರಸೋಪೇತವಾದ ಮಹಾ ಮಹಾತ್ಮೆಯುಳ್ಳ ಭೋಜನದ್ರವ್ಯ ಕಲುಷಜಿಹ್ವೆಗೆ ಸದೃಶರಾದ ದೈತ್ಯರಿಗೆ ವಿಷವಾಗಿ ತೋರಿ, ಪರಮಾತ್ಮನ ತ್ಯಾಗ ಮಾಡಿ ಅವನಲ್ಲಿ ದ್ವೇಷ ಮಾಡತಾರೆ. ನಿಷ್ಕಲುಷ ಜಿಹ್ವೆಗೆ ಸದೃಶರಾದ ದೇವತೆಗಳಿಗೆ ಅಮೃತವಾಗಿ ತೋರಿ ಶ್ರೀ ಪರಮಾತ್ಮನ ಸ್ವೀಕಾರ ಮಾಡಿ ಅವನಲ್ಲಿ ಸ್ನೇಹ ಮಾಡತಾರೆ. ಎಲ್ಲ ಕಾಲದಲಿ–ರೋಗಾದಿ ಉಪದ್ರವಗಳಿಂದ ಪ್ರಾಪ್ತವಾದ ಕಲುಷ ಚಿಕಿತ್ಸಾದಿಗಳಿಂದ ಪರಿಹಾರ ಕಂಡದೆ. ಈ ಕಲುಷ ಅನಾದಿ

ಸ್ವರೂಪ ಸ್ವಭಾವದಲ್ಲಿ ನಿತ್ಯವಾಗಿ ಇರೋಣದರಿಂದ ಸದಾ ಸರ್ವಕಾಲದಲ್ಲಿ ಕೆಡದೇ ಇರುತ್ತದೆ. ತದ್ವತ್ ದೇವತೆಗಳ ನಿಷ್ಕಲುಷವು ಎಲ್ಲಾ ಕಾಲದಲ್ಲೂ ಕೆಡದೇ ಇರತದೆ ಎಂತ ಅರ್ಥ. ಸುಲಲಿತಾಂಗಗೆ–ಸು–ಮಂಗಳಕರಗಳಾದ, ಲಲಿತ–ಸೌಂದರ್ಯವುಳ್ಳ ಸೃಷ್ಟ್ಯಾದಿ ಆಟಗಳು ಉಳ್ಳ, ಅಂಗಗೆ–ಸರ್ವತ್ರ ತದಾಕಾರದಿಂದ ವ್ಯಾಪ್ತನಾದ ತದಾಕಾರವಾದ ಅಂಗವುಳ್ಳ ಶ್ರೀ ಪರಮಾತ್ಮಗೆ, ಸಕಲರಸ–ಸಮಸ್ತ ಪದಾರ್ಥಗತ ರಸಗಳಲ್ಲಿ ಸ್ವಾಖ್ಯರಸ ರೂಪದಿಂದ ಶ್ರೀ ಪರಮಾತ್ಮ ಇದಾನೆ. ಅಂಥಾ ತನ್ನ ರಸಗಳೇ ತಾನು ಸ್ವೀಕಾರ ಮಾಡತಾನೆ. ಅತ ಏವ ಏತಾದೃಶವಾದ ಸಮಸ್ತ ರಸಗಳು, ಮಂಗಳ–ಜೀವರಿಗೆ ಶುಭಕರಗಳಾದ ರಸಗಳೆಂದು, ಎನಿಸುತಿಹವು–ಎನಿಸೋದಾಗಿ ಅವೆ. ಆದ ಕಡಿಯಿಂದ ನಿಷಿದ್ಧಾನಿಷಿದ್ಧ ಸರ್ವ ಪದಾರ್ಥಗತ ರಸಗಳು ಪರಮಾತ್ಮಗೆ ಶುಭರಸವೆಂದು ಕರಿಸಿ ಸ್ವೀಕರಿಸೋವನಾಗತಾನೆ. ಆ ಶುಭರಸ ಶ್ರೀ ಪರಮಾತ್ಮ ಸ್ವೀಕರಿಸೋದಿಲ್ಲ, ಅನ್ನಮಯ–ಅನ್ನಾಂತರ್ಗತನಾಗಿ ಅನ್ನಮಯ ಶಬ್ದವಾಚ್ಯನಾದ ಶ್ರೀ ಅನಿರುದ್ಧರೂಪಿ ಪರಮಾತ್ಮ, ಕೈಕೊಳದೆ–ಅನುಸಂಧಾನಯುಕ್ತರಾದ ಅಧಿಕಾರಿಗಳು ಕೊಟ್ಟ ದ್ವಂದ್ವ ರಸ ಅಥವಾ ಕರ್ಮಗಳ ಸ್ವೀಕಾರ ಮಾಡದೇ, ಬಿಡುವನೇ–ಬಿಡೋನೇ ಎಂದರೆ ಬಿಡೋದಿಲ್ಲಾ, ಅವಶ್ಯವಾಗಿ ಸ್ವೀಕಾರ ಮಾಡೋವನಾಗತಾನೆ. ಹ್ಯಾಂಗೆಂದರೆ, ಪೂತಣಿಯ– "ಸಾ ತಾಟಕಾ ಚೋರ್ವಶೀ ಸಂಪ್ರವಿಷ್ಟಾ ಕೃಷ್ಣಾವಧ್ಯಾನಾನ್ನಿರಯಂ ಸಂಜಗಾಮ" ಎಂತ ನಿರ್ಣಯೋಕ್ತಿ ಇರುವದರಿಂದ ಇಂಥಾ ಪೂತಣಿ ಎಂಬ ರಾಕ್ಷಸಸ್ತ್ರೀ ಕೊಟ್ಟಂಥಾ, ವಿಷ–ವಿಷಪೂರಿತವಾದ ಸ್ತನಗತ ವಿಷಗತ ತನ್ನ ಸ್ವಾಖ್ಯ ತಾನು ಭೋಜನ ಮಾಡಿ, ಮೊಲೆಯನುಂಡವನು–ತನಗೆ ಭಿನ್ನವಾದ ಜಡವಿಷವನ್ನು ಅಲ್ಲೇ ಇಟ್ಟಿರುವಂಥಾವನಾದನು. ಈ ಪ್ರಕಾರ ಅಧಿಕಾರಿಗಳು ಕೊಟ್ಟ ದ್ವಂದ್ವರಸ ಕರ್ಮ ಇವುಗಳಲ್ಲಿರುವ ತನಗೆ ಅಭೇದವಾದದ್ದರನ್ನ ತಾನು ಸ್ವೀಕಾರ ಮಾಡಿ, ಭಿನ್ನಗಳಾಗಿ, ಅಮಂಗಳಗಳಾಗಿ ಇರುವದರನ್ನ ನಾಶ ಮಾಡಿ ಪೂತನಿಗೆ ಸ್ವರ್ಗ ಕೊಟ್ಟಂತೆ, ಅಧಿಕಾರಿಗಳಿಗೆ ದಿವ್ಯ ಸುಖವನ್ನ ಕೊಡತಾನೆ. ಆದ್ದರಿಂದ ದ್ವಂದ್ವ ಕರ್ಮ ಸಮರ್ಪಣೆ ಮಾಡಬೇಕು ಎಂತ ತಾತ್ಪರ್ಯ.

ಇದಕ್ಕೆ ಪ್ರಮಾಣ :–"ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೇ ಮತಾಃ| ನ ದೋಷಃ ಪರಮೇ ಕಶ್ಚಿದ್ಗುಣ ಏವ ನಿರಂತರಃ || ಇತಿ ಸೂತ್ರಭಾಷ್ಯೋಕ್ತಿ"

**ಪೇಳಲೇನು ಸಮೀರದೇವನು ।**
**ಕಾಲಕೂಟವನುಂಡು ಲೋಕವ ।**
**ಪಾಲಿಸಿದ ತದ್ವಾಸನೋರ್ವನು ಅಮೃತನೆನಿಸಿದನು ॥**
**ಶ್ರೀ ಲಕುಮೀವಲ್ಲಭ ಶುಭಾಶುಭ ।**
**ಜಾಲಕರ್ಮಗಳುಂಬನುಪಚಯ ।**
**ದೇಳಿಗೆಗಳವಗಿಲ್ಲವೆಂದಿಗು ಸ್ವರಸಗಳ ಬಿಟ್ಟು ॥ ೨೮ ॥**

ಶ್ರೀ ಪರಮಾತ್ಮ ರಾಮಕೃಷ್ಣಾದಿ ಅವತಾರರೂಪಗಳಲ್ಲಿ ಮಾಡಿದ ಪ್ರಾಕೃತ ಭೋಜನಾದಿಗಳಿಂದ ಉಪಚಯಾಪಚಯಗಳು ದೇವರಿಗೆ ಇಲ್ಲ ಎಂತ ಹೇಳತಾರೆ.

ಸಮೀರದೇವನು–ಜೀವೋತ್ತಮರಾದ ವಾಯುದೇವರು, ಕಾಳಕೂಟವನುಂಡು–ಶ್ರೀ ಪರಮಾತ್ಮನ ಆಜ್ಞಾದಿಂದ ಕ್ಷೀರಸಮುದ್ರದಲ್ಲಿ ಅಮೃತಮಥನ ಕಾಲಕ್ಕೆ ಉತ್ಪನ್ನವಾದ ಲೋಕನಾಶ ಮಾಡತಕ್ಕ ವಿಷವನ್ನು ಪಾನ ಮಾಡಿದವನಾಗಿ, ಲೋಕವ–ಪ್ರಾಣಿಗಳ ಸಮೂಹಗಳನ್ನು, ಪಾಲಿಸಿದ–ಸಂರಕ್ಷಣೆ ಮಾಡೋವನಾದನು. ಮತ್ತು ತತ್–ಆ ವಾಯುದೇವರ, ತದ್ದಾಸ–ಶಿಷ್ಯನಾದ ಪಾರ್ವತೀಪತಿಯಾದ, ಶರ್ವನು–ರುದ್ರ ದೇವರು, "ಕರೇ ವಿಮಥ್ಯಾಸ್ತುಬಲಂ ವಿಧಾಯ ದದೌ ಸ ಕಿಂಚಿದ್ಗಿರಿಶಾಯ ವಾಯುಃ" ಎಂತ ವಾಯುದೇವರಿಂದ ಕೊಡಲ್ಪಟ್ಟ ವಿಷವನ್ನು ಪಾನಮಾಡಿ ಅಮೃತನೆನಿಸಿದನು. "ಸ ತತ್ಪಿಬನ್ ಕಂಠಗತೇನ ತೇನ ನಿಪಾತಿತೋ ಮೂರ್ಛಿತ ಆಶು ರುದ್ರಃ|| ಹರೇಃ ಕರಸ್ಪರ್ಶ ಬಲಾತ್ಸ ಸಂಜ್ಞಾಮವಾಪ ನೀಲೋಸ್ಯ ಗಳಸ್ತದಾಸೀತ್ ||" ಎಂತ ಇರುವದ್ದರಿಂದಲೂ "ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ" ಎಂಬ ಶ್ರುತಿಯಿಂದಲೂ ಮೃತಿರಹಿತ ಎಂತ ಕರಿಸೋವನಾದ. ಆದಕಡಿಯಿಂದ ಈ ಉಭಯರನ್ನ ಆ ವಿಷ ಏನೂ ಮಾಡಲಿಲ್ಲ. ಅಪೂರ್ಣರಾದ ಇವರಲ್ಲಿ ಇಂಥಾ ಸಾಮರ್ಥ್ಯ ಇರೋದಾಗಿ ಅದೆ. ಹೀಂಗಿರಲಾಗಿ, ಶ್ರೀ ಲಕುಮೀವಲ್ಲಭ–ಕಾಂತಿಸಂಪನ್ನನಾದ ಲಕ್ಷ್ಮೀದೇವೇರಿಗೆ ಪತಿಯಾದ ಶ್ರೀ ಪರಮಾತ್ಮ ಶುಭ–ತನ್ನ ಅವತಾರಗಳಲ್ಲಿ ಶುಭದ್ರವ್ಯಗಳೇನು, ಅಶುಭ–ಅಶುಭದ್ರವ್ಯಗಳೇನು, ಜಾಲ–ಈ ಉಭಯಸಮೂಹವಾದ, ಕರ್ಮಗಳುಂಬನು–ಕರ್ಮಫಲಗಳ, ಪ್ರಾಕೃತದ್ರವ್ಯಗಳೇನು, ಹಾಂಗೆ ತನ್ನ ಸ್ವರೂಪಭೂತವಾದದ್ದೇನು, ಇವುಗಳನ್ನು ಭೋಜನ ಮಾಡುವದ್ದರಿಂದ ಉಪಚಯ–ತನ್ನ ದೇಹಕ್ಕೆ ಉಪಚಯವಾಗಿ ದೇಹ ಬಲಿಯೋಣವೂ, ದೇಳಿಗೆಗಳು–ಭೋಜನ ಮಾಡದೆ ಇರುವದರಿಂದ ದೇಹ ಕರಗಿ ಶುಷ್ಕವಾಗಿ ಬಲಹೀನವಾಗೋಣವೇನು, ಅವಗಿಲ್ಲವು–ಇವು ಎರಡು ದೇವರಿಗಿಲ್ಲ, ಎಂದಿಗೂ–ಅನಾದ್ಯನಂತಕಾಲಕ್ಕೂ. ಏಕೆಂದರೆ ಸ್ವರಸ ಗಳಬಿಟ್ಟು–ಶ್ರೀಪರಮಾತ್ಮ ತನ್ನ ಸ್ವರಸಗಳ ಬಿಟ್ಟು ಅನ್ಯರಸಗಳನ್ನ ಸ್ವೀಕಾರ ಮಾಡೋದಿಲ್ಲ ವಾದ್ದರಿಂದ ಪ್ರಾಕೃತ ಪದಾರ್ಥದಿಂದ ಉಪಚಯಾಪಚಯಗಳು ಇಲ್ಲ. ಮತ್ತು ಜಗತ್ತಿನ ಪ್ರಳಯ ಕಾಲದಲ್ಲಿ ಉದರದಲ್ಲಿ ಧರಿಸಿದೋಪಾದೇಯಲಿ ಪ್ರಾಕೃತ ಪದಾರ್ಥಗಳು ಭೋಜನ ಮಾಡತಾನೆ. ಆದ್ದರಿಂದ ಉಪಚಯಾಪಚಯ ದೋಷಗಳು ಅವಗಿಲ್ಲ. "ಅಭೂತ್ಕಲಿಃ ಸರ್ವಜಗತ್ಸು ಪೂರ್ಣಂ ಪೀತ್ವಾ ವಿಕಾರೋ ನ ಬಭೂವ ವಾಯೋಃ || ಸ್ವಯಂ ತ್ವ ನಿರ್ಮಥ್ಯ ಬಲೋಪಪನ್ನಂ ಪಪೌ ಸ ವಾಯುಃ ತದುತಾಸ್ಯ ಜೀರ್ಣಂ ||" ಎಂಬ ಪ್ರಮಾಣಾನುಸಾರ ವಾಯುದೇವರು ವಿಷಪಾನ ಮಾಡಿ ವಿಕಾರಯೈದದೆ ಇರಲಾಗಿ, ಪೇಳಲೇನು–ಸರ್ವೋತ್ತಮನಾದ ಶ್ರೀ ಪರಮಾತ್ಮಗೆ ಅವತಾರರೂಪಗಳಲ್ಲಿ ಪ್ರಾಕೃತ ಪದಾರ್ಥಗಳು ಭೋಜನ ಮಾಡೋಣದರಿಂದ ಉಪಚಯಾಪಚಯಗಳು ಇಲ್ಲ ಎಂಬವದು ಹೇಳತಕ್ಕದ್ದೇನು ಅದೆ ಎಂತ ತಾತ್ಪರ್ಯ. ಈ ಸಮನ್ವಯ ಎಲ್ಲಿ ಅಂದರೆ ರಾಮಕೃಷ್ಣಾದಿ

ಅವತಾರಗಳಲ್ಲಿ ಪ್ರಾಕೃತಾನ್ನ ಭೋಜನಮಾಡಿದ್ದಾಗಿ ಅದೆ. ಪ್ರಾಕೃತ ಕರ್ಮಫಲ ಭೋಗಗಳು ಕಂಡದೆ. ಅದರ ದೋಷ ಪರಿಹಾರಾರ್ಥ ವಾಯುದೇವರು ವಿಷಪಾನ ಮಾಡಿದ ದೃಷ್ಟಾಂತ ಹೇಳೋವರಾಗಿದ್ದಾರೆ ಎಂತ ತಾತ್ಪರ್ಯ.

**ಈ ಪರಿಯಲಚ್ಯುತನ ತತ್ತ ।**
**ದ್ರೂಪತನ್ನಾಮಗಳ ಸಲೆ ನಾ ।**
**ನಾ ಪದಾರ್ಥದಿ ನೆನೆನೆನೆದು ಭುಂಜಿಸುತಲಿರು ವಿಷಯ ॥**
**ಪ್ರಾಪಕ ಸ್ಥಾಪಕ ನಿಯಾಮಕ ।**
**ವ್ಯಾಪಕನು ಎಂದರಿದು ನೀ ನಿ ।**
**ರ್ಲೇಪನಾಗಿರು ಪುಣ್ಯ ಪಾಪಗಳರ್ಪಿಸವನಡಿಗೆ ॥ ೨೯ ॥**

ಪೂರ್ವೋಕ್ತಪ್ರಕಾರ ಅನುಸಂಧಾನದಿಂದ ಭೋಜನ ಮಾಡಿ ನಿರ್ಲೇಪನಾಗಿರು ಎಂತ ಹೇಳತಾರೆ.

ಈ ಪರಿಯಲಿ–ಈ ಪೂರ್ವೋಕ್ತ ಪ್ರಕಾರದಲ್ಲಿ, ಅಚ್ಯುತನ–ಚ್ಯುತಿರಹಿತನಾದ ಎಂದರೆ ಜೀವನ್ನ ಬಿಟ್ಟು ದೂರನಾಗದೆ ಇರುವ ಬಿಂಬರೂಪಿ ಪರಮಾತ್ಮನ, ತತ್ತದ್ರೂಪ–ತತ್–ಭೋಜನೋಪಯೋಗ್ಯವಾದ ದ್ರವ್ಯಾಧಿಷ್ಠಾನಗಳಲ್ಲಿ ಆಯಾ ಪದಾರ್ಥಗಳ ಆಕಾರ ದಂತೆ, ರೂಪ–ರೂಪಗಳಿಂದಲೂ, ಸಲೆ–ಸಹಿತವಾಗಿರತಕ್ಕ, ತನ್ನಾಮ– ತತ್–ಆ ಪದಾರ್ಥಗಳು ದಾವ ನಾಮದಿಂದ ಕರಿಸತದೋ, ನಾಮ–ಆಯಾ ನಾಮಗಳಿಂದಲೂ, ತತ್–ಸಹಿತನಾಗಿ ಇರತಕ್ಕ, ಅಥವಾ ಮೊತ್ತವಾಗಿ ಹೇಳಿದ ಶ್ರೀ ಪರಮಾತ್ಮನ ರೂಪ ಗಳನ್ನ, ನೆನೆನೆನೆದು–ಬಾರಿಬಾರಿಗೂ ಸ್ಮರಣೆಮಾಡುತಾ, ವಿಷಯ–ಭೋಜನಕ್ಕೆ ವಿಷಯ ಗಳಾದ ದ್ರವ್ಯಗಳ, ಭುಂಜಿಸುತ–ಭೋಜನ ಮಾಡತಾ, ಇರು–ಈ ಪರಮಾತ್ಮನಲ್ಲೇ ಮನಸ್ಸು ಇಟ್ಟವನಾಗಿ ಇರೋವನಾಗು. ಶ್ರೀ ಪರಮಾತ್ಮ ಎಂಥಾವನೆಂದರೆ, ಪ್ರಾಪಕ–ರಾಶಿಯಿಂದ ಸೃಷ್ಟಿಗೆ ತರತಕ್ಕ ಕಾರಣನು. ಇನ್ನೊಂದು ಇರ್ಥ ಏನೆಂದರೆ, ಇವನೇ ಅನ್ನಾದಿಗಳನ್ನ ಕಾಲಕಾಲಕ್ಕೆ ಒದಗಿಸೋವ ಎಂತ ಅರ್ಥ. ನಿಯಾಮಕ–ಅವರವರ ಸ್ವರೂಪಯೋಗ್ಯತಾನುಸಾರ ಸಾಧನೆ ಮಾಡಿಸೋ ವಿಷಯದಲ್ಲಿ ಇಂದ್ರಿಯಗಳ ದ್ವಾರಾ ನಿಯಾಮಕನಾಗಿ ಸಾಧನೆ ಪೂರ್ತಿ ಮಾಡಿಸುವನು. ಇವನೇ, ಸ್ಥಾಪಕ–ಲಿಂಗಭಂಗಾ ನಂತರ ತ್ರಿವಿಧ ಜೀವರನ್ನ ತ್ರಿವಿಧ ಸ್ಥಾನದಲ್ಲಿ ಸ್ಥಾಪನ ಮಾಡತಕ್ಕವನು. ಇನ್ನೊಂದು ಅರ್ಥ, ಭೋಜನಮಾಡಿದ ದ್ರವ್ಯಗಳನ್ನ ಉದರ ಸೇರಿಸಿ ತದ್ರಸಗಳ ಸರ್ವಾಂಗಕ್ಕೆ ಉಪಚಯರೂಪವಾದ ಸ್ಥಾನದಲ್ಲಿ ಸ್ಥಾಪನಮಾಡತಕ್ಕವನು. ವ್ಯಾಪಕನು–ಮುಕ್ತಾ ಮುಕ್ತರ ಸರ್ವರಲ್ಲೂನೂ ವ್ಯಾಪ್ತನಾಗಿರತಕ್ಕವನು ಎಂತ ಒಂದು ಅರ್ಥ. ಇನ್ನೊಂದು ಅರ್ಥ, ತನ್ನ ಶರೀರದಲ್ಲಿ ಇತರರಾದವರ ವ್ಯಾಪಕತ್ವ ಇಲ್ಲದೇ ತಾನು ಪೂರ್ಣನಾಗಿ, ವ್ಯಾಪ್ತನಾಗಿ ಇರತಕ್ಕವನು, ಎಂದರಿದು–ಎಂತ ನೀನು ತಿಳಿದವನಾಗಿ, ನೀ ನಿರ್ಲೇಪ ನಾಗಿ–ನೀನು ಸಂಸಾರದಲ್ಲಿ ಪದ್ಮಪತ್ರಗತ ಜಲಬಿಂದುಗಳೋಪಾದಿಯಲಿ ದಾವದಕ್ಕೂ

ಸಂಬಂಧಪಡದೇ ಇರೋವನಾಗು. ಇನ್ನು ಪುಣ್ಯ–ಸೀನು ಮಾಡತಕ್ಕ ಸತ್ಕಾರ್ಯ ಗಳೇನು, ಪಾಪಗಳ–ಹಾಗೆಯೇ ಮಾಡತಕ್ಕ ಪಾಪ ಕಾರ್ಯಗಳೇನು, ಅರ್ಪಿಸು–ಇವು ಗಳನ್ನ ಅರ್ಪಿಸೋವನಾಗು, ಆವನಡಿಗೆ–ಬಿಂಬ ರೂಪಿಯಾದ ಶ್ರೀ ಪರಮಾತ್ಮನ ಪಾದ ಗಳಿಗೆ ಎಂತ ಅರ್ಥ.

**ಐದು ಲಕ್ಷೆಂಭತ್ತರೊಂಭ ।**
**ತ್ತಾದ ಸಾವಿರದೇಳುನೂರರ ।**
**ಐದು ರೂಪವ ಧರಿಸಿ ಭೋಕ್ತೃಗ ಭೋಜ್ಯನೆಂದನಿಸಿ ॥**
**ಶ್ರೀಧರಾದುರ್ಗಾರಮಣ ಪಾ ।**
**ದಾದಿ ಶಿರಪರ್ಯಂತ ವ್ಯಾಪಿಸಿ ।**
**ಕಾದುಕೊಂಡಿಹ ಸಂತತ ಜಗನ್ನಾಥ ವಿಠ್ಠಲನು ॥ ೩೦ ॥**

ಅಂತು ವೇಹದಲಿ ಕೋಶಗತ ರೂಪಗಳು ವ್ಯಾಪಿಸಿ ಇರುವ ವೊತ್ತ ಭಗನದ್ರೂಪ ಗಳ ಹೇಳತಾರೆ.

ಐದುಲಕ್ಷ–೫,೦೦,೦೦೦, ಎಂಭತ್ತು ಸಾವಿರ–೮೦,೦೦೦, ಒಂಭತ್ತಾದ ಸಾವಿರ– ೯,೦೦೦ ಅಂತು ಎಂಭತ್ತೊಂಭತ್ತು ಸಾವಿರವು, ಏಳುನೂರರ–೭೦೦, ಏಳನೂರು ಮ್ಯಾಲೆ, ಐದು–(೫) ಐದು, ರೂಪವ ಧರಿಸಿ–ಏಳುನೂರು ಮ್ಯಾಲೆ ಐದು ಲಕ್ಷದ ಎಂಭತ್ತೊಂಭತ್ತು ಸಾವಿರದ ಏಳುನೂರ ಐದು ರೂಪವ ಧರಿಸಿ ಅಂದರೆ

| | | |
|---|---|---|
| ಅನ್ನಮಯಾದಿ ಕೋಶಗತ ರೂಪಗಳು | — | ೫,೮೫,೪೦೦ |
| ಅನ್ನ ಕೋಶಾದಿ ರೂಪಗಳು | — | ೪,೩೦೫ |
| ಅಂತು | — | ೫,೮೯,೭೦೫ |

ಇಷ್ಟು ರೂಪಗಳನ್ನು ಧರಿಸಿದವನಾಗಿ, ಭೋಕ್ತೃಗ–ಭೋಕ್ತೃಗಳೊಳಗೆ ಇರತಕ್ಕವ, ಭೋಜ್ಯ–ಭೋಜನಕ್ಕೆ ಯೋಗ್ಯವಾದ ಪದಾರ್ಥಗಳೊಳಗೆ ಇರತಕ್ಕವ, ಎಂದೆನಿಸಿ–ಎಂತ ಕರಿಸಿದವನಾಗಿ, ಶ್ರೀ–ಶ್ರೀದೇವೇರು, ಧರಾ–ಭೂದೇವೇರು, ದುರ್ಗಾ–ದುರ್ಗಾದೇವೇರು ಇವರು ಮೂರು ಮಂದಿಗೆ, ರಮಣ–ಪತಿಯಾದ ೧. ಶ್ರೀದೇವೇರ ಪತಿ ವಿಷ್ಣು, ೨. ಭೂದೇವೇರ ಪತಿಯಾದ ಬ್ರಹ್ಮರೂಪಿ ಪರಮಾತ್ಮ, ೩. ದುರ್ಗಾಪತಿ ರುದ್ರರೂಪಿ ಪರಮಾತ್ಮ, ಈ ಮೂರು ರೂಪಗಳಿಂದ ೧. ಮುಕ್ತಿಯೋಗ್ಯರಲ್ಲಿ ವಿಷ್ಣುರೂಪ ದಿಂದಲೂ, ೨. ನಿತ್ಯ ಸಂಸಾರಿಗಳಲ್ಲಿ ಬ್ರಹ್ಮರೂಪದಿಂದಲೂ, ೩. ತಮೋಯೋಗ್ಯ ರಲ್ಲಿ ರುದ್ರಾದಿ ರೂಪದಿಂದಲೂ, ಪಾದಾದಿ ಶಿರ ಪರಿಯಂತ–ಪಾದ ಆರಂಭ ಶಿರ ಪರ್ಯಂತ, ವ್ಯಾಪಿಸಿ–ವ್ಯಾಪಿಸಿಕೊಂಡು, ಕಾದುಕೊಂಡಿಹ–ದೇಹ ಸಂರಕ್ಷಣಾರ್ಥವಾಗಿ,

ದೇಹಾಂತರ್ಗತನಾಗಿ ಕಾದುಕೊಂಡಿರೋವನಾಗಿ ಇದಾನೆ. ಸಂತತ–ನಿರಂತರದಲ್ಲೂ, ಜಗನ್ನಾಥ ವಿಠ್ಠಲನು–ಜಗತ್ತಿಗೆ ಸ್ವಾಮಿಯಾದ ಪಾಪಪರಿಹಾರಕನಾದ ವಿಠ್ಠಲರೂಪಿ ಪರಮಾತ್ಮ ಎಂತ ಅರ್ಥ.

**ತಾ||** ಬ್ರಹ್ಮಾಂಡವೇನು, ತದ್ಗತ ಪದಾರ್ಥಗಳೇನು, ಪಂಚ ಕೋಶಾತ್ಮಕ ಚತುರ್ವಿಂಶತಿ ತತ್ವಾತ್ಮಕ ಸಂಸೃಷ್ಟಗಳಾದದ್ದು. ಆದ್ದರಿಂದ ಭೋಜ್ಯ ವಸ್ತುಗಳಲ್ಲಿ ದೇಹಗತ ರೂಪಗಳೋಪಾದಿಯಲ್ಲಿ ಇದಾನೆ ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಭೋಜನರಸವಿಭಾಗಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಐದನೆಯ ಸಂಧಿ

## ವಿಭೂತಿ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಉಪೋದ್ಘಾತ :–**

ಸರ್ವಪ್ರಾಣಿಗಳಲ್ಲಿ, ಹಾಂಗೆ ಜಡಗಳಲ್ಲಿ ವಿಭೂತಿರೂಪಗಳ ತಿಳಿಯಬೇಕು ಎಂದು ಹೇಳತಾರೆ. ಆ ವಿಭೂತಿರೂಪಗಳು ಎಷ್ಟು ಪ್ರಕಾರ ಎಂದರೆ ದಶಪ್ರಕಾರ, ಹತ್ತು ವಿಧ. ವಿಭೂತಿ ಎಂದರೆ ಐಶ್ವರ್ಯ ಎಂತ ಅರ್ಥ. ಬಲ, ಜ್ಞಾನ, ಐಶ್ವರ್ಯ, ಸಾಹಸ, ದಾತೃತ್ವ, ಸೌಂದರ್ಯ ಇದೇ ಮೊದಲಾದದ್ದು. ಲೌಕಿಕ ವಿಲಕ್ಷಣಯಾ ಅತಿಶಯವಾಗಿ ದಾರಲ್ಲಿ ಇರುತ್ತದೆಯೋ ಅದಕ್ಕೆಲ್ಲಾ ವಿಭೂತಿ ಅಂತ ಹೆಸರು. ನೈಜಯೋಗ್ಯತಾವಿವಕ್ಷಯಾ ಅತಿಶಯವಾಗಿ ಇರೋಣ. ಇದು ಯಾವತ್ತು ಅಣಿಮಾದಿ ಐಶ್ವರ್ಯಗಳು ಉಳ್ಳ ಶ್ರೀ ಪರಮಾತ್ಮನು ಪಿಶಾಚ ಆವಿಷ್ಟವತ್ ರೂಪಾಂತರದಿಂದ "ಬ್ರಹ್ಮಣಿ ಬ್ರಹ್ಮರೂಪೋಸೌ ಶಿವರೂಪೋ ಶಿವೇ ಸ್ಥಿತಃ |" ಎಂಬ ವಚನಾನುಸಾರ ಪ್ರವಿಷ್ಟರೂಪಗಳಿಂದ ಅತಿಶಯ ಸಮಾನ ವಿಭೂತಿಕಾರ್ಯಗಳನ್ನು ತಿಳಿಯಬೇಕು ಎಂತ ಹೇಳತಾರೆ.

**ಮೂಲ :**

**ಶ್ರೀತರುಣಿ ವಲ್ಲಭನ ಪರಮ ವಿ |**
**ಭೂತಿರೂಪ ಕಂಡಕಂಡ |**
**ಲ್ಲೀ ತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ ||**
**ನೀತಸಾಧಾರಣ ವಿಶೇಷ ಸ |**
**ಜಾತಿ ನೈಜಾ ಹಿತವು ಸಹಜ ವಿ |**
**ಜಾತಿ ಖಂಡಾಖಂಡ ಬಗೆಗಳನರಿತು ಬುಧರಿಂದ || ೧ ||**

ದಶವಿಭೂತಿ ನಾಮಗಳು, ಅದರ ವಿಚಾರವನ್ನ ಹೇಳತಾರೆ.

**ಟೀಕಾ :**

ಶ್ರೀತರುಣಿವಲ್ಲಭನ–ಕಾಂತಿಸಂಪನ್ನಳಾದ ನಿತ್ಯಯೌವನಳಾದ ಶ್ರೀಲಕ್ಷ್ಮೀದೇವೇರಿಗೆ ಪತಿಯಾದ ನಾರಾಯಣದೇವರ, ಪರಮವಿಭೂತಿರೂಪ–ಅತಿಶಯವಾದ ಪ್ರವಿಷ್ಟರೂಪ

ದಿಂದ ಸನ್ನಿಧಾನವಿಶೇಷವಾದ, ವಿಭೂತಿಸಂಕೇತವಾದ ಭಗವದ್ರೂಪವ, ಕಂಡ ಕಂಡಲ್ಲಿ–ಎಲ್ಲಾದರೂ ಲೋಕವಿಲಕ್ಷಣವ್ಯಾಪಾರ ಕಂಡರೆ ಆ ಕಂಡಂಥಾ ಅಧಿಷ್ಠಾನದಲ್ಲಿ, ಈ ತೆರದಿ ಚಿಂತಿಸುತ–ಈ ಕೆಳಗೆ ಹೇಳಲ್ಪಡುವ ತೆರದಲ್ಲಿ ವಿಭೂತಿರೂಪಗಳ ತನ್ನಾಮ ತಲ್ಲಕ್ಷಣಗಳ ಮನಸಾ ಅನುಸಂಧಾನದಿಂದ ಚಿಂತಿಸೋವನಾಗು ; ಈ ಪ್ರಕಾರ ಸ್ಮರಿಸುತಲಿ, ಮನದಲಿ ಸಂಭ್ರಮದಿ ನೋಡು–ಸಂತೋಷದಿಂದ ಆಯಾ ವಿಭೂತಿರೂಪಗಳ ನಿನ್ನ ಮನಗತ ಬಿಂಬದಲ್ಲಿ ಐಕ್ಯಚಿಂತನೆ ಮಾಡುತಾ ಸರ್ವಥಾ ಮನಸ್ಸಿನಿಂದ ನಿನ್ನ ಬಿಂಬನ ಧ್ಯಾನರೂಪದಿಂದ ನೋಡುತಾ ಇರೋವನಾಗು. ಆ ವಿಭೂತಿಗಳು ಎಷ್ಟು ಅಧಿಷ್ಠಾನಗಳು ದಾವದೆಂದರೆ ವಿವರ:– ನೀತ–ಎಂದಿಗೂ ಕೆಡದ ವಿಭೂತಿ (ಇದಕ್ಕೆ ಅಧಿಷ್ಠಾನ ರಮಾದೇವೇರು), ಸಾಧಾರಣ–ಮಿತ ವಿಭೂತಿ ಇದಕ್ಕೆ ನಿತ್ಯಸಂಸಾರಿಗಳು ಅಧಿಷ್ಠಾನರು, ಇವರಲ್ಲಿ ೧. ಸ್ವರ್ಗ ಪ್ರಚುರರು, ೨. ನಿರಯಪ್ರಚುರರು, ೩. ಭೂ ಪ್ರಚುರರು ಎಂತ ಮೂರು ವಿಧ. ವಿಶೇಷ–ಅತಿಶಯ ವಿಭೂತಿ. ಇದಕ್ಕೆ ಬ್ರಹ್ಮಾದಿ ಋಜುಗಳು ವ್ಯತಿರಿಕ್ತ ರುದ್ರಾದಿ ದೇವತೆಗಳು, ದೇವಗಂಧರ್ವಾಂತ ಅಧಿಷ್ಠಾನರು ಸಜಾತಿ–ಸಮಾನ ವಿಭೂತಿ ಇದಕ್ಕೆ ಅಧಿಷ್ಠಾನರು ಮನುಷ್ಯಗಂಧರ್ವಾರಭ್ಯ ತೃಣಾಂತ ಮುಕ್ತಿಯೋಗ್ಯರು, ಸಮೀಚೀನ ಜ್ಞಾನಜಾತೀಯರು ನೈಜ–ಕೆಡದೆ ನೈಜವಾಗಿ ಇರತಕ್ಕ ವಿಭೂತಿ. ಇದಕ್ಕೆ ಅಧಿಷ್ಠಾನರು ಅನಾದಿ ನೈಜ ಸ್ವರೂಪಗಳು, ಅಹಿತ–ಹಿತರಹಿತ ವಿಭೂತಿ ಇದಕ್ಕೆ ಅಧಿಷ್ಠಾನಗಳು ಜಡಪ್ರತಿಮಾಗಳು ತೀರ್ಥಕ್ಷೇತ್ರಗಳು ಸಂಗಾತಲೇ ಜನಿಸಿದ್ದು, ವಿಜಾತಿ–ಅನ್ಯಜಾತಿ ವಿಭೂತಿ ಇದಕ್ಕೆ ಅಧಿಷ್ಠಾನರು ತಮೋಯೋಗ್ಯ ಜೀವರು, ಖಂಡ–ಭಿನ್ನ ಭಿನ್ನ ವಿಭೂತಿ, ಕೆಲವು ಕಾಲ ಇದ್ದು ಕೆಲವು ಕಾಲ ಇರದೆ ಇರತಕ್ಕದ್ದು. ಇದಕ್ಕೆ ಅಧಿಷ್ಠಾನಗಳು ಅರ್ಜುನಾದಿಗಳು, ಅಖಂಡ–ಏಕಾಕಾರ ವಿಭೂತಿ. ಇದಕ್ಕೆ ಅಧಿಷ್ಠಾನರು ಬ್ರಹ್ಮಾದಿ ಋಜುಗಳು, ಬಗೆಗಳ ನರಿತು ಬುಧರಿಂದ–ಜ್ಞಾನಿಗಳಾದ ಇದರ ವಿವರವನ್ನು ತಿಳಿದುಕೊಂಡು ಅನುಷ್ಠಾನಮಾಡಬೇಕು ಎಂತ ತಾತ್ಪರ್ಯ.

**ಜಲಧರಾಗಸದೊಳಗೆ ಚರಿಸುವ ।**
**ಹಲವು ಜೀವರ ನಿರ್ಮಿಸಿಹನದ ।**
**ರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ ॥**
**ತಿಳದು ತತ್ತಸ್ಥಾನದಲಿ ವೆ ।**
**ಗ್ಗಳಿಸಿ ಹಬ್ಬಿದ ಮನದಿ ಪೂಜಿಸು ।**
**ತಲವ ವ್ಯಾಪ್ತದ ರೂಪಗಳ ನೋಡುತಲಿ ಹಿಗ್ಗುವದು ॥ ೨ ॥**

ಸಜಾತಿ ವಿಜಾತಿ ವಿಭೂತಿ ರೂಪಗಳಿಗೆ ಅಧಿಷ್ಠಾನಗಳ ಹೇಳಿ ಆ ಅಧಿಷ್ಠಾನ ಸಾಂಕೇತದಿಂದಲೇ ಪರಮಾತ್ಮಗೆ ಆಯಾ ನಾಮಗಳೆಂತಲೂ ಹೇಳತಾರೆ.

ಜಲ–ಸಮಸ್ತವಾದ ಉದಕಗಳಲ್ಲಿ, ಧರ–ಭೂಮಿಯಲ್ಲಿ (ಭೂಲೋಕ ಎಂತ ತಾತ್ಪರ್ಯ) ಉಪಲಕ್ಷಣಯಾ ಅತಳಾದಿ ಲೋಕಗಳು ಗ್ರಾಹ್ಯ. ಇವುಗಳಲ್ಲಿ, ಆಗಸ–

ಆಕಾಶ ಸಾಂಕೇತದಿಂದ, ಊರ್ಧ್ವಲೋಕಗಳು ಆರು ಗ್ರಾಹ್ಯ ಇವುಗಳಲ್ಲಿ, ಒಳಗೆ ಸಂಚರಿಸುವ–ಈ ಸ್ಥಾನಗಳಲ್ಲಿ ಸಂಚಾರ ಮಾಡುವ ಹಲವು, ಜೀವರ–ಅನೇಕ ಯೋನಿ ಪ್ರಭೇದ ಉಳ್ಳ ಪ್ರಾಣಿಸಮೂಹಗಳ, ನಿರ್ಮಿಸಿಹನು–ಸ್ಥೂಲದೇಹಗಳಿಂದ ಸೃಷ್ಟಿಮಾಡಿ ಆಯಾ ಸ್ಥೂಲದೇಹಗಳಲ್ಲಿ ವಿಭೂತಿಸಾಂಕೇತವಾದ ಪ್ರವಿಷ್ಟರೂಪಗಳಿಂದ ಇದ್ದಾನೆ. ಅದರೊಳು–ಸ್ಥೂಲದೇಹಗಳಿಂದ ಸೃಷ್ಟಿ ಮಾಡಿದ ಜೀವರ ಸಮೂಹದೊಳು ಸ್ವರೂಪ ವಿವಕ್ಷಯಾ, ಸಜಾತಿ–ತಾರತಮ್ಯ ಪಂಚಭೇದ ಜ್ಞಾನದಿಂದ ಸಹಿತರಾದ ಮುಕ್ತಿಯೋಗ್ಯ ಜಾತಿ, ವಿಜಾತಿ–ಹೋಗಲ್ಪಟ್ಟ ತಾರತಮ್ಯ ಪಂಚಭೇದ ಜ್ಞಾನರಹಿತರಾಗಿ ಇರುವ ತಮೋಯೋಗ್ಯ ಜಾತಿ, ಸಾಧಾರಣ–ಈ ಉಭಯ ಜ್ಞಾನಗಳಿಗೂ ಸಂಬಂಧಪಡದೇ ಸಾಧಾರಣ ಉಭಯಜ್ಞಾನ ಮಿಶ್ರವಾಗಿ ಇರುವ ನಿತ್ಯಸಂಸಾರಿಗಳು, ವಿಶೇಷಗಳ–ಈ ತ್ರಿವಿಧ ಜೀವರೊಳಗೆ ಅಂತರಾಂತರ ಇರತಕ್ಕ ಸಜಾತಿ ವಿಜಾತಿಗಳ ವಿಶೇಷಗಳ, ತಿಳಿದು–ತಿಳಿದವನಾಗಿ ಎಂದರೆ ದೃಷ್ಟಾಂತ:—೧. ವೃಕ್ಷಸಮೂಹ ವಿಜಾತಿ, ೨. ಮನುಷ್ಯಸಮೂಹ ಸಜಾತಿ, ೩. ಚೂತವೃಕ್ಷಕ್ಕೂ ಪನಸವೃಕ್ಷಕ್ಕೂ ವಿಜಾತಿ, ಬ್ರಾಹ್ಮಣಗೂ ಶೂದ್ರಗೂ ಪರಸ್ಪರ ವಿಜಾತಿ, ಇತ್ಯಾದಿ ಸಜಾತಿ ವಿಜಾತಿಗಳ ತಿಳಿದಂಥಾವನಾಗಿ, ತತ್ತತ್ಸ್ಥಾನದೊಳು–ಆಯಾ ದೇಹಸ್ಥಾನಗಳಲ್ಲಿ, ವೆಗ್ಗಳಿಸಿ–ತನ್ನ ಸನ್ನಿಧಾನದ ಮಾಹಾತ್ಮ್ಯ ವೆಗ್ಗಳಮಾಡಿ ಹೆಚ್ಚುಮಾಡಿ, ಹಬ್ಬಿದ–ವಿಭೂತಿ ಅಧಿಕಮಾಡೋ ನಿಮಿತ್ತ ವ್ಯಾಪ್ತನಾದ ಶ್ರೀ ಪರಮಾತ್ಮನ, ಮನದಿ–ಸ್ಥೂಲಹೃದಯಾಕಾಶದಲಿ ವಿದ್ಯಮಾನವಾದ ಬಿಂಬನಲ್ಲಿ ಐಕ್ಯಚಿಂತನ ಮಾಡಿ (ಅಲ್ಲಿ), ಪೂಜಿಸುತ–ಮಾನಸನಿರ್ಮಿತ ಪೂಜಾದ್ರವ್ಯಗಳಿಂದ ಐಕ್ಯಚಿಂತನರೂಪವಾದ ಜೀವಾಂತರ್ಗತದಲ್ಲಿ ಪೂಜಾಸಾಂಕೇತದಿಂದ ಪೂಜಿಸುತ, ಲವವ್ಯಾಪ್ತನ–ಅತಿಸೂಕ್ಷ್ಮವಾದ ಜೀವಾಂತರ್ಗತದಲ್ಲಿ ಬಿಂಬರೂಪದಿಂದ ವ್ಯಾಪ್ತನಾದ ಜೀವಾಕಾರನಾದ ಪರಮಾತ್ಮನ್ನ ಸ್ಥೂಲಹೃದಯಗತ ಬಿಂಬನಲ್ಲಿ ಐಕ್ಯ ಚಿಂತಿಸುತ, ರೂಪಗಳ–ಈ ಪ್ರಕಾರ ರೂಪಗಳ ಐಕ್ಯಚಿಂತನೆ ಮಾಡುತಾ ಇಂಥಾ ಬಿಂಬರೂಪವನ್ನ, ನೋಡುತಲಿ–ಸರ್ವೇಂದ್ರಿಯಗಳಲ್ಲಿ ವಿದ್ಯಮಾನವಾದ ಭಗವದ್ರೂಪಗಳಲ್ಲಿ ಐಕ್ಯಚಿಂತನೆ ಮಾಡಿ ಸರ್ವವೂ ಭಗವತ್ಕ್ರಿಯೆಗಳೆಂದು ಜ್ಞಾನನೇತ್ರಗಳಿಂದ ನೋಡುತಲಿ, ಹಿಗ್ಗುವದು–ದೀನನಾಗಿ ಆನಂದದಿಂದ ಸಂತೋಷಪಡುವದು ಎಂತ ಅರ್ಥ. ಹತ್ತು ಪ್ರಕಾರ ವಿಭೂತಿಗಳು. ಇದರ ವಿವರ ಮುಂದಿನ ಶ್ಲೋಕದಲ್ಲಿ ವಿವರವದೆ.

**ಪ್ರತಿಮ ಶಾಲಿಗ್ರಾಮ ಗೋಽಭ್ಯಾ ।**
**ಗತನತಿಥಿ ಶ್ರೀ ತುಳಸಿ ಪಿಪ್ಪಲ ।**
**ಯತಿ ವನಸ್ಥ ಗೃಹಸ್ಥ ವಟು ಯಜಮಾನ ಸ್ವಪರಜನ ॥**
**ಪೃಥಿವಿ ಜಲಶಿಖಿ ಪವನ ತಾರಾ ।**
**ಪಥ ನವಗ್ರಹ ಯೋಗ ಕರಣ ಭ ।**
**ತಿಥಿ ಸಿತಾಸಿತಪಕ್ಷ ಸಂಕ್ರಮಣ ವನಧಿಧಿಷ್ಣ್ಯಾನ ॥ ೩ ॥**

ವಿಭೂತಿರೂಪಗಳ ಅನುಷ್ಠಾನಗಳನ್ನು ಹೇಳುತಾರೆ.

ಪ್ರತಿಮಾ–ತಾರತಮ್ಯಪಂಚಭೇದಜ್ಞಾನದಿಂದ ಯುಕ್ತರಾದ ಭಗವದ್ಭಕ್ತರಾದ ದೇವಮಾನುಷರಿಂದ ನಿರ್ಮಿತವಾದ, ಪ್ರತಿಷ್ಠವಾದ ದಶವಿಧ ಪ್ರತಿಮೆಗಳು, ಶಾಲಿಗ್ರಾಮ–ಗಂಡಕೀನದಿಯಲ್ಲಿ ಉತ್ಪನ್ನವಾದ ಶಾಲಿಗ್ರಾಮಗಳು, ಗೋವು–ಪ್ರಸವವಾದ ಆಕಳು, ಕಾಮಧೇನು ಹಾಂಗೆ ವೇದಗಳು, ಅಭ್ಯಾಗತ–ಮರ್ಯಾದಾಪೂರ್ವಕವಾಗಿ ಕರೆಸಿಕೊಂಡು ಆಗತನಾದ ಭಗವದ್ಭಕ್ತ. ಅವ ಬಂದಕಾಲದಲ್ಲಿ ಅವನಲ್ಲಿ ಭಗವದ್ವಿಭೂತಿ ಅಧಿಕ, ಅತಿಥಿ–ತಿಥಿಗೆ ನಿಯಮವಾಗದೇ ಕರೆಸಿಕೊಳ್ಳದೇ ವೈಶ್ವದೇವ ಸಮಯದಲ್ಲಿ ಅಶನಾರ್ಥವಾಗಿ ಬಂದ ಭಗವದ್ಭಕ್ತನಾದವ, ಶ್ರೀತುಲಸಿ–ಶ್ರೀದೇವರಿಗೆ ಪೂಜೋಪಯೋಗ್ಯವಾದ ಲಕ್ಷ್ಮೀಸನ್ನಿಧಾನವಿಶೇಷವಾದ ಶ್ರೀತುಲಸಿ, ಪಿಪ್ಪಲ–ಭಗವದ್ಭಕ್ತರಿಂದ ಪ್ರತಿಷ್ಠಿತವಾದ ಉಪನಯನವಿವಾಹಾದಿಗಳಾದ ಅಶ್ವತ್ಥವೃಕ್ಷ, ಯತಿ–ಕಾಮ್ಯಕರ್ಮತ್ಯಾಗಮಾಡಿ ಚಾತುರ್ಮಾಸ್ಯಾದಿ ವ್ರತಾನುಷ್ಠಾನಗಳಿಂದ ಗುರೂಪದಿಷ್ಟನಾಗಿ ಸನ್ಯಾಸಾಶ್ರಮ ಸ್ವೀಕರಿಸಿದವ, ತಾರತಮ್ಯ ಪಂಚಭೇದಜ್ಞಾನಪೂರ್ವಕ ಭಗವದ್ಭಕ್ತನಾದವ, ವನಸ್ಥ–ವನದಲ್ಲಿ ಸಂಚಾರ ಮಾಡಿ ಫಲಾದಿಗಳನ್ನ ಆಹಾರಮಾಡಿ ತಾರತಮ್ಯ ಪಂಚಭೇದಜ್ಞಾನದಿಂದ ಯುಕ್ತನಾಗಿ ಭಗವದ್ಭಕ್ತನಾದವ, ಗೃಹಸ್ಥ–ಅಹಂಮಮಕಾರರಹಿತನಾಗಿ ದಾರಾಪುತ್ರಾದಿಗಳಿಂದಲೂ ಯುಕ್ತನಾಗಿ ತಾರತಮ್ಯ ಪಂಚಭೇದಜ್ಞಾನದಿಂದಲೂ ಭಗವದ್ಭಕ್ತನಾಗಿಯೂ ಸರ್ವ ವ್ಯಾಪಾರಗಳಲ್ಲಿ ಪರಮಾತ್ಮನ ಚಿಂತನದಿಂದ ಇರತಕ್ಕವ, ವಟು–ಬ್ರಹ್ಮಚಾರಿ, ಬ್ರಹ್ಮಚರ್ಯ ನಿಷ್ಠನಾಗಿ ಭೇದಜ್ಞಾನ ತಾರತಮ್ಯಜ್ಞಾನ ಜಿತೇಂದ್ರಿಯತ್ವ ಭಿಕ್ಷಾಟನಾದಿ ಸದ್ವ್ಯಾಪಾರ ದಿಂದ ಇರುವ ವಟು, ಯಜಮಾನ–ಧರ್ಮಾಧರ್ಮಗಳ ಶಾಸನಮಾಡತಕ್ಕವ, ಪ್ರಭು, ಸ್ವ–ತಾನು ಮಾಡತಕ್ಕ ಸತ್ಕಾರ್ಯಗಳಿಗೆ ಪರಲೋಕಸಾಧನೆಗೆ ಸಹಾಯಭೂತರಾದ ಭೇದಜ್ಞಾನ ಯುಕ್ತರಾದ ಬಂಧುಜನರುಗಳು, ಪುರಜನ–ತನ್ನ ಸತ್ಕಾರ್ಯಗಳಿಗೆ ಅನುಕೂಲರಾಗಿ ಅದಕ್ಕೆ ಉಪೋದ್ಬಲ ಮಾಡತಕ್ಕ ಪರಕೀಯ ಜನಗಳು, ಪೃಥಿವಿ–ಪುರಾಣಪ್ರಸಿದ್ಧವಾದ ಕ್ಷೇತ್ರಭೂಮಿಗಳು, ಜಲ–ಪುರಾಣಪ್ರಸಿದ್ಧವಾದ ತೀರ್ಥರೂಪ ಜಲಗಳು, ಶಿಖಿ–ಯಜ್ಞ ಯಾಗಾದಿಗಳಿಂದ ಸಜ್ಜನರಿಂದ ಪ್ರತಿಷ್ಠಿತವಾದ ಯಜ್ಞಸಂಬಂಧವಾದ ಆಹವನೀಯಾದಿ ಅಗ್ನಿಗಳು, ಪವನ–ಶ್ವಾಸರೂಪವಾದ ವಾಯು, ಚಂಡವಾಯು, ತಾರಾಪಥ–ನಕ್ಷತ್ರಗಳ ಮಾರ್ಗವು, ಹಾಂಗೆ ನವಗ್ರಹಗಳ ಮಾರ್ಗ, ನವಗ್ರಹ–ಸೂರ್ಯಚಂದ್ರಾದಿ ನವಗ್ರಹಗಳು, ಯೋಗ–ವಿಷ್ಕಂಭಾದಿ ಯೋಗಗಳು, ಕರಣ–ಬವ ಬಾಲವಾದಿ ಕರಣಗಳು, ಭ–ಅಶ್ವಿನ್ಯಾದಿ ನಕ್ಷತ್ರಗಳು (೨೭), ತಿಥಿ–ಶುಕ್ಲಪಕ್ಷ ಕೃಷ್ಣಪಕ್ಷ ಏಕಾದಶೀ ತಿಥಿ, ಸಿತಾ–ಪೌರ್ಣಿಮಾ, ಅಸಿತಾ–ಅಮಾವಾಸ್ಯಾ, ಪಕ್ಷ–ಉಭಯ ಏಕಾದಶಿಗೆ ಪೂರ್ವಾಪರ ದಿನವಾದ ದಶಮೀ, ದ್ವಾದಶೀ, ಸಂಕ್ರಮಣ–ಉತ್ತರಾಯಣ ದಕ್ಷಿಣಾಯನ ಸಂಕ್ರಮಣಗಳು, ಅವನ ಅಧಿಷ್ಠಾನ ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ ವಿಭೂತಿರೂಪಗಳಿಗೆ ಅಧಿಷ್ಠಾನವು. ಈ ೨೮ ವಿಭೂತಿಗಳಿಗೆ ವಿಭಾಗದ ವಿವರ ಹ್ಯಾಂಗೆಂದರೆ :–

| ಸಂಖ್ಯೆ | ವಿಭೂತಿಗಳ ಹೆಸರು | ಅಧಿಷ್ಠಾನಗಳು |
|---|---|---|
| ೧ | ನೀತ ವಿಭೂತಿ | ನಿತ್ಯಮುಕ್ತಳಾದ ರಮಾದೇವೇರಲ್ಲಿ. |
| ೨ | ಸಾಧಾರಣ ವಿಭೂತಿ | ಮಿಶ್ರಜ್ಞಾನರಾದ ನಿತ್ಯಸಂಸಾರಿಗಳಲ್ಲಿ. |
| ೩ | ವಿಶೇಷ ವಿಭೂತಿ | ನವಗ್ರಹದೇವತೆಗಳಲ್ಲಿ, ಅಶ್ವಿನ್ಯಾದಿ ನಕ್ಷತ್ರಗಳಲ್ಲಿ, ಇನ್ನು ಬ್ರಹ್ಮಾದಿ ಋಜುಗಳು ವ್ಯತಿರಿಕ್ತ ರುದ್ರಾದಿ ದೇವಗಂಧರ್ವರ ಪರಿಯಂತ ದೇವತೆಗಳು, ಮಾನುಷ ವಿವಕ್ಷಾದಿಂದ ತಾರತಮ್ಯಾನುಸಾರ ವಿಶೇಷ ವಿಭೂತಿ ಉಳ್ಳವರು. |
| ೪ | ಸಜಾತಿ ವಿಭೂತಿ | ಸಮೀಚೀನ ಜ್ಞಾನದಿಂದ ಸಹಿತರಾದ ಜಾತೀಯವರರಾದ ದೇವಗಂಧರ್ವರು ಆರಂಭಮಾಡಿ ತೃಣಾಂತ ಮುಕ್ತಿ ಯೋಗ್ಯರ ಪರಿಯಂತ, ಅಭ್ಯಾಗತ, ಅತಿಥಿ, ಯತಿ, ವನಸ್ಥ, ಗೃಹಸ್ಥ, ವಟು, ಪ್ರಭು, ಸ್ವಜನ, ಪರಜನ. |
| ೫ | ನೈಜ ವಿಭೂತಿ | ಆಯಾ ಜೀವರ ಸ್ವರೂಪದಲ್ಲಿ. |
| ೬ | ಅಹಿತ ವಿಭೂತಿ | ಪ್ರತಿಮಾ, ಗೋ, ಶ್ರೀತುಲಸಿ, ಅಶ್ವತ್ಥವೃಕ್ಷ ಇವುಗಳಲ್ಲಿ. |
| ೭ | ಸಹಜ ವಿಭೂತಿ | ಶಾಲಿಗ್ರಾಮ, ಪೃಥ್ವೀ, ಜಲ, ಅಗ್ನಿ, ವಾಯು, ತಾರಾಪಥ, ಯೋಗ, ಕರಣ, ತಿಥಿ, ಪೌರ್ಣಿಮಾ, ಅಮಾವಾಸ್ಯಾ, ದಶಮೀ, ದ್ವಾದಶೀ, ಸಂಕ್ರಮಣ ಇವುಗಳಲ್ಲಿ. |
| ೮ | ವಿಜಾತಿ ವಿಭೂತಿ | ತಮೋಯೋಗ್ಯರಲ್ಲಿ. |
| ೯ | ಖಂಡ ವಿಭೂತಿ | ಅರ್ಜುನಾದಿಗಳಲ್ಲಿ. |
| ೧೦ | ಅಖಂಡ ವಿಭೂತಿ | ಬ್ರಹ್ಮಾದಿ ಋಜುಗಳಲ್ಲಿ. |

ಈ ಪ್ರಕಾರ ದಶ ವಿಭೂತಿಗಳಲ್ಲಿ ಸಮೂಹತ್ವೇನ ಯಾವತ್ತು ಬಂದಂತಾಯಿತು ಎಂತ ತಾತ್ಪರ್ಯ.

**ಕಾದ ಕಾಂಚನದೊಳಗೆ ಶೋಭಿಪ।**
**ಆದಿತೇಯಾಸ್ಯನ ತೆರದಿ ಲಕು।**
**ಮೀಧವನು ಪ್ರತಿದಿನದಿ ಶಾಲಿಗ್ರಾಮದೊಳಗಿಪ್ಪ॥**
**ಐದುಸಾವಿರಮೇಲೆ ಮೂವ।**
**ತ್ತೈದಧಿಕ ಐನೂರು ರೂಪದಿ।**
**ಭೂಧರಗಳಭಿಮಾನಿ ದಿವಿಜರೊಳಿಪ್ಪನನವರತ॥ ೪ ॥**

ಶಾಲಿಗ್ರಾಮಗತ ವಿಭೂತಿ ಸನ್ನಿಧಾನ ತದ್ಗತ ಅಪರಸಾಂಕೇತ ಭಗವದ್ರೂಪಗಳ ಆ ವಿಭೂತಿಗೆ ಸೇರಿದ ಸನ್ನಿಧಾನ ವಿಶೇಷಗಳ ಹೇಳತಾರೆ.

ಕಾದ ಕಾಂಚನದೊಳಗೆ ಶೋಭಿಪ–ಕಾದ–ಅಗ್ನಿಯಿಂದ ಕಾದಂಥಾ, ಕಾಂಚನದ ಭಂಗಾರದ (ಸ್ವಭಾವತಃ ಪರಿಶುದ್ಧವಾದದ್ದು) ಒಳಗೆ–ಈ ಭಂಗಾರದೊಳಗೆ, ಶೋಭಿಪ–ಪ್ರವೇಶ ಮಾಡಿ ಪ್ರಕಾಶಮಾನನಾದವ, ಆದಿತೇಯಾಸ್ಯನ–ಆದಿತೇಯ-ದೇವತೆಗಳಿಗೆ, ಆಸ್ಯನ–ಮುಖಸ್ಥಾನಾಪನ್ನನಾದವ ಅಗ್ನಿ (ಇಂಥಾ ಅಗ್ನಿಯ), ತೆರದಿ–ಉಪಾದಿಯಲಿ ಎಂದರೆ ಭಂಗಾರ ಸ್ವಭಾವತಃ ಪ್ರಕಾಶಮಾನವಾದ ವಸ್ತುವು. ಅದರಲ್ಲಿ ಅಗ್ನಿಪ್ರವೇಶ ದಿಂದ ಅಧಿಕ ತೇಜಸ್ಸಿನಿಂದ ಭಂಗಾರ ಹ್ಯಾಂಗೆ ಯುಕ್ತವಾಗಿರತದೋ ಅದರೋಪಾದಿ ಯಲಿ, ಲಕುಮೀಧವನು–ಲಕ್ಷ್ಮೀಪತಿಯಾದ ಶ್ರೀ ನಾರಾಯಣನು, ಪ್ರತಿದಿನ–ಸದಾ ಎಂತ ಅರ್ಥ. ಪ್ರತಿದಿನ ಎಂಬ ಶಬ್ದದಿಂದ ಅವಿಚ್ಛಿನ್ನವಾಗಿ ತನ್ನ ಸನ್ನಿಧಾನ ಕಡಿಮೆ ಆಗದೆ, ಶಾಲಿಗ್ರಾಮದೊಳಿಪ್ಪ–ಗಂಡಕೀನದಿಯಲ್ಲಿ ಉದ್ಭವವಾಗುವ ಶಾಲಿಗ್ರಾಮದೊಳಗೆ ವಿಭೂತಿರೂಪದಿಂದ ಇರತಾನೆ. ಎಷ್ಟು ರೂಪದಿಂದ ಎಂದರೆ ಐದುಸಾವಿರದ ಮೇಲೆ–(೫೦೦೦) ಐದು ಸಾವಿರದ ಮ್ಯಾಲೆ ಐನೂರು–(೫೦೦) ಐನೂರ, ಮೇಲೆ ಮೂವತ್ತೈ-ದಧಿಕ–(೩೫) ಮೂವತ್ತೈದು ಅಂತು ೫೫೩೫ ರೂಪಗಳು. ಶಾ–೫, ಲಿ–೩, ಗ್ರಾ–(ಗ+ರ=೩+೨)–೫, ಮ–೫ ಅಂದರೆ ೫೫೩೫ ಬಲದಿಂದ ಎಡಕ್ಕೆ ಲೆಕ್ಕ. ೫೫೩೫ ರೂಪ ಗಳಿಂದ, ದಿವಿಜರೊಳು–ಈ ಕೆಳಗೆ ಹೇಳುವ ದೇವತೆಗಳಲ್ಲಿ, ಭೂಧರಗಳಭಿಮಾನಿ–ಭೂಮಿ ಯನ್ನು ಧರಿಸಿದ ಪರ್ವತಗಳು, ಮೇರು ಮಂದರಾದಿ ಪರ್ವತಗಳು ಇವುಗಳಿಗೆ ಅಭಿಮಾನಿ ಯಾದ ವಾಸುದೇವ, ಅನವರತ–ಶಾಲಿಗ್ರಾಮದೋಪಾದಿಯಲಿ ನಿರಂತರ ವಿಭೂತಿರೂಪ ದಿಂದ ಸನ್ನಿಧಾನಯುಕ್ತನಾಗಿ, ಇಪ್ಪ–ಇರೋವನಾಗಿದ್ದಾನೆ. ಅಂತು ಶಾಲಿಗ್ರಾಮ ದೊಳಗೆ, ದೇವತೆಗಳ ಒಳಗೆ ಸದಾ ಪರಮಾತ್ಮನ ವಿಭೂತಿ ಇರುತ್ತದೆ. ಆಚಂಡಾಲಾಂತ ದೇಹಗಳಲ್ಲಿ ದೇವತೆಗಳು ವ್ಯಾಪ್ತರಾಗಿದ್ದಾರೆ. ಅವರುಗಳ ಸ್ಪರ್ಶದಿಂದ ದೇವತೆಗಳಲ್ಲಿ ವಿಭೂತಿ ಕಡಿಮೆ ಆಗೋದಿಲ್ಲ. ತದ್ವತ್ ಚಂಡಾಲಾಂತ ಸ್ಪರ್ಶದಿಂದ ಶಾಲಿಗ್ರಾಮದಲ್ಲಿ ವಿಭೂತಿ ಕಡಿಮೆ ಆಗೋದಿಲ್ಲ.

೩ನೇ ವಿಭೂತಿ ವಿಶೇಷ ವಿಭೂತಿ. ಇದಕ್ಕೆ ಸಂಬಂಧಿಸಿದವರು ಋಜುಗಳು ವ್ಯತಿರಿಕ್ತ ರುದ್ರಾದಿದೇವತೆಗಳು, ಅಖಂಡವಿಭೂತಿ ಶಬ್ದದಿಂದ ಬ್ರಹ್ಮಾದಿ ಋಜುಗಳು ಗ್ರಾಹ್ಯ. ಇವರು ಅಖಂಡ ವಿಭೂತಿಗೆ ಸಂಬಂಧಿಸಿದವರು. ಈ ಎರಡರಿಂದ ದೇವತಾ ಸಮೂಹ ಯಾವತ್ತು ಬಂದಂತಾಯಿತು. ೭ನೇದು ಸಹಜ ವಿಭೂತಿ. ಶಾಲಿಗ್ರಾಮ ದಲ್ಲಿ ಸಹಜ ವಿಭೂತಿ. ಇದರಿಂದ ೧ ಶಾಲಿಗ್ರಾಮ, ೨ ಕ್ಷೇತ್ರಭೂಮಿ, ೩ನೇದು ತೀರ್ಥ ಗಳು, ೪ನೇದು ಅಗ್ನಿ, ೫ನೇದು ವಾಯು, ೬ನೇದು ತಾರಾಪಥ, ೭ನೇದು ಯೋಗ, ೮ನೇದು ಕರಣ, ೯ನೇದು ಏಕಾದಶೀ ತಿಥಿ, ೧೦ನೇದು ಪೌರ್ಣಿಮಾ, ೧೧ನೇದು ಅಮಾ ವಾಸ್ಯಾ, ೧೨ನೇದು ದ್ವಾದಶೀ, ೧೩ನೇದು ಸಂಕ್ರಮಣ, ಇದು ಯಾವತ್ತು

ಬಂದಂತಾಯಿತು. ಅಂತು ಈ ಶ್ಲೋಕದಿಂದ ಮೂರು ವಿಧ ವಿಭೂತಿಗಳು ಆದರ ಅಧಿಷ್ಠಾನಗಳು ಅಲ್ಲಿ ಅವಿಚ್ಛಿನ್ನವಾಗಿ ಸದಾ ಶ್ರೀ ಪರಮಾತ್ಮನ ವಿಭೂತಿರೂಪ ಇರುತ್ತದೆ ಎಂತ ತಾತ್ಪರ್ಯ.

**ಶ್ರೀರಮಣ ಪ್ರತಿಮೆಗಳೊಳಗೆ ಹದಿ ।**
**ಮೂರಧಿಕವಾಗಿಪ್ಪ ಮೇಲೈ ।**
**ನೂರು ರೂಪವ ಧರಿಸಿ ಇಪ್ಪನು ಅಹಿತಾಚಲದಿ ॥**
**ದಾರುಮಥನವ ಗೈಯೆ ಪಾವಕ ।**
**ತೋರುವಂತೆ ಪ್ರತೀಕ ಸುರದೊಳು ।**
**ತೋರುತಿಪ್ಪನು ತತ್ತದಾಕಾರದಲಿ ನೋಳ್ಪರಿಗೆ ॥ ೫ ॥**

ದಶವಿಧ ಪ್ರತಿಮೆಗಳೊಳಗೆ ಇರತಕ್ಕ ಭಗವದ್ರೂಪಗಳ, ಇನ್ನೂ ಕೆಲವು ವಿಭೂತಿಗಳ ಸಂಗತಿಯನ್ನು ಹೇಳತಾರೆ.

ಶ್ರೀರಮಣ–ಶ್ರೀಲಕ್ಷ್ಮೀಪತಿಯಾದ ನಾರಾಯಣದೇವರು, ಪ್ರತಿಮೆಗಳೊಳಗೆ–ಸ್ವರ್ಣಾದಿ ದಶವಿಧ ಪ್ರತಿಮೆಗಳೊಳಗೆ, ಐನೂರು ಮೇಲಧಿಕವಾಗಿಪ್ಪ–(೫೦೦) ಐನೂರು ಮ್ಯಾಲೆ ಅಧಿಕವಾದ, ಹದಿಮೂರು–(೧೩) ಹದಿಮೂರು ಅಂತು ೫೧೩. ಪ್ರ–೩, ತಿ–೧, ಮ–೫–೫೧೩. ರೂಪವ ಧರಿಸಿ ಇಪ್ಪನು–ಇಷ್ಟು ರೂಪವ ಧರಿಸಿ ಪ್ರತಿಮೆಗಳೊಳಗೆ ಇರೋವನಾಗಿದ್ದಾನೆ. ದಾವ ಪ್ರತಿಮೆಗಳಲ್ಲಿ ಎಂದರೆ, ಅಚಲದಿ–ಚಲಸದೇ ಇರುವ ಪ್ರತಿಮೆಗಳಲ್ಲಿ, ಅಹಿತ–ಅಹಿತವಿಭೂತಿರೂಪದಿಂದ ಇದ್ದಾನೆ. ಈ ಅಹಿತವಿಭೂತಿ ೬ನೇ ಸಂಖ್ಯಾ ವಿಭೂತಿ ಇದರ ಕೂಡಾ ಸೇರಿದ್ದು

೧. ಗೋವು–ಪ್ರಸವಾನಂತರ (ವತ್ಸ ಉಳ್ಳ ಗೋವು)

೨. ಶ್ರೀತುಲಸಿ–ಉತ್ಪತ್ತಿ ನಂತರ ಮಾಸತ್ರಯದ ಮೇಲೆ ಇರತಕ್ಕದ್ದು

೩. ಅಶ್ವತ್ಥ–ವಿವಾಹಾದಿಗಳು ಆದದ್ದು

೪. ಪ್ರತಿಮಾ–ಪ್ರತಿಷ್ಠಾನಂತರ

ದಾರುಮಥನವ ಗೈಯೆ–ಕಾಷ್ಟದಿಂದ ಕಾಷ್ಟವನ್ನು ಮಥಿಸಿದರೆ (ಮಥನ ಮಾಡಿದರೆ), ಪಾವಕ ತೋರುವಂತೆ–ಅಗ್ನಿ ಕಣ್ಣಿಗೆ ಕಾಣುವಂತೆ ಎಂದರೆ ಕಾಷ್ಟದಾಗೆ ಅಗ್ನಿ ಅನಭಿವ್ಯಕ್ತನಾಗಿ ಇದ್ದಂತೆ ಪ್ರತಿಮಾದಲ್ಲಿ ಶ್ರೀ ಪರಮಾತ್ಮ ಅನಭಿವ್ಯಕ್ತನಾಗಿ ಇದ್ದಾನೆ. ಕಾಷ್ಟವನ್ನು ನಿಮಿತ್ತಮಾಡಿ ತದ್ಗತ ಅಗ್ನಿಯಲ್ಲಿ ಲಕ್ಷ್ಯವಿಟ್ಟು ಮಥನಮಾಡೋಣದರಿಂದ ಹ್ಯಾಂಗೆ ಅಗ್ನಿ ಪ್ರತ್ಯಕ್ಷನಾಗತಾನೋ ತದ್ವತ್ ಪ್ರತಿಮಾಂತರ್ಗತನಾದ ಶ್ರೀ ಪರಮಾತ್ಮನ ಕಾಣಬೇಕಾದರೆ ಪ್ರತಿಮಾ ನಿಮಿತ್ತವು. ಇದರನ್ನ ನಿಮಿತ್ತಮಾಡಿಕೊಂಡು ವೇದಶಾಸ್ತ್ರಗಳಲ್ಲಿ ಇರುವ ಪರಮಾತ್ಮನ ಗುಣಾನುಸಂಧಾನವೆಂಬ ಮಥನದಿಂದ ಪ್ರತೀಕಾಂತರ್ಗತ

ಶ್ರೀ ದೇವರು ಪ್ರತ್ಯಕ್ಷನಾಗಿ ದರ್ಶನ ಕೊಡತಾನೆ. ಅಸುರರಿಗೆ ಅಹಿತನು. ಭಕ್ತರಿಗೆ ಹಿತನು, ಎಂತ ತಾತ್ಪರ್ಯ. ಪ್ರತೀಕ–ಜಡಪ್ರತೀಕದಲ್ಲಿ, ಸುರರೊಳು–ಚಲಪ್ರತೀಕರಾದ ದೇವತೆಗಳೊಳು ಅಂತರ್ಗತನಾಗಿ ತೋರತಾ ಇರತಾನೆ. ಸುರಶಬ್ದ ಚೇತನಸಾಂಕೇತ ವಾಯಿತು. ಈ ಚೇತನ ಉಪಲಕ್ಷಣಯಾ :—(ಚಲಪ್ರತೀಕಗಳು). ೧ನೇ ಪ್ರಥಮ ವಿಭೂತಿಯಾದ ನೀತ ವಿಭೂತಿಗೆ ಅಧಿಷ್ಠಾನಳಾದ ರಮಾದೇವೇರು. ೨ನೇ ದ್ವಿತೀಯ ವಿಭೂತಿಯಾದ ಸಾಧಾರಣ ವಿಭೂತಿಗೆ ಅಧಿಷ್ಠಾನರಾದ ನಿತ್ಯಸಂಸಾರಿಗಳು.

೪ನೇ ವಿಭೂತಿಗೆ ಅಧಿಷ್ಠಾನರಾದವರು, ಅಭ್ಯಾಗತ, ಅತಿಥಿ, ಯತಿಗಳು, ವನಸ್ಥ, ಗೃಹಸ್ಥ, ವಟು, ಯಜಮಾನ, ಸ್ವಜನ, ಪರಜನ

೫ನೇ ವಿಭೂತಿ ನೈಜವಿಭೂತಿ. ಇದಕ್ಕೆ ಅಧಿಷ್ಠಾನರು ಜೀವರ ಸ್ವರೂಪಗಳು

೮ನೇ ವಿಭೂತಿ ವಿಜಾತಿ ವಿಭೂತಿ. ಇದಕ್ಕೆ ಅಧಿಷ್ಠಾನರು ತಮೋಯೋಗ್ಯರು

೯ನೇ ಖಂಡವಿಭೂತಿ. ಇದಕ್ಕೆ ಅಧಿಷ್ಠಾನರು ಅರ್ಜುನಾದಿಗಳು

೧೦ನೇ ವಿಭೂತಿ ಅಖಂಡವಿಭೂತಿ. ಇದಕ್ಕೆ ಅಧಿಷ್ಠಾನರು ಬ್ರಹ್ಮಾದಿ ಋಜುಗಳು. ಈ ಯಾವತ್ತು ಮಂದಿ ಈ ಶ್ಲೋಕಗತ ಸುರಸಾಂಕೇತದಿಂದ ಸರ್ವಚೇತನರು ಗ್ರಾಹ್ಯ ಎಂತ ಅರ್ಥ.

ತತ್ತದಾಕಾರದಲಿ–ಸ್ಥಾವರ ಜಂಗಮ ಪ್ರತೀಕಗಳಲ್ಲಿ ತತ್ತದಾಕಾರದಿಂದ ಇದ್ದಾನೆ. ನೋಳ್ಪರಿಗೆ–ಧ್ಯಾನೋಪಾಸನದಿಂದ ಆರಾಧಿಸುತ ಜ್ಞಾನಚಕ್ಷುಸ್ಸಿನಿಂದ ನೋಡತಕ್ಕವರಿಗೆ ತೋರುತಿಪ್ಪನು–ಪ್ರತಿಮಾಂತರ್ಗತನಾದ ತದಾಕಾರನಾದ ಶ್ರೀ ಪರಮಾತ್ಮ ಪ್ರತಿಮಾಕಾರ ದಂತೆ ದರ್ಶನ ಕೊಡುತಾ ಇರತಾನೆ ಎಂತ ತಾತ್ಪರ್ಯ.

**ಕರಣನಿಯಾಮಕನು ತಾನುಪ ।**
**ಕರಣದೊಳಗೈವತ್ತೆರಡು ಸಾ ।**
**ವಿರದ ಹದಿನಾಲ್ಕಧಿಕ ಶತರೂಪಂಗಳನೆ ಧರಿಸಿ ॥**
**ಇರುತಿಹನು ತದ್ರೂಪನಾಮಗ ।**
**ಳರಿತು ಪೂಜಿಸುತಿಹರ ಪೂಜೆಯು ।**
**ನಿರತ ಕೈಗೊಂಬನು ತೃಷಾರ್ತನು ಜಲವ ಕೊಂಬಂತೆ ॥ ೬ ॥**

ಪ್ರತಿಮಾಂತರ್ಗತ ಇಂದ್ರಿಯಸ್ಥ ರೂಪಗಳ ಹೇಳತಾರೆ.

ಕರಣ–ಜ್ಞಾನೇಂದ್ರಿಯಗಳು ೬. ಅದು ದಾವವೆಂದರೆ ಚಕ್ಷುರಾದಿ ಜ್ಞಾನೇಂದ್ರಿಯ ಗಳು (೫) ಮನಸ್ಸು ೧ ಅಂತು ಆರು, ಉಪಕರಣ–ಉಪಕರಣಗಳು ಐದು (೫), ಪಾಣಿ ಪಾದಾದಿ ಪಂಚಕರ್ಮೇಂದ್ರಿಯಗಳು ೫, ಅಂತು ೧೧. ಜ್ಞಾನೇಂದ್ರಿಯಗಳಿಗೆ, ಕರ್ಮೇಂದ್ರಿಯಗಳು ಸಹಕಾರಿ ಆದ್ದರಿಂದ ಉಪಕರಣ ಎಂತ ಕರ್ಮೇಂದ್ರಿಯಗಳು ಕರಿಸೋದಾಯಿತು. ಆ ಸಹಕಾರಿತ್ವ ಹ್ಯಾಂಗೆಂದರೆ,

## ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳ ಸಹಕಾರಿತ್ವ ವಿವರವನ್ನು ತೋರಿಸುವ ಪಟ್ಟಿ

| | | |
|---|---|---|
| ೧] ೧. ಅಹಂಕಾರ ವೃತ್ತಿ<br>೨. ಪ್ರಾಣವಾಯು<br>೩. ಅನಿರುದ್ಧ ರೂಪೀ ಪರಮಾತ್ಮ<br>೪. ಘ್ರಾಣೇಂದ್ರಿಯ<br>೫. ಗಂಧತನ್ಮಾತ್ರ | ಗಂಧ ಗ್ರಹಣ<br>ವಿಷಯಲಯ<br>ಯಾವತ್ತು ಅಭಿಮಾನಿಯ ಪರ | ಇಷ್ಟರಿಂದ ಸಹಿತವಾಗಿ ಅನಿರುದ್ಧ ರೂಪಿ ಪರಮಾತ್ಮ ಕರ್ಮೇಂದ್ರಿಯವಾದ ಉಪಸ್ಥ ತತ್ವದಲ್ಲಿ ಲಯ ಐದಿ ಹಾಂಗೆ ಪೃಥಿವೀ ಸಾಂಕೇತವಾದ ಅನ್ನಮಯ ಕೋಶದಲ್ಲಿ ಲಯ ಐದತದೆ, ಆಗ್ಗೆ ಗಂಧಜ್ಞಾನ ನಾಸಿಕೇಂದ್ರಿಯಕ್ಕೆ ಆಗತದೆ. ಈ ಕಾರಣದಿಂದ ಕರಣಶಬ್ದ ಜ್ಞಾನೇಂದ್ರಿಯಗಳಿಗೂ, ಉಪಕರಣ ಕರ್ಮೇಂದ್ರಿಯಗಳಿಗೂ ಬರೋದಾಯಿತು. ಇದೇ ಪ್ರಕಾರ ಜ್ಞಾನೇಂದ್ರಿಯಗಳು ಯಾವತ್ತಕ್ಕೂ ಗ್ರಾಹ್ಯ. |

| | | |
|---|---|---|
| ೨] ೧. ರಸ<br>೨. ಚಿತ್ತ<br>೩. ಅಪಾನವಾಯು<br>೪. ಜಿಹ್ವೇಂದ್ರಿಯ<br>೫. ಪ್ರದ್ಯುಮ್ನ | ರಸಗ್ರಹಣ ವಿಷಯ ಯಾವತ್ತು ಅಭಿಮಾನಿ ದೇವತಾಪರ | ಇಷ್ಟರಿಂದ ಸಹಿತವಾಗಿ ಗುಹ್ಯೇಂದ್ರಿಯದಲ್ಲಿ ಲಯ ಐದಿ ಪ್ರಾಣಮಯ ಸಾಂಕೇತವಾದ ಅಪ್‌ಕೋಶದಲ್ಲಿ ಲಯ ಐದೋದಾಗತದೆ. ಆಗ್ಗೆ ರಸಜ್ಞಾನ ಜಿಹ್ವೇಂದ್ರಿಯಕ್ಕೆ ಆಗತದೆ. |

| | | |
|---|---|---|
| ೩] ೧. ರೂಪ<br>೨. ಬುದ್ಧಿ<br>೩. ವ್ಯಾನವಾಯು<br>೪. ಸಂಕರ್ಷಣ<br>೫. ಚಕ್ಷುರಿಂದ್ರಿಯ | ರೂಪಗ್ರಹಣ ವಿಷಯ ಯಾವತ್ತು ಅಭಿಮಾನಿ ದೇವತಾಪರ | ಇಷ್ಟರಿಂದ ಸಹಿತವಾಗಿ ಪಾದೇಂದ್ರಿಯದಲ್ಲಿ ಲಯ ಐದಿ ಮನೋಮಯಕೋಶವಾದ ತೇಜಃಕೋಶದಲ್ಲಿ ಲಯ ಐದತದೆ. ಆಗ್ಗೆ ರೂಪ ವಿಷಯ ಚಕ್ಷುರಿಂದ್ರಿಯಕ್ಕೆ ಜ್ಞಾತವಾಗತದೆ. |

| | | |
|---|---|---|
| ೪] ೧. ಸ್ಪರ್ಶ<br>೨. ಮನಸ್ಸು<br>೩. ಉದಾನವಾಯು<br>೪. ವಾಸುದೇವ<br>೫. ತ್ವಗಿಂದ್ರಿಯ | ಸ್ಪರ್ಶಗ್ರಹಣ ವಿಷಯ ಯಾವತ್ತು ಅಭಿಮಾನಿ ದೇವತಾಪರ | ಇಷ್ಟರಿಂದ ಸಹಿತವಾಗಿ ಪಾಣೇಂದ್ರಿಯದಲ್ಲಿ ಲಯ ಐದಿ ವಿಜ್ಞಾನಮಯಕೋಶವಾದ ವಾಯುಕೋಶದಲ್ಲಿ ಲಯ ಐದೋದಾಗತದೆ. ಆಗ್ಗೆ ಶೀತೋಷ್ಣ ಮೃದು ಕಠಿಣ ತ್ವಗಿಂದ್ರಿಯಕ್ಕೆ ಜ್ಞಾತವಾಗತದೆ. |

| | | |
|---|---|---|
| ೫] ೧. ಶಬ್ದ<br>೨. ಅಂತಃಕರಣ<br>೩. ಸಮಾನವಾಯು<br>೪. ನಾರಾಯಣ<br>೫. ಶ್ರೋತ್ರೇಂದ್ರಿಯ | ಶಬ್ದಗ್ರಹಣ ವಿಷಯ ಯಾವತ್ತು ಅಭಿಮಾನಿ ದೇವತಾಪರ | ಇಷ್ಟರಿಂದ ಸಹಿತವಾಗಿ ವಾಗೀಂದ್ರಿಯದಲ್ಲಿ ಲಯ ಐದಿ ಆನಂದಮಯಕೋಶಸಾಂಕೇತ ವಾದ ಆಕಾಶದಲ್ಲಿ ಲಯ ಐದತದೆ. ಆಗ್ಗೆ ಶಬ್ದ ವಿಷಯ ಶ್ರವಣೇಂದ್ರಿಯಕ್ಕೆ ಜ್ಞಾತವಾಗತದೆ. |

| | | | | | |
|---|---|---|---|---|---|
| ಸಂಕರ್ಷಣ | ಅಹಂಕಾರ | ಚಿತ್ತ | ಬುದ್ಧಿ | ಮನಸ್ಸು | ಅಂತಃಕರಣ<br>ಆಕಾಶ |
| | ಪ್ರಾಣವಾಯು | ಅಪಾನ | ವ್ಯಾನ | ಉದಾನ<br>ವಾಯು | ಸಮಾನ |
| ಪ್ರದ್ಯುಮ್ನ | ಘ್ರಾಣೇಂದ್ರಿಯ | ಜಿಹ್ವೆ | ತೇಜ<br>ಚಕ್ಷುರಿಂದ್ರಿಯ | ತ್ವಗಿಂದ್ರಿಯ | ಶ್ರೋತ್ರ |
| | ಗಂಧ | ಅಪ್ಪುರಸ<br>ರಸ | ರೂಪ | ಸ್ಪರ್ಶ | ಶಬ್ದ |
| ಅನಿರುದ್ಧ | ಪೃಥಿವೀ<br>ಉಪಸ್ಥ | ವಾಯು | ಪಾದ | ಪಾಣಿ | ವಾಕ್ |

ಮನೋವೃತ್ತಿಗಳು ಐದಕ್ಕೆ ಸಂಕರ್ಷಣ, ಜ್ಞಾನೇಂದ್ರಿಯಗಳು ಐದಕ್ಕೆ ಪ್ರದ್ಯುಮ್ನ, ಕರ್ಮೇಂದ್ರಿಯಗಳು ಐದಕ್ಕೆ ಅನಿರುದ್ಧ. ಜ್ಞಾನೇಂದ್ರಿಯಗಳ ವ್ಯಾಪಾರದಂತೆ ಕರ್ಮೇಂದ್ರಿಯಗಳ ವ್ಯಾಪಾರವೂ, ಉಕ್ತಕ್ರಮದಿಂದ ತಿಳಿಯಬೇಕು. ಜ್ಞಾನೇಂದ್ರಿಯಗಳಿಗೆ ಕರ್ಮೇಂದ್ರಿಯಗಳು ಹ್ಯಾಂಗೆ ಉಪಕರಣಗಳೋ ತದ್ವತ್ ಕರ್ಮೇಂದ್ರಿಯಗಳಿಗೆ ಜ್ಞಾನೇಂದ್ರಿಯಗಳು ಉಪಕರಣಗಳೆಂತಲೇ ಕರಿಸುತ್ತವೆ. ಮತ್ತು ದೇಹವಿವಕ್ಷಯಾ ಏಕಾದಶೇಂದ್ರಿಯಗಳು ದೇಹಕ್ಕೆ ಉಪಕರಣಗಳೆಂತಲೇ ಕರಿಸುತ್ತವೆ. 'ಉಪ' ಸಮೀಪ ಇತಿ ಅರ್ಥಃ. ಒಳಗೆ–ಏಕಾದಶೇಂದ್ರಿಯಗಳ ಒಳಗೆ, ತಾ ನಿಯಾಮಕನು–ಬಿಂಬರೂಪಿ ಯಾದ ತಾನು ದೇಹಗತ ಇಂದ್ರಿಯನಿಯಾಮಕನು ಆಗಿ ಇರತಕ್ಕ ಶ್ರೀ ಪರಮಾತ್ಮನೇ ಪ್ರತಿಮಾಗತ ಇಂದ್ರಿಯಗಳಲ್ಲಿ ಇರೋವನಾಗಿದ್ದಾನೆ. ಉ–೪, ಪ–೧, ಕ–೧, ರ–೨, ಣ–೫, ಅಕ್ಷರಸಂಖ್ಯಾದಿಂದ ಲೆಕ್ಕ ಬಲದಿಂದ ಎಡಕ್ಕೆ ೫೨೧೧೪ ಆಯಿತು. ಅಂದರೆ ಐವತ್ತೆರಡುಸಾವಿರದ ಒಂದುನೂರ ಹದಿನಾಲ್ಕು. ಐವತ್ತೆರಡುಸಾವಿರದ ಹದಿನಾಲ್ಕಧಿಕಶತ ರೂಪಗಳನೆ ಧರಿಸಿ–೫೨೧೧೪ ರೂಪಗಳೆನ್ನ ಧರಿಸಿ, ಇರುತಿಹನು–ಏಕಾದಶೇಂದ್ರಿಯಗಳಲ್ಲಿ

ಪ್ರತಿ ಪ್ರತಿ ಇಂದ್ರಿಯಗಳಲ್ಲಿ ಪೂರ್ವೋಕ್ತಸಂಖ್ಯಾರೂಪಗಳಿಂದ ಪ್ರತಿಮಾದಲ್ಲಿ ಇರೋವನಾಗಿದ್ದಾನೆ. ತದ್ರೂಪ_ ತತ್_ಆ ಪ್ರತಿಮಾದಲ್ಲಿ, ಪ್ರತಿಮಾ ಎಂಬ ಅಕ್ಷರ ಸಾಂಕೇತದಿಂದ ಆಗೋ ಭಗವದ್ರೂಪಗಳು, ಪ್ರ_೩, ತಿ_೧, ಮಾ_೫ ಅಂದರೆ ೫೧೩ ರೂಪಗಳು. ರೂಪ_ಪೂರ್ವೋಕ್ತಪ್ರಕಾರ ಆಗತಕ್ಕ ರೂಪಗಳು ೫,೭೩,೨೫೪ ಅಂದರೆ ಐದು ಲಕ್ಷದ ಎಪ್ಪತ್ತುಮೂರು ಸಾವಿರದ ಇನ್ನೂರಐವತ್ತನಾಲ್ಕು ರೂಪಗಳು. ಇವಷ್ಟು ಪ್ರತಿಮಾಗತ ರೂಪಗಳು. ಇದು ಹ್ಯಾಂಗೆಂದರೆ, ಒಂದೊಂದು ಇಂದ್ರಿಯದಲ್ಲಿ ಇಂದ್ರಿಯಗಳು ೨೧, ಈ ಹನ್ನೊಂದರಿಂದ ಉಪಕರಣಸಾಂಕೇತವಾದ ರೂಪಗಳಾದ ಮೇಲೆ ಹೇಳಿದ ೫೨೧೧೪ ರೂಪಗಳನ್ನ ೧೧ರಿಂದ ಗುಣಿಸಿದರೆ ೫೭೩೨೫೪ ಆಗತವೆ. ಇವಷ್ಟೂ ಪ್ರತಿಮಾಗತ ರೂಪಗಳು. ನಾಮಗಳಂತು_ಪೂರ್ವೋಕ್ತರೂಪಗಳಿಗೆ ಅಕ್ಷರಸಾಂಕೇತದಿಂದ ಆಗತಕ್ಕ ಮಾತೃಕಾನ್ಯಾಸರೀತ್ಯಾ ಅಜಾದಿನಾಮಗಳನ್ನು ಅರಿತು, ಪೂಜಿಸುತಿಹರ_ಪ್ರತಿಮಾಂತರ್ಗತ ಪೂರ್ವೋಕ್ತರೂಪಗಳ ಸಹಿತ ಬಿಂಬನ್ನ ಆವಾಹನಮಾಡಿ ಅನುಸಂಧಾನದಿಂದ ಪೂಜೆ ಮಾಡುವಂಥವರ, ಪೂಜೆಯ_ಪೂಜಾವನ್ನು, ನಿರುತ ಕೈಕೊಂಬನು_ನಿರಂತರ ಸ್ವೀಕಾರ ಮಾಡತಾನೆ. ಹ್ಯಾಂಗೆಂದರೆ, ತೃಷಾರ್ತನು_ಅತಿದಾಹದಿಂದ ಆರ್ತನಾದವನು, ಜಲವ ಕೊಂಬಂತೆ_ಜಲವನ್ನು ಅತ್ಯಾಸಕ್ತಿಯಿಂದ ಅತಿ ತೀವ್ರವಾಗಿ ಹ್ಯಾಂಗೆ ಪಾನಮಾಡುತಾನೋ ತದ್ವತ್ ಪೂರ್ವೋಕ್ತಪ್ರಕಾರ ಚಿಂತನಾಪೂರ್ವಕ ಮಾಡಿದಂಥಾ ಪೂಜೆಯನ್ನ ಸ್ವೀಕಾರ ಮಾಡತಾನೆ ಎಂತ ತಾತ್ಪರ್ಯ.

**ಬಿಂಬರೂಪನು ಈ ತೆರದಿ ಜಡ ।**
**ಪೊಂಬಸುರ ಮೊದಲಾದ ಸುರರೊಳ ।**
**ಗಿಂಬುಗೊಂಡಿಹನೆಂದರಿದು ಧರ್ಮಾರ್ಥಕಾಮುಗಳ ॥**
**ಹಂಬಲಿಸದನುದಿನದಿ ವಿಶ್ವಕು ।**
**ಟುಂಬಿ ಕೊಟ್ಟ ಕಣಾನ್ನ ಕುತ್ಸಿತ ।**
**ಕಂಬಳಿಯೆ ಸೌಭಾಗ್ಯವೆಂದವನಂಘ್ರಿಗಳ ಭಜಿಸು ॥ ೭ ॥**

ನಿಷ್ಕಾಮುಕನಾಗಿ ಶ್ರೀ ಪರಮಾತ್ಮನ್ನ ಪೂಜಿಸಬೇಕೆಂತ ಹೇಳತಾರೆ.

ಬಿಂಬರೂಪನು_ಸ್ವದೇಹಾಂತರ್ಗತನಾದ ಶ್ರೀ ಬಿಂಬರೂಪಿ ಪರಮಾತ್ಮನು, ಈ ತೆರದಿ_ಈ ಪೂರ್ವೋಕ್ತಪ್ರಕಾರ ರೂಪಗಳಿಂದ, ಜಡ_ಜಡಪ್ರತಿಮಾದಲ್ಲಿ, ಚೇತನ ಪ್ರತಿಮಾದಲ್ಲಿ, ಪೊಂಬಸುರ ಮೊದಲಾದ_ಬ್ರಹ್ಮದೇವರೇ ಮೊದಲಾದ, ಸುರರೊಳಗೆ_ ತತ್ವಾಭಿಮಾನಿ ದೇವತೆಗಳಲ್ಲಿ, ಇಂಬುಗೊಂಡಿಹನೆಂದು_ಆಶ್ರಯಮಾಡಿಕೊಂಡು ಇದ್ದಾನೆ ಎಂದು (ಎಂದರೆ ಚಲಾಚಲ ಅಧಿಷ್ಠಾನಗಳಲ್ಲಿ ದೇವತಾಗೋಳಕಾಂತರ್ಗತನಾಗಿ ಇದ್ದಾನೆ ಎಂತ ತಾತ್ಪರ್ಯ). ಅರಿದು_ಅರಿತವನಾಗಿ ಎಂದರೆ ಅಧಿಭೂತ ಪರಿದೃಶ್ಯಮಾನ ಅಧಿಷ್ಠಾನ, ಅಧಿದೈವತಾಂತರ್ಗತ ದೇವತೆಗಳು ಅಧ್ಯಾತ್ಮ ತದಂತರ್ಗತ ಶ್ರೀ ಪರಮಾತ್ಮನೆಂದು ತಿಳಿದು ಶ್ರೀ ಪರಮಾತ್ಮನ್ನ ಸ್ವದೇಹದಲ್ಲಿ ಪ್ರತಿಮಾದಲ್ಲಿ ಪೂಜಾ ಮಾಡತಾ, ಧರ್ಮಾರ್ಥ

ಕಾಮುಗಳ ಹಂಬಲಿಸದೆ_ಧರ್ಮಲೋಕಸಂಬಂಧವಾದ, ಪ್ರಾಕೃತವಾದ ಸಕಾಮಧರ್ಮ ಗಳೂ, ಅರ್ಥ_ಪ್ರಾಕೃತದ್ರವ್ಯಗಳ ಪ್ರಯೋಜನಗಳ, ಕಾಮ_ಫಲಾಪೇಕ್ಷೆ ಕಾಮಗಳ, ಹಂಬಲಿಸದೆ_ಅಪೇಕ್ಷಿಸದೆ, ಶ್ರೀಶಗೆ ಪ್ರೀತಿಪರವಾದ ಧರ್ಮಾರ್ಥಕಾಮಗಳೇನು, ಹಾಂಗೆ ಮೋಕ್ಷ ಎಂದರೆ ಅಜ್ಞಾನಪರಿಹಾರಪೂರ್ವಕ ಶ್ರೀ ದೇವರ ಅಪರೋಕ್ಷಾಖ್ಯ ಮೋಕ್ಷವನ್ನು ಹಂಬಲಿಸುತ, ಅನುದಿನದಿ_ಪ್ರತಿದಿನದಲ್ಲಿ, ವಿಶ್ವಕುಟುಂಬಿ_ಚರಾಚರ ಜಗತ್ತು ಸಂಸಾರ ವಾಗಿ ಉಳ್ಳ ಶ್ರೀಪರಮಾತ್ಮ, ಕೊಟ್ಟ_ಪೂರ್ವಕರ್ಮಾನುಸಾರ ಕೊಡಲ್ಪಟ್ಟ, ಕಣಾನ್ನ_ ನುಚ್ಚಿನ ಅನ್ನವೇನು, ಕುತ್ಸಿತ ಕಂಬಳಿಯ_ಹರಕುಕಂಬಳಿಯ ಇಂಥಾ ದಾರಿದ್ರ್ಯವನ್ನು ಕೊಟ್ಟ ಕಾಲಕ್ಕೂ, ಸೌಭಾಗ್ಯವೆಂದು_ಇವುಗಳೇವೇ ಅತಿಶಯವಾದ ಐಶ್ವರ್ಯವೆಂದು ತಿಳಿದವನಾಗಿ ಸಕಾಮುಕನಾಗದೇ, ನಿಷ್ಕಾಮುಕದಿಂದ, ಅವನಂಘ್ರಿಗಳ_ಹೃದಯಾಕಾಶ ಗತ ಬಿಂಬರೂಪಿ ಪರಮಾತ್ಮನ ಅಪರೋಕ್ಷ ಕಾಮನಾ ಮಾಡಿ ಅವನ ಪಾದದ್ವಯಗಳ, ಭಜಿಸು_ಏಕಾದಶೇಂದ್ರಿಯಗಳಿಂದ ಸೇವಾ ಮಾಡೋವನಾಗು ಎಂತ ತಾತ್ಪರ್ಯ.

**ತಾ||** ಹೃದಯಾಂತರ್ಗತ ಬಿಂಬರೂಪಿ ಪರಮಾತ್ಮನು ಚೇತನಾಚೇತನ ಪ್ರತಿಮೆ ಗಳಲ್ಲಿಯೂ, ಬ್ರಹ್ಮಾದಿ ದೇವತೆಗಳಲ್ಲಿಯೂ, ತತ್ವಾಭಿಮಾನಿ ದೇವತೆಗಳಲ್ಲಿಯೂ ಚಲಾ ಚಲ ಅಧಿಷ್ಠಾನದೇವತಾ ಗೋಳಕಾಂತರ್ಗತನಾಗಿ ಪೂರ್ವೋಕ್ತಪ್ರಕಾರ ಸಮಸ್ತಪ್ರಪಂಚ ದಲ್ಲಿ ಅನೇಕ ಸಂಖ್ಯಾಕಗಳಾದ ಭಗವದ್ರೂಪಗಳನ್ನ ಧರಿಸಿ ಆಶ್ರಯಮಾಡಿಕೊಂಡು ಇರು ತ್ತಾನೆ ಎಂತ ಚಿಂತಿಸುತ್ತಾ ಪ್ರಾಕೃತವಾದ ಧರ್ಮಾರ್ಥಕಾಮಗಳನ್ನು ಅಪೇಕ್ಷಿಸದೇ ನಿಷ್ಕಾಮುಕನಾಗಿ ಪ್ರಾಚೀನಕರ್ಮಾನುಸಾರ ಎಂಥಾ ದಾರಿದ್ರ್ಯವನ್ನು ಕೊಟ್ಟಾಗ್ಯೂ ಅದೇ ಸೌಭಾಗ್ಯವೆಂದು ತಿಳಿದು ಹೃದಯಾಕಾಶಗತ ಶ್ರೀ ಬಿಂಬರೂಪಿ ಪರಮಾತ್ಮನ ಅಪರೋಕ್ಷ ಕಾಮನಾ ಮಾಡಿ ಏಕಾದಶೇಂದ್ರಿಯಗಳಿಂದ ಅವನ ಪಾದದ್ವಯಗಳ ಸೇವಾ ಮಾಡೋವನಾಗು.

**ವಿಶೇಷಾರ್ಥ :–** ಅಮುಕ್ತದಶಾದಲ್ಲಿ ನುಚ್ಚನ್ನಸದೃಶವಾದ ಖಂಡಜ್ಞಾನವೂ, ಛಿದ್ರಕಂಬಳಿಗೆ ಸದೃಶವಾದ ಛಿದ್ರಭಕುತಿಯೂ ಕೊಡತಾನೆ. ಅಖಂಡಜ್ಞಾನ, ಅಖಂಡ ಭಕ್ತಿ ಕೊಡೋದಿಲ್ಲ. ಇಂಥಾ ಜ್ಞಾನಭಕುತಿಗಳೇ ಸೌಭಾಗ್ಯಸಾಂಕೇತವಾದ ಸ್ವರೂಪಾ ನಂದ ಭೋಗಕ್ಕೆ ಕಾರಣವಾದ ಅತಿಶಯಭಾಗ್ಯವೆಂದು ಶ್ರೀ ಪರಮಾತ್ಮನ್ನ ಭಜಿಸಬೇಕು ಎಂತ ತಾತ್ಪರ್ಯ.

**ವಾರಿಯೊಳಗಿಪ್ಪತ್ತನಾಲಕು |**
**ಮೂರೆರಡು ಸಾವಿರದ ಮೇಲ್ ಮು |**
**ನ್ನೂರ ಹದಿನೇಳೆನಿಪ ರೂಪವು ಶ್ರೀತುಳಸಿದಳದಿ |**
**ನೂರ ಅರವತ್ತೊಂದು ಪುಷ್ಪದಿ |**
**ಮೂರಧಿಕದಶ ದೀಪದೊಳು ನಾ |**
**ನೂರುಮೂರು ಸುಮೂರ್ತಿಗಳು ಗಂಧದೊಳಗಿರುತಿಹವು || ೮ ||**

ಬಾಹ್ಯ ಜಡ ಪ್ರತಿಮಾ, ಹೃದಯಾಕಾಶಗತ ಮಾನಸಪೂಜಾ ಪ್ರತಿಮಾ, ಈ ಉಭಯ ಪ್ರತಿಮಾಗಳ ಪೂಜಾ ಮಾಡತಕ್ಕ ಪೂಜಾಸಾಧನದ್ರವ್ಯಗತ ಭಗವದ್ರೂಪಗಳ ಹೇಳತಾರೆ.

ವಾರಿಯೊಳಗೆ–ಅಭಿಷೇಕ ಮಾಡತಕ್ಕ ಉದಕದೊಳಗೆ, ಇಪ್ಪತ್ತುನಾಲ್ಕು–ವಾರಿ ಎನತಕ್ಕ ಅಕ್ಷರಕ್ಕೆ ಆಗತಕ್ಕ ಭಗವದ್ರೂಪಗಳು ೨೪. ವಾ–೪, ರಿ–೨ ಬಲದಿಂದ ಎಡಕ್ಕೆ ೨೪ ರೂಪಗಳು. (ಲೆಕ್ಕ ಮಾಡತಕ್ಕ ಕ್ರಮು), ಮೂರೆರಡು ಸಾವಿರದ ಮೇಲೆ–(೩೦೦೦) ಮೂರು ಸಾವಿರದ, ಎರಡುಸಾವಿರದ ಮೇಲೆ–(೨೦೦೦) ಎರಡುಸಾವಿರದ, ಅಂತು ಐದು ಸಾವಿರದ (೫೦೦೦) ಮೇಲೆ, ಮುನ್ನೂರಹದಿನೇಳೆನಿಸು–(೩೧೭) ಮುನ್ನೂರಹದಿನೇಳು, ಅಂತು (೫೩೧೭) ಐದುಸಾವಿರದ ಮುನ್ನೂರ ಹದಿನೇಳು ಎನತಕ್ಕ, ರೂಪವು–ಶ್ರೀ ಪರಮಾತ್ಮನ ರೂಪಗಳು, ಶ್ರೀತುಳಸಿಪಳದಿ–ರಮಾಸನ್ನಿಧಾನಯುಕ್ತವಾದ ಒಂದೊಂದು ಶ್ರೀತುಳಸೀದಳದಲ್ಲಿ ಪೂರ್ವೋಕ್ತ೫೩೧೭ ಭಗವದ್ರೂಪಗಳು ಆಗತದೆ. ನೂರಅರವತ್ತೊಂದು (೧೬೧) ಭಗವದ್ರೂಪಗಳು, ಪುಷ್ಪದಿ–ಭಗವತ್ಪೂಜಾರ್ಹವಾದ ಹುವ್ವುಗಳೊಳಗೆ (ಪು–೧, ಷ–೬, ಪ–೧=೧೬೧ ರೂಪಗಳು), ದಶಮೂರಧಿಕ ದೀಪದೊಳು– ದಶಮೂರಧಿಕ– (೧೩) ಹದಿಮೂರು ಅಂತ ಅರ್ಥ. ದೀಪಮೊಳು–ದೇವರ ದೀಪಗಳೊಳಗೆ, (ದೀ–೩, ಪ–೧ =೧೩ ರೂಪಗಳು), ನಾನೂರುಮೂರು ಗಂಧದೊಳು– ಗಂ–೩೦, ಧ–೪=೪೦೩ ಬಲ ದಿಂದ ಎಡಕ್ಕೆ ಭಗವದ್ರೂಪಗಳು ಅಂದರೆ, ಪ್ರತಿಯೊಂದು ಗಂಧದ ಉಂಡೆಯಲ್ಲಿ ಅಷ್ಟು ರೂಪಗಳು, ಮೂರ್ತಿಗಳು–ಪೂರ್ವೋಕ್ತ ಭಗವನ್ಮೂರ್ತಿಗಳು, ಇರುತಿಹವು–ಇರೋ ದಾಗಿ ಅದೆಯೆಂದು, ಸು–ಸಮೀಚೀನವಾದ ಅನುಸಂಧಾನದಿಂದ ತಿಳಿದು ಅರ್ಚಿಸಬೇಕು ಎಂತ ತಾತ್ಪರ್ಯ.

**ತಾ||** ಇಷ್ಟು ರೂಪಗಳು ತಿಳಿಯೋಣದರಿಂದ ಏನು ಪ್ರಯೋಜನವೆಂದರೆ :– ಪ್ರತಿಮಾಂತರ್ಗತ ಪರಮಾತ್ಮಗೆ ಪೂಜಾದ್ರವ್ಯಾಂತರ್ಗತ ಪರಮಾತ್ಮಗೆ ಪರಸ್ಪರ ಐಕ್ಯ ಚಿಂತನಾರೂಪದಿಂದ ಪೂಜಾ ಮಾಡಬೇಕು. ಇದೇವೇ ಸುಪೂಜಾ. ಹೀಂಗೆ ಅನುಸಂಧಾನಪೂರ್ವಕ ಪೂಜಾ ಮಾಡಿದರೆ ಸ್ವಾಮಿ ತನ್ನ ಸ್ವಾಖ್ಯವನ್ನು ಸ್ವೀಕಾರ ಮಾಡ ತಾನೆ. ತದನ್ಯವಾದದ್ದು ಸ್ವೀಕಾರ ಮಾಡೋದಿಲ್ಲ. ಇದೇ ಪ್ರಕಾರ ನಿವೇದನದ್ರವ್ಯ ಗಳಲ್ಲಿಯೂ ತದಂತರ್ಗತ ಪರಮಾತ್ಮನ ರೂಪಗಳಿಗೂ ಪ್ರತಿಮಾಂತರ್ಗತ ಪರಮಾತ್ಮಗೂ ಐಕ್ಯ ಚಿಂತನಿ ಮಾಡಿ ಸಮರ್ಪಿಸಿದರೆ ಹೊರ್ತು, ಅನುಸಂಧಾನವಿಲ್ಲದೇ ನೈವೇದ್ಯ ತೋರಿ ಸುವುದು ಉಪಯೋಗವಿಲ್ಲ ಎಂತ ತಾತ್ಪರ್ಯ.

**ಅಷ್ಟದಳ ಸದ್ಧೃದಯ ಕಮಲಾ ।**
**ಧಿಷ್ಠಿತನು ತಾನಾಗಿ ಸರ್ವೋ ।**
**ತ್ಕೃಷ್ಟಮಹಿಮನು ದಳಗಳಲಿ ಸಂಚರಿಸುತೊಳಗಿದ್ದು ॥**

**ದುಷ್ಟರಿಗೆ ದುರ್ಬುದ್ಧಿ ಕರ್ಮ ವಿ ।**
**ಶಿಷ್ಟರಿಗೆ ಸುಜ್ಞಾನ ಧರ್ಮಸಂ ।**
**ಪುಷ್ಟಿಗೈಸುತ ಸಂತೈಪ ನಿರ್ದುಷ್ಟ ಸುಖಪೂರ್ಣ ॥ ೯ ॥**

ಕಾಲಕಾಲಕ್ಕೂ ಸುಬುದ್ಧಿ ದುರ್ಬುದ್ಧಿಗಳು ಹುಟ್ಟತಕ್ಕ ಕಾರಣವನ್ನು ಹೇಳುತಾರೆ.

ಸತ್—ನಿರ್ದುಷ್ಟವಾದ, ಸರ್ವೋತ್ಕೃಷ್ಟಮಹಿಮನು— ಸರ್ವ—ರಮಾಬ್ರಹ್ಮಾದಿಗಳ ಮಹಿಮಾಕಿಂತಲೂ, ಉತ್ಕೃಷ್ಟ—ಅತಿಶಯವಾದ, ಮಹಿಮನು—ಮಹಿಮೋಪೇತನಾದ ಮೂಲೇಶ ನಾಮಕ ಶ್ರೀ ಪರಮಾತ್ಮನು, ಹೃದಯ—ಮನೋ ಇಂದ್ರಿಯಕ್ಕೆ ಗೋಳಕ ವಾದುದು ಹೃದಯ, ಹೃದಯಗೋಳಕದಲ್ಲಿ ಇರುವ, ಅಷ್ಟದಳ—ಎಂಟು ದಳಗಳಿಂದ ಯುಕ್ತವಾದ, ಕಮಲ—ಪದ್ಮ ಇರೋದಾಗಿ ಅದೆ. ಈ ಕಮಲದಲ್ಲಿ, ಅಧಿಷ್ಠಿತನು— ಮೂಲೇಶನಾಮಕ ಪರಮಾತ್ಮ ಆವಾಸನಾಗಿ ಇದ್ದಾನೆ. ಈ ಮೂಲೇಶ ಕಮಲಕರ್ಣಿಕಾ ಮೂಲಭಾಗದಲ್ಲಿ ಆವಾಸನಾಗಿ ಇರತಕ್ಕವನಾದ್ದರಿಂದ ಮೂಲೇಶ ಎಂತ ನಾಮ. ಅಂಗುಷ್ಠಾಗ್ರಪರಿಮಿತನಾದವ. ಅಷ್ಟಬಾಹುಯುಕ್ತನಾದವ. ಇವ ನಾರಾಯಣ ಎಂತ ಕರಿಸ ತಾನೆ. ಈ ಮೂಲೇಶನ ಪಾದಮೂಲದಲ್ಲಿ ಅನಿರುದ್ಧದೇಹದಿಂದ ಸಹಿತನಾದ ಜೀವ. ಈ ಪ್ರಕಾರ ಪರಂಪರಾ ಸಂಬಂಧದಿಂದ ಅವಿಚ್ಛಿನ್ನರಾಗಿ ಇದ್ದಾರೆ. ಇಂಥಾ ಮೂಲೇಶ ವಿಮಾನಾರೂಢನಾಗಿ, ತಾನಾಗಿ, ಒಳಗಿದ್ದು—ತಾನೇ ತ್ರಿವಿಧಜೀವರ ಸ್ಥೂಲದೇಹದ ಒಳಗೆ ಇದ್ದು, ದಳಗಳಲಿ ಸಂಚರಿಸುತ—ಪೂರ್ವೋಕ್ತ ಕಮಲದಳಗಳಲ್ಲಿ ಪ್ರದಕ್ಷಿಣಾಕಾರದಿಂದ ಜೀವನಿಂದ ಸಹಿತನಾಗಿ ಸಂಚಾರಮಾಡುತಾ, ದುಷ್ಟರಿಗೆ—ಮಿಥ್ಯಾಜ್ಞಾನ, ಮಿಶ್ರಜ್ಞಾನ ಸ್ವರೂಪಸ್ವಭಾವ ಉಳ್ಳ ಭಗವದ್ದ್ವೇಷಿಗಳಾದ ದುಮಾರ್ಗರಿಗೆ, ದುರ್ಬುದ್ಧಿ— ಶ್ರೀಪರಮಾತ್ಮನಲ್ಲಿ, ತದ್ಭಕ್ತರಲ್ಲಿ ದ್ವೇಷಾದಿಗಳು ಮಾಡತಕ್ಕ ದುರ್ಬುದ್ಧಿಗಳು, ಕರ್ಮ ವಿಶಿಷ್ಟರಿಗೆ— ಕರ್ಮ—ವ್ಯಾಪಾರವು ತಾರತಮ್ಯ ಪಂಚಭೇದ ಸತ್ಯವೆಂದು ಸ್ವರೂಪ ಸ್ವಭಾವದಲ್ಲಿ ಮನೋವ್ಯಾಪಾರ ಉಳ್ಳ, ವಿಶಿಷ್ಟರಿಗೆ—ವಿಶೇಷಾಕಾರವಾಗಿ ನಿಷ್ಠರಾದ ಮುಕ್ತಿಯೋಗ್ಯರಿಗೆ, ಸುಜ್ಞಾನ—ಸತ್ಯವಾದ ಸ್ವರೂಪವನ್ನ ಅನುಸರಿಸಿದ ಯೋಗ್ಯವಾದ ತಾರತಮ್ಯ ಪಂಚಭೇದ ಜ್ಞಾನ ಇವುಗಳನ್ನು ಕೊಟ್ಟು, ಧರ್ಮ—ಅವರವರ ಸ್ವರೂಪಾನುಸಾರ ಅವರವರಿಗೆ ಯೋಗ್ಯಗಳಾದ ಧರ್ಮಗಳನ್ನು, ಸಂಪುಷ್ಟಿಗೈಸುತ— ಛಂದಾಗಿ ಬಲ ಮಾಡುತಾ, ಅದರಿಂದ ಅವರವರ ಸಾಧನೆಗಳು ಪೂರ್ಣ ಮಾಡುತಾ, ಸಂತೈಪ—ಆಯಾ ಕರ್ಮಾನುಗುಣ್ಯದಿಂದ ಸಂರಕ್ಷಣೆ ಮಾಡತಾನೆ. ಸ್ಥಿತಿಕಾಲದಲ್ಲಿ ಲಿಂಗ ಭಂಗಾನಂತರ ಅವರವರ ಸ್ವರೂಪಕ್ಕೆ ಅನುಸರಿಸಿ ತ್ರಿವಿಧ ಜೀವರಿಗೆ ತ್ರಿವಿಧ ಸ್ಥಾನದಲ್ಲಿದ್ದು ಸಂರಕ್ಷಣೆ ಮಾಡತಾನೆ. ನಿರ್ದುಷ್ಟ—ಸರ್ವರ ಹೃದಯ ಕಮಲದಲ್ಲಿ ಇದ್ದ ಕಾಲಕ್ಕೂ ಅಸುರರಿಗೆ ಅವರವರ ಹೃದಯಾಕಾಶದಲ್ಲಿ ಪ್ರತ್ಯಕ್ಷನಾಗಿ ದರ್ಶನ ಕೊಡೋದಿಲ್ಲ. ಭಕ್ತರಿಗೆ ಮಾತ್ರ ದರ್ಶನ ಕೊಡತಾನೆ. ಸುಖಪೂರ್ಣ—ಲಿಂಗಭಂಗಾನಂತರ ಮುಕ್ತಿಯೋಗ್ಯರಿಗೆ ಸ್ವರೂಪಗತ ಪೂರ್ಣಸುಖ ಅಭಿವ್ಯಕ್ತ ಮಾಡತಕ್ಕವ. ತದ್ವತ್ ತಮೋಯೋಗ್ಯರಿಗೆ

ಲಿಂಗಭಂಗಾನಂತರ ಸ್ವರೂಪಗತ ಪೂರ್ಣದುಃಖ ಅಭಿವ್ಯಕ್ತಿ ಮಾಡತಕ್ಕವ, ಮತ್ತು ಈ ಮೂಲೇಶ, ಅಸದೃಶವಾದ ಸುಖಪೂರ್ಣನಾದವನು. ಇವನು ದಳಸಂಚಾರದಿಂದ ನಾನಾ ವಿಧ ಕರ್ಮದ ಬುದ್ಧಿಗಳನ್ನ ಕೊಡತಾನೆ. ನಂತರ ಇಂದ್ರಿಯಗತ ಭಗವದ್ರೂಪಗಳು ತತ್ವೇಶರ ದ್ವಾರಾ ಕರ್ಮರೂಪಗಳಾದ ದ್ವಂದ್ವ ವ್ಯಾಪಾರಗಳ ಮಾಡಸತಾನೆ. ಸ್ಥಾವರ ರಾದ ವೃಕ್ಷಾದಿ ಜೀವರಿಗೆ ಬಾಹ್ಯ ಜ್ಞಾನವಿಲ್ಲಾ. ಅವರಿಗೆ ಜಾಗ್ರತಾವಸ್ಥಾ ಇಲ್ಲಾ. ಸ್ವಪ್ನಾವಸ್ಥಾ ಇಲ್ಲಾ. ಆದ್ದರಿಂದ ಅಷ್ಟದಳಗತ ಮೂಲೇಶನ ವ್ಯಾಪಾರ ಈ ಪ್ರಕಾರ ಎಂತ ತಿಳಿದು ಪ್ರತಿಮಾದಲ್ಲಿ ಅನುಸಂಧಾನದಿಂದ ಆವಾಹನ ಮಾಡಿ ಪೂಜಿಸಬೇಕು, ಎಂತ ತಾತ್ಪರ್ಯ.

**ವಿತ್ತದೇಹಾಗಾರ ದಾರಾ ।**
**ಪತ್ಯ ಮಿತ್ರಾದಿಗಳೊಳಗೆ ಗುಣ ।**
**ಚಿತ್ತ ಬುದ್ಧ್ಯಾದಿಂದ್ರಿಯಗಳೊಳು ಜ್ಞಾನಕರ್ಮದೊಳು ॥**
**ತತ್ತದಾಹ್ವಯನಾಗಿ ಕರಿಸುತ ।**
**ಸತ್ಯ ಸಂಕಲ್ಪಾನುಸಾರದಿ ।**
**ನಿತ್ಯದಲಿ ತಾ ಮಾಡಿಪನೆಂದು ಸ್ಮರಿಸುತಿರು ॥ ೧೦ ॥**

ಸರ್ವವ್ಯಾಪಾರವೂ ಶ್ರೀ ಪರಮಾತ್ಮ ಮಾಡಿ ಮಾಡಿಸತಾನೆ ಎಂತ ಹೇಳತಾರೆ.

ವಿತ್ತ–ಸ್ವರ್ಣರಜತಾದಿಗಳಿಂದ ನಿರ್ಮಿತವಾದ ದ್ರವ್ಯಗಳು, ದೇಹ–ಪಂಚಭೂತ ದಿಂದ ನಿರ್ಮಿತವಾದ ಸ್ಥೂಲದೇಹ, ಆಗಾರ–ಮನಿ, ದಾರಾ–ಹೆಂಡತಿ, ಅಪತ್ಯ–ಪುತ್ರರು ಗಳು ಪುತ್ರಿಯರು, ಮಿತ್ರ–ಆಪತ್ಕಾಲದ ಸ್ನೇಹಿತ, ಆದಿಗಳೊಳಗೆ–ಇವರೇ ಮೊದಲಾದ ತ್ರಿವಿಧ ಚೇತನರೊಳಗೆ ಹಾಂಗೆ ಆಯಾ ಚೇತನ ಸ್ಥೂಲದೇಹಗತ, ಗುಣ–ಸತ್ವಾದಿ ಗುಣತ್ರಯಗಳು, ಚಿತ್ತ–ಮನೋವೃತ್ತಿಯಾದ ಚಿತ್ತ, ಬುದ್ಧ್ಯಾದಿ–ಮನೋವೃತ್ತಿಯಾದ ಬುದ್ಧಿ, ಆದಿ ಶಬ್ದದಿಂದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಅಂತಃಕರಣ ಎಂಬ ಐದು ವೃತ್ತಿಗಳು ಗ್ರಾಹ್ಯ. ಇಂದ್ರಿಯಗಳೊಳು–ಗೋಳಕಾಂತರ್ಗತ ಇಂದ್ರಿಯಗಳಾದ ದಶೇಂದ್ರಿಯಗಳೊಳು, ಜ್ಞಾನ–ಜ್ಞಾನೇಂದ್ರಿಯ ಗೋಳಕಗಳು ಐದು, ಕರ್ಮ–ಕರ್ಮೇಂ ದ್ರಿಯ ಗೋಳಕಗಳು ಐದು, ದೊಳು–ಈ ಪೂರ್ವೋಕ್ತ ಯಾವತ್ತರೊಳು, ತತ್ತ ದಾಹ್ವಯನಾಗಿ–ಆಯಾ ಅಧಿಷ್ಠಾನಗಳಿಗೆ ದಾವ ದಾವ ನಾಮಗಳೋ ಆಯಾ ನಾಮ ಗಳಿಂದ ಆಯಾ ಅಂತರ್ಗತನಾಗಿ, ಕರಿಸುತ ಸತ್ಯಸಂಕಲ್ಪಾನುಸಾರದಿ–ಸತ್ಯವಾದ ತನ್ನ ನಾಮದಿಂದ ಕರಿಸುತ, ಅನಾದಿಸಂಕಲ್ಪಾನುಸಾರದಿ ಎಂದರೇ ಜೀವರ ಸೃಷ್ಟಿಸಿದ ನಂತರ ಪ್ರಳಯಾಂತವರೆಗೂ ದಾವ ದಾವ ಜೀವರಿಂದ ದಾವ ದಾವ ಲಕ್ಷಣದಲ್ಲಿ ದಾವ ದಾವ ದೇಶದಲ್ಲಿ ಅನಾದಿಕರ್ಮವನುಸರಿಸಿ ಮಾಡಿಸತಕ್ಕ ಕರ್ಮ ಇಂಥಾದ್ದು ಎಂತ ಸಂಕಲ್ಪ ಮಾಡೋವನಾಗಿ ಇದ್ದಾನೆ, ಇಂಥಾ ಸತ್ಯಸಂಕಲ್ಪಾನುಸಾರ, ನಿತ್ಯದಲಿ–ಪ್ರತಿಕ್ಷಣ ಲವಾದಿಗಳಲ್ಲಿ ಸ್ಥಾವರಜಂಗಮಾದಿಗಳಿಂದ ದಾವ ದಾವ ಕಾರ್ಯಗಳು ಆಗಬೇಕೋ

ಆ ಕಾರ್ಯ, ತಾ ಮಾಡಿ—ಪ್ರಥಮತಃ ತಾನು ಮಾಡಿ, ಮಾಡಿಸನು—ತತ್ವೇಶರ ದ್ವಾರಾ ಜೀವನಿಂದ ದೇಹದ್ವಾರಾ ಮಾಡಿಸತಾನೆ. ಬಿಂಬಕ್ರಿಯಾ ದ್ವಾರಾ ಪ್ರತಿಬಿಂಬಕ್ರಿಯಾ ಎಂತ, ಸ್ಮರಿಸುತಿರು—ಸ್ಮರಣೆ ಮಾಡುತ್ತಿರೋವನಾಗು. ಅನಾದಿಕರ್ಮ ಎಂಬುದು ಈಶ್ವರ ರಚಿತವಲ್ಲ, ಲಿಂಗದೇಹದೋಪಾದಿಯಲ್ಲಿ ಕರ್ಮವೂ ಅನಾದಿ. ಈ ಅನಾದಿ ಲಿಂಗದೇಹ ಈಶ್ವರನಿಂದ ರಚಿತವಲ್ಲ. ಅಸೃಜ್ಯ ಜೀವರಾಶಿಗಳ ಲಿಂಗದೇಹದಲ್ಲಿ ಬೀಜಭೂತವಾಗಿ ಜಡ ಕರ್ಮ ಇದ್ದು ಸೃಷ್ಟಿಕಾಲಕ್ಕೆ ಅಂಕುರವಾಗತದೆ, ಗುಣವೈಷಮ್ಯದಿಂದ ಎಂತ ತಾತ್ಪರ್ಯ.

**ಭಾವದ್ರವ್ಯ ಕ್ರಿಯೆಗಳೆನಿಸುವ ।**
**ಈ ವಿಧಾದ್ವೈತತ್ರಯಂಗಳ ।**
**ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರಿಯದಲೆ ।**
**ತಾವಕನು ತಾನೆಂದು ಪ್ರತಿದಿನ ।**
**ಸೇವಿಸುವ ಭಕ್ತರಿಗೆ ತನ್ನನು ।**
**ಈವ ಕಾವ ಕೃಪಾಳು ಕರಿವರಗೊಲಿದ ತೆರೆದಂತೆ ॥ ೧೧ ॥**

ಅದ್ವೈತತ್ರಯ ಅನುಸಂಧಾನಕ್ರಮ ತಿಳಿಯಬೇಕೆಂದು ಹೇಳತಾರೆ.

ಶ್ರೀ ಭಾಗವತೇ ಸಪ್ತಮಸ್ಕಂದೇ " ಕಾರ್ಯಕಾರಣವಸ್ತ್ವೈಕ್ಯದರ್ಶನಂ ಪಟತಂತುವತ್ । ಅವಸ್ತುತ್ವಾದ್ವಿಕಲ್ಪಸ್ಯ ಭಾವಾದ್ವೈತಂ ತದುಚ್ಯತೇ ॥ ೧ ॥ ಆತ್ಮಾ ಜಾಯಾಸುತಾದೀನಾಮನ್ಯೇಷಾಂ ಸರ್ವದೇಹಿನಾಂ । ಯಚ್ಚಾರ್ಥಕಾಮಯೋರೈಕ್ಯಂ ದ್ರವ್ಯಾದ್ವೈತಂ ತದುಚ್ಯತೇ ॥ ೨ ॥ ಯದ್ಬ್ರಹ್ಮಣಿ ಪರೇ ಸಾಕ್ಷಾತ್ಸರ್ವಕರ್ಮಸಮರ್ಪಣಂ । ಮನೋವಾಕ್ತನುಭಿಃ ಪಾರ್ಥ ಕ್ರಿಯಾದ್ವೈತಂ ತದುಚ್ಯತೇ ॥ ೩ ॥

೧. ಭಾವಾದ್ವೈತ ಯಾವದೆಂದರೆ :— ಮಹದಾದಿ ಕಾರ್ಯಗಳಲ್ಲಿ ಪ್ರಕೃತಿ ತದ್ಗುಣಾಖ್ಯ ಕಾರ್ಯಗಳಲ್ಲಿ ಇದ್ದಂಥಾ ಭಗವದ್ರೂಪಗಳಿಗೆ ಐಕ್ಯಚಿಂತನೆ ಮಾಡೋದೇ ಭಾವಾದ್ವೈತ ಎಂತ ಹೆಸರು.

೨. ದ್ರವ್ಯಾದ್ವೈತವೆಂದರೆ :— ಆತ್ಮ ಜಾಯಾದಿಗಳಲ್ಲಿ ಅರ್ಥಕಾಮಾದಿಗಳಲ್ಲಿ ವಿದ್ಯಮಾನವಾದ ಭಗವದ್ರೂಪಗಳಿಗೆ ಪರಸ್ಪರ ಐಕ್ಯಚಿಂತನೆ. ಇದು ಭಗವದಧೀನ ಎಂತ ತಿಳಿಯೋಣವೇ ದ್ರವ್ಯಾದ್ವೈತ.

೩. ಕ್ರಿಯಾದ್ವೈತವೆಂದರೆ :— ಮನೋವಾಕ್ಕಾಯಗಳಿಂದ ಮಾಡಿದ ಸರ್ವ ಕರ್ಮಗಳಲ್ಲಿ ವಿದ್ಯಮಾನವಾದ ಭಗವದ್ರೂಪಗಳಿಗೆ ಪರಸ್ಪರ ಐಕ್ಯಚಿಂತನ ಅರ್ಪಣವೇ ಕ್ರಿಯಾದ್ವೈತ. ಇವು ಅದ್ವೈತತ್ರಯಗಳು.

ಭಾವ :— ಮಹದಾದಿ ತತ್ವಗಳು. ಇದಕ್ಕೆ ಉಪಾದಾನಕಾರಣಗಳಾದ ಗುಣತ್ರಯಗಳು. ಮೂಲ ಜಡಪ್ರಕೃತಿ ಇದು ಯಾವತ್ತು ಭಾವಗಳು.

ದ್ರವ್ಯ :— ಆತ್ಮ ಜಾಯಾದಿಗಳು, ಅರ್ಥಜಡಗಳು. ಇವು ಯಾವತ್ತು ದ್ರವ್ಯಗಳು.

ಲಿಂಗಭಂಗಾನಂತರ ಸ್ವರೂಪಗತ ಪೂರ್ಣದುಃಖ ಅಭಿವ್ಯಕ್ತಿ ಮಾಡತಕ್ಕವ, ಮತ್ತು ಈ ಮೂಲೇಶ, ಅಸದೃಶವಾದ ಸುಖಪೂರ್ಣನಾದವನು. ಇವನು ದಳಸಂಚಾರದಿಂದ ನಾನಾ ವಿಧ ಕರ್ಮದ ಬುದ್ಧಿಗಳನ್ನ ಕೊಡತಾನೆ. ನಂತರ ಇಂದ್ರಿಯಗತ ಭಗವದ್ರೂಪಗಳು ತತ್ವೇಶರ ದ್ವಾರಾ ಕರ್ಮರೂಪಗಳಾದ ದ್ವಂದ್ವ ವ್ಯಾಪಾರಗಳ ಮಾಡಸತಾನೆ. ಸ್ಥಾವರ ರಾದ ವೃಕ್ಷಾದಿ ಜೀವರಿಗೆ ಬಾಹ್ಯ ಜ್ಞಾನವಿಲ್ಲಾ. ಅವರಿಗೆ ಜಾಗ್ರತಾವಸ್ಥಾ ಇಲ್ಲಾ. ಸ್ವಪ್ನಾವಸ್ಥಾ ಇಲ್ಲಾ. ಆದ್ದರಿಂದ ಅಷ್ಟದಳಗತ ಮೂಲೇಶನ ವ್ಯಾಪಾರ ಈ ಪ್ರಕಾರ ಎಂತ ತಿಳಿದು ಪ್ರತಿಮಾಡಲ್ಲಿ ಅನುಸಂಧಾನದಿಂದ ಆವಾಹನ ಮಾಡಿ ಪೂಜಿಸಬೇಕು, ಎಂತ ತಾತ್ಪರ್ಯ.

**ವಿತ್ತದೇಹಾಗಾರ ದಾರಾ ।**
**ಪತ್ಯ ಮಿತ್ರಾದಿಗಳೊಳಗೆ ಗುಣ ।**
**ಚಿತ್ತ ಬುದ್ಧ್ಯಾದಿಂದ್ರಿಯಗಳೊಳು ಜ್ಞಾನಕರ್ಮದೊಳು ॥**
**ತತ್ತದಾಹ್ವಯನಾಗಿ ಕರಿಸುತ ।**
**ಸತ್ಯ ಸಂಕಲ್ಪಾನುಸಾರದಿ ।**
**ನಿತ್ಯದಲಿ ತಾ ಮಾಡಿಪನೆಂದು ಸ್ಮರಿಸುತಿರು ॥ ೧೦ ॥**

ಸರ್ವವ್ಯಾಪಾರವೂ ಶ್ರೀ ಪರಮಾತ್ಮ ಮಾಡಿ ಮಾಡಿಸತಾನೆ ಎಂತ ಹೇಳತಾರೆ.

ವಿತ್ತ—ಸ್ವರ್ಣರಜತಾದಿಗಳಿಂದ ನಿರ್ಮಿತವಾದ ದ್ರವ್ಯಗಳು, ದೇಹ—ಪಂಚಭೂತ ದಿಂದ ನಿರ್ಮಿತವಾದ ಸ್ಥೂಲದೇಹ, ಆಗಾರ—ಮನಿ, ದಾರಾ—ಹೆಂಡತಿ, ಅಪತ್ಯ—ಪುತ್ರರು ಗಳು ಪುತ್ರಿಯರು, ಮಿತ್ರ—ಆಪತ್ಕಾಲದ ಸ್ನೇಹಿತ, ಆದಿಗಳೊಳಗೆ—ಇವರೇ ಮೊದಲಾದ ತ್ರಿವಿಧ ಚೇತನರೊಳಗೆ ಹಾಂಗೆ ಆಯಾ ಚೇತನ ಸ್ಥೂಲದೇಹಗತ, ಗುಣ—ಸತ್ವಾದಿ ಗುಣತ್ರಯಗಳು, ಚಿತ್ತ—ಮನೋವೃತ್ತಿಯಾದ ಚಿತ್ತ, ಬುದ್ಧ್ಯಾದಿ—ಮನೋವೃತ್ತಿಯಾದ ಬುದ್ಧಿ, ಆದಿ ಶಬ್ದದಿಂದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಅಂತಃಕರಣ ಎಂಬ ಐದು ವೃತ್ತಿಗಳು ಗ್ರಾಹ್ಯ. ಇಂದ್ರಿಯಗಳೊಳು—ಗೋಳಕಾಂತರ್ಗತ ಇಂದ್ರಿಯಗಳಾದ ದಶೇಂದ್ರಿಯಗಳೊಳು, ಜ್ಞಾನ—ಜ್ಞಾನೇಂದ್ರಿಯ ಗೋಳಕಗಳು ಐದು, ಕರ್ಮ—ಕರ್ಮೇಂ ದ್ರಿಯ ಗೋಳಕಗಳು ಐದು, ದೊಳು—ಈ ಪೂರ್ವೋಕ್ತ ಯಾವತ್ತರೊಳು, ತತ್ತ ದಾಹ್ವಯನಾಗಿ—ಆಯಾ ಅಧಿಷ್ಠಾನಗಳಿಗೆ ದಾವ ದಾವ ನಾಮಗಳೋ ಆಯಾ ನಾಮ ಗಳಿಂದ ಆಯಾ ಅಂತರ್ಗತನಾಗಿ, ಕರಿಸುತ ಸತ್ಯಸಂಕಲ್ಪಾನುಸಾರದಿ—ಸತ್ಯವಾದ ತನ್ನ ನಾಮದಿಂದ ಕರಿಸುತ, ಅನಾದಿಸಂಕಲ್ಪಾನುಸಾರದಿ ಎಂದರೇ ಜೀವರ ಸೃಷ್ಟಿಸಿದ ನಂತರ ಪ್ರಳಯಾಂತವರೆಗೂ ದಾವ ದಾವ ಜೀವರಿಂದ ದಾವ ದಾವ ಲಕ್ಷಣದಲ್ಲಿ ದಾವ ದಾವ ದೇಶದಲ್ಲಿ ಅನಾದಿಕರ್ಮವನುಸರಿಸಿ ಮಾಡಿಸತಕ್ಕ ಕರ್ಮ ಇಂಥಾದ್ದು ಎಂತ ಸಂಕಲ್ಪ ಮಾಡೋವನಾಗಿ ಇದ್ದಾನೆ, ಇಂಥಾ ಸತ್ಯಸಂಕಲ್ಪಾನುಸಾರ, ನಿತ್ಯದಲಿ—ಪ್ರತಿಕ್ಷಣ ಲವಾದಿಗಳಲ್ಲಿ ಸ್ಥಾವರಜಂಗಮಾದಿಗಳಿಂದ ದಾವ ದಾವ ಕಾರ್ಯಗಳು ಆಗಬೇಕೋ

ಭಕ್ತರಿಗೆ_ಭಕ್ತಜನರಿಗೆ, ಕೃಪಾಳು ತನ್ನನು ಈವ_ದಯಾಸಮುದ್ರನಾದ ಪರಮಾತ್ಮ ತನ್ನ ರೂಪವನ್ನು ಅಪರೋಕ್ಷದಿಂದ ದರ್ಶನ ಕೊಟ್ಟು, ಕಾವ_ಸಂಕ್ಷಣ ಮಾಡುವ, ಕರಿವರಗೊಲಿದ ತೆರನಂತೆ_ಗಜೇಂದ್ರಗೆ ಒಲಿದೋಪಾದಿಯಲ್ಲಿ ಪ್ರತ್ಯಕ್ಷನಾಗಿ ಸಂರಕ್ಷಣೆ ಮಾಡುತಾನೆ. ಗಜೇಂದ್ರ ದಾವ ಭಾವದಿಂದ ಶ್ರೀ ಪರಮಾತ್ಮನಲ್ಲಿ ಮನಸ್ಸು ಇಟ್ಟನೋ ಆ ಪ್ರಕಾರ ಶ್ರೀ ಪರಮಾತ್ಮನಲ್ಲಿ ಮನಸ್ಸು ಇಡಬೇಕು ಎಂತ ತಾತ್ಪರ್ಯ.

**ಬಾಂದಳವೆ ಮೊದಲಾದುದರೊಳೊಂ ।**
**ದೊಂದರಲಿ ಪೂಜಾ ಸುಸಾಧನ ।**
**ವೆಂದೆನಿಸುವ ಪದಾರ್ಥಗಳು ಬಗೆಬಗೆಯು ನೂತನದಿ ॥**
**ಸಂದಣಿಸಿಕೊಂಡಿಹವು ಧ್ಯಾನಕೆ ।**
**ತಂದಿನಿತು ಚಿಂತಿಸಿ ಸದಾ ಗೋ ।**
**ವಿಂದನರ್ಚಿಸಿ ನೋಡು ನಲಿನಲಿದಾಡು ಕೊಂಡಾಡು ॥ ೧೨ ॥**

ಪಂಚಭೂತಾಂತರ್ಗತ ಪೂಜಾ ದ್ರವ್ಯಗಳಿಂದ ಅರ್ಚನೆ ಮಾಡತಕ್ಕ ಕ್ರಮವನ್ನ ಹೇಳತಾರೆ.

ಬಾಂದಳವೆ_ಆಕಾಶವೇ, ಮೊದಲಾದ_ಪಂಚಭೂತಗಳು (೧. ಆಕಾಶ, ಇದರ ಗುಣ ಶಬ್ದ, ೨. ವಾಯು, ಇದರ ಗುಣ ಸ್ಪರ್ಶ, ೩. ತೇಜ, ಇದರ ಗುಣ ರೂಪ, ೪. ಅಪ್ಪು, ಇದರ ಗುಣ ರಸ, ೫. ಪೃಥ್ವಿ, ಇದರ ಗುಣ ಗಂಧ) ಅದರೊಳು ಈ ಐದು ಭೂತಗಳೊಳು, ಒಂದೊಂದರಲ್ಲಿ_ಒಂದೊಂದು ಭೂತದಲ್ಲಿ, ಪೂಜಾ ಸುಸಾಧನ_ಹೃದಯಗತ ವಾಸನಾಬಿಂಬ, ಬಾಹ್ಯದಲಿ ಪೂಜಾ ಮಾಡತಕ್ಕ ಅಚಲ ಪ್ರತಿಮೆಯು, ಉಭಯ ಪ್ರತಿಮಾಂತರ್ಗತ ಭಗವತ್ಪೂಜಾ ಮಾಡೋದಿಕ್ಕೆ ಸಮೀಚೀನವಾದ ಪೂಜಾಸಾಧನಗಳು, ಎಂದೆನಿಸುವ_ಎಂತ ಎನಿಸತಕ್ಕ, ಪದಾರ್ಥಗಳು_ಆಯಾ ಪಂಚಭೂತಕ್ಕೆ ಗುಣಗಳಾದ ಶಬ್ದ ಸ್ಪರ್ಶಾದಿ ಪದಾರ್ಥಗಳು, ಬಗೆಬಗೆಯ ನೂತನದಿ_ಶಬ್ದಾದಿ ತನ್ಮಾತ್ರಗಳು ಅನೇಕವಾಗಿ ನಾನಾ ಪ್ರಕಾರವಾಗಿ ನೂತನ ನೂತನವಾಗಿ ಅದದು ಅದರಲ್ಲಿ, ಸಂದಣಿಸಿಕೊಂಡು_ಗುಂಪು ಕೂಡಿಕೊಂಡು ಅಚ್ಛಿದ್ರವಾಗಿ ನಿಬಿಡೀಕೃತವಾಗಿ, ಇಹವು_ಇರೋದಾಗಿ ಅದೆ. ಅದು ಹ್ಯಾಂಗೆಂದರೆ

೧. ಶಬ್ದದಲ್ಲಿ ಯಾವತ್ತು ನಾದಗಳು, ಯಾವತ್ತು ಸ್ವರಗಳು ಇರೋದಾಗಿ ಅವೆ.
೨. ಸ್ಪರ್ಶದಲ್ಲಿ ತ್ವಗಿಂದ್ರಿಯಕ್ಕೆ ಉಪಚರಿಸತಕ್ಕ ಯಾವತ್ತು ಸ್ಪರ್ಶೋಪಚಾರಗಳು ಇರೋದಾಗಿ ಅವೆ.
೩. ರೂಪದಲಿ ಯಾವತ್ತು ತೇಜೋಪಚಾರಗಳು ಇರೋದಾಗಿ ಅವೆ.
೪. ರಸದಲ್ಲಿ ಯಾವತ್ತು ಸುರಸೋಪೇತವಾದ ರಸೋಪಚಾರಗಳು ಇರೋದಾಗಿ ಅವೆ.

೫. ಗಂಧದಲ್ಲಿ ಯಾವತ್ತು ಸುಗಂಧೋಪೇತವಾದ ಉಪಚಾರಗಳು ಇರೋದಾಗಿ ಅವೆ.

ಈ ರೀತ್ಯಾ ಯಾವತ್ತು ಪೂಜಾಸಾಧನಗಳು ಇದರಲ್ಲೇ ಅಂತರ್ಭೂತಗಳು ಆಯಿತು.

ಧ್ಯಾನಕ್ಕೆ ತಂದು—ಈ ಪ್ರಕಾರ ಅನುಸಂಧಾನದಿಂದ ಧ್ಯಾನಕ್ಕೆ ತಂದು, ಇನಿತು—ಈ ಪೂಜಾ ಸಾಧನೆಗಳು ದಾವವವೇ ಇವರೊಳಗೆ ಈ ಪೂಜಾಸಾಧನಗಳೋಪಾದಿಯಲಿ ತದಾಕಾರದಿಂದ ಶ್ರೀ ಪರಮಾತ್ಮ ಇದ್ದಾನೆ ಎಂತಲೂ ಅದೇ ಪ್ರಕಾರ ಉಭಯವಿಧ ಪ್ರತಿಮಾಗಳಲ್ಲಿ (ಚಲಾಚಲ ಪ್ರತಿಮೆಗಳು ಮುಂದೆ ಹೇಳಲ್ಪಟ್ಟಿದೆ), ತದಾಕಾರದಿಂದ ಪರಮಾತ್ಮ ಇದಾನೆ ಎಂತಲೂ, ಈ ಪ್ರಕಾರ, ಸದಾ ಚಿಂತಿಸಿ—ಸರ್ವಕಾಲದಲ್ಲೂ ಅಚ್ಛಿದ್ರನಾಗಿ ಮನಸಾ ಚಿಂತನಾ ರೂಪದಿಂದ ಅನುಸಂಧಾನ ಮಾಡಿ, ಗೋವಿಂದನ—ವೇದಪ್ರತಿಪಾದ್ಯನ, ಶ್ರೀ ಬಿಂಬಮೂರ್ತಿಯನ್ನು, ಅರ್ಚಿಸಿ—ಪ್ರತಿಮಾಂತರ್ಗತ ರೂಪ ಗಳಿಗೇನು, ಪೂಜಾಸಾಧನಾಂತರ್ಗತ ರೂಪಗಳಿಂದ, ಐಕ್ಯಚಿಂತನ ರೂಪದಿಂದ ಅರ್ಚನೆ ಮಾಡಿ, ನಲಿನಲಿದಾಡು—ಮನಸ್ಸಿನಿಂದ ಅವನ ಗುಣಗಳಲ್ಲಿ ಸಂಚಾರ ಮಾಡು, ಕೊಂಡಾಡು—ಅವನ ಮಹಿಮಾ ವಾಕ್ಯದಿಂದ ಕೊಂಡಾಡು. ನೋಡು—ಸರ್ವತ್ರ ಅಧಿ ಭೂತಗಳಾದ ಅಧಿಷ್ಠಾನಗಳ ಮರೆತು ಅಂತರ್ಗತನಾದ ಅಧ್ಯಾತ್ಮನಾದ ಶ್ರೀ ಪರಮಾತ್ಮ ನಲ್ಲಿ ಲಕ್ಷ್ಯ ಇಟ್ಟು ಜ್ಞಾನದೃಷ್ಟಿಯಿಂದ ನೋಡುವವನಾಗು. ಇದರಿಂದ ಈ ಪ್ರಪಂಚ ಗತ ಯಾವತ್ತು ಪೂಜಾಸಾಧನ ದ್ರವ್ಯದಿಂದ ಪೂಜಾ ಮಾಡಿದವನಾಗತಾನೆ ಎಂತ ತಾತ್ಪರ್ಯ.

**ಜಲಜನಾಭನ ಮೂರ್ತಿ ಮನದಲಿ ।**
**ನೆಲೆಗೊಳಿಸಿ ನಿಶ್ಚಲ ಭಕುತಿಯಲಿ ।**
**ಚಳಿ ಬಿಸಿಲು ಮಳೆಗಾಳಿಗಳ ನಿಂದಿಸದೆ ನಿತ್ಯದಲಿ ॥**
**ನೆಲದಲಿಹ ಗಂಧವೆ ಸುಗಂಧವು ।**
**ಜಲವೆ ರಸ ರೂಪವೆ ಸುದೀಪವು ।**
**ಎಲರು ಚಾಮರ ಶಬ್ದ ವಾದ್ಯಗಳರ್ಪಿಸಲು ಒಲಿವ ॥ ೧೩ ॥**

ಜಲಜನಾಭನ ಮೂರ್ತಿ—ಶ್ರೀ ಪದ್ಮನಾಭದೇವರ ಆಕಾರವನ್ನು, ಮನದಲಿ—ಹೃದಯ ಗೋಳಕದಲಿ ವಿದ್ಯಮಾನವಾದ, ಮನದಲಿ—ಮಾನಸವಾಸನಾದಿಂದ, ನೆಲೆಗೊಳಿಸಿ—ಸ್ಥಿರ ವಾಗಿ ನಿಲ್ಲಿಸಿ ತದಂತರ್ಗತ ತದಾಕಾರನಾಗಿ ಶ್ರೀ ಬಿಂಬಮೂರ್ತಿ ಪದ್ಮನಾಭದೇವರು ಇದ್ದಾನೆಂದು ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ ಚಿಂತಿಸಿ ಅವನಲ್ಲೇ ಮನಸ್ಸು ಅಚ್ಛಿದ್ರವಾಗಿ ಇಟ್ಟು, ನಿಶ್ಚಲ ಭಕುತಿಯಲಿ—ಮಾಹಾತ್ಮ್ಯಜ್ಞಾನ ಸುದೃಢ ಸ್ನೇಹಪೂರ್ವಕ ವಾದ ಭಕ್ತಿಯುಕ್ತನಾಗಿ ಬಾಹ್ಯವಿಷಯಗಳ ಮರೆತು, ಚಳಿ—ದೇಹಕ್ಕೆ ಉಪದ್ರವ ಬಡಿಸತಕ್ಕ

ಚಳಿ, ಬಿಸಿಲು–ದೇಹಕ್ಕೆ ಉಪದ್ರವ ಬಡಿಸತಕ್ಕ ಬಿಸಿಲು ಅಂದರೆ ತೀವ್ರವಾದ ಬಿಸಿಲು, ಮಳೆ–ಇದೇ ಪ್ರಕಾರವಾದ ಮಳೆ, ಗಾಳಿಗಳ–ಇದೇ ಪ್ರಕಾರವಾದ ಗಾಳಿ, ನಿಂದಿಸದೆ–ಇವೇ ಮೊದಲಾದ ಅಧಿಷ್ಠಾನಗಳ ನಿಂದಾ ಮಾಡದೆ ಆಯಾ ಕಾಲಗಳಲ್ಲಿ ಅಂತರ್ಗತ ಶ್ರೀ ಪರಮಾತ್ಮ ಈ ಅಧಿಷ್ಠಾನಗಳಲ್ಲಿ ಇದಾನೆ ಎಂತ ತಿಳಿದು, ಯಾವತ್ತು ಶ್ರೀ ಪರಮಾತ್ಮನ ವ್ಯಾಪಾರವೆಂತ ಅನುಸಂಧಾನ ಮಾಡಿ ಅರ್ಚಿಷೋವನಾಗು. ಮತ್ತು ನಿತ್ಯದಲಿ–ಪ್ರತಿದಿನದಲ್ಲೂ ಈ ಪಂಚಭೂತಗಳ ಅರ್ಚಿಸೋ ಬಗೆ ಹ್ಯಾಂಗೆಂದರೆ, ನೆಲದಲಿಹ–ಪೃಥ್ವಿಯಲ್ಲಿ ವಿದ್ಯಮಾನವಾದ ಪೃಥಿವೀ ಗುಣವಾದ, ಗಂಧವೇ–ಪರಿಮಳ ದಾವದದೇ ಅದೇವೇ, ಸುಗಂಧವು–ದಿವ್ಯವಾದ ಪರಿಮಳಯುಕ್ತವಾದ ಗಂಧಗಳು ಎಂತಲೂ, ದಿವ್ಯ ಪುಷ್ಪಗಳು ಎಂತಲೂ, ಪೃಥಿವೀನೇ ಯಾವತ್ತು ಮಂಟಪಗಳು ಎಂತಲೂ, ಇನ್ನೂ ದಿವ್ಯ ವಸ್ತ್ರಗಳು, ದಿವ್ಯವಾದ ನವರತ್ನಾಭರಣಗಳು, ಶ್ರೀ ತುಲಸೀ ಮೊದಲಾದದ್ದು ಯಾವತ್ತು ಅರ್ಚಿಸಿ ಮಾಡಿದಂತಾಯಿತು. ಜಲವೆ ರಸ–ಜಲವೆ–ಅಪ್ಪು, ಈ ಜಲ ಅರ್ಪಿಸೋಣದರಿಂದ ಜಲ ಸಂಬಂಧವಾದ ಗಂಗಾದಿ ಯಾವತ್ತು ತೀರ್ಥಗಳಿಂದ ಅಭಿಷೇಕ ರೂಪವಾದ ಅರ್ಚನ ಮಾಡಿದಂತಾಯಿತು. ಈ ಜಲಗತರಸ ಅರ್ಪಿಸೋಣದರಿಂದ ದಿವ್ಯವಾದ ಷಡ್ರಸೋಪೇತವಾದ ಪದಾರ್ಥಗಳೂನೂ, ಇನ್ನೂ ಅನೇಕ ವಿಧವಾದ ಫಲಾದಿಗಳು ಸಮರ್ಪಣ ಮಾಡಿ ಅರ್ಚಿಸಿದಂತಾಯಿತು. ರೂಪವೇ ಸುದೀಪವು–ತೇಜಸ್ಸು ಅಗ್ನಿ ಅರ್ಪಿಸೋಣದರಿಂದ ಅನೇಕವಾದ ಧೂಪಾರ್ತಿಗಳು, ಸುವಾಸನೆಗಳು, ಅರ್ಪಿಸಿದಂತಾಯಿತು. ಅಗ್ನಿ ಗುಣವಾದ ರೂಪ ಅರ್ಪಿಸೋಣದರಿಂದ ಅನೇಕ ವಿಧ ಮಂಗಳಾರತಿಗಳು, ಅನೇಕ ದೀಪಗಳು ಅರ್ಚಿಸಿದಂತಾಯಿತು. ಎಲರು ಚಾಮರ–ವಾಯು ಅರ್ಪಿಸೋಣದರಿಂದ ನಾನಾ ವಿಧವಾದ ವ್ಯಂಜನೋಪಚಾರಗಳು, ತದ್ಗುಣ ಸ್ಪರ್ಶ ಅರ್ಪಿಸೋಣದರಿಂದ ನಾನಾ ವಿಧ ಚಾಮರ ಛತ್ರಿಗಳು ಮೊದಲಾದದ್ದು ಅರ್ಪಿಸಿದಂತಾಯಿತು. ಶಬ್ದ ವಾದ್ಯಗಳು–ಆಕಾಶ ಅರ್ಪಿಸೋಣದರಿಂದ ನಾನಾ ವಿಧವಾದ ಮಂಗಳವಾದ್ಯಗಳು, ಸ್ತೋತ್ರ ಪಾಠಗಳು, ಉಪಚಾರಗಳು ಮೊದಲಾದದ್ದು ಅರ್ಪಿಸಿದಂತಾಯಿತು. ಇಂಥಾ ಅನುಸಂಧಾನ ಪೂಜಾವನ್ನ, ಅರ್ಪಿಸಲು–ಪೂಜಾದ್ರವ್ಯಾಂತರ್ಗತ ಶ್ರೀ ಪರಮಾತ್ಮಗೂ, ಪ್ರತಿಮಾಂತರ್ಗತ ಶ್ರೀ ಬಿಂಬಾತ್ಮಕ ಶ್ರೀ ಪರಮಾತ್ಮಗೂ ಐಕ್ಯ ಚಿಂತನಿಯಿಂದ ಕೊಟ್ಟರೆ, ಒಲಿವ–ಇದರನ್ನ ಸ್ವೀಕಾರ ಮಾಡಿ, ಹೃದಯಗತ ಬಿಂಬನೂ, ಪ್ರತಿಮಾಗತ ಶ್ರೀ ಪರಮಾತ್ಮನೂ ಪ್ರತ್ಯಕ್ಷನಾಗಿ ಇಹದಲ್ಲಿ ಮಹದೈಶ್ವರ್ಯ ಕೊಟ್ಟು, ಪಾರತ್ರಿಕದಲ್ಲಿ, ಮಹಾಮೋಕ್ಷಾದಿಗಳು ಕೊಟ್ಟು ಸಂರಕ್ಷಣೆ ಮಾಡತಾನೆ. ಸ್ವದೇಹಗತ ಪಂಚಭೂತಗಳು, ಪಂಚ ತನ್ಮಾತ್ರಗಳು, ಬಾಹ್ಯಗತ ಪಂಚಭೂತಗಳು, ಪಂಚ ತನ್ಮಾತ್ರಗಳು, ಪೂಜಾತ್ವೇನ ಅರ್ಚಿಸಿದರೆ ಸರ್ವಷೋಡಶೋಪಚಾರ ಪೂಜಾ ಮಾಡಿದವನಾಗತಾನೆ. ಆದ್ದರಿಂದ ಈ ಅನುಸಂಧಾನವಿರಬೇಕು ಎಂತ ತಾತ್ಪರ್ಯ.

**ಗೋಳಕಗಳು ರಮಾರಮಣನ ನಿ ।**
**ಜಾಲಯುಗಳನುದಿನದಿ ಸಂಪ್ರ ।**
**ಕ್ಷಾಲನೆಯೆ ಸಮ್ಮಾರ್ಜನವು ಕರಣಗಳೆ ದೀಪಗಳು ।**

**ಸಾಲು ತತ್ತದ್ವಿಷಯಗಳ ಸ ।**
**ಮ್ಮೇಳನವೆ ಪರಿಯಂಕ ತತ್ಸುಖ ।**
**ದೇಳಿಗೆಯೆ ಸುಪ್ಪತ್ತಿಗಾತ್ಮನಿವೇದನವೆ ವಸನ ॥ ೧೪ ॥**

ಅಧಿಕಾರಿಯಾದವ ತನ್ನ ದೇಹಕ್ಕೆ ಮಾಡಿಕೋತಕ್ಕ ಉಪಚಾರಗಳು, ದೇಹಗತ ಇಂದ್ರಿಯಗಳು ಅರ್ಪಿಸೋ ಕ್ರಮವನ್ನು ಹೇಳತಾರೆ.

ಗೋಳಕಗಳು–ನೇತ್ರಾದಿ ಇಂದ್ರಿಯಗಳು, ಆವಾರವಾಗಿ ಇರತಕ್ಕ ಅಧಿಷ್ಠಾನಗಳು ದಾವದದೆ ಅದಕ್ಕೆ ಗೋಳಕ ಎಂತ ನಾಮ. ಇದೇವೇ ದೇಹದಲ್ಲಿ ಪ್ರತ್ಯಕ್ಷವಾಗಿ ಕಾಣ ತಕ್ಕದ್ದು. ತದಂತರ್ಗತವಾಗಿ ಆಯಾ ನಾಮಗಳಿಂದ ಇಂದ್ರಿಯಗಳು ಇರೋದಾಗಿ ಅವೆ. ಈ ಗೋಳಕಗಳಲ್ಲಿ, ರಮಾರಮಣನ–ಶ್ರೀ ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ, ನಿಜ–ಸ್ವಕೀಯವಾದ, ಶ್ರೀ ಪರಮಾತ್ಮಗೆ ಅಭಿನ್ನಗಳಾದ ಗೋಳಕಾಕಾರಗಳಾದ, ಆಲಯ ಗಳು–ಗೋಳಕನಾಮಧೇಯಗಳಾದ ಮನಿಗಳು ಇರೋದಾಗಿ ಅವೆ. ಈ ಮನಿಗಳಲ್ಲಿ ಶ್ರೀ ಪರಮಾತ್ಮ ಇದ್ದಾನೆ. ಆದ್ದರಿಂಪ ಈ ಗೋಳಕಗಳು ಶ್ರೀ ದೇವರ ಮನಿಗಳೆಂದು ಕರಿಸೋದಾಯಿತು. ಇಂಥಾ ಮನಿಗಳು, ಅನುದಿನ–ಪ್ರತಿದಿನದಲ್ಲೂ ದಾವ ದಾವ ಕಾಲದಲ್ಲಾದರೆ, ಸಂಪ್ರಕ್ಷಾಲನೆಯೇ–ಛಂದಾಗಿ ಶಾಸ್ತ್ರೋಕ್ತಾನುಸಾರ ಉದಕದಿಂದ ಸಂಪ್ರಕ್ಷಾಲನೆಯೇ ರೂಪವಾದ ತೊಳಿಯೋಣ ದಾವದದೆ ಇದೇವೇ, ಸಮ್ಮಾರ್ಜನವು–ನಿರ್ದೋಷನಾದ ಶ್ರೀ ಪರಮಾತ್ಮ ಆವಾಸನಾಗಿ ಇರುವ ಅವನ ಮಂದಿರದಲ್ಲಿ ಕಸವಿಲ್ಲದೆ ಬಳಿಯೋಣ, ಸಾರಿಸಿ ಶುದ್ಧಮಾಡೋಣ ಎಂತ ಈ ಪ್ರಕಾರ ತಿಳಿದು ಇಂದ್ರಿಯಗೋಳಕ ಗಳೇನು, ಪ್ರಕ್ಷಾಲನಾದಿ ವ್ಯಾಪಾರಗಳು ಅರ್ಪಿಸಬೇಕು. ಕರಣಗಳೇ–ಆಯಾ ಗೋಳ ಕಾಖ್ಯ ಗೃಹದಲ್ಲಿ ವಿದ್ಯಮಾನನಾದ ಪರಮಾತ್ಮಗೆ ಆಯಾ ಗೋಳಕಾಂತರ್ಗತ ಇಂದ್ರಿಯ ಗಳೇ, ದೀಪಗಳು–ದೀಪಗಳೆಂಪು ಅನುಸಂಧಾನಮಾಡಬೇಕು. (ಆಯಾ ಇಂದ್ರಿಯಗಳಿಗೆ), ವಿಷಯಗಳ–ವಿಷಯಗಳಾದ ದೃಷ್ಟಿ, ಶ್ರವಣ ಮೊದಲಾದ ಒಂದೊಂದು ಇಂದ್ರಿಯದಿಂದ ಆಗತಕ್ಕ ವಿಚಿತ್ರವಾದ ಅನೇಕ ವಿಷಯಗಳ, ಸಮ್ಮೇಳನವೇ–ಒಂದೊಂದು ಇಂದ್ರಿಯ ಗಳಲ್ಲಿ ಮೇಳನವಾಗೋದು ದಾವದದೆ ಇದು ಯಾವತ್ತು, ಪರಿಯಂಕ–ಆಯಾ ಇಂದ್ರಿಯ ಗೋಳಕಾಂತರ್ಗತ ಶ್ರೀ ಪರಮಾತ್ಮಗೆ ಮಂಚವು, ತತ್–ಆಯಾ ಇಂದ್ರಿಯಾದಿ ವಿಷಯ ಗಳಿಂದ ಆಗತಕ್ಕ, ಸುಖದೇಳಿಗೆಯು–ಸುಖಸಮೂಹಗಳು ದಾವದದೆ, ಇದೇವೇ, ಸುಪ್ಪತ್ತಿಗೆ–ಅಂದರೇ ಮಂಚದ ಮ್ಯಾಲೆ ಹಾಕತಕ್ಕ ಲೇಪು, ಹಾಸಿಗೆ ದಿಂಬು ಇದರ ಪರಿಕರಣವು, ಆತ್ಮ–ಈ ಪ್ರಕಾರ ತತ್ತದಿಂದ್ರಿಯಗೋಳಕಾಂತರ್ಗತನಾದ ಆತ್ಮಶಬ್ದವಾಚ್ಯ ನಾದ ಶ್ರೀ ಪರಮಾತ್ಮಗೆ, ನಿವೇದನವೆ–ಅನುಸಂಧಾನದಿಂದ ಅರ್ಪಿಸೋಣ ಎಂಬುದು, ವಸನ–ದೇವರು ಶಯನಾನಂತರ ಹೊದ್ದುಕೊಂಬೋ ದಿವ್ಯ ಶಾಲು, ಪೀತಾಂಬರ ಎಂತ ತಾತ್ಪರ್ಯ.

**ತಾ||** ಈ ಪ್ರಕಾರ ಅಧಿಕಾರಿಯಾದವ ರಾತ್ರಿ ತಾನು ಮಲಕೊಂಬೋ ಕಾಲದಲ್ಲಿ ಅನುಸಂಧಾನಮಾಡಬೇಕು. ಅಗ್ಗೆ ಇಂದ್ರಿಯಗೋಳಕಸ್ಥನಾದ ಪರಮಾತ್ಮ ಪ್ರಳಯ ಕಾಲದಲ್ಲಿ ಶಯನಮಾಡಿದಂತೆ ಮನುಷ್ಯ ದಿನದಲ್ಲಿ ಪ್ರಳಯಸಾಂಕೇತವಾದ ರಾತ್ರಿಕಾಲದಲ್ಲಿ ಆಯಾ ಇಂದ್ರಿಯವ್ಯಾಪಾರದಿಂದ ಶೂನ್ಯನಾಗಿ ಆಯಾ ಗೋಳಕದಲ್ಲಿ ಶಯನ ಮಾಡತಾನೆ ಎಂತ ಅನುಸಂಧಾನಮಾಡಬೇಕು. ಇದರಿಂದ ಇಂದ್ರಿಯಗೋಳಕಗಳು. ಇಂದ್ರಿಯಗಳು, ತದ್ವಿಷಯಗಳು, ನಿದ್ರಾ ಇಷ್ಟು ಅರ್ಪಿಸಿದಂತಾಯಿತು. ಇಷ್ಟೂ ಸಾರ್ಥಕವಾಯಿತು. ಸರ್ವವೂ ಅಂತರ್ಗತ ಪರಮಾತ್ಮನ ಪರ ಅನುಸಂಧಾನವಿರಬೇಕೆಂತ ತಾತ್ಪರ್ಯ.

**ಪಾಪಕರ್ಮವು ಪಾದುಕೆಗಳನು ।**
**ಲೇಪನವು ಸತ್ಪುಣ್ಯಶಾಸ್ತ್ರಾ ।**
**ಲಾಪನವೆ ಶ್ರೀತುಲಸಿ ಸುಮನೋವೃತ್ತಿಗಳು ಸುಮನ ।**
**ಕೋಪ ಧೂಪವು ಭಕ್ತಿ ಭೂಷಣ ।**
**ವ್ಯಾಪಿಸಿದ ಸದ್ಬುದ್ಧಿ ಛತ್ರವು ।**
**ದೀಪವೇ ಸುಜ್ಞಾನವಾರಾರ್ತಿಗಳೆ ಗುಣಕಥನ || ೧೫ ||**

ಪೂರ್ವೋಕ್ತ ವಿಷಯವೇ ಹೇಳತಾರೆ.

ಪಾಪಕರ್ಮವು—ಸರ್ವೇಂದ್ರಿಯಗಳಿಂದ ಮಾಡಿದ ಶಾಸ್ತ್ರನಿಷಿದ್ಧವಾದ ಪಾಪಕರ್ಮ ಗಳು ದಾವದದೇ, ಇವುಗಳೇ, ಪಾದುಕೆಗಳ—ಪಾದರಕ್ಷೆಗಳ, ಅನುಲೇಪನವು—ಈ ಪಾಪ ಗಳು ಅರ್ಪಿಸೋಣ ಎಂಬುದೇ ಶ್ರೀ ಪರಮಾತ್ಮಗೆ ಪಾದರಕ್ಷೆ ತೊಡಿಸೋಣ ಎಂತ ಅರ್ಥ. ಸತ್ಪುಣ್ಯಶಾಸ್ತ್ರ—ಶ್ರೀಪರಮಾತ್ಮ ಸರ್ವೋತ್ತಮನೆಂದು ಶಾಸನ ಮಾಡತಕ್ಕ ಪುಣ್ಯಕರವಾದ ಶ್ರೀಮಧ್ವಶಾಸ್ತ್ರವೇನು, ಭಾಗವತಾದಿ ಸಚ್ಛಾಸ್ತ್ರಗಳೇನು, ಇವುಗಳನ್ನು, ಆಲಾಪನವೆ— ಸರ್ವದಾ ಉಚ್ಚಾರ ಮಾಡುತ್ತಿರುವುದೇ, ಶ್ರೀತುಲಸಿ—ಶ್ರೀಬಿಂಬಗೆ ಅರ್ಚಿಸಿ ಮಾಡತಕ್ಕ ಶ್ರೀತುಳಸಿ, ಇದೇ ರೀತ್ಯಾ ದಶೇಂದ್ರಿಯಗಳ ಪುಣ್ಯಕಾರ್ಯಗಳು ಗ್ರಾಹ್ಯ. ಸುಮನೋ ವೃತ್ತಿಗಳು—ನಿರ್ದೋಷನಾದ ಪರಮಾತ್ಮನ ವಿಷಯಕವಾದ ತತ್ವವಿಚಾರದಿಂದ ಯುಕ್ತವಾದ ಮನೋವೃತ್ತಿಗಳು ಇವುಗಳೇವೇ, ಸುಮನ—ದಿವ್ಯಪರಿಮಳಯುಕ್ತವಾದ ಪುಷ್ಪಗಳು. ಮನೋವೃತ್ತಿಗಳು ಹ್ಯಾಂಗೆಂದರೆ, ನಿರ್ದೋಷ ಎಂತ ಉಚ್ಚರಿಸೋಣ, ಒಂದು, ಗುಣ ಪೂರ್ಣ ಎಂತ ಉಚ್ಚರಿಸೋಣ ಒಂದು, ಇತ್ಯಾದಿ ಅನೇಕವಿಧ ಮನೋವೃತ್ತಿಗಳು ಅನೇಕವಿಧ ಪರಿಮಳೋಪೇತ ಪುಣ್ಯಪುಷ್ಪಗಳು, ಕೋಪ ಧೂಪವು—ಕೋಪ ಎಂಬುದೇ ಅಗ್ನಿ, ಕೋಪಕ್ಕೆ ಕಾರಣವಾದ ದಶಾಂಗ ಪರಿಮಳ ಕೋಪಾಭಿವ್ಯಕ್ತಿಯೇ ಧೂಮರೂಪ ವಾದ ಹೊಗೆ, ಇದೇ ಧೂಪವು. ಸದ್ವಿಷಯಕವಾದ ಕೋಪ ಎಂತ ಅರ್ಥ. ದುರ್ವಿಷಯದ ಕೋಪ ಪಾಪವಾಗತದೆ. ಅದು ಪಾದರಕ್ಷಾದಲ್ಲಿ ಸೇರಿಸಬೇಕು. ಭಕ್ತಿ ಭೂಷಣ—ಭಕ್ತಿ ಎಂಬುದೇ ಅನೇಕ ವಿಧ ಆಭರಣಗಳು. ನವವಿಧ ಭಕ್ತಿ, ಅದರಲ್ಲಿ ಅಂತರಾಂತರ ಅನೇಕ ವಿಧ ಭಕ್ತಿಗಳು ಅವೆ. ಅದು ಯಾವತ್ತು ಅನೇಕವಿಧವಾದ ರತ್ನಾತ್ಮಕ ಆಭರಣಗಳು.

ವ್ಯಾಪಿಸಿದ–ಬಿಂಬನಾದ ಶ್ರೀ ಪರಮಾತ್ಮನಲ್ಲಿ ಉಂಗುಷ್ಟದಾರಭ್ಯ ಶಿರಃಪರಿಯಂತ ವ್ಯಾಪಿಸಿದ, ಸತ್–ನಿರ್ದುಷ್ಟಗಳಾದ ಅವಯವಗಳ ಧ್ಯಾನದಲ್ಲಿ ಸಿಷ್ಠಿತವಾದ, ಬುದ್ಧಿ–ಬುದ್ಧಿ ಎನತಕ್ಕ ಮನೋವೃತ್ತಿ, ಛತ್ರವು–ಬಿಂಬರೂಪಿ ಪರಮಾತ್ಮಗೆ ಛತ್ರಿಯು. ಛತ್ರಿಕಾರ್ಯ ಉಂಗುಷ್ಟದಾರಭ್ಯ ಶಿರಃಪರಿಯಂತ ನೆರೆದು ವ್ಯಾಪಿಸಿ ಇರತಕ್ಕದ್ದು. ತದ್ವತ್ ಬುದ್ಧಿ ವ್ಯಾಪಿಸಿ ಇರೋಣದರಿಂದ ಛತ್ರಿ ಸಾಮ್ಯವಾಯಿತು. ದೀಪವೇ–ಇಂಥಾ ಪೂಜಾಕ್ಕೆ ದೀಪ ಎನತಕ್ಕದ್ದು, ಸುಜ್ಞಾನ–ಸಮೀಚೀನವಾದ ತಾರತಮ್ಯ ಪಂಚಭೇದ ಜ್ಞಾನ. ಈ ಜ್ಞಾನ ಯಾವತ್ತು ತೇಜೋರೂಪವಾದ್ದರಿಂದ ದಿವ್ಯ ದೀಪಗಳು, ಆರಾರ್ತಿಗಳೇ–ಆರು ವಿಧ ಆರತಿಗಳೆಂಬೋದೇ, ಗುಣಕಥನ–ಶ್ರೀ ದೇವರ ಕಲ್ಯಾಣಗುಣಗಳ ಕಥನ ಮಾಡೋಣವೇ ಮಂಗಳಾರತಿಗಳು ಎಂತ ತಾತ್ಪರ್ಯ.

**ಮನವಚನಕಾಯಕ ಪ್ರದಕ್ಷಿಣೆ ।**
**ಯನುದಿನದಿ ಸರ್ವತ್ರ ವ್ಯಾಪಕ ।**
**ವನರುಹೇಕ್ಷಣಗರ್ಪಿಸುತ ಮೋದಿಸುತಲಿರು ಸತತ ॥**
**ಅನುಭವಕೆ ತಂದುಕೊ ಸಕಲ ಸಾ ।**
**ಧನಗಳೊಳಗಿದೆ ಮುಖ್ಯಪಾಮರ ।**
**ಮನುಜರಿಗೆ ಹೇಳಿದರೆ ತಿಳಿಯದು ಬುಧರಿಗಲ್ಲದಲೆ ॥ ೧೬ ॥**

ಪೂರ್ವೋಕ್ತ ಸಂಗತಿಗಳ ಹೇಳಿ ಇನ್ನು ಅದರ ವಿವರವೇ ಮುಖ್ಯ ಸಾಧನೆ ಎಂತಲೂ ಇನ್ನೂ ಕೆಲವು ಸಂಗತಿಯ ಹೇಳತಾರೆ.

ಕಾಯಕ–ದೇಹಕ್ಕೆ ಸಂಬಂಧಿಸಿದ, ವಚನ–ವಚನೇಂದ್ರಿಯವಾದ ವಾಗಿಂದ್ರಿಯವೂ, ಉಪಲಕ್ಷಣಯಾ ದಶೇಂದ್ರಿಯಗಳೂ ಗ್ರಾಹ್ಯ. ಈ ದಶೇಂದ್ರಿಯಗಳು ಹೃದಯಾಕಾಶಗತ ಬಿಂಬಮೂರ್ತಿಗೆ ವಲಯಾಕಾರದಿಂದ ದೇಹದಲಿ ಆಯಾ ಸ್ಥಾನಗಳಲ್ಲಿ ಇರೋದಾಗಿ ಅದೆ. ಈ ಇಂದ್ರಿಯಗಳಲ್ಲಿ, ಪುನ–ಪುನಸ್ಸು ಸಂಚಾರ ಮಾಡೋದಾಗತದೆ. ಇಂಥಾ ಸಂಚಾರವೇ, ಅನುದಿನದಿ–ಪ್ರತಿದಿನ ಪ್ರತಿಕ್ಷಣದಲ್ಲೂ ಮಾಡತಕ್ಕ, ಪ್ರದಕ್ಷಿಣೆ–ಪ್ರದಕ್ಷಿಣೆ, ದೀನನಾಗಿ ಶ್ರೀ ಪರಮಾತ್ಮನ ಪ್ರಾರ್ಥನ ಮಾಡೋಣವೇ ನಮಸ್ಕಾರ ಎಂತ ಅರ್ಥ. ಸರ್ವತ್ರ ವ್ಯಾಪಕ–ದಶೇಂದ್ರಿಯಾದಿ ಸರ್ವತ್ರ ವ್ಯಾಪಕನಾದ, ವನರುಹೇಕ್ಷಣಗೆ–ಕಮಲಾಕ್ಷನಾದ ಶ್ರೀ ಬಿಂಬರೂಪಿ ಹರಿಗೆ, ಅರ್ಪಿಸುತ–ಈ ಪ್ರಕಾರ ಸಮರ್ಪಣೆ ಮಾಡುತ, ಸತತ–ನಿರಂತರವಲ್ಲೂ, ಮೋದಿಸುತಲಿರು–ವಿರಕ್ತನಾಗಿ ಭಗವದ್ವಿಷಯಕವಾದ ಆನಂದದಿಂದ ಇರೋವನಾಗು. ಅನುಭವಕೆ ತಂದುಕೋ–ಈ ಪ್ರಕಾರ ಉಚ್ಚಾರ ಮಾತ್ರದಿಂದ ಉಪಯೋಗವಿಲ್ಲ. ಛಂದಾಗಿ ಅನುಭವಕ್ಕೆ ತಂದುಕೊಂಡು ಅನುಷ್ಠಾನ ಮಾಡೋವನಾಗು. ಸಕಲ ಸಾಧನೆಗಳೊಳು–ಸಮಸ್ತ ಸತ್ಕಾರ್ಯಗಳೊಳಗೆ, ಇದು ಮುಖ್ಯ–ಇದು ಮುಖ್ಯವಾದ ವಿಷಯವಾದ್ದರಿಂದ ಅನುಸಂಧಾನಯುಕ್ತನಾಗಿ ಪೂರ್ವೋಕ್ತ ವಿಷಯಗಳನ್ನ ವಿವರವಾಗಿ ಮನಸ್ಸಿನಿಂದ ಶ್ರೀ ಬಿಂಬಮೂರ್ತಿಯಾದ ಶ್ರೀ ಪರಮಾತ್ಮನ್ನ ಪೂಜಾ

ಮಾಡಬೇಕು. ಈ ಮಾರ್ಗಗಳು, ಪಾಮರ ಮನುಜರಿಗೆ—ವಿಷಯಾಸಕ್ತರಾಗಿ ಭಗವ ದ್ಧ್ಯಾನಶೂನ್ಯರಾಗಿ ಇರುವಂಥ ಮೂಢ ಜನರಿಗೆ, ಪೇಳಿದರೆ ತಿಳಿಯದು—ಇಂಥಾ ಅನು ಸಂಧಾನ ಮಾರ್ಗಗಳು ಹೇಳಿದರೆ ಅವರ ಮನಸ್ಸಿಗೆ ಹಿಡಿಯೋದಿಲ್ಲ. ಆದರೆ ದಾರಿಗೆ ಹೇಳಿದರೆ ಅನುಷ್ಠಾನ ಮಾಡತಾರೆ ಎಂದರೆ, ಬುಧರಿಗಲ್ಲದಲೆ—ಭಗವದನುಗ್ರಹಕ್ಕೆ ಪಾತ್ರ ರಾಗಿ ಸದ್ಗತಿ ಐದಬೇಕೆಂಬ ಜ್ಞಾನಿಗಳಿಗೆ ಇದರ ವಿಚಾರ ಹೇಳಬೇಕು ಎಂತ ತಾತ್ಪರ್ಯವೇ ಹೊರತು ಅನ್ಯರಿಗೆ ಈ ಮಾರ್ಗ ತಿಳಿಸಬಾರದು ಎಂತ ತಾತ್ಪರ್ಯ.

**ಚತುರವಿಧ ಪುರುಷಾರ್ಥ ಪಡೆವರೆ ।**
**ಚತುರದಶಲೋಕಗಳ ಮಧ್ಯದೊ ।**
**ಳಿತರುಪಾಯಗಳಿಲ್ಲ ನೋಡಲು ಸಕಲಶಾಸ್ತ್ರದಲಿ ॥**
**ಸತತ ವಿಷಯೇಂದ್ರಿಯಗಳಲಿ ಪ್ರವಿ ।**
**ತತನೆನಿಸಿ ರಾಜಿಸುವ ಲಕುಮೀ ।**
**ಪತಿಗೆ ಸರ್ವಸಮರ್ಪಣೆಯು ಮಹಪೂಜೆ ಸದುಪಾಯ ॥ ೧೭ ॥**

ಪ್ರಮಾಣ :— "ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಽಪಾಯಸ್ತು ವಿದ್ಯತೇ । ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥" ಎಂತ ಇರುವ ಪ್ರಮಾಣ ವನ್ನ ಅನುಸರಿಸಿ ಹೇಳತಾರೆ.

ಚತುರವಿಧ—ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಾದ ಜೀವರು ಅವರವರ ಯೋಗ್ಯತಾನುಸಾರವಾಗಿ ೧. ಸಾಯುಜ್ಯ, ೨. ಸಾಮೀಪ್ಯ, ೩. ಸಾರೂಪ್ಯ, ೪. ಸಾಲೋಕ್ಯ ಎಂಬ ನಾಲ್ಕು ವಿಧ ಮುಕ್ತಿ ಲಿಂಗಭಂಗಾನಂತರ ಐದೋವರಾಗತಾರೆ. ಇಂಥಾ ಮುಕ್ತಿ ಐದೋದಕ್ಕೆ ಅಧಿಕಾರಿಗಳಾದ, ಪುರುಷ—ಪುರುಷರಿಗೆ, ಅರ್ಥ—ಪ್ರಯೋ ಜನಕರವಾದ ಸಾಧನಿ ಪೂರ್ವೋಕ್ತ ಸಾಧನಿಯು. ಇಂಥಾ ಸಾಧನಿ ವ್ಯತಿರಿಕ್ತ, ಪಡೆವರೆ— ಚತುರ್ವಿಧ ಮೋಕ್ಷ ಪಡೆಯಲಾರರು ಎಂತ ತಾತ್ಪರ್ಯ. ಚತುರದಶ—ಸತ್ಯಲೋಕ ಪ್ರಾರಂಭ ಮಾಡಿ ಪಾತಾಳಲೋಕದವರಿಗೂ, ಲೋಕಗಳ ಮಧ್ಯದೊಳು—ಹದಿನಾಲ್ಕು ಲೋಕಗಳ ಮಧ್ಯದಲ್ಲಿ ಇರತಕ್ಕ ಮುಕ್ತಿಯೋಗ್ಯ ಜೀವರುಗಳಿಗೆ ಲಿಂಗಭಂಗವಾಗೋದಕ್ಕೆ (ಲಿಂಗಭಂಗವಾಗಿ ಮೋಕ್ಷ ಐದೋದಕ್ಕೆ), ಇತರ ಉಪಾಯಗಳಿಲ್ಲ—ಬ್ಯಾರೆ ಇತರ ವಿಧ ವಾದ ಉಪಾಯರೂಪವಾದ ಸಾಧನಿ ಮಾರ್ಗಗಳಿಲ್ಲ. ಸಕಲಶಾಸ್ತ್ರದಲಿ—ಸಮಸ್ತಶಾಸ್ತ್ರ ಗಳಲ್ಲಿ, ನೋಡಲು—ಹೇಳಿರುವ ಸಾಧನಿ ವಿಚಾರ ಪರಿಶೀಲನಮಾಡಿ ನೋಡಲು ತದ್ವ್ಯತಿ ರಿಕ್ತ ಸಾಧನೋಪಾಯಗಳು ಇಲ್ಲ. ಸತತ—ನಿರಂತರದಲ್ಲೂ, ಇಂದ್ರಿಯಗಳಲಿ— ಏಕಾದಶೇಂದ್ರಿಯಗಳಲ್ಲಿ, ವಿಷಯ— ಆಯಾ ಇಂದ್ರಿಯಗತ ವಿಷಯಗಳಲ್ಲಿ, ಪ್ರವಿತತ ನೆನಿಸಿ—ಛಂದಾಗಿ ವ್ಯಾಪ್ತನಾಗಿ ತನ್ನಾಮವುಳ್ಳವನೆನಿಸಿ, ರಾಜಿಸುವ—ಆಯಾ ಇಂದ್ರಿಯಗಳ ವ್ಯಾಪಾರಗಳ ಪ್ರಕಾಶಮಾಡುತ ತದಂತರ್ಗತನಾಗಿ ಪ್ರಕಾಶನಾಗಿ ಇರುವ, ಲಕುಮೀಪತಿಗೆ— ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರಿಗೆ, ಸರ್ವಸಮರ್ಪಣೆಯು—ಸರ್ವೇಂದ್ರಿಯ

ವ್ಯಾಪಾರ ಯಾವತ್ತು ಸಮರ್ಪಣ ಮಾಡೋಣ ದಾವದದೆ ಇದೇವೆ, ಸದುಪಾಯ–ಸಮೀಚೀನವಾದ, ಪ್ರಯಾಸದಿಂದ ರಹಿತವಾದ ಉಪಾಯರೂಪವಾದ, ಮಹಪೂಜೆ–ಅತ್ಯಂತ ಶ್ರೇಷ್ಠತರವಾದ ಪೂಜಾ ಅದ್ದರಿಂದ ಭಗವದನುಗ್ರಹ ಪಡೆಯಬೇಕಾದರೆ ಇಂಥಾ ಪೂಜಾ ಮಾಡಬೇಕೆಂತ ತಾತ್ಪರ್ಯ.

**ಗೋಳಕವೆ ಕುಂಡಾಗ್ನಿ ಕರಣವು ।**
**ಮೇಲೊದಗಿ ಬಹವಿಷಯ ಸಮಿಧೆಯು ।**
**ಗಾಳಿ ಯತ್ನವು ಕಾಮ ಧೂಮವು ಸನ್ನಿಧಾನಾರ್ಚಿ ॥**
**ಮೇಳನವೆ ಪ್ರಜ್ವಾಲೆ ಕಿಡಿಗಳು ।**
**ತೂಳಿದಾನಂದಗಳೆ ತತ್ತ ।**
**ತ್ಕಾಲ ಮಾತುಗಳೆಲ್ಲ ಮಂತ್ರಾಧ್ಯಾತ್ಮಯಜ್ಞವಿದು ॥ ೧೮ ॥**

ಗೋಳಕವೆ–ಇಂದ್ರಿಯ ಗೋಳಕವೇ, ಕುಂಡ–ಹೋಮಕ್ಕೆ ಯೋಗ್ಯವಾದ ಅಗ್ನಿ ಇರತಕ್ಕ ಕುಂಡ, ಅಗ್ನಿ–ಆ ಕುಂಡಗತ ಅಗ್ನಿ ಎಂಬುವೆ, ಕರಣವು–ಗೋಳಾಕಾಂತರ್ಗತ ಇಂದ್ರಿಯಗಳು (ಈ ಯಜ್ಞಕ್ಕೆ ಇಂದ್ರಿಯಗಳೇ ಅಗ್ನಿಸದೃಶ, ತದಂತರ್ಗತ ಇಂದ್ರಿಯ ನಿಯಾಮಕ ಶ್ರೀ ಪರಮಾತ್ಮನ ಪ್ರೀತ್ಯರ್ಥವಾಗಿ ಹೋಮ ಎನತಕ್ಕದ್ದು) ಇಂಥಾ ಅಗ್ನಿಗೆ ಮೇಲೆ–ಆಯಾ ಇಂದ್ರಿಯಗಳಿಗೆ ತರಂಗತರಂಗವಾಗಿ ಮ್ಯಾಲೆ ಮ್ಯಾಲೆ ಒಂದರ ಹಿಂದೆ ಒಂದು, ಒದಗಿ ಬಹ–ಅನುಸರಿಸಿ ಬರತಕ್ಕ ಆಯಾ ಇಂದ್ರಿಯಗಳಿಗೆ ಯೋಗ್ಯವಾದ, ವಿಷಯ–ವಿಷಯಗಳು ದಾವದವೇ ಇದೇವೇ, ಸಮಿಧೆಯು–ಅಗ್ನಿಯಲ್ಲಿ ಹಾಕತಕ್ಕ ಸಮಿತ್ತುಗಳು, ಗಾಳಿ ಯತ್ನವು–ಅಗ್ನಿ ಪ್ರಜ್ವಲಿಸೋದಕ್ಕೆ ಬೀಸತಕ್ಕ ಗಾಳಿ ಎಂಬುದೇ ಆಯಾ ಇಂದ್ರಿಯಗಳಿಂದ ವ್ಯಾಪಾರ ಪ್ರಾಪ ಬೇಕೆಂಬ ಕಾಮನಾ ಮಾಡೋಣ, ಸನ್ನಿಧಾನಾರ್ಚಿ–ಆಯಾ ಇಂದ್ರಿಯ ವ್ಯಾಪಾರಗಳಲ್ಲಿ ಮನಸ್ಸನ್ನು ಅತ್ಯಂತ ಪ್ರೀತವಾಗಿ ಲಿಪ್ತವಾಗಿ ಮಾಡಿ ಇರೋಣ ಎಂಬವೇ ಕಾಷ್ಠಸಂಯೋಗದಿಂದ ವ್ಯಕ್ತವಾದ ಉರಿಯು, (ಒಂದೊಂದು ಇಂದ್ರಿಯಗಳಿಂದ ಆಗತಕ್ಕ), ಮೇಳನವೇ ಪ್ರಜ್ವಾಲೆ–ಅನೇಕ ವಿಷಯಗಳು ಆಯಾ ಇಂದ್ರಿಯಗಳಲ್ಲಿ ಮೇಳನ ದಾವದಮೋ ಅವೇವೇ ದೊಡ್ಡದಾದ ಉರಿ. ತೂಳಿ ದಾನಂದಗಳೆ–ಆಯಾ ವಿಷಯಗಳಿಂದ ವ್ಯಕ್ತವಾದ ಸಂತೋಷ ಎಂಬುದೇ, ಕಿಡಿಗಳು–ಉರಿಯಿಂದ ಹೊರಡತಕ್ಕ ಕಿಡಿಗಳು (ತೂಳಿದಾ ಎಂದರೆ ವ್ಯಕ್ತವಾದ) ತತ್ತತ್ಕಾಲ–ಆಯಾ ಇಂದ್ರಿಯ ವಿಷಯಗಳ ಕುರಿತು ಆಯಾ ಕಾಲಗಳಲ್ಲಿ, ಮಾತುಗಳೆಲ್ಲ–ಆಡತಕ್ಕ ಮಾತು ಗಳೆಲ್ಲ (ಈ ಯಜ್ಞಕ್ಕೆ), ಮಂತ್ರ–ವೇದಮಂತ್ರಗಳು (ವೇದಗಳು ಯಾವತ್ತು ಅಕಾರಾದಿ ವರ್ಣಾತ್ಮಕವಾದದ್ದು. ತದ್ಗತ ವರ್ಣಗಳೇ ಉಚ್ಚಾರ ಮಾಡತಕ್ಕಾದ್ದ ಕಡಿಯಿಂದ ವೇದ ಮಂತ್ರಗಳೇ ಆಗೋದಾಯಿತು) ಈ ಯಜ್ಞಕ್ಕೆ ಇಂಥಾದ್ದೇ ಮಂತ್ರ. ಸಂಪೂರ್ಣವಾಗಿ ಆಯಾ ಇಂದ್ರಿಯ ವಿಷಯಭೋಗ ಮಾಡೋಣ ಪೂರ್ಣಾಹುತಿ, ಅಧ್ಯಾತ್ಮಯಜ್ಞವಿದು–

ಈ ಶ್ಲೋಕದಲ್ಲಿ ಹೇಳಿದ್ದು ಅಧ್ಯಾತ್ಮನಾದ ಶ್ರೀ ಪರಮಾತ್ಮನ ಪ್ರೀತಿಗೋಸ್ಕರ ಮಾಡತಕ್ಕ ಹೋಮವೆಂದು ತಾತ್ಪರ್ಯ.

೧. ಅಧಿಭೂತ ಇಂದ್ರಿಯಗೋಳಕಗಳು, ೨. ಅಧಿದೈವ ಇಂದ್ರಿಯಗೋಳಕಗಳು, ೩. ಅಧ್ಯಾತ್ಮ ತದಂತರ್ಗತ ಶ್ರೀ ಪರಮಾತ್ಮ ಈ ಅನುಸಂಧಾನದಿಂದ ಸರ್ವ ಇಂದ್ರಿಯ ವ್ಯಾಪಾರಗಳು. ಶ್ರೀ ಪರಮಾತ್ಮನ ಸೇವಾನೇನೇ ಆಗಿ ಸಾರ್ಥಕವಾಯಿತು. ಇದರಿಂದ "ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ" ಇತ್ಯಾದಿ ಗೀತಾರ್ಥಗಳನ್ನು ಹೇಳಿದಂತಾಯಿತು.

**ಮಧುವಿರೋಧಿಯ ಪಟ್ಟಣಕೆ ಪೂ ।**
**ರ್ವದ ಕವಾಟಗಳಕ್ಷಿ ನಾಸಿಕ ।**
**ವದನ ಶ್ರೋತ್ರಗಳೆರಡು ದಕ್ಷಿಣ ಉತ್ತರದ್ವಾರ ॥**
**ಗುದಲುಪಸ್ಥಗಳೆರಡು ಪಶ್ಚಿಮ ।**
**ಕದಗಳೆನಿಪವು ಷಟ್ ಸರೋಜವೆ ।**
**ಸದನ ಹೃದಯವೆ ಮಂಟಪಂಗಳು ತ್ರಿಗುಣಗಳೆ ಕಲಶ ॥ ೧೯ ॥**

ಈ ದೇಹಾಂತರ್ಗತನಾದ ಶ್ರೀ ಬಿಂಬಮೂರ್ತಿಗೆ ಈ ದೇಹವು ಪಟ್ಟಣತ್ವೇನ ಅನುಸಂಧಾನ ಮಾಡಿ ಅರ್ಪಿಸೋ ಕ್ರಮವನ್ನ ಹೇಳತಾರೆ. ಈ ವಿಷಯ ೨೩ನೇ ಶ್ಲೋಕದ ವರಿಗೂ ಐದು ಶ್ಲೋಕಗಳಿಂದ ಅನುಸಂಧಾನ ಕ್ರಮವನ್ನ ಹೇಳತಾರೆ.

ಮಧುವಿರೋಧಿಯ—ಮಧುನಾಮಕ ದೈತ್ಯಗೆ ವಿರೋಧಿಯಾದ ದೇಹಾಂತರ್ಗತನಾದ ಶ್ರೀ ಬಿಂಬರೂಪಿಯಾದ ಶ್ರೀ ಪರಮಾತ್ಮನ, ಪಟ್ಟಣಕ್ಕೆ—ವೈಕುಂಠಾಖ್ಯ ಪಟ್ಟಣಕ್ಕೆ ಸದೃಶತ್ವೇನ ವರ್ಣನ ಮಾಡತಕ್ಕ ಅಧಿಕಾರಿಗಳ ಸ್ಥೂಲದೇಹಾಖ್ಯ ಪಟ್ಟಣಕ್ಕೆ, ಪೂರ್ವದ ಕವಾಟುಗಳು—ಪೂರ್ವದಲ್ಲಿ ಇರತಕ್ಕ ಬಾಗಿಲುಗಳು, ಅಕ್ಷಿ—ನೇತ್ರದ್ವಯಗಳು, ನಾಸಿಕ—ಮೂಗಿನ ದ್ವಾರಗಳು ಎರಡು, ವದನ—ಮುಖದ್ವಾರ ಒಂದು, ಅಂತು ಐದು ಬಾಗಿಲುಗಳು, ಶ್ರೋತ್ರಗಳೆರಡು—ಕಿವಿಗಳು ಎರಡು, ದಕ್ಷಿಣ ಉತ್ತರ ದ್ವಾರ—ದಕ್ಷಿಣ ಬಾಗಿಲು ಒಂದು, ಉತ್ತರ ಬಾಗಿಲು ಒಂದು, ಅಂತು ಎರಡು, ಗುದಲುಪಸ್ಥಳಗಳೆರಡು—ಮಲವಿಸರ್ಜನ ದ್ವಾರ ಒಂದು, ಮೂತ್ರ ವಿಸರ್ಜನ ದ್ವಾರ ಒಂದು, ಪಶ್ಚಿಮ ಕದಗಳೆನಿಪವು—ಇವುಗಳೆರಡೂ ಪಶ್ಚಿಮ ದ್ವಾರ ಎಂತ ಎನಿಸೋಗದಾಗತದೆ. ಅಂತು ಚತುರ್ದಿಕ್ಕಿನಲ್ಲಿ ಎಂಟು ಬಾಗಿಲುಗಳು ಆಯಿತು. ಊರ್ಧ್ವದ್ವಾರ ಬ್ರಹ್ಮರಂಧ್ರ ಎಂತ ತಾತ್ಪರ್ಯ. ಷಟ್ ಸರೋಜವೇ—ದೇಹಗತ ಸುಷುಮ್ನಾ ನಾಡಿ ಅಂತರ್ಗತ ಗುದಾರಭ್ಯ ಶಿರಾಂತವರಿಗೂ ಇರತಕ್ಕ ಐದು ಕಮಲಗಳು, ಅಂತು ೨೦ ಕಮಲಗಳು ಒಂದರ ಮ್ಯಾಲೆ ಒಂದು ಆರು ಸ್ಥಾನಗಳು. ಸದನ—ಇವುಗಳು, ಶ್ರೀ ಪರಮಾತ್ಮನಿಗೆ ಮನಿಗಳು, ಹೃದಯವೆ ಮಂಟಪಂಗಳು—ಈ ಮನಿಗಳಲ್ಲಿ ಹೃದಯಗೋಳಕಗತ, ೧. ಮನಸ್ಸು, ೨. ಬುದ್ಧಿ, ೩. ಚಿತ್ತ,

೪. ಅಹಂಕಾರ, ೫. ಅಂತಃಕರಣ. ಇದು ಐದು ಎಂಬುದೇ ಶ್ರೀ ದೇವರು ಕೊಡತಕ್ಕ ಮಂದಿರಗತ ಮಂಟಪಗಳು ಮತ್ತು

| | | | |
|---|---|---|---|
| ೧. | ಚತುರ್ದಳದಲ್ಲಿ | ಅಹಂಕಾರ ವೃತ್ತಿ | ಗುದಸ್ಥಾನ |
| ೨. | ಷಟ್‌ದಳದಲ್ಲಿ | ಚಿತ್ತ | ನಾಭಿ |
| ೩. | ಅಷ್ಟದಳದಲ್ಲಿ | ಬುದ್ಧಿ | ಹೃದಯ |
| ೪. | ದ್ವಿದಳದಲ್ಲಿ | ಮನಸ್ಸು | ಕಂಠ |
| ೫. | ಚತುರ್ದಳದಲ್ಲಿ | ಅಂತಃಕರಣ | ಭ್ರೂಮಧ್ಯ |
| ೬. | ದ್ವಾದಶದಳದಲ್ಲಿ | ಸರ್ವವೂ ಮೇಳನ | ಶಿರ |

ಏತಾದೃಶ ಮಂಟಪಗಳಿಗೆ, ತ್ರಿಗುಣಗಳೇ ಕಲಶ–ಸಾತ್ವಿಕಾದಿ ಗುಣತ್ರಯಗಳೇ ಆಯಾ ಮಂಟಪಕ್ಕೆ ಕಲಶತ್ರಯಗಳು ಎಂತ ತಾತ್ಪರ್ಯ.

**ಧಾತುಗಳು ಸಪ್ತಾವರಣ ಉಪ ।**
**ವೀಥಗಳೆ ನಾಡಿಗಳು ಮದಗಳು ।**
**ಯೂಥಪಗಳು ಸುಷುಮ್ನಾನಾಡಿಯೆ ರಾಜಪಂಥಾನ ॥**
**ಈ ತನೂರುಹಗಳೆ ವನಂಗಳು ।**
**ಮಾತರಿಶ್ವನು ಪಂಚರೂಪದಿ ।**
**ಪಾತಕಗಳೆಂಬರಿಗಳನು ಸಂಹರಿಪ ತಳವಾರ ॥ ೨೦ ॥**

ಪೂರ್ವೋಕ್ತ ಸಂಗತಿಯೇ ಹೇಳುತ್ತಾರೆ.

ಧಾತುಗಳು–ದೇಹಕ್ಕೆ ಆವರಣರೂಪದಿಂದ ಇರತಕ್ಕ ತ್ವಗಾದಿ ಸಪ್ತಧಾತುಗಳೇ ದೇಹಾಖ್ಯ ಪಟ್ಟಣಕ್ಕೆ, ಸಪ್ತಾವರಣ–ಸಪ್ತಪ್ರಾಕಾರಗಳು (ಈ ದೇಹಾಖ್ಯ ಪಟ್ಟಣದೊಳಗೆ ವಿದ್ಯಮಾನವಾದ), ಸುಷುಮ್ನಾನಾಡಿಯೇ ದೇಹದ ಮಧ್ಯಗತ ಸುಷುಮ್ನನಾಡಿಯೇ, ರಾಜಪಂಥಾನ–ದೊಡ್ಡದಾದ, ಶ್ರೇಷ್ಠವಾದ, ಪ್ರಭುವಾದ ಪರಮಾತ್ಮ ಸಂಚಾರಮಾಡ ತಕ್ಕ ಮಾರ್ಗವು. ಈ ಮಾರ್ಗಕ್ಕೆ ಅನುಸರಿಸಿದ, ಉಪವೀಥಗಳು–ಚಿಲ್ಲರೆ ಮಾರ್ಗಗಳು ಎಂಬುದೇ, ನಾಡಿಗಳು–ಎಪ್ಪತ್ತೆರಡುಸಾವಿರ ನಾಡಿಗಳು (೭೨೦೦೦ ನಾಡಿಗಳು), ಮದ ಗಳು–ಅಷ್ಟಮದಗಳು ದಾವವೆಂದರೆ ೧. ಅನ್ನಮದ, ೨. ಅರ್ಥಮದ, ೩. ಪ್ರಾಯಮದ, ೪. ವಿದ್ಯಾಮದ, ೫. ರಾಜ್ಯಮದ, ೬. ಕುಲಮದ, ೭. ಸತ್ಕರ್ಮಮದ, ೮ ಶೀಲಮದ. ಈ (೮) ಎಂಟು, ಮದಗಳು ಯೂಥಪಗಳು–ಸೇನಾನಾಯಕರು. ಈ ತನೂರುಹಗಳೇ– ಈ ದೇಹದಲ್ಲಿ ವಿದ್ಯಮಾನವಾದ ಸ್ಥೂಲ, ಸೂಕ್ಷ್ಮಾದಿ ರೋಮಗಳೇ, ವನಂಗಳು– ದೇಹಾಖ್ಯ ಪಟ್ಟಣದ ಸುತ್ತು ಇರತಕ್ಕ ವನಗಳು, ಮಾತರಿಶ್ವನು–ಈ ದೇಹಾಂತರ್ಗತ ಜೀವೋತ್ತಮನಾದ ವಾಯುದೇವರು, ಪಂಚರೂಪದಿ–ಪ್ರಾಣಾದಿ ಪಂಚರೂಪದಿಂದ ಆವಾಸರಾಗಿ, ತಳವಾರ–ಈ ಪಟ್ಟಣಕ್ಕೆ ಕಾವಲು ಇರತಕ್ಕವರು, ಪಾತಕಿಗಳೆಂಬ– ಪಾಪಾಭಿಮಾನಿಯಾದ ಅಸುರರ ಪಾಪಗಳು, ಇವುಗಳೆಂಬ, ಅರಿಗಳನ–ಪರಲೋಕ

ಸಾಧಕನಿಗೆ ಬಾಧಕವಮಾಡತಕ್ಕ ಶತ್ರುಗಳ, ಸಂಹರಿಪ–ಪ್ರಭುವಾದ ಪರಮಾತ್ಮನ ಆಜ್ಞಾದಿಂದ ಸಂಹಾರ ಮಾಡತಾನೆ, ಎಂತ ತಾತ್ಪರ್ಯ.

**ಇನಶಶಂಕಾದಿಗಳೆ ಲಕ್ಷ್ಮೀ ।**
**ವನಿತೆಯರಸನ ದ್ವಾರಪಾಲಕ ।**
**ರೆನಿಸುತಿಪ್ಪರು ಮನದ ವೃತ್ತಿಗಳೇ ಪದಾತಿಗಳು ॥**
**ಅನುಭವಿಪ ವಿಷಯಂಗಳೇ ಪ ।**
**ಟ್ಟಣಕೆ ಬಪ್ಪ ಪಸಾರಗಳು ಜೀ ।**
**ವನು ಸುವರ್ತಕ ಕಪ್ಪಗಳ ಕೈಕೊಂಬ ಹರಿ ತಾನು ॥ ೨೧ ॥**

ಇನ್ನು ದೇಹಾಖ್ಯ ಪಟ್ಟಣ ವಿಚಾರವೇ ಹೇಳತಾರೆ.

ಇನಶಶಾಂಕಾದಿಗಳೇ – ಸೂರ್ಯಚಂದ್ರರೇ ಇವರೇ ಮೊದಲಾದವರುಗಳು, ಲಕ್ಷ್ಮೀ–ನಿತ್ಯಮುಕ್ತಳಾದ ಶ್ರೀ ಲಕ್ಷ್ಮೀದೇವೇರ, ವನಿತೆ – ಹೆಂಡತಿಯಾಗಿ ಉಳ್ಳ, ಅರಸನ–ಶ್ರೀ ನಾರಾಯಣದೇವರ ದೇಹಾಖ್ಯಪಟ್ಟಣಕೆ–ಪೂರ್ವೋಕ್ತ ದ್ವಾರಗಳಿಗೆ, ದ್ವಾರಪಾಲಕರು – ದ್ವಾರರಕ್ಷಕರು ಎಂತ, ಎನಿಸುತಿಪ್ಪರು – ಎನಿಸೋವರಾಗತಾರೆ, ಹ್ಯಾಂಗೆಂದರೆ ೫ ಪೂರ್ವ ದ್ವಾರಗಳಾದ ಐದಕ್ಕೆ ನೇತ್ರಗಳು ಎರಡಕ್ಕೆ, ಬಲನೇತ್ರಕ್ಕೆ ಸೂರ್ಯ, ಎಡನೇತ್ರಕ್ಕೆ ಚಂದ್ರ, ನಾಸಿಕಾ ಎರಡಕ್ಕೆ ೧. ಬಲದ್ವಾರಕ್ಕೆ ನಾಸತ್ಯ, ೨. ಎಡದ್ವಾರಕ್ಕೆ ದಸ್ರ. ಇವರಿಬ್ಬರೂ ಅಶ್ವಿನಿ ದೇವತೆಗಳು. ಮುಖದ್ವಾರಕ್ಕೆ ಅಗ್ನಿ ಅಂತು ಐದಕ್ಕೆ ಸರಿ ಆಯಿತು. ಉತ್ತರ ದಕ್ಷಿಣ ದ್ವಾರ ಈ ಎರಡು ದ್ವಾರಗಳಿಗೆ ದಿಗ್ದೇವತೆಗಳು. ಈ ದಕ್ಷಿಣ ಉತ್ತರ ದ್ವಾರಗಳು ದಾವದೆಂದರೆ ಕರ್ಣದ್ವಯಗಳು ಎಂತ ತಾತ್ಪರ್ಯ. ಪಶ್ಚಿಮ ದ್ವಾರಗಳು ಎರಡು. ಗುದದ್ವಾರಕ್ಕೆ ಮಿತ್ರನಾಮಕ ಸೂರ್ಯ, ಉಪಸ್ಥ ದ್ವಾರಕ್ಕೆ ಸ್ವಾಯಂಭುವಮನು. ಊರ್ಧ್ವದ್ವಾರ ಶಿರೋದ್ವಾರ, ಇದಕ್ಕೆ ಬ್ರಹ್ಮ. ಅಂತು ದಶದ್ವಾರಗಳಿಗೆ ದ್ವಾರರಕ್ಷಕರು ಎಂತ ಅರ್ಥ. ಮನದ ವೃತ್ತಿಗಳೇ–ಮನೋವೃತ್ತಿಗಳೇ, ಪದಾತಿಗಳು–ಪೂರ್ವೋಕ್ತ ಅಷ್ಟಮದಗಳೆಂಬ ಸೇನಾನಾಯಕರ ವಶದಲ್ಲಿ ಇರತಕ್ಕ ಸೈನ್ಯಗಳು. ಮನೋವೃತ್ತಿಗಳೆಂದರೆ ವ್ಯಾಪಾರಗಳು ಅನೇಕ. ಆಯಾ ಒಂದೊಂದು ವ್ಯಾಪಾರಕ್ಕೆ ಒಂದೊಂದು ಮನೋವೃತ್ತಿ ಎಂದರೆ ವಿಭಾಗವಿಶೇಷ ಎಂತ ಅರ್ಥ. ಅನುಭವಿಪ ವಿಷಯಂಗಳೇ–ಏಕಾದಶೇಂದ್ರಿಯಗಳಿಂದ ಅನುಭವ ಮಾಡತಕ್ಕ ಆಯಾ ಇಂದ್ರಿಯಗಳ ವಿಶೇಷಗಳೇ, ಪಟ್ಟಣಕ್ಕೆ ಬಪ್ಪ–ದೇಹಾಖ್ಯ ಪಟ್ಟಣಕ್ಕೆ ಹೊರಗಿನಿಂದ ಬರತಕ್ಕ, ಪಸಾರಗಳು–ಅನೇಕ ವಿಧವಾದ ಸರಕುಗಳು, ಬಾಹ್ಯ ವಿಷಯಗಳು–ಇಂದ್ರಿಯ ಮಾರ್ಗವಾಗಿ ದೇಹ ಪ್ರವಿಷ್ಟವಾಗತದೆ. ಆದಕಡಿಯಿಂದ ವ್ಯಾಪಾರಕ್ಕೆ ಯೋಗ್ಯವಾದ ಸರಕುಗಳು (ಇದನ್ನ ವ್ಯಾಪಾರಕ್ಕೆ ಮಾಡತಕ್ಕವ), ಜೀವನು ಸುವರ್ತಕ–ಜೀವನು ಪೂರ್ವೋಕ್ತ ಸರಕುಗಳಿಂದ ಥಂಡಾಗಿ ವ್ಯಾಪಾರ ಮಾಡತಕ್ಕವನು. ಇಂಥಾ ಸರಕುಗಳಿಂದ ಪುಣ್ಯವೆಂಬ ಲಾಭವು, ಪಾಪವೆಂಬ ನಷ್ಟವು ಆಯಾ ಸರಕುಗಳಿಂದ

ಹೊಂದತಾ ವ್ಯಾಪಾರ ಮಾಡತಾ ಇರಥಾನೆ. ಹರಿ ತಾನು—ಈ ಪಟ್ಟಣಗತ ಬಿಂಬರೂಪಿಯಾದ ಪರಮಾತ್ಮನಾದ ತಾನು, ಕಪ್ಪಗಳ—ಕಾಣಿಕೆಗಳನ್ನು, ಕೈಕೊಂಬ—ಜೀವಾಖ್ಯ ವರ್ತಕನಿಂದ ಸ್ವೀಕಾರ ಮಾಡತಾನೆ. ಕಪ್ಪ ದಾವದೆಂದರೆ ಜೀವಭುಕ್ತ ಹೋಗತಾ ತದಂತರ್ಗತ ಪರಮಾತ್ಮನಾದ ತನ್ನ ಸ್ವಾಖ್ಯರಸ ವಿಷಯಗಳು ದಾವದವೇ ಅದರನ್ನ ಅನುಸಂಧಾನದಿಂದ ಕೊಟ್ಟಿದ್ದರನ್ನ ಸ್ವೀಕಾರ ಮಾಡತಾನೆ ಎಂತ ತಾತ್ಪರ್ಯ.

**ಉರುಪರಾಕ್ರಮನರಮನಿಗೆ ದಶ ।**
**ಕರಣಗಳು ಕನ್ನಡಿಯ ಸಾಲುಗ ।**
**ಳರವಿದೂರನ ತದ್ವಿಹಾರಕೆ ಚಿತ್ತ ಮಂಟಪವು ॥**
**ಮರಳಿ ಬೀಸುವ ಶ್ವಾಸಗಳು ಚಾ ।**
**ಮರ ವಿಲಾಸಿನಿ ಬುದ್ಧಿ ದಾವೋ ।**
**ದರಗೆ ಸಾಷ್ಟಾಂಗ ಪ್ರಣಾಮಗಳೇ ಸುಶಯನಗಳು ॥ ೨೨ ॥**

ಇನ್ನೂ ದೇಹಾಖ್ಯ ಪಟ್ಟಣದ ವಿಚಾರವನ್ನೇ ಹೇಳತಾರೆ.

ಉರುಪರಾಕ್ರಮ—ಉತ್ಕೃಷ್ಟವಾದ ಸದೃಶರಹಿತವಾದ ಸಾಮರ್ಥ್ಯ ಉಳ್ಳ ಶ್ರೀ ಬಿಂಬ ರೂಪಿ ಪರಮಾತ್ಮನ, ಅರಮನಿಗೆ—ಅರಮನಿ ಎಂಬ ಅಷ್ಟದಳ ಕಮಲಾಖ್ಯ ಅರಮನಿಗೆ, ಹಾಂಗೆ ಷಟ್‌ಸರೋಜವೆಂಬ ಸದನಾಖ್ಯ ಅರಮನಿಗೆ, ದಶಕರಣಗಳು—ದಶೇಂದ್ರಿಯಗಳು, ಕನ್ನಡಿಯ ಸಾಲುಗಳು—ಕನ್ನಡಿಯ ಪಂಕ್ತಿಗಳು (ಮತ್ತು ಕರಣಗಳು ಎಂದರೆ ಮನೋವೃತ್ತಿಗಳು. ಜ್ಞಾನಸಂಯುಕ್ತವಾದಂಥಾ ಅನೇಕ ವೃತ್ತಿಗಳು, ಕನ್ನಡಿಯ ಸಾಲುಗಳು ಎಂತಲೂ ತಾತ್ಪರ್ಯ) ಅರವಿದೂರನ—ದೋಷಯುಕ್ತರಾದ ದೈತ್ಯರಿಗೆ ದೂರನಾದ ಪರಮಾತ್ಮನ, ಸದ್ವಿಹಾರಕೆ—ಸಮೀಚೀನವಾದ ಇಚ್ಛಾದಿಗಳು ಹುಟ್ಟಿಸಬೇಕಾದರೆ ಚಿತ್ತವೆಂಬ ವೃತ್ತಿಯಲ್ಲಿ ವಿಹಾರ ಮಾಡಬೇಕು. ಇಂಥಾ ಸದ್ವಿಹಾರ ಮಾಡೋದಕ್ಕೆ, ಚಿತ್ತ—ಷಟ್‌ದಳ ಕಮಲವೆಂಬ ಸದನದಲ್ಲಿ ವಿದ್ಯಮಾನವಾದ ಚಿತ್ತ ಎನತಕ್ಕದ್ದೇ. ಮಂಟಪವು—ದಿವ್ಯವಾದ ಮಂಟಪವು, ಮರಳಿ ಬೀಸುವ—ಶ್ರೀ ಬಿಂಬರೂಪಿಗೆ (ಪರಮಾತ್ಮಗೆ) ಬಾರಿ ಬಾರಿಗೂ ಬೀಸಿ ಗಾಳಿ ಹಾಕೋಣ ದಾವದವೇ ಇದಂಬದೇ, ಶ್ವಾಸಗಳು—ನಾಸಿಕಾದ್ವಾರದಿಂದ ಒಳಗೆ ಹೊರಗೆ ಸಂಚಾರ ಮಾಡತಕ್ಕ ಶ್ವಾಸರೂಪವಾದ ಗಾಳಿಯೇ, ಚಾಮರಗಳು—ಚಾಮರಗಳು, ವಿಲಾಸಿನಿ ಬುದ್ಧಿ—ಇಂಥಾ ದೇವರ ಎದುರಿಗೆ ನಾನಾವಿಧ ಅಭಿನಯದಿಂದ ನರ್ತನ ಮಾಡತಕ್ಕ ಸ್ತ್ರೀ ಎಂಬವಳೇ ಬುದ್ಧಿ ಎಂಬ ಸ್ತ್ರೀ. ದಾವೋದರಗೆ—ಗೋಪೀದೇವೇರಿಂದ ಉದರಕ್ಕೆ ದಾಮದಿಂದ ಕಟ್ಟಿಸಿಕೊಂಡಂಥಾ ಬಿಂಬರೂಪಿಯಾದ ಶ್ರೀ ಪರಮಾತ್ಮಗೆ, ಸಾಷ್ಟಾಂಗಪ್ರಣಾಮಗಳೇ—ಅಷ್ಟಾಂಗದಿಂದ ಸಹಿತವಾದ ನಮಸ್ಕಾರಗಳೇ, ಸುಶಯನಗಳು — ಸಮೀಚೀನವಾದ ಅನುಸಂಧಾನದಿಂದ ಲಯಚಿಂತನ ಮಾಡಿ ಶಯನ ಮಾಡತಕ್ಕದ್ದು. ಮತ್ತು ಏಕಾದಶೇಂದ್ರಿಯಗಳು ಸಮೀಚೀನವಾದ ಭಕ್ತಿಯಿಂದ

ಶ್ರೀ ಪರಮಾತ್ಮನ ಪಾದಕ್ಕೆ ಅರ್ಪಿಸಿ ದೈನ್ಯನಾಗೋಣವೇ ಸಾಷ್ಟಾಂಗ ನಮಸ್ಕಾರಗಳು ಎಂತ ತಾತ್ಪರ್ಯ.

**ವಿಶೇಷಾರ್ಥ :**—" ಬುದ್ಧಿಃ ಸ್ತ್ರೀತಿ ಪ್ರಾಣಾಗ್ನಿಹೋತ್ರಖಂಡನಾನಾತ್ |
" ಬುದ್ಧಿರ್ಮನೀಷಾ ಧಿಷಣೇತ್ಯಮರಃ || "

**ಮಾರಮಣನರಮನೆಗೆ ಸುಮಹಾ |**
**ದ್ವಾರವೆನಿಸುವ ವದನಕೊಪ್ಪುವ |**
**ತೋರಣ ಸ್ಮಶ್ರುಗಳು ಕೇಶಗಳೇ ಪತಾಕೆಗಳು ||**
**ಊರಿನಡೆವಂಘ್ರಿಗಳು ಜಂಘೆಗ |**
**ಳೂರು ಮಧ್ಯೋದರ ಶಿರಗಳಾ |**
**ಗಾರದುಪ್ಪರಿಗೆಗಳು ಕೋಶಗಳೈದು ಕೋಣೆಗಳು || ೨೩ ||**

ಇನ್ನೂ ದೇಹಾಖ್ಯ ಪಟ್ಟಣದ ವಿಚಾರವೇ ಹೇಳತಾರೆ.

ಮಾರಮಣನರಮನೆಗೆ—ಹೃದಯಾಂತರ್ಗತನಾದ ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರಾದ ಬಿಂಬರೂಪಿ ಶ್ರೀ ಪರಮಾತ್ಮಗೆ, ಸುಮಹಾದ್ವಾರವೆನಿಸುವ—ಶ್ರೇಷ್ಠವಾದ ದ್ವಾರವೆನಿಸುವ, ವದನಕೊಪ್ಪುವ – ವದನದ ಮೇಲೆ ತುಟಿಯಲ್ಲಿ ಒಪ್ಪತಕ್ಕಂಥಾ, ಸ್ಮಶ್ರುಗಳು—ಉಭಯ ಪಾರ್ಶ್ವ ಮೀಸೆಗಳು, ತೋರಣ—ಚೂತಪತ್ರಗಳಿಂದ ಕಟ್ಟಿರುವ ತೋರಣಗಳು, ಕೇಶಗಳೇ ಪತಾಕಿಗಳು—ಶಿರೋಗತ ಊರ್ಧ್ವವಾದ ಕೂದಲುಗಳು ಅರಮನೆಗೆ ಧ್ವಜಪತಾಕೆಗಳು, ಊರಿನಡೆವಂಘ್ರಿಗಳು—ಭೂಮಿ ಮೇಲೆ ಊರಿ ನಡೆಯುವ ಪಾದಗಳು, ಜಂಘೆಗಳು—ಮೊಣಕಾಲುಗಳು, ಊರು—ತೊಡೆಗಳು, ಮಧ್ಯೋದರ—ಉದರ ಮಧ್ಯಪ್ರದೇಶ, ಶಿರ—ಶಿರಸ್ಸು, ಗಳು—ಇವುಗಳು, ಆಗಾರ—ಮನಿಗಳು, ಉಪ್ಪರಿಗೆಗಳು—ಈ ಮನಿಗಳು ಒಂದರ ಮ್ಯಾಲೆ ಒಂದು ಅಂತಸ್ತು ಆಗಿ ಇರೋಣ. ಇಂಥಾದ್ದು ದಾವದೆಂದರೆ, ಪಾದತಳದಲ್ಲಿ ಪಾತಾಳಲೋಕ, ಶಿರದಲ್ಲಿ ಸತ್ಯಲೋಕ ಎಂತ, ಈ ಪ್ರಕಾರ ಪುರಾಣಾದಿಗಳಲ್ಲಿ ಇರುವದ್ದರಿಂದ ಅಂತಸ್ತುರೂಪದಿಂದ ಉಪ್ಪರಿಗೆಗಳಾಗಿನ್ನು ಮಹಡಿಮನೆ ಎಂತಲೂ ತಾತ್ಪರ್ಯ. ಕೋಶಗಳು—ದೇಹದಲ್ಲಿ ಸರ್ವತ್ರ ವ್ಯಾಪಿಸಿ ಇರುವಂಥಾ ಅನ್ನಮಯಾದಿ ಪಂಚಕೋಶಗಳು, ಐದು ಕೋಣೆಗಳು—ಆಯಾ ಮಹಡಿಮನಿಗಳಲ್ಲಿ ಚಿಕ್ಕಚಿಕ್ಕ ಮನಿಗಳು ಎಂತ ತಾತ್ಪರ್ಯ. ಇದುವರೆಗೂ ದೇಹವನ್ನು ಪಟ್ಟಣತ್ವೇನ ಅರ್ಪಣಕ್ರಮ ಹೇಳಿ ಇನ್ನು ಮುಂದೆ ರಥತ್ವೇನ ವರ್ಣನ ಮಾಡತಾರೆ.

**ತಾ||** ಹೃದಯಸ್ಥ ಬಿಂಬಮೂರ್ತಿ ಪರಮಾತ್ಮಗೆ ಮುಖವೇ ಮಹಾದ್ವಾರ, ತುಟಿಯಲ್ಲಿ ವಿದ್ಯಮಾನವಾದ ಮೀಸೆಗಳೇ ಮಹಾದ್ವಾರಕ್ಕೆ ತೋರಣ, ಶಿರಃಕೇಶ ಪತಾಕೆಗಳು, ಪಾದ, ಜಂಘೆ, ಮಧ್ಯಶರೀರ, ಶಿರ ಇವುಗಳೇ ಉಪ್ಪರಿಕೆಗಳು, ಪಂಚಕೋಶಗಳೇ ಚಿಕ್ಕ ಮನಿಗಳು ಎಂತ ಅನುಸಂಧಾನ ಮಾಡಿ ಅರ್ಪಣಮಾಡಬೇಕು.

**ಈ ಶರೀರವೆ ರಥ ಪತಾಕ ಸು ।**
**ವಾಸಗಳೆ ಪುಂಡ್ರಗಳು ಧ್ವಜ ಸಿಂ ।**
**ಹಾಸನವೆ ಚಿತ್ತವು ಸುಬುದ್ಧಿಯೆ ಕಲಶ ಸನ್ಮನವೆ ॥**
**ಪಾಶ ಗುಣ ದಂಡತ್ರಯಗಳು ಶು ।**
**ಭಾಶುಭದ್ವಯ ಕರ್ಮ ಚಕ್ರ ಮ ।**
**ಹಾಸಮರ್ಥಾಶ್ವಗಳು ದಶಕರಣಂಗಳೆನಿಸುವುವು ॥ ೨೪ ॥**

ಈ ಶರೀರವನ್ನು ರಥತ್ವೇನ ಭಗವದರ್ಪಣ ಮಾಡಬೇಕೆಂದು ಎರಡು ಶ್ಲೋಕಗಳಿಂದ ಹೇಳುತಾರೆ.

ಈ ಶರೀರವೆ ರಥ–ಈ ವರ್ತಮಾನಶರೀರವೇ (ಸ್ಥೂಲಶರೀರವೇ) ರಥ, ತದ್ಗತ ಬಿಂಬರೂಪಿ ಪರಮಾತ್ಮನೇ ರಥಗತ ಯಜಮಾನ, ಸುವಾಸಗಳೇ–ಹೊದಿಯತಕ್ಕ, ಉಡ ತಕ್ಕ ದಿವ್ಯವಸ್ತ್ರಗಳೇ, ಪತಾಕ–ಧ್ವಜಶಿರೋಭಾಗದಲ್ಲಿ ಕಟ್ಟಿರತಕ್ಕ ಪತಾಕಗಳು, ಪುಂಡ್ರ ಗಳು ಧ್ವಜ–ಊರ್ಧ್ವಪುಂಡ್ರ ಅಂದರೆ ದ್ವಾದಶನಾಮಗಳೇ ಧ್ವಜಗಳು, ಸಿಂಹಾಸನವೆ–ರಥದಲ್ಲಿ ದೇವರು ಕೂಡತಕ್ಕ ಸಿಂಹಾಸನರೂಪವಾದ ದಿವ್ಯ ಆಸನವೇ, ಚಿತ್ತವು–ಷಟ್ ದಳ ಕಮಲಗತ ಚಿತ್ತವು. ಇದು ಪೂರ್ವಸ್ಮರಣಶಕ್ತಿಯಾದಕಡಿಯಿಂದ ಸಿಂಹಾಸನ, ಸುಬುದ್ಧಿಯೆ ಕಲಶ–ಅಷ್ಟದಳ ಕಮಲಗತ ಸಮೀಚೀನವಾದ ತಾರತಮ್ಯ ಪಂಚಭೇದ ಜ್ಞಾನಯುಕ್ತವಾದ ದೃಢವಾದ ಬುದ್ಧಿಯೇ ಸಿಂಹಾಸನದ ಕಲಶ, ನಿಶ್ಚಯಾತ್ಮಕ ವಾದಂಥಾದ್ದು, ಸನ್ಮನವೆ ಪಾಶ–ಸಾಧು ಆಲೋಚನಾತ್ಮಕ ಮನಸ್ಸು ಅಶ್ವಗಳು ಕಟ್ಟತಕ್ಕ ಹಗ್ಗಗಳು, ಗುಣ–ಸತ್ವರಜಸ್ತಮೋಗುಣತ್ರಯಗಳು, ದಂಡತ್ರಯಗಳು–ರಥಚಕ್ರಕ್ಕೆ ಆಧಾರಭೂತಗಳಾದ ಮೂರು ಇರುಚುಗಳು (ಕಬ್ಬಿಣದ ಅಚ್ಚುಗಳು), ಶುಭಾಶುಭದ್ವಯ ಕರ್ಮ ಚಕ್ರ–ಪುಣ್ಯಕರ್ಮ ಪಾಪಕರ್ಮ ಎನತಕ್ಕದ್ದು ಎರಡೂ ಒಂದೊಂದು ಇರಚಿಗೆ ಎರಡೆರಡು ಚಕ್ರದ ಮ್ಯಾರಿಗೆ ಮೂರು ಇರಚಿಗೂ ಆರು ಚಕ್ರಗಳು, ಮಹಾಸಮರ್ಥಾಶ್ವ ಗಳು–ರಥವನ್ನು ಸೆಳೆಯತಕ್ಕ, ರಥಕ್ಕೆ ಕಟ್ಟಲ್ಪಟ್ಟ ಅತ್ಯಂತ ಶ್ರೇಷ್ಠಗಳಾದ ಬಲಿಷ್ಠವಾದ ಕುದುರೆಗಳು, ದಶಕರಣಂಗಳೆನಿಸುವುವು–ದಶೇಂದ್ರಿಯಗಳಿಂದ ಕಾರ್ಯ ನಡಿತವೆ, ಆದಕಡಿ ಯಿಂದ ಈ ಅನುಸಂಧಾನ ಯಾವತ್ತು ಅಭಿಮಾನಿದೇವತಾಪರವೆಂದು ತಿಳಿಯಬೇಕು. ಅಂತು ಅಧಿಭೂತ, ಅಧ್ಯಾತ್ಮ, ಅಧಿದೈವ ಈ ಮೂರರಲ್ಲಿ ಸಮನ್ವಯಮಾಡಿ ಅನು ಸಂಧಾನ ಮಾಡಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :–** " ಏಷ ಏವ ದೇವರಥಃ " ಇತಿ ಶ್ರುತೇಃ ॥ " ಇದಂ ಶರೀರಂ ಶ್ರೀವಿಷ್ಣುರಥಮಿತ್ಯನುಚಿಂತಯೇತ್ " ಇತಿ ಪ್ರಕಾಶಸಂಹಿತಾಯಾಂ.

**ಮಾತರಿಶ್ವನು ದೇಹರಥದೊಳು ।**
**ಸೂತನಾಗಿಹ ಸರ್ವಕಾಲದಿ ।**
**ಶ್ರೀತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ ॥**

**ಪ್ರೀತಿಯಿಂದಲಿ ಪೋಷಿಸುವ ವಾ ।**
**ತಾತಪಾದಿಗಳಿಂದಲಿ ವಿರತ ।**
**ಈ ತನುವಿನೊಳು ಮಮತೆ ಬಿಟ್ಟವನವನೆ ಮಹಯೋಗಿ ॥ ೨೫ ॥**

ಮಾತರಿಶ್ವನು – ಸಮಸ್ತ ವೇದಗಳಲ್ಲಿ ಸಂಚಾರ ಮಾಡತಕ್ಕ ಜೀವೋತ್ತಮರಾದ ಪ್ರಧಾನ ವಾಯುದೇವರು, ದೇಹರಥದೊಳು–ದೇಹಾಖ್ಯರಥದೊಳಗೆ ಅಶ್ವಗಳ ದ್ವಾರಾ ರಥವನ್ನು ನಡೆಸತಕ್ಕ, ಸೂತನಾಗಿಹ – ಸೂತನಾಗಿದ್ದಾನೆ. ಅಶ್ವಸಂಕೇತಗಳಾದ ದಶಕರಣಗಳಲ್ಲಿ ದಶರೂಪದಿಂದ ದೇವರ ಆಜ್ಞಾದಿಂದ ನಡಿಸತಾನೆ. ಸರ್ವಕಾಲದಿ– ಸಮಸ್ತವಾದ ಕಾಲದಲ್ಲಿ ಬಿಡದೆ ಇದ್ದಾನೆ. ಶ್ರೀ ತರುಣಿವಲ್ಲಭ–ನಿತ್ಯಯೌವನಳಾದ ಲಕ್ಷ್ಮೀದೇವೇರಿಗೆ ಪತಿಯಾದ ಬಿಂಬಮೂರ್ತಿ, ರಥಿಕನೆಂದರಿದು–ಈ ರಥಗತ ಪ್ರಭು ಎಂತ ತಿಳಿದು, ನಿತ್ಯದಲಿ–ಪ್ರತಿದಿನದಲ್ಲಿ, ವಾತಾತಪಾದಿಗಳಿಂದಲಿ–ಗಾಳಿ ಬಿಸಿಲು ಇವುಗಳಿಂದ, ಅವಿರತ–ಅತ್ಯಂತವಾಗಿ ಹೋಗಲ್ಪಟ್ಟು ಆಸಕ್ತಿ ಉಳ್ಳವನಾಗಿ ಅಂದರೆ ಸಹನಯುಕ್ತನಾಗಿ, ಪ್ರೀತಿಯಿಂದಲಿ–ಈ ಪರಮಾತ್ಮನ ಛಂಡಾಗಿ ಭಜಿಸುತ್ತ, ಈ ತನುವಿನೊಳು–ಈ ದೇಹ ದೊಳು ಮಮತೆ, ಬಿಟ್ಟವನವನೆ–ಅಭಿಮಾನ ಬಿಟ್ಟು ಇರತಕ್ಕವನು, ಪೋಷಿಸುವ–ಇಂಥಾ ಜ್ಞಾನಿಯನ್ನು ವಿಷಯಸಂಬಂಧವಾದ ದುಃಖಾದಿಗಳು ಲೇಪವಾಗದಂತೆ ಸಂರಕ್ಷಣೆ ಮಾಡ ತಾನೆ ಎಂತ ತಾತ್ಪರ್ಯ.

**ಭವವೆನಿಪ ವನಧಿಯೊಳು ಕರ್ಮ ।**
**ಪ್ರವಹದೊಳು ಸಂಚರಿಸುತಿಹ ದೇ ।**
**ಹವ ಸುನಾವೆಯ ಮಾಡಿ ತನ್ನವರಿಂದೊಡಗೂಡಿ ॥**
**ದಿವಸದಿವಸಗಳಲ್ಲಿ ಲಕುಮೀ ।**
**ಧವನು ಕ್ರೀಡಿಪನೆಂದು ಚಿಂತಿಸೆ ।**
**ಪವನನಯ್ಯ ಭವಾಬ್ಧಿ ದಾಟಿಸಿ ಪರಮಸುಖವೀವ ॥ ೨೬ ॥**

ಈ ದೇಹವನ್ನು ನಾವಿತ್ವೇನ ಅನುಸಂಧಾನಮಾಡಿ ಅರ್ಪಿಸೋ ಕ್ರಮ ಹೇಳತಾರೆ.

ಭವವೆನಿಪ–ಅಹಂ ಮಮಾಖ್ಯ ಸಂಸಾರ ಎನತಕ್ಕ, ವನಧಿಯೊಳು–ಸಮುದ್ರದಲ್ಲಿ, ಕರ್ಮಪ್ರವಹದೊಳು–ದಶೇಂದ್ರಿಯಗಳಿಂದ ಆಗತಕ್ಕ ಕರ್ಮಗಳೆಂಬೋ ಪ್ರವಾಹದಲ್ಲಿ, ಸಂಚರಿಸುತಿಹ–ಸಂಚಾರ ಮಾಡತಾ ಇರತಕ್ಕ, ದೇಹವ ಸುನಾವೆಯ ಮಾಡಿ–ದೇಹವ– ಪಾಂಚಭೌತಿಕ ಸ್ಥೂಲದೇಹವೇ, ಸುನಾವೆಯ ಮಾಡಿ–ಸಮೀಚೀನ ಈ ದೇಹವನ್ನು ಸಮೀಚೀನವಾದ ಬುದ್ಧಿಯಿಂದ ನಾವಿತ್ವೇನ ಅನುಸಂಧಾನ ಮಾಡಿ, ತನ್ನವರಿಂದೊಡ ಗೂಡಿ–ತನ್ನವರಾದ ಯಾವತ್ತು ಬಂಧುಗಳ ಸಂಗಡ ಕೂಡಿಕೊಂಡು, ದಿವಸದಿವಸ ಗಳಲ್ಲಿ–ಪ್ರತಿ ಪ್ರತಿ ದಿವಸಗಳಲ್ಲಿ, ಲಕುಮೀಧವನು – ಲಕ್ಷ್ಮೀಪತಿಯಾದ ಶ್ರೀ ನಾರಾ ಯಣದೇವರು, ಕ್ರೀಡಿಪನೆಂದು–ಇಂಥಾ ಜಲದಲ್ಲಿ ಇಂಥಾ ನಾವಿಯಲ್ಲಿ ವಿದ್ಯಮಾನ ನಾಗಿ ಸಂಚಾರ ಮಾಡುವನು ಎಂತ, ಚಿಂತಿಸಿ–ಅನುಸಂಧಾನದಿಂದ ಚಿಂತನಿ ಮಾಡಿದರೆ,

ಪವನನಯ್ಯ—ಶ್ರೀ ವಾಯುದೇವರ ತಂದೆಯಾದ ಸಂಕರ್ಷಣದೇವರು, ಭವಾಬ್ಧಿ ದಾಟಿಸಿ— ಸಂಸಾರಸಮುದ್ರ ದಾಟಿಸಿ, ಪರಮಸುಖವೀವ—ಉತ್ತಮವಾದ ಸ್ವರೂಪಸುಖ ವ್ಯಕ್ತ ಮಾಡಿಕೊಡುವ. ಬಾಹ್ಯದೃಷ್ಟಾಂತ ಅಧ್ಯಾತ್ಮದಲ್ಲಿ ಸಮನ್ವಯ ಮಾಡಿಕೋಬೇಕು. ಎಲ್ಲೆಲ್ಲಿ ಸಂಚಾರ ಮಾಡಿದರೂ ಈ ಅನುಸಂಧಾನದಿಂದ ಇರಬೇಕೆಂದು ತಾತ್ಪರ್ಯ.

**ಆಪಣಾಲಯಗತ ಪದಾರ್ಥವು ।**
**ಸ್ತ್ರೀಪುರುಷರುಗಳಿಂದ್ರಿಯಗಳಲಿ ।**
**ದೀಪಪಾವಕರೊಳಿಡುತಿಹ ತೈಲಾದಿ ದ್ರವ್ಯಗಳ ॥**
**ಆ ಪರಮಗವದಾನವೆಂದು ಪ ।**
**ದೇಪದೇ ಮರೆಯದಲೆ ಸ್ಮರಿಸುತ ।**
**ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ॥ ೨೭ ॥**

ಇನ್ನು ಸರ್ವಪದಾರ್ಥಗಳ ಅರ್ಪಣೆ ಕ್ರಮವನ್ನು ಹೇಳುತಾರೆ.

ಆಪಣಾಲಯಗತ—ವ್ಯಾಪಾರ ಮಾಡತಕ್ಕ ಅಂಗಡಿಯಲ್ಲಿ, ಪದಾರ್ಥವ—ನಾನಾ ವಿಧವಾದ ಮಾರತಕ್ಕ ಪದಾರ್ಥಸಮೂಹವು, ಸ್ತ್ರೀಪುರುಷರುಗಳ—ಯಾವತ್ತು ಸ್ತ್ರೀಯರು, ಪುರುಷರುಗಳ, ಇಂದ್ರಿಯಗಳಲಿ—ನಾಸಿಕಾದಿ ಇಂದ್ರಿಯಗಳಲ್ಲಿ ಧರಿಸತಕ್ಕ ಆಭರಣಾದಿ ಸಮೂಹವು, ದೀಪ—ದೀಪಗಳಿಗೆ ಹಾಕತಕ್ಕ, ತೈಲಾದಿ—ಎಣ್ಣೆ, ತುಪ್ಪ ಮೊದಲಾದುವು ಗಳು, ಪಾವಕರೊಳು—ಹಾಂಗೆ ಅಗ್ನಿ ಮೊದಲಾದವರಲ್ಲಿ, ಇಡುತಿಹ ದ್ರವ್ಯಗಳ—ಇಡತಕ್ಕ ಅಲ್ಲದೆ ಹಾಕತಕ್ಕ ಕಾಷ್ಠಾದಿ ಪದಾರ್ಥಗಳ ಏತಾದೃಶವಾಗಿ ನಾನಾ ವಿಧವಾದ ದ್ರವ್ಯಗಳ,ಆ ಪರಮಗೆ—ಆಯಾ ಅಂತರ್ಗತನಾದ ಶ್ರೀ ಪರಮಾತ್ಮಗೆ, ಅವದಾನವೆಂದು— ಅರ್ಪಿತವೆಂದು, ಅಂದರೆ ಅಂಗಡಿಗಳಲ್ಲಿ ನೋಡಿದ ಪದಾರ್ಥಗಳು ಶ್ರೀ ಪರಮಾತ್ಮಗೆ ಅರ್ಪಿತವೆಂತಲೂ, ಸ್ತ್ರೀಪುರುಷರು ಧರಿಸಿರುವ ಆಭರಣಗಳು ಆಯಾ ಇಂದ್ರಿಯಸ್ಥ ಪರ ಮಾತ್ಮಗೆ ಅರ್ಪಿತವೆಂತಲೂ, ದೀಪಾಂತರ್ಗತರೂಪ ಪರಮಾತ್ಮಗೆ ತೈಲಾದಿಗಳು ಹಾಕಿ ಪರಮಾತ್ಮಗೆ ಅರ್ಪಿತವೆಂತಲೂ, ಅಗ್ನಿಯಲ್ಲಿ ನಾನಾವಿಧ ಕಾಷ್ಠಗಳು ಹವಿಸ್ಸುಗಳು ಹಾಕಿ ಅಗ್ನಿ ಅಂತರ್ಗತ ಶ್ರೀಪರಶುರಾಮದೇವರಿಗೆ ಅರ್ಪಿತವೆಂತಲೂ, ಈ ಪ್ರಕಾರ ಭಗವದ್ರೂಪ ಗಳಿಂದ ಭಗವದ್ರೂಪಗಳಿಗೆ ಅರ್ಪಿಸುತ, ಪದೇಪದೇ ಮರೆಯದಲೆ—ಬಾರಿಬಾರಿಗೂ ವಿಸ್ಮೃತನಾಗದೆ, ಸ್ಮರಿಸುತ—ಅನುಸಂಧಾನದಿಂದ ಸ್ಮರಣೆ ಮಾಡುತ, ಭೂಪನಂದದಿ— ಮಹಾಸಮರ್ಥನೋಪಾದಿಯಲ್ಲಿ, ನಿರ್ಭಯದಿ—ಅಹಂಮಮತಾದಿಗಳು ಬಿಟ್ಟು ವಿಷಯ ಸಂಬಂಧವಾದ ಭಯದಿಂದ ರಹಿತನಾಗಿ, ಸರ್ವತ್ರ ಸಂಚರಿಸು — ಸರ್ವಪ್ರದೇಶಗಳಲ್ಲಿ ಸಂಚಾರಮಾಡು. ಈ ದಿಕ್ಪ್ರದರ್ಶನದಿಂದ ಸರ್ವವೂ ಈ ಪ್ರಕಾರ ಅರ್ಪಿಸೋಪನಾಗ ಬೇಕು ಎಂತ ತಾತ್ಪರ್ಯ.

**ವಾರಿಜಭವಾಂಡವೆ ಸುಮಂಟಪ ।**
**ಮೇರುಗಿರಿ ಸಿಂಹಾಸನವು ಭಾ ।**
**ಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು ನುಡಿ ಮಂತ್ರ**

**ಭೂರುಹಜ ಫಲಪುಷ್ಪ ಗಂಧ ಸ ।**
**ಮೀರ ಶಶಿರವಿ ದೀಪ ಭೂಷಣ ।**
**ತಾರಕೆಗಳೆಂದರ್ಪಿಸಲು ಕೈಕೊಂಡು ಮನ್ನಿಸುವ ॥ ೨೮ ॥**

ಈ ಬ್ರಹ್ಮಾಂಡವನ್ನೇ ಪೂಜಾತ್ವೇನ ಅರ್ಪಿಸೋ ಕ್ರಮ ಹೇಳತಾರೆ.

ವಾರಿಜಭವಾಂಡವೆ–ಕಮಲದಲ್ಲಿ ಉತ್ಪನ್ನವಾದ ಬ್ರಹ್ಮದೇವರ ದೇಹಸಾಂಕೇತವಾದ ಈ ಬ್ರಹ್ಮಾಂಡವೆ, ಸುಮಂಟಪ–ಶ್ರೀ ಪರಮಾತ್ಮಗೆ ಆವಾಸಕ್ಕೆ ಯೋಗ್ಯವಾದ ಮಂಟಪವು, ಮೇರುಗಿರಿ–ಸುವರ್ಣಾತ್ಮಕವಾದ ಮೇರುಪರ್ವ, ಸಿಂಹಾಸನವು–ಕೂಡತಕ್ಕ ಸಿಂಹಾಸನವು (ಮೇರು ಮಧ್ಯಗತ ಶತಕೋಟಿ ಎಂಬ ಬ್ರಹ್ಮನ ಮನಿಯಲ್ಲಿ ಶ್ರೀ ವಾಸುದೇವನಾಮಕ ಪರಮಾತ್ಮ ಇದ್ದಾನೆ. ಆದಕಡಿಯಿಂದ ಸಿಂಹಾಸನ) ಈ ಪರಮಾತ್ಮಗೆ, ಭಾಗೀರಥಿಯೆ ಮಜ್ಜನವು–ಈ ಬ್ರಹ್ಮಾಂಡಾಂತರ್ಗತ ಗಂಗಾದಿ ಸರ್ವ ನದಿಗಳು, ಇನ್ನು ದಿವ್ಯಪುಷ್ಕರಿಣಿಗಳು ಅಭಿಷೇಕಕ್ಕೆ ಯೋಗ್ಯವಾದ ದಿವ್ಯತೀರ್ಥಗಳು, ದಿಗ್ವಸ್ತ್ರಗಳು–ಅಷ್ಟದಿಕ್ಕುಗಳು, ಊರ್ಧ್ವ ಅಧ ಇವುಗಳೇ ವಸ್ತ್ರಗಳು, ನುಡಿ ಮಂತ್ರ–ಆಡತಕ್ಕ ಮಾತುಗಳು ಮಂತ್ರಗಳು, ಭೂರುಹಜ–ಭೂಮಿ ಭೇದಿಸಿಕೊಂಡು ಉತ್ಪನ್ನಗಳಾದ ವೃಕ್ಷಗತ, ಫಲ–ಸುರಸೋಪೇತವಾದ ನಾರಿಕೇಳಾದಿ ಫಲಗಳೇನು, ಪುಷ್ಪ – ಸುಗಂಧೋಪೇತಗಳಾದ ಪುಷ್ಪಗಳು, ಶ್ರೀತುಳಸಿ, ಗಂಧ–ಚಂದನವೃಕ್ಷಗತ ದಿವ್ಯಸುವಾಸಿತ ಗಂಧಗಳು, ಸಮೀರ–ಈ ಬ್ರಹ್ಮಾಂಡದಲ್ಲಿ ಬೀಸತಕ್ಕ ಗಾಳಿಯೇ ಛತ್ರ ಚಾಮರ ಸೇವಾ, ಶಶಿರವಿ ದೀಪ–ಚಂದ್ರ ಸೂರ್ಯ ಎರಡೂ ಎರಡು ದೀಪಗಳು, ಭೂಷಣ–ಅಲಂಕಾರಕ್ಕೆ ಯೋಗ್ಯವಾದ ಆಭರಣಗಳು, ತಾರಕೆಗಳೆಂದು–ನಕ್ಷತ್ರಗಳು ಎಂತ ಈ ಪ್ರಕಾರ, ಅರ್ಪಿಸಲು–ಅನುಸಂಧಾನದಿಂದ ಪೂಜಾ ಮಾಡಿದರೆ, ಕೈಕೊಂಡು ಮನ್ನಿಸುವ–ಇಂಥಾ ಪೂಜಾವನ್ನ ಸ್ವೀಕಾರಮಾಡಿ ಸಂರಕ್ಷಣೆ ಮಾಡತಾನೆ.

**ತಾತ್ಪರ್ಯ :**—ಇಂಥಾ ಪದಾರ್ಥಗಳ ಮೇರುಗತ ಶ್ರೀ ವಾಸುದೇವರಿಗೆ ಅರ್ಪಿತ ಮಾಡಿ ಇನ್ನು ಈ ಚತುರ್ದಶ ಲೋಕಗಳು ಪರಮಾತ್ಮಗೆ ಆಲಯತ್ವೇನವಾಗಿ ಇನ್ನೂ ಅಲ್ಲ್ಯಲ್ಲಿರುವ ಪದಾರ್ಥಗಳು ಪೂಜಾತ್ವೇನ ಅನುಸಂಧಾನದಿಂದ ಅರ್ಪಿಸೋವನಾಗಬೇಕು. ಇದರಿಂದ ಮಹಾಪೂಜಾ ಮಾಡಿದವನಾಗತಾನೆ.

**ಭೂಸುರರೊಳಿಪ್ಪಬ್ಜ ಭವನೊಳು ।**
**ವಾಸುದೇವನು ವಾಯುಖಗಪ ಸ ।**
**ದಾಶಿವಹಿಪೇಂದ್ರನು ವಿವಸ್ವನ್ನಾಮಕಸೂರ್ಯ ॥**
**ಭೇಶಕಾಮಮರಾಸ್ಯ ವರುಣಾ ।**
**ದೀ ಸುರರು ಕ್ಷತ್ರಿಯರೊಳಿಪ್ಪರು ।**
**ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು ॥ ೨೯ ॥**

ಬ್ರಾಹ್ಮಣ, ಕ್ಷತ್ರಿಯ ವರ್ಣಗತ ಭಗವದುಪಾಸನ ಕ್ರಮ ಹೇಳತಾರೆ.

ಭೂ ಸು ರ ರೊ ಳು – ಬ್ರಾಹ್ಮಣಜಾತಿಯಲ್ಲಿ ಬ್ರಾಹ್ಮಣಜಾತಿಗೆ, ಅಬ್ಜಭವಯಿಪ್ಪ– ಬ್ರಹ್ಮದೇವರು ಅಭಿಮಾನಿಯಾಗಿದ್ದಾನೆ. ಅಬ್ಜಭವನೊಳು ವಾಸುದೇವನು–ಈ ಬ್ರಹ್ಮನಲ್ಲಿ ವಾಸುದೇವನು ಇದ್ದಾನೆ. ವಾಯು ಖಗಪ ಸದಾಶಿವ–ವಾಯುದೇವರು ಗರುಡ, ರುದ್ರ ದೇವರು, ಅಹಿಪ ಇಂದ್ರನು–ಶೇಷದೇವರು ಇಂದ್ರದೇವರು, ವಿವಸ್ವಾನ್ನಾಮಕ ಸೂರ್ಯ– ವಿವಸ್ವಾನ್ನಾಮಕ ಸೂರ್ಯದೇವರು, ಭೇಶಕಾಮ–ಚಂದ್ರದೇವರು, ಕಾಮ ಅಂದರೆ ಮನ್ಮಥ, ಅಮರಾಸ್ಯ ವರುಣ–ಅಗ್ನಿದೇವರು, ವರುಣದೇವರು, ಆದಿ ಸುರರ–ಇವರೇ ಮೊದಲಾದ ದೇವತೆಗಳು, ಕ್ಷತ್ರಿಯರೊಳಿಪ್ಪರು–ಕ್ಷತ್ರಿಯಜಾತಿಗೆ ಅಭಿಮಾನಿಗಳು, ಎಂತ್ಯನಿಸಿ, ವಾಸವಾಗಿಹ–ಈ ದೇವತೆಗಳಲ್ಲಿರುವ, ಸಂಕರುಷಣನ–ಸಂಕರ್ಷಣರೂಪಿ ಪರಮಾತ್ಮನನ್ನು ಈ ದೇವತೆಗಳು ನೋಡಿ, ಮೋದಿಪರು–ನೋಡಿದಂಥಾವರಾಗಿ ಶ್ರೀ ಪರಮಾತ್ಮನ ಮಹಾಮಹಿಮೆ ಕೊಂಡಾಡುತಾ ಸಂತೋಷಪಡುವರಾಗಿದ್ದಾರೆ.

**ತಾತ್ಪರ್ಯ :**—ಆದಕಡಿಯಿಂದ ಈ ಜಾತಿಗಳ ಒಳಗೆ ಇರುವ ಅಧಿಕಾರಿಗಳನ್ನು ಅವರು ಮಾಡುವ ಆಚಾರ ವ್ಯವಹಾರವನ್ನು ನೋಡಿದಂಥಾವರಾಗಿ ಭಗವದ್ರೂಪಗಳ ಸಂಗಡ ಐಕ್ಯಚಿಂತನಿ ಮಾಡಿ ಪೂಜಿಸಬೇಕು.

**ಮೀನಕೇತನತನಯ ಪ್ರಾಣಾ ।**
**ಪಾನವ್ಯಾನೋದಾನಮುಖ್ಯೈ ।**
**ಕೋನಪಂಚಾಶನ್ಮರುದ್ಗಣ ರುದ್ರ ವಸುಗಣರು ॥**
**ಮೇನಕಾತ್ಮಜ ಕುವರ ವಿಷ್ವ ।**
**ಕ್ಸೇನ ಧನಪಾದ್ಯನಿಮಿಷರನು ಸ ।**
**ದಾನುರಾಗದಿ ಥೇನಿಪುದು ವೈಶ್ಯರೊಳು ಪ್ರದ್ಯುಮ್ನ ॥ ೩೦ ॥**

ವೈಶ್ಯರ ಅಂತರ್ಗತ ಭಗವದ್ರೂಪೋಪಾಸನಕ್ರಮ ಹೇಳತಾರೆ.

ವೈಶ್ಯರೊಳು–ವೈಶ್ಯಜಾತಿಯಲ್ಲಿ (ಈ ಜಾತಿಗೆ ಅಭಿಮಾನಿಗಳು), ಮೀನಕೇತನ ಮಚ್ಛವೇ ಧ್ವಜಪತಾಕದಲ್ಲಿ ಉಳ್ಳ ಮನ್ಮಥನ ಮಗನಾದ ಅನಿರುದ್ಧನು, ಮುಖ್ಯ– ವಾಯುದೇವರು ವ್ಯತಿರಿಕ್ತ ಮರುದ್ಗಣರೊಳಗೆ ಮುಖ್ಯರಾದ ಶ್ರೇಷ್ಠರಾದ ದಾಸಪ್ರಾಣ ರಾದ, ಪ್ರಾಣಾಪಾನವ್ಯಾನೋದಾನ–ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಇವರೇ ಮೊದಲಾದ, ಏಕೋನಪಂಚಾಶತ್–ನಲವತ್ತೊಂಭತ್ತು, ಮರುದ್ಗಣ–ಮರುತ್ ಸಮೂಹರು, ರುದ್ರ–ಪಾರ್ವತೀಪತಿ ರುದ್ರದೇವರು, ವ್ಯತಿರಿಕ್ತ ದಶರುದ್ರರು, ವಸು ಗಣರು–ಅಗ್ನಿವ್ಯತಿರಿಕ್ತ ಏಳು ವಸುಗಳು, ಮೇನಕಾತ್ಮಜ–ಹಿಮಾಚಲನ ಪತ್ನಿ ಮೇನಕಾ, ಈಕೆ ಮಗಳು ಪಾರ್ವತಿದೇವೇರು, (ಈ ಪಾರ್ವತಿಗೆ), ಕುವರ–ಮಗನಾದ ಗಣೇಶ, ವಿಷ್ವಕ್ಸೇನ–ವಾಯುಪುತ್ರ ವಿಷ್ವಕ್ಸೇನ, ಧನಪ–ಕುಬೇರ, ಆದಿ ಅನಿಮಿಷರು–ಮೊದಲಾದ ಈ ದೇವತೆಗಳನ್ನು, ಸದಾನುರಾಗದಿ–ನಿರಂತರ ಅತ್ಯಂತ ಆಸಕ್ತಿಯಿಂದ (ವೈಶ್ಯರೊಳು)

ತಿಳಿದು ಈ ದೇವತೆಗಳ ಅಂತರ್ಗತನಾದ, ಪ್ರದ್ಯುಮ್ನ–ಶ್ರೀಪ್ರದ್ಯುಮ್ನನಾಮಕ ಪರಮಾತ್ಮನನ್ನ, ಧೇನಿಪುದು–ಅನುಸಂಧಾನದಿಂದ ಧ್ಯಾನ ಮಾಡಬೇಕು.

**ಇರುತಿಹರು ನಾಸತ್ಯದಸ್ರರು ।**
**ನಿರಋತಿಯು ಯಮಧರ್ಮ ಯಮಕಿಂ ।**
**ಕರರು ಮೇದಿನಿ ಕಾಲಮೃತ್ಯು ಶನೈಶ್ಚರಾದಿಗಳು ॥**
**ಕರೆಸಿಕೊಂಬರು ಶೂದ್ರರೆಂದನ ।**
**ವರತ ಶೂದ್ರರೊಳಿಪ್ಪರಿವರೊಳ ।**
**ಗರವಿದೂರನಿರುದ್ಧನಿಹನೆಂದರಿತು ಮನ್ನಿಪುದು ॥ ೩೧ ॥**

ಶೂದ್ರಜಾತಿಗತ ಭಗವದ್ರೂಪೋಪಾಸನ ವಿಚಾರಕ್ರಮ ಹೇಳತಾರೆ.

ಶೂದ್ರರೊಳಿಪ್ಪ–ಶೂದ್ರಜಾತಿ ಒಳಗೆ ಇರುವ (ಈ ಜಾತಿಗೆ ಅಭಿಮಾನಿಗಳಾದವರು), ನಾಸತ್ಯದಸ್ರರು–ನಾಸತ್ಯ ದಸ್ರ ಈ ಎರಡು ಅಶ್ವಿನಿದೇವತೆಗಳ ಹೆಸರು (ಇವರಿಬ್ಬರು), ನಿರಋತಿಯು – ನೈರುತ್ಯದಿಕ್ಕಿನ ಅಭಿಮಾನಿ ನಿರಋತಿ, ಯಮಧರ್ಮ–ಯಮಧರ್ಮ ರಾಯ, ಯಮಕಿಂಕರರು–ಯಮದೂತರು, ಮೇದಿನಿ–ಭೂ ಅಭಿಮಾನಿಯಾದ ಮೇದಿನಿ ಎಂಬ ದೇವತೆ, ಕಾಲಮೃತ್ಯು–ಕಾಲವನ್ನು ಅನುಸರಿಸಿ ಮೃತಿ ವಿಧಿಸತಕ್ಕ ಮೃತ್ಯುದೇವತೆ, ಶನೈಶ್ಚರ–ಮಂದಗಮನನಾದ ಶನಿರಾಯ, ಆದಿಗಳು–ಇವರೇ ಮೊದಲಾದವರು, ಅನವರತ–ನಿರಂತರದಲ್ಲೂ, ಶೂದ್ರರೆಂದು–ಶೂದ್ರಜಾತಿ ದೇವತೆಗಳೆಂದು, ಕರೆಸಿಕೊಂಬರು–ಕರೆಸಿಕೊಳ್ಳುತ್ತಾರೆ. ದೇವತೆಗಳ ಒಳಗೆ ಇವರು ಶೂದ್ರದೇವತೆಗಳು. ಶೂದ್ರಜಾತಿ ಅಂತರ್ಗತರಾಗಿ, ಇರುತಿಹರು–ಇರೋವರಾಗಿದ್ದಾರೆ. ಇವರ ಅಂತರ್ಗತದಲ್ಲಿ (ಇವರೊಳು) ಅನ್ನುವುದಕ್ಕೆ ಅರ್ಥ). ಅರವಿದೂರನಿರುದ್ಧ–ದೋಷದೂರನಾದ ಶ್ರೀ ಅನಿರುದ್ಧನು, ಇಹನೆಂದು ಮನ್ನಿಪುದು–ಇದ್ದಾನೆ ಎಂತ ತಿಳಿದು ಅನುಸಂಧಾನದಿಂದ ಪೂಜಾದಿಗಳು ಮಾಡಬೇಕು. ಆಯಾ ಜಾತಿ ಅಭಿಮಾನಿಗಳಾದ ದೇವತೆಗಳು ಆಯಾ ಜಾತಿ ದೇವತೆಗಳೆಂದು ಕರಿಸತಾರೆ ಎಂತ ತಾತ್ಪರ್ಯ.

**ವೀತಭಯ ನಾರಾಯಣ ಚತು ।**
**ಷ್ಪಾತು ತಾನೆಂದೆನಿಸಿ ತತ್ತ ।**
**ಜ್ಜಾತಿ ಧರ್ಮ ಸುಕರ್ಮಗಳ ತಾ ಮಾಡಿ ಮಾಡಿಸುವ ॥**
**ಚೇತನರ ಒಳಹೊರಗೆ ಓತ ।**
**ಪ್ರೋತನಾಗಿದ್ದೆಲ್ಲರಿಗೆ ಸಂ ।**
**ಪ್ರೀತಿಯಲಿ ಧರ್ಮಾರ್ಥಕಾಮಾದಿಗಳ ಕೊಡುತಿಹನು ॥ ೩೨ ॥**

ಪೂರ್ವೋಕ್ತ ನಾಲ್ಕು ಜಾತಿಗಳಿಗೆ ಕರ್ಮಗಳ ಮಾಡಿ ಮಾಡಿಸತಕ್ಕ ಭಗವದ್ರೂಪವನ್ನು ಹೇಳತಾರೆ.

ವೀತಭಯ–ನಿರ್ಭೀತ ಅಂದರೆ ನಿರ್ಭಯನಾದ, ಸರ್ವೋತ್ತಮನಾದ, ನಾರಾಯಣನು–ನಾರಾಯಣನು ಅಂದರೆ ದೋಷದೂರನಾದವನು. "ನಾರಾಯಣೇತಿ ಪ್ರವದಂತೋ ಹಿ ಜಗ್ಮುಃ ಅರಾ ದೋಷಾಸ್ತದ್ವಿರುದ್ಧಾ ಗುಣಾಶ್ಚ । ನಾರಾಶ್ಚ ತೇಷಾಮಾಶ್ರಯತ್ವಾತ್ ಮುರಾರಿಃ ನಾರಾಯಣೋ ಪ್ರವದಂತಿ ಲೋಕೇ ॥ ೧ ॥ ನರಾನುಬಂಧಾತ್ಸರ್ವಮುಕ್ತಾಃ ಖಗೇಂದ್ರ ನಾರಾ ಪ್ರೋಕ್ತಾ ಆಶ್ರಯತ್ವಾಚ್ಚ ತೇಷಾಂ । ಅತೋಽಪಿ ನಾರಾಯಣ ಏವ ವೀಂದ್ರ ಮುಕ್ತಾಶ್ರಯಃ ಪ್ರವದಂತೋಽಪಿ ಜಗ್ಮುಃ ॥ ೨ ॥" ಇತಿ ಗಾರುಡೇ ಬ್ರಹ್ಮಕಾಂಡೇ. (ಗರುಡಪುರಾಣದಲ್ಲಿ ನಾರಾಯಣಶಬ್ದ ನಿರ್ವಚನ ಮಾಡಲ್ಪಟ್ಟಿದೆ.) ಚತುಷ್ಪಾತು – ಬ್ರಾಹ್ಮಣಾದಿ ನಾಲ್ಕು ಜಾತಿ ಜೀವರ ಸಂರಕ್ಷಣ ಮಾಡುವೆನೆಂದು, ತಾನೆಂದೆನಿಸಿ–ಕರೆಸಿದವನಾಗಿ, ತತ್ತಜ್ಜಾತಿ–ಆಯಾ ಬ್ರಾಹ್ಮಣಾದಿ ಶೂದ್ರಾಂತ ನಾಲ್ಕು ಜಾತಿ, ಧರ್ಮ–ಆಯಾ ಜಾತಿಗೆ ಏರ್ಪಟ್ಟ ಶಾಸ್ತ್ರಾನುಸಾರ ಧರ್ಮವೇನು, ಸುಕರ್ಮಗಳ–ಆಯಾ ಜಾತಿಧರ್ಮಕ್ಕೆ ಅನುಸರಿಸಿದ ಯೋಗ್ಯಗಳಾದ ಕರ್ಮಗಳೇನು, ತಾ ಮಾಡಿ–ನಾಲ್ಕು ಜಾತಿ ಜೀವರುಗಳ ಅಂತರ್ಗತನಾಗಿ ಇದ್ದು, ಬಿಂಬನಾದ ತಾನು ಪ್ರಥಮತಃ ಮಾಡಿ, ಮಾಡಿಸುವ–ಸಕಾಲದಲ್ಲೇ ದೇವತೆಗಳ ದ್ವಾರಾ ಜೀವನ ದ್ವಾರಾ ದೇಹದಿಂದ ಕರ್ಮಗಳ ಮಾಡಿಸುತ್ತಾ, ಚೇತನರ ಒಳಹೊರಗೆ–ಜೀವರ ಅಂತರ್ಗತದಲ್ಲಿ ಬಹಿಃ ಸ್ಥೂಲ ದೇಹದಲ್ಲಿ ಬಾಹ್ಯವಾದ ಅನೇಕ ಸ್ಥಳಗಳಲ್ಲಿ, ಓತಪ್ರೋತನಾಗಿದ್ದು–ಅಚ್ಛಿದ್ರವಾಗಿ ವಸ್ತ್ರ ದೃಷ್ಟಾಂತವತ್ ಇದ್ದು, ಎಲ್ಲರಿಗೆ–ನಾಲ್ಕು ವಿಧ ಸಮಸ್ತ ಜೀವರಿಗೆ, ಸಂಪ್ರೀತಿಯಲಿ–ಅವರವರ ಸ್ವರೂಪಯೋಗ್ಯತಾ ಅನುಸರಿಸಿ ಅತಿಪ್ರೀತಿಯಿಂದ, ಧರ್ಮಾರ್ಥಕಾಮಾದಿಗಳ–ಧರ್ಮ–ಧರ್ಮಬುದ್ಧಿ, ಅರ್ಥ–ಧರ್ಮಬುದ್ಧಿಯಿಂದ ಆಗೋ ಪ್ರಯೋಜನ, ಕಾಮ–ಯೋಗ್ಯತಾನುಸಾರ ಇಚ್ಛಾ, ಇವುಗಳನ್ನು, ಕೊಡುತಿಹನು–ಕೊಡುತ್ತಾ ಅವರಂತರ್ಗತದಲ್ಲಿ ಇರೋವನಾಗಿದ್ದಾನೆ ಎಂತ ತಾತ್ಪರ್ಯ.

**ನಿಧನ ಧನದ ವಿಧಾತ ವಿಗತಾ ।**
**ಭ್ಯಧಿಕ ಸಮಾಸಮವರ್ತಿ ಸಾಮಗ ।**
**ತ್ರಿದಶಗಣಸಂಪೂಜ್ಯ ತ್ರಿಕಕುದ್ಧಾಮ ಶುಭನಾಮ ॥**
**ಮಧುಮಥನ ಭೃಗುರಾಮ ಘೋಟಕ ।**
**ವದನ ಸರ್ವಪದಾರ್ಥದೊಳು ತುದಿ ।**
**ಮೊದಲು ತುಂಬಿಹನೆಂದು ಚಿಂತಿಸು ಬಿಂಬರೂಪದಲಿ ॥ ೩೩ ॥**

ಪೂರ್ವೋಕ್ತ ಶ್ರೀ ನಾರಾಯಣದೇವರು ಸರ್ವತ್ರ ವ್ಯಾಪ್ತನೆಂದು ಚಿಂತಿಸಬೇಕು.

ನಿಧನ–ಮೂಲರೂಪ ಶ್ರೀ ನಾರಾಯಣದೇವರಿಂದ ಅಂಶವಿಶೇಷದಿಂದ ಹೊರಟ ಸಂಕರ್ಷಣ ರೂಪದಿಂದ ಜಗತ್ಸಂಹಾರ ಮಾಡತಾನೆ. ಧನದ–ಸೃಷ್ಟಿಮಾಡಿದ ಜಗತ್ತನ್ನು ಪಾಲನಮಾಡಿ ಜೀವರಿಗೆ ಸಾಧನಮಾಡೋದಕ್ಕೆ ಸಾಧನದ್ರವ್ಯಗಳ ಕೊಡತಕ್ಕವ, ವಿಧಾತ–ವಾಸುದೇವಾಂಶದಿಂದ ಬ್ರಹ್ಮನ ಹಾಂಗೆ ತದನ್ಯರ ಅಂಡದ ಹೊರಗೆ ಸೂಕ್ಷ್ಮ

ಸೃಷ್ಟಿ ಮಾಡಿದವ, ವಿಗತಾಭ್ಯಧಿಕ– ವಿಗತ–ಹೋಗಲ್ಪಟ್ಟ, ಅಭ್ಯಧಿಕ–ಅತಿಶಯವಾದ ಅಧಿಕತ್ವ ಉಳ್ಳವನು ಎಂದು ಅರ್ಥ. ಸಮಾಸಮವರ್ತಿ– ಸಮ–ವೇದಕ್ಕೆ ಸಮನಾಗಿ ವಿರುದ್ಧವಲ್ಲದೆ ತಾರತಮ್ಯ ಪಂಚಭೇದಜ್ಞಾನಯುಕ್ತರಾದ ಪ್ರಾಣಿಗಳಲ್ಲಿ, ಅಸಮ–ತದ್ವಿಪರೀತಜ್ಞಾನಯುಕ್ತರಾದ ಪ್ರಾಣಿಗಳಲ್ಲಿ, ವರ್ತಿ–ಅವರವರ ಸ್ವರೂಪಯೋಗ್ಯತಾನುಸಾರ ಪ್ರವರ್ತಿಸತಕ್ಕವ. ಇನ್ನು ದೇಶತಃ ಕಾಲತಃ ಸಮಳಾಗಿನ್ನು ಗುಣತಃ ಅಸಮಳಾಗಿ ಇರತಕ್ಕ ರಮಾದೇವೀರ ಯೋಗ್ಯತಾನುಸಾರ ಪ್ರವರ್ತಿಸತಕ್ಕವನೆಂತಲೂ ಅರ್ಥವೇ. ಸಾಮಗ–ಮುಕ್ತರಿಂದ ಸಾಮವೇದದಿಂದ ಸ್ತುತ್ಯನಾದ, ಸಾಮವೇದದಲ್ಲಿ ವಿಭೂತಿವಿಶೇಷದಿಂದ ಇರತಕ್ಕವ. ತ್ರಿದಶಗಣಸಂಪೂಜ್ಯ–ಬ್ರಹ್ಮಾದಿ ದೇವತಾಸಮೂಹದಿಂದ ಛಂದಾಗಿ ಪೂಜಿತನಾದಂಥಾವ, ತ್ರಿಕಕುದ್ಧಾಮ– ಕಕುತ್–ವೃಷಭಸ್ಕಂಧ, ಇದರಿಂದ ಉನ್ನತ ಸಾಂಕೇತವೂ ಅಂದರೆ ಉನ್ನತವಾದ, ಉತ್ಕೃಷ್ಟವಾದ, ತ್ರಿ–ಮೂರಾದಂಥಾ, ಧಾಮ–ಮನಿಗಳು ಉಳ್ಳಂಥಾವ ಅಂದರೆ ನಾಶರಹಿತವಾದ ವೈಕುಂಠ, ಶ್ವೇತದ್ವೀಪ, ಅನಂತಾಸನವೇ ಮನಿಯಾಗಿ ಉಳ್ಳವ, ಶುಭನಾಮ, ಇವನ ಹೆಸರು ಜೀವರಿಗೆ ಅತ್ಯಂತ ಮಂಗಳವನ್ನು ಕೊಡತಕ್ಕದ್ದು. ಆದಕಡಿಯಿಂದ ಮಂಗಳಕರವಾದ ನಾಮ ಉಳ್ಳವನು. ಮಧುಮಥನ–ಮಧುನಾಮಕ ದೈತ್ಯನ ಸಂಹಾರಮಾಡಿದವ, ಭೃಗುರಾಮ– ಭೃಗು–ಮುರ್ಮವಾಗಿ ಇರತಕ್ಕ ಸ್ವರೂಪವನ್ನು ವ್ಯಕ್ತಮಾಡಿ ಮೋಕ್ಷದಲ್ಲಿ, ರಾಮ–ಮುಕ್ತರ ಸಂಗಡ ವಿಹಾರ ಮಾಡತಾ ಇರತಕ್ಕವನಾದಕಡಿಯಿಂದಲೂ, ಭೃಗುಕುಲದಲ್ಲಿ ಅವತಾರಮಾಡಿದ ಪರಶುರಾಮದೇವರೆಂತಲೂ ಅರ್ಥ. ಘೋಟಕವದನ–ಹಯಗ್ರೀವದೇವರು ಇತ್ಯಾದಿ ಅನೇಕ ರೂಪಗಳಿಂದ, ಸರ್ವಪದಾರ್ಥದೊಳು–ಎಲ್ಲಾ ಪದಾರ್ಥದಲ್ಲಿ, ತುದಿ ಮೊದಲು–ಬ್ರಹ್ಮಾಂಡದ ಒಳಗೆ ಆರಂಭಮಾಡಿ ಅಂತವಾದ ನವಾವರಣ ಪರಿಯಂತವಾಗಿ, ತುಂಬಿ–ಅವಿಚ್ಛಿನ್ನವಾಗಿ ತುಂಬಿದವನಾಗಿ ಇದ್ದಾನೆ. ಬಿಂಬರೂಪದಲಿ–ಈ ಪರಮಾತ್ಮನೇ ಹೃದಯಾಂತರ್ಗತದಲ್ಲಿ ಬಿಂಬನಾಗಿ, ಇಹನೆಂದು–ಇದ್ದಾನೆಂದು, ಚಿಂತಿಸು–ಅನುಸಂಧಾನದಿಂದ ತಿಳಿಯೋವನಾಗಬೇಕು.

**ಕನ್ನಡಿಯ ಕೈವಿಡಿದು ನೋಡಲು ।**
**ತನ್ನಿರವು ಸವ್ಯಾಪಸವ್ಯದಿ ।**
**ಕಣ್ಣಿಗೊಪ್ಪುವ ತೆರದಿ ಅನಿರುದ್ಧನಿಗೆ ಈ ಜಗವು ॥**
**ಭಿನ್ನಭಿನ್ನವೆ ತೋರುತಿಪ್ಪುದು ।**
**ಜನ್ಯವಾದುದರಿಂದ ಪ್ರತಿಬಿಂ ।**
**ಬನ್ನಮಯಗಾನೆಂದರಿದು ಪೂಜಿಸಲು ಕೈಗೊಂಬ ॥ ೩೪ ॥**

ಜೀವಗೆ, ಜೀವಗತ ಪರಮಾತ್ಮಗೆ ಭೇದ ಎಂತ ಹೇಳತಾರೆ.

ಕನ್ನಡಿಯ–ದರ್ಪಣವನ್ನು, ಕೈವಿಡಿದು ನೋಡಲು–ಕರದಲ್ಲಿ ಹಿಡಕೊಂಡು ನೋಡಿದರೆ, ತನ್ನಿರವು–ತನ್ನ ರೂಪವು ತನಗೆ ಎದುರಾಗಿ, ಸವ್ಯ–ಸವ್ಯವಾಗಿ ಪ್ರತಿಫಲಿಸದೆ,

ಅಪಸವ್ಯದಿ—ಅಪಸವ್ಯವಾಗಿ, ಕಣ್ಣಿಗೊಪ್ಪುವತೆರದಿ—ಕಣ್ಣಿಗೆ ದೃಷ್ಟವಾಗೋಪಾದಿಯಲ್ಲಿ, ಅನಿರುದ್ಧನಿಗೆ ಈ ಜಗವು—ಶ್ರೀ ಅನಿರುದ್ಧರೂಪಿ ಪರಮಾತ್ಮನಿಗೆ (ಜಗಚ್ಛಬ್ದ ಜೀವಪರ) ಈ ಜೀವರು ಭಿನ್ನಾಂಶರು ಆಗಿ, ಭಿನ್ನಭಿನ್ನವೆ—ಶ್ರೀ ಪರಮಾತ್ಮನಿಂದ ಭಿನ್ನರಾಗಿ ಹಾಂಗೆ ಪರಸ್ಪರ ಜೀವರು ಸಮಾನರಲ್ಲ, ಭಿನ್ನರಾಗೇವೇ, ತೋರುತಿಪ್ಪುದು—ತೋರತಾರೆ ಹೊರ್ತು ಏಕರಾಗೀನೂ ಪರಮಾತ್ಮನಂತೆ ತೋರೋದಿಲ್ಲ. (ದರ್ಪಣ ನೋಡತಕ್ಕ ಪುರುಷನ ದೃಷ್ಟಾಂತ), ಜನ್ಯವಾದುದರಿಂದ—ಪ್ರಳಯಕಾಲದಲ್ಲಿ ಪರಮಾತ್ಮನ ಉದರಪ್ರವೇಶರಾಗಿ ಸೃಷ್ಟಿಕಾಲದಲ್ಲಿ ಮೂಲರೂಪದಿಂದ ಅವತಾರಗಳು ಹೊರಟಂತೆ ಮೂಲರೂಪನಾದ ಶ್ರೀ ಪರಮಾತ್ಮನ ಉದರದಿಂದ ಜೀವರು ಹೊರಗೆ ಹೊರಡತಾರೆ. ಆದ್ದರಿಂದಲೇ ಮೂಲರೂಪ ದಿಂದ ಹೊರಟ ರಾಮಕೃಷ್ಣಾದ್ಯವತಾರಗಳು ಅಭಿನ್ನಾಂಶರು ಎಂತಲೂ, ಅದೇ ಪ್ರಕಾರ ಮೂಲರೂಪ ಉದರಗತರಾಗಿ ಹೊರಟ ಜೀವರು ಭಿನ್ನಾಂಶರೆಂತಲೂ ಕರೆಸತಾರೆ. ಬಿಂಬನ್ನ ಜೀವಗೆ, ಬಿಂಬನಾದ ಶ್ರೀ ಪರಮಾತ್ಮನ್ನ, ಪ್ರತಿಬಿಂಬನ್ನ—ಪ್ರತಿಬಿಂಬನಾದ ಜೀವನ್ನ, ಮಯಗಾ—ಮಯಚ್ಛಬ್ದ ಪ್ರಾಚುರ್ಯಾರ್ಥ ("ಪ್ರಾಚುರ್ಯಾರ್ಥೇ ಮಯಟ್ ಪ್ರತ್ಯಯಃ") ಜೀವಾಂತರ್ಗತನಾಗಿ ಜೀವಾಕಾರದಂತೆ ಪ್ರಾಚುರ್ಯನಾಗಿ ಅನಾದಿಯಿಂದ ಇರತಕ್ಕವ, ಶ್ರೀ ಬಿಂಬರೂಪಿ ಪರಮಾತ್ಮನು, ಸ್ಥೂಲಶರೀರದಲ್ಲಿ ಜೀವಗೆ ಎದುರಾಗಿನ್ನೂ ದೇಹಾಕಾರ ವ್ಯಾಪ್ತಿಯಲ್ಲಿ ತತ್ಪ್ರತಿಯಾಗಿನ್ನೂ ಜೀವನ ಸ್ವರೂಪದಲ್ಲಿ ಜೀವಾಕಾರದಂತೆ ಹೃದಯ ಅಷ್ಟದಳ ಕಮಲಕರ್ಣಿಕಾದ ಮ್ಯಾಲೆ ಇರತಕ್ಕ ಅಗ್ರೇಶನಾಮಕನು, ಪೂಜಿಸಲು—ಅನು ಸಂಧಾನದಿಂದ ಪೂಜಾ ಮಾಡಲು, ಕೈಕೊಂಬ—ಇಂಥಾ ಪೂಜೆಯನ್ನು ಸ್ವೀಕಾರಮಾಡುವ. ದರ್ಪಣದೃಷ್ಟಾಂತದಿಂದ ಪ್ರತಿಬಿಂಬನಾದ ಜೀವಗೂ, ಬಿಂಬನಾದ ಪರಮಾತ್ಮಗೂ ಭೇದ ಇದು ಎಂತ ತಾತ್ಪರ್ಯ.

**ಬಿಂಬರೆನಿಪರು ಸ್ವೋತ್ತಮರು ಪ್ರತಿ।**
**ಬಿಂಬರೆನಿಪರು ಸ್ವಾವರರು ಪ್ರತಿ**
**ಬಿಂಬ ಬಿಂಬಗಳೊಳಗೆ ಕೇವಲ ಬಿಂಬ ಹರಿಯೆಂದು॥**
**ಸಂಭ್ರಮದಿ ಪಾಡುತಲಿ ನೋಡುತ।**
**ಉಂಬುಡುವುದಿಡುವುದು ಕೊಡುವುದೆ।**
**ಲ್ಲಂಬುಜಾಂಬಕನಂಘ್ರಿಪೂಜೆಗಳೆಂದು ನಲಿದಾಡು॥ ೩೫ ॥**

ಜೀವನ ಸಮುದಾಯದಲ್ಲಿ ಅವರೊಳಗೆ, ಅವರಿಗೆ ಬಿಂಬ, ಪ್ರತಿಬಿಂಬ ವಿಚಾರ ಹೇಳತಾರೆ.

ಬಿಂಬರೆನಿಪರು—ಸ್ಥೂಲದೇಹದಲ್ಲಿ ವ್ಯಾಪ್ತನಾದ ಪ್ರತಿಬಿಂಬನಾದ ಜೀವಗೆ ದೇವತೆ ಗಳು ಸರ್ವರೂ ಬಿಂಬರೂಪರು ಎಂತ ಎನಿಸತಾರೆ. ಅದರಲ್ಲಿ ತಾರತಮ್ಯದಿಂದ ದೇಹದಲ್ಲಿ ಸ್ವೋತ್ತಮ, ಸ್ವಾವರ ದೇವತೆಗಳು ದೇಹಾಕಾರದಿಂದ ಇದ್ದಾರೆ. ಅದರಲ್ಲಿ ದೇಹಗತ, ಸ್ವೋತ್ತಮರು – ಸ್ವೋತ್ತಮದೇವತೆಗಳು ದೇಹಗತ ಸ್ವಾವರ ದೇವತೆಗಳಿಗೆ ಬಿಂಬರು

ಎಂತ ಕರೆಸತಾರೆ. ಸ್ವಾವರರು–ಸ್ವೋತ್ತಮರಿಗಿಂತ ಅವರರಾದ ದೇಹಗತ ದೇವತೆಗಳು, ಪ್ರತಿಬಿಂಬರೆನಿಪರು–ಪ್ರತಿಬಿಂಬರು ಎಂತ ಎನಿಸತಾರೆ. ದಾವ ಕಾರಣದಿಂದ ಎಂದರೆ ದೃಷ್ಟಾಂತ :– ದೇಹವೇ ಬಿಂಬ, ದೇಹದ ನೆರಳು ಪ್ರತಿಬಿಂಬ. ದೇಹ ಆಡಿದರೆ ನೆರಳು ಆಡುತದೆ. ಹಿಂದೆ ಈ ವಿಷಯ ವಿವರವಾಗಿ ಹೇಳಿದೆ. ಈ ರೀತ್ಯಾ ದೇಹಗತ ದೇವತೆಗಳು ಜೀವಮೂಲಕವಾಗಿ ದೇಹದ್ವಾರಾ ಕರ್ಮಮಾಡಿಸಬೇಕಾದರೆ ಬಿಂಬರಾದ ಸ್ವೋತ್ತಮರ ಕ್ರಿಯಾದ್ವಾರಾ ಅವರರಾದ ತಾವು ಕ್ರಿಯಾದಿಗಳು ಮಾಡತಾರೆ. ಆದ್ದರಿಂದ ಸ್ವೋತ್ತಮದೇವತೆಗಳು ಬಿಂಬರೆಂತಲೂ ಅವರರು ಪ್ರತಿಬಿಂಬರೆಂತಲೂ ಕರಿಸೋವರಾದರು. ಈ ರೀತ್ಯಾ, ಪ್ರತಿಬಿಂಬಬಿಂಬಗಳೊಳಗೆ – ಈ ಪ್ರಕಾರವಾಗಿ ಪ್ರತಿಬಿಂಬಬಿಂಬಗಳೊಳಗೆ, ಕೇವಲ ಬಿಂಬ – ಮುಖ್ಯವಾಗಿ ಅಸದೃಶನಾದ ಬಿಂಬ, ಹರಿಯೆಂದು–ಶ್ರೀಪರಮಾತ್ಮನು ಎಂತಲೂ, ಇವಗೆ ನಿಯಾಮಕನಾದವ ಮತ್ತೊಬ್ಬ ಇಲ್ಲ ಎಂತಲೂ ತಿಳಿದು, ಸಂಭ್ರಮದಿ–ಕೇವಲ ಸಂತೋಷದಿಂದ, ನೋಡುತ ಪಾಡುತಲಿ–ಜ್ಞಾನದೃಷ್ಟಿಯಿಂದ ಅನುಸಂಧಾನಮಾರ್ಗದಿಂದ ನೋಡುತ, ಅವರ ಮಹಾಮಹಿಮೆಗಳ ಕೊಂಡಾಡುತ, ಉಂಬ–ಭೋಜನಮಾಡತಕ್ಕ ದ್ರವ್ಯಗಳು, ಉಡುವುದು–ಧಾರಣ ಮಾಡತಕ್ಕ ವಸ್ತುಗಳು, ಇಡುವುದು–ಧರಿಸತಕ್ಕ ಆಭರಣಾದಿಗಳು, ಕೊಡುವ–ಕರದಿಂದ ಅನ್ಯರಿಗೆ ಕೊಡತಕ್ಕ ಪದಾರ್ಥಗಳು, ಎಲ್ಲ–ಇದು ಯಾವತ್ತು ಪೂರ್ವೋಕ್ತಪ್ರಕಾರ ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾದಿಗಳು, ಅಂಬುಜಾಂಬಕನಂಘ್ರಿ–ಕಮಲದಳದೋಪಾದಿಯಲ್ಲಿ ನೇತ್ರಗಳು ಉಳ್ಳ ದೇಹಾಂತರ್ಗತನಾದ ಶ್ರೀಪರಮಾತ್ಮನ ಪಾದಗಳಿಗೆ, ಪೂಜೆಗಳೆಂದು–ಪೂಜೆಗಳೆಂದು ಅರ್ಪಿಸುತ, ನಲಿದಾಡು–ಭೂಮಿಯಲ್ಲಿ ಸಂಚಾರಮಾಡೋವನಾಗು. ಇದು ಯಾವತ್ತು ಶ್ರೀಪರಮಾತ್ಮನ ವ್ಯಾಪಾರ ಎಂತ ತಿಳಿದು ಸಂತೋಷಿತನಾಗು.

**ನದಿಯ ಜಲ ನದಿಗೆರೆವ ತೆರದಂ ।**
**ದದಲಿ ಭಗವದ್ದತ್ತ ಕರ್ಮಗ ।**
**ಳುದಧಿಶಯನನಿಗರ್ಪಿಸುತ ವ್ಯಾವೃತ್ತ ನೀನಾಗಿ ॥**
**ವಿಧಿನಿಷೇಧಾದಿಗಳಿಗೊಳಗಾ ।**
**ಗದಲೆ ಮಾಡುತ ದರ್ವಿಯಂದದಿ ।**
**ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆವುತಿರು ॥ ೩೭ ॥**

ನಿಸ್ಸಂಗನಾಗಿ ಸಕಲ ಕರ್ಮಗಳು ಮಾಡು ಎಂತ ಹೇಳತಾರೆ.

ನದಿಯ ಜಲ ನದಿಗೆರವ–ಜನರು ನದಿಗಳಲ್ಲಿ ಸ್ನಾನ ಮಾಡಬೇಕಾದರೆ ಆ ನದಿಯಲ್ಲಿರುವ ಜಲವನ್ನೇ ಆ ನದಿಗೆ ಅರ್ಘ್ಯ ಕೊಡುವ, ತೆರದಂದದಲಿ–ಉಪಾದಿಯಲಿ, ಭಗವದ್ದತ್ತ–ಶ್ರೀ ಪರಮಾತ್ಮನಿಂದ ಕೊಡಲ್ಪಟ್ಟ ದ್ರವ್ಯಗಳೇನು, ಕರ್ಮಗಳ–ದೇಹೇಂದ್ರಿಯಾದಿಗಳಿಂದ ಆಗತಕ್ಕ ಅನೇಕ ವಿಧ ಕರ್ಮಗಳ (ಇವುಗಳಲ್ಲಿ ತದಾಕಾರನಾಗಿ ಅಂತರ್ಗತನಾಗಿ ಶ್ರೀ ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ ಇರತಕ್ಕ ಶ್ರೀ ಪರಮಾತ್ಮನ

ಅನುಸಂಧಾನ ತಿಳಿದು ಚಿಂತಿಸಿ), ಉಪಧಿಶಯನನಿಗೆ–ಪ್ರಳಯೋದಕವಾದ ಸಮುದ್ರದಲ್ಲಿ ಶಯನ ಮಾಡಿದ ನಾರಾಯಣಾಂಶನಾದ ಬಿಂಬಮೂರ್ತಿಯಾದ ಹರಿಗೆ, ಅರ್ಪಿಸುತ–ನದಿಯ ಜಲದಿಂದ ನದಿಗೆ ಅರ್ಘ್ಯ ಕೊಟ್ಟಂತೆ ಹೃದಯಗತ ಪರಮಾತ್ಮಗೂ ದ್ರವ್ಯಾಂತರ್ಗತ ಶ್ರೀ ಪರಮಾತ್ಮಗೂ ಐಕ್ಯ ಚಿಂತಿಸಿ ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಅರ್ಪಿಸುತ್ತಾ, ವ್ಯಾವೃತ್ತ ನೀನಾಗಿ–ಅಹಂಮಮತಾರಹಿತನಾಗಿ, ವಿಧಿ–ಶಾಸ್ತ್ರೋಕ್ತಪ್ರಕಾರ ಮಾಡತಕ್ಕದ್ದು ವಿಧಿ ಎಂತಲೂ, ನಿಷೇಧ–ತದ್ವ್ಯತಿರಿಕ್ತವಾದದ್ದು ನಿಷೇಧ ಎಂತಲೂ (ತಿಳಿದು) ಆದಿಗಳಿಗೆ–ಪಾಪಕಾರ್ಯಗಳಿಗೆ, ಒಳಗಾಗದಲೆ–ಇನ್ನೂ ವಿಷಯಗಳಿಗೆ ಸಂಬಂಧಪಡದೆ, ಮಾಡುತಾ–ಕರ್ಮಾಕರ್ಮಗಳು ಶ್ರೀ ಪರಮಾತ್ಮನ ಆಜ್ಞಾದಿಂದ ನಡಿತದೆ ಎಂತ ಅನುಸಂಧಾನದಿಂದ ಕರ್ಮಗಳು ಮಾಡುತಾ, ದರ್ವಿಯಂದದಿ–ಸೌಟು ಸರ್ವ ಪಕ್ವಾಪಕ್ವ ಪದಾರ್ಥಗಳಲ್ಲಿ ಜನರಿಂದ ಸಂಚಾರ ಮಾಡತತದೆ. ಆಯಾ ಪದಾರ್ಥದ ಸಾರಗಳು ದರ್ವಿಗೆ ಸ್ವೀಕಾರವಿಲ್ಲದೆ ನಿರ್ಲಿಪ್ತವಾಗಿ ಇದ್ದಂತೆ ಸಕಲ ಕರ್ಮಗಳೂನೂ ಶ್ರೀ ಪರಮಾತ್ಮನಿಂದ ನಡಿತದೆ ಎಂತ ತಿಳಿದು ನಿಸ್ಸಂಗನಾಗಿ ನಿರ್ಲಿಪ್ತನಾಗಿ, ಪದುಮನಾಭನ–ಶ್ರೀ ಬಿಂಬರೂಪಿ ಪರಮಾತ್ಮನೆ, ಸಕಲ ಕರ್ಮಗಳಲ್ಲಿ–ದೇಹೇಂದ್ರಿಯಗಳಲ್ಲಿ ತಜ್ಜನಿತ ಕರ್ಮಾಕರ್ಮಗಳಲ್ಲಿ ಬಿಂಬನಾಗಿ ಇದ್ದಾನೆ ಎಂತ, ನೆನೆವುತಿರು–ಅನುಸಂಧಾನದಿಂದ ತಿಳಿದವನಾಗಿ ಸದಾ ಶ್ರೀ ಪರಮಾತ್ಮನ ಸ್ಮರಣೆ ಮಾಡುತ ಮಹಿಮಾ ಕೊಂಡಾಡುತ್ತಾ ಇರೋವನಾಗಿರಬೇಕು.

**ವಿಶೇಷಾರ್ಥ :–** ಶ್ರೀ ಪರಮಾತ್ಮನಿಂದ ಪ್ರಾಪ್ತವಾದದ್ದೆಲ್ಲಾ ಪರಮಾತ್ಮನ ಪಾದಕ್ಕೆ ಅರ್ಪಣೆ ಮಾಡಬೇಕು ಎಂಬೋ ವಿಷಯದಲ್ಲಿ ಶ್ರೀ ಪುರಂದರದಾಸರಾಯರು ಈ ಪ್ರಕಾರ ಹೇಳಿದ್ದಾರೆ. "ಕೆರೆಯ ನೀರು ಕೆರೆಗೆ ಚೆಲ್ಲಿ ವರವ ಪಡೆದಂತೆ ಕಾಣಿರೋ" ವಿಧಿನಿಷೇಧಗಳಿಗೆ ನಿರ್ಲಿಪ್ತನಾಗಿರಬೇಕೆಂಬೋ ವಿಷಯದಲ್ಲಿ ಶ್ರೀ ವಿಜಯದಾಸರು "ದರ್ವಿಯಂದದಿ ಸರ್ವವಿಷಯದಲ್ಲಿರು" ಎಂತ ಹೇಳಿದ್ದಾರೆ.

**ಅರಿಯದಿರ್ದರು ಎಮ್ಮೊಳಿದ್ದನ ।**
**ವರತ ವಿಷಯಗಳುಂಬ ಜ್ಞಾನೋ ।**
**ತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ ॥**
**ಸಂತು ಕಾಲಪ್ರವಹಗಳು ಕಂ ।**
**ಡರಿಯು ಸರಿ ಕಾಣದಿರೆ ಪರಿವುವು ।**
**ಮರಳಿ ಮಜ್ಜನ ಪಾನ ಕರ್ಮಗಳಿಂದ ಸುಖವಿಹವು ॥ ೩೭ ॥**

ದೇಹದಲಿ ಬಿಂಬಕ್ರಿಯಾ ಎಂಬುದು ಅಧಿಕಾರಿ ತಿಳಿದರೂ ತಿಳಿಯದಿದ್ದರೂ ಸದಾ ಆಗತಾ ಇರತದೆ ಎಂತ ಹೇಳತಾರೆ.

ಅರಿಯದಿರ್ದರು–ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ಅನುಸಂಧಾನ ಅಧಿಕಾರಿಯಾದವ ಅರಿಯದೇ ಇದ್ದ ಕಾಲಕ್ಕೂ, ಎನ್ನೊಳಿದ್ದು–ನಮ್ಮ ಹೃದಯಾಂತರ್ಗತನಾದ ದೇಹಾಕಾರನಾದ ಬಿಂಬರೂಪಿ ಪರಮಾತ್ಮ ದೇಹೇಂದ್ರಿಯಗಳಲ್ಲಿ ಇದ್ದವನಾಗಿ, ಅನವರತ–ನಿರಂತರ ಕ್ಷಣಲವಾದಿಕಾಲಗಳ ಬಿಡದೆ, ವಿಷಯಗಳ–ಆಯಾ ಇಂದ್ರಿಯಕರ್ಮಗಳ ಬಿಂಬಕ್ರಿಯಾದ್ವಾರಾ ಮಾಡಿಸಿ, ಉಂಬ–ಕರ್ಮಾಂತರ್ಗತ ಇಂದ್ರಿಯಾಂತರ್ಗತ ತದಾಕಾರ ರೂಪಗಳಿಂದ ಉಂಬೋವನಾಗತಾನೆ. ತನ್ನ ಸ್ವಾಖ್ಯಗಳು ತಾನು ಸ್ವೀಕಾರ ಮಾಡತಾನೆ. ಜ್ಞಾನೋತ್ತರದಿ–ಅಜ್ಞಾನದಶಾದಲ್ಲಿ ಅನುಸಂಧಾನಮಾರ್ಗ ತಿಳಿದು ಶ್ರೀ ಭಗವತ್ಪ್ರೀತಿಯಾಗಲಿ ಎಂತ, ತನಗರ್ಪಿಸಲು–ಕೃಷ್ಣಾರ್ಪಣಪೂರ್ವಕವಾಗಿ ತನಗೆ ಅರ್ಪಿಸಲು, ಚಿತ್ಸುಖವಿತ್ತು–ಸ್ವರೂಪಸುಖ ವ್ಯಕ್ತಮಾಡಿಕೊಟ್ಟು, ಸಂತೈಪ–ಪುನಃ ಜನ್ಮವಿಲ್ಲದಂತೆ ರಕ್ಷಿಸತಾನೆ. ಸಂತು ಕಾಲಪ್ರವಹಗಳು–ನದಿಗಳಲ್ಲಿ ವರ್ಷಕಾಲವನ್ನು ಅನುಸರಿಸಿ ಬರತಕ್ಕ ಉದಕಪ್ರವಾಹಗಳು ಆಯಾ ನದಿಗಳಲ್ಲಿ, ಕಂಡರೆಯು ಸರಿ–ಜನರಾದವರು ಕಂಡರೂ ಸರಿಯೆ, ಕಾಣದಿರೆ–ಕಾಣದಿದ್ದರೂ ಸರಿಯೆ, ಪರಿವುವು–ಪ್ರವಹಿಸತಕ್ಕವೇ ಇರತದೆ. ತದ್ವತ್, ದೇಹಾಂತರ್ಗತ ಇಂದ್ರಿಯಗತನಾದ ಬಿಂಬರೂಪಿ ಪರಮಾತ್ಮ ತನ್ನ ಕಾರ್ಯಗಳು ನದೀಪ್ರವಾಹದಂತೆ ಸದಾ ನಡಸುತ್ತಲೇ ಇರತಾನೆ. ಅಧಿಕಾರಿ ತಿಳಿಯಲಿ, ತಿಳಿಯದೆ ಹೋಗಲಿ ನದೀಪ್ರವಾಹವತ್ ಭಗವಂತ ತನ್ನ ಕಾರ್ಯ ಮಾಡತಾನೇ ಇರತಾನೆ. ಮರಳಿ–ಅದೇ ಉದಕವನ್ನೇ ದಾರಾದರೂ ಕಾಣತಾರೋ ಅವರಿಗೆ, ಮಜ್ಜನ–ಸ್ನಾನದಿಂದ ಕಶ್ಮಲ ನಿವಾರಣವಾಗಿ ಶುದ್ಧರಾಗಿ ಇನ್ನೂ, ಪಾನ–ದಾಹಯುಕ್ತನಾಗಿ ಇದ್ದರೆ ಪಾನರೂಪದಿಂದ ದಾಹಶಾಂತಿಯೂ ಮಾಡತದೆ. ಕರ್ಮಗಳಿಂದ – ಇಂಥಾ ಸ್ನಾನ ಪಾನಾದಿ ಕರ್ಮಗಳಿಂದ, ಸುಖವಿಹವು–ಸುಖ ಕೊಡೋದಾಗತದೆ, ಇದು ದೃಷ್ಟಾಂತ. ತದ್ವತ್ ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾಖ್ಯ ನದಿಯಲ್ಲಿ ಸ್ನಾನ ಮಾಡಿದವರಿಗೆ ದೇಹಗತ ಅಜ್ಞಾನವೆಂಬ ಕಲ್ಮಶವನ್ನು ತೊಳೆದು ಆ ಪರಮಾತ್ಮನ ಮಹಾತ್ಮೆ ಎಂಬ ಜಲಪಾನ ಮಾಡೋಣದರಿಂದ ದಾಹರೂಪವಾದ ಅಹಂಮಮತಾದಿಗಳು, ಅಜ್ಞಾನವು ಪರಿಹಾರವಾಗಿ ಸುಖ ಪಡತಾನೆ.

**ಏನು ಮಾಡುವ ಕರ್ಮಗಳು ಲಕು ।**
**ಮೀನಿವಾಸನಿಗರ್ಪಿಸನುಸಂ ।**
**ಧಾನಪೂರ್ವಕದಿಂದ ಸಂದೇಹಿಸದೆ ದಿನದಿನದಿ ॥**
**ಮಾನನಿಧಿ ಕೈಕೊಂಡು ಸುಖವಿ ।**
**ತ್ತಾನತರ ಸಂತೈಪ ತೃಣ ಜಲ ।**
**ಧೇನು ತಾನುಂಡನವರತ ಪಾಲ್ಗರೆವತೆರದಂತೆ ॥ ೩೮ ॥**

ಶ್ರೀ ಪರಮಾತ್ಮ ಅಧಿಕಾರಿಗಳು ಕೇವಲ ಪ್ರೀತಿಪೂರ್ವಕ ಅನುಸಂಧಾನದಿಂದ ಕೊಟ್ಟ ಪ್ರಾಕೃತ ಕರ್ಮಕ್ಕೆ ಅಪ್ರಾಕೃತ ಫಲ ಕೊಡತಾನೆ.

ಲಕುಮೀನಿವಾಸಗೆ–ರಮಾಭಿಮನ್ಯಮಾನವಾದ ಹೃದಯ ಅಷ್ಟದಳದಲ್ಲಿ (ಕಮಲ) ಆವಾಸನಾದ ಬಿಂಬರೂಪಿ ಪರಮಾತ್ಮನಿಗೆ, ಏನು ಮಾಡುವ ಕರ್ಮಗಳು–ಬಿಂಬಕ್ರಿಯಾ ದ್ವಾರಾ ದೇಹೇಂದ್ರಿಯಾದಿಗಳಿಂದ ಏನೇನು ಕರ್ಮಗಳು ಮಾಡತಾನೋ ಆ ಕರ್ಮ ಗಳನ್ನ, ಅನುಸಂಧಾನಪೂರ್ವಕದಿಂದ – ಅನುಸಂಧಾನಪೂರ್ವಕವಾಗಿ ಕೇವಲ ಭಕ್ತಿ ಯಿಂದ ಅಂತಃಕರಣದಿಂದಲೇವೆ, ಅರ್ಪಿಸು–ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ಎಂದು ಅರ್ಪಿತ ಮಾಡು. ಸಂದೇಹಿಸದೆ–ಶುಭಾಶುಭ ಕರ್ಮಗಳು ಅರ್ಪಿಸೋದರಲ್ಲಿ ಏನೇನೂ ಸಂದೇಹ ಮಾಡದೆ, ದಿನದಿನದಿ–ಪ್ರತಿದಿನ ಕ್ಷಣ ಲವಾದಿ ಕಾಲಗಳಲ್ಲಿ ಅರ್ಪಿತ ಮಾಡಬೇಕು ಎಂತ ತಾತ್ಪರ್ಯ. ಮಾನನಿಧಿ–ಮಾನ–ಬಹು ಮಾನಕ್ಕೆ ಯೋಗ್ಯವಾದ, ನಿಧಿ–ದ್ರವ್ಯ ಎಂಬ ಕರ್ಮಗಳು, ಕೈಕೊಂಡು–ಸ್ವೀಕಾರ ಮಾಡಿದಂಥಾವನಾಗಿ (ಶ್ರೀದೇವರು), ಅನತರ–ಸಮೀಚೀನವಾದ, ತಾರತಮ್ಯ ಪಂಚ ಭೇದ ಜ್ಞಾನಯುಕ್ತರಾದ, ತನಗೆ ಛಂದಾಗಿ ಪಂದನ ಮಾಡಿದ ಈ ಪೂರ್ವೋಕ್ತ ಅಧಿಕಾರಿಗಳನ್ನು, ಸಂತೈಪ–ಜ್ಞಾನ ಭಕ್ತ್ಯಾದಿಗಳು, ಇನ್ನೂ ಐಶ್ವರ್ಯಾದಿಗಳು ಇವುಗಳು ಕೊಟ್ಟು ಸಂರಕ್ಷಣೆ ಮಾಡತಾನೆ. (ದೃಷ್ಟಾಂತ), ಧೇನು–ಆಕಳು ತನ್ನ ಯಜಮಾನ ನಿಂದ ಕೊಡಲ್ಪಟ್ಟ, ತೃಣ ಜಲ–ಹುಲ್ಲು ನೀರು, ಅನವರತ ತಾನುಂಡು–ನಿರಂತರ ಭೋಜನ ಮಾಡಿ, ಪಾಲ್ಗರಿವ–ಹಾಲು ಕೊಡೋದಾಗತದೆ, ತೆರದಂತೆ–ಈ ಗೋವಿನೋಪಾದಿಯಲಿ ಗೋಸದೃಶನಾದ ಶ್ರೀ ಪರಮಾತ್ಮ ತೃಣಜಲಕ್ಕೆ ಸದೃಶವಾದ ಶುಭಾಶುಭಕರ್ಮಗಳನ್ನು ಅಧಿಕಾರಿಗಳಿಂದ ಸ್ವೀಕಾರ ಮಾಡಿ ಕ್ಷೀರಕ್ಕೆ ಸದೃಶವಾದ ನಿರಂತರ ದಿವ್ಯಸ್ವರೂಪಾನಂದ ವನ್ನು ಭೋಜನ ಮಾಡಿಸತಾನೆ. ಆದ್ದರಿಂದ ಅಧಿಕಾರಿಗಳು ದ್ವಂದ್ವಕರ್ಮಗಳ ಅರ್ಪಿಸ ಬೇಕು.

**ಪೂರ್ವ ದಕ್ಷಿಣ ಪಶ್ಚಿಮೋತ್ತರ ।**
**ಪಾರ್ವತೀಪತಿಯಗ್ನಿವಾಯು ಸು ।**
**ಶಾರ್ವರೀಕರ (ಚರ) ದಿಗ್ದಲಯದೊಳು ಹಂಸನಾಮಕನು ॥**
**ಸರ್ವಕಾಲದಿ ಸರ್ವರೊಳು ಸುರ ।**
**ಸಾರ್ವಭೌಮನು ಸ್ವೇಚ್ಛೆಯಲಿ ಮು ।**
**ಕ್ತ್ಯೋರ್ವರಿಗೆ ಗೋಚರಿಸದ ವ್ಯಕ್ತಾತ್ಮನೆಂದೆನಿಸಿ (ನೆಂದೆನಿಪ) ॥೩೯॥**

ದೇಹಗತ ಅಷ್ಟದಳ ಕಮಲ ವಿಚಾರ ಹೇಳತಾರೆ.

ಪ್ರಾಣಿಗಳ ಹೃದಯಕಮಲಗತ ಎಂಟು ದಳಗಳಲ್ಲಿರತಕ್ಕ ದೇವತೆಗಳು, ಅವರ ಉಪಾಸ್ಯ ಭಗವನ್ ಮೂರ್ತಿಗಳನ್ನು ತಿಳಿಸುತ್ತಾರೆ.

| ದಿಕ್ಕು | ದೇವತೆ | ಉಪಾಸ್ಯಮೂರ್ತಿ |
|---|---|---|
| ಪೂರ್ವ | ಇಂದ್ರ | ಉಪೇಂದ್ರ |
| ದಕ್ಷಿಣ | ಯಮ | ಶ್ರೀರಾಮ |
| ಪಶ್ಚಿಮ | ವರುಣ | ಮತ್ಸ್ಯ |
| ಉತ್ತರ | ಕುಬೇರ | ಕಪಿಲ |
| ಈಶಾನ್ಯ | ರುದ್ರ–ಚಂದ್ರ | ನರಸಿಂಹ – ದಧಿವಾಮನ |
| ಆಗ್ನೇಯ | ಅಗ್ನಿ | ಪರಶುರಾಮ |
| ನೈಋುತ್ಯ | ನಿರಋುತಿ | ಜನಾರ್ದನ |
| ವಾಯು | ಪ್ರವಹವಾಯು | ಹಯವದನ |

ಪೂರ್ವ–ಹೃದಯುಗತ ಅಷ್ಟದಳ ಕಮಲ, ಅಷ್ಟ ದಿಕ್ಕುಗಳ ವ್ಯಾಪಿಸಿ ಅದೆ. ಇದರಲ್ಲಿ ಪೂರ್ವದಿಕ್ಕಿನಲ್ಲಿ ವ್ಯಾಪಿಸಿದ ದಳದಲ್ಲಿ ಇಂದ್ರ ದೇವರು. ಇವನ ಉಪಾಸ್ಯ ಮೂರುತಿ ಉಪೇಂದ್ರನಾಮಕ ಪರಮಾತ್ಮ. ದಕ್ಷಿಣ–ದಕ್ಷಿಣ ದಿಕ್ಕಿನಲ್ಲಿ ವ್ಯಾಪಿಸಿದ ದಳದಲ್ಲಿ ಯಮದೇವರು. ಇವರ ಉಪಾಸ್ಯ ಮೂರುತಿ ಶ್ರೀರಾಮದೇವರು. ಪಶ್ಚಿಮ–ಪಶ್ಚಿಮ ದಿಕ್ಕಿನಲ್ಲಿ ವ್ಯಾಪಿಸಿದ ದಳದಲ್ಲಿ ವರುಣ ದೇವರು. ಇವರ ಉಪಾಸ್ಯ ಮೂರುತಿ ಮತ್ಸ್ಯ. ಉತ್ತರ–ಉತ್ತರ ದಿಕ್ಕಿನಲ್ಲಿ ವ್ಯಾಪಿಸಿದ ದಳದಲ್ಲಿ ಕುಬೇರ. ಇವನ ಉಪಾಸ್ಯ ಮೂರುತಿ ಕಪಿಲ ನಾಮಕ ಪರಮಾತ್ಮ. ಪಾರ್ವತೀಪತಿ–ಪಾರ್ವತೀದೇವೇರ ಪತಿಯಾದ ರುದ್ರದೇವರು. ಇವರ ದಿಕ್ಕು ಈಶಾನ್ಯ. ಈ ದಿಕ್ಕಿನಲ್ಲಿ ರುದ್ರದೇವರೂನೂ, ಸುಶಾರ್ವರೀಕರ–ಚಂದ್ರದೇವರೂನೂ ಇದ್ದಾರೆ. ಇವರ ಉಪಾಸ್ಯ ಮೂರುತಿ ನರಸಿಂಹ, ದಧಿವಾಮನ ರೂಪಗಳು. ಅಗ್ನಿ–ಆಗ್ನೇಯ ದಿಕ್ಕಿಗೆ ವ್ಯಾಪಿಸಿದ ದಳದಲ್ಲಿ ಅಗ್ನಿದೇವರು. ಇವನ ಉಪಾಸನಾ ಮೂರುತಿ ಜನಾರ್ದನ ಪರಶುರಾಮ ದೇವರು. ಉಪಲಕ್ಷಣಯಾ ನೈಋುತ್ಯದಿಕ್ಕೂ ಗ್ರಾಹ್ಯ, ಈ ದಿಕ್ಕಿನ ದಳದಲ್ಲಿ ನಿರಋುತಿ ನಾಮಕನು. ಇವನ ಉಪಾಸನಾ ಮೂರುತಿ ಜನಾರ್ದನ, ವಾಯು–ವಾಯವ್ಯದಿಕ್ಕಿಗೆ ವ್ಯಾಪಿಸಿದ ದಳದಲ್ಲಿ ಪ್ರವಹ ವಾಯುದೇವರು. ದಿಗ್ವಲಯದೊಳು–ಈ ದಿಕ್ಕುಗಳ ವಲಯಾಕಾರದಲ್ಲಿ, ಹಂಸ ನಾಮಕನು–ಹಂಸನಾಮಕ ಪರಮಾತ್ಮ ಗುಂಡಕ್ಕೆ ಸುತ್ತುತ್ತಾ ಇರಥಾನೆ. ಈ ಹಂಸ ನಾಮಕನು–ಈ ಹಂಸನಾಮಕ ಪರಮಾತ್ಮನೇ ಮೂಲೇಶ ಎಂತ ನಾಮಾಂತರದಿಂದ ಕಮಲಕರ್ಣಿಕಾ ಮೂಲದಲ್ಲಿ ಇದ್ದಾನೆ. ಸರ್ವಕಾಲದಿ–ನಿರಂತರದಲ್ಲೂ, ಸರ್ವರೊಳು–ಪೂರ್ವೋಕ್ತ ಪ್ರಕಾರ ಸರ್ವಪ್ರಾಣಿಗಳ ಹೃದಯಕಮಲಗತ ದಳಗಳಲ್ಲಿ, ಸರ್ವರ ಹೃದಯದೊಳು–ದಿಕ್ಪಾಲರಿಂದ ಸಹಿತನಾಗಿ ದಳಗಳಲ್ಲಿ, ಸುರಸಾರ್ವಭೌಮನು–ಸರ್ವದೇವತೆಗಳಿಗೂನೂ, ಸರ್ವಲೋಕಗಳಿಗೂನೂ ಪ್ರಭುವಾದ ಸರ್ವೋತ್ತಮನಾದ ಹಂಸನಾಮಕ

ಪರಮಾತ್ಮನು, ಸ್ವೇಚ್ಛೆಯಲಿ–ತನ್ನ ಸಂಕಲ್ಪಾನುಸಾರ ತನಗೆ ಇಷ್ಟಬಂದಂತೆ ಸಂಚಾರ ಮಾಡುತ ಬುದ್ಧಿಗಳ ಪ್ರೇರಿಸತಾನೆ. ಮತ್ತೋರ್ವರಿಗೆ ಗೋಚರಿಸದೆ–ಮತ್ತು ರಮಾ ಬ್ರಹ್ಮಾದಿಗಳ ಒಳಗೆ ಒಬ್ಬರಿಗಾದರೂ ಸಾಕಲ್ಯೇನ ತಿಳಿಸವೆ ಇದ್ದಾನೆ. ಅವ್ಯಕ್ತ–ಅವ್ಯಕ್ತ ತತ್ವಾಭಿಮಾನಿಯಾದ ರಮಾದೇವೇರಿಗೆ, ಆತ್ಮನು–ಸ್ವಾಮಿಯಾದವನು, ಎಂದೆನಿಸಿ–ಎಂತ ಕರಿಸೋವನಾಗತಾನೆ.

**ತಾ||** ಹಂಸರೂಪಿ ಪರಮಾತ್ಮ ಅಷ್ಟದಳಗಳಲ್ಲಿ ವ್ಯಾಪ್ತನಾದವ. ಬಾಹ್ಯ ಅಷ್ಟ ದಿಕ್ಕುಗಳಲ್ಲಿ ಅಷ್ಟ ದಿಕ್ಪಾಲಕರಿಂದ ಉಪಾಸ್ಯನಾಗಿ ಅನ್ಯರಿಗೆ ತಿಳಿಯುದೆ ಇದ್ದು ಜೀವನನ್ನು ರಕ್ಷಿಸುತಾ ಇರತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** " ನ ಚ ಗೌಣ ಆತ್ಮಾ ದೃಶ್ಯೋ ವಾಚ್ಯಶ್ಚ ನ ನಿರ್ಗುಣ ಇತಿ ಯುಕ್ತಂ || ಆತ್ಮಶಬ್ದಾತ್ || ಯೋ ಗುಣೈಃ ಸರ್ವತೋ ಹೀನೋ ಯಶ್ಚ ದೋಷವಿವರ್ಜಿತಃ || ಹೇಯೋಪಾದೇಯರಹಿತಃ ಸ ಆತ್ಮೇತ್ಯಭಿಧೀಯತೇ || " ಇತಿ ಬ್ರಹ್ಮಸೂತ್ರಭಾಷ್ಯೇ ||

**ಪರಿ ಇಡಾವತ್ಸರನು ಸಂವ |**
**ತ್ಸರದೊಳನಿರುದ್ಧಾದಿರೂಪವ |**
**ಧರಿಸಿ ಬಾರ್ಹಸ್ಪತ್ಯ ಸೌರಭ ಚಾಂದ್ರಮನು ಎನಿಸಿ ||**
**ಇರುತಿಹ ಜಗನ್ನಾಥ ವಿಠ್ಠಲ |**
**ಸ್ಮರಿಸುವವರನು ಸಂತಯಿಪನೆಂ |**
**ದುರುಪರಾಕ್ರಮನುಚಿತಸಾಧನ ಯೋಗ್ಯತೆಯನರಿತು ||೪೦ ||**

ಶ್ರೀ ಪರಮಾತ್ಮ ಸಂವತ್ಸರಾದಿಗಳಲ್ಲಿ ವ್ಯಾಪ್ತನಾಗಿರುವ ವಿಚಾರವೂ ಆ ವರ್ಷದ ವಿಚಾರವೂ ಹೇಳತಾರೆ.

ಪರಿ–ಈ ಕೆಳಗೆ ಹೇಳತಕ್ಕ ಪ್ರಕಾರ ಸಂವತ್ಸರಗಳು ಐದು. ಈ ಐದು ವರ್ಷಗಳು ದಾವುದೆಂದರೆ, ಇಡಾವತ್ಸರನು–ಮಾಘಮಾಸ ಕೃಷ್ಣಪಕ್ಷ ದಶಮೀ ಧನಿಷ್ಠಾನಕ್ಷತ್ರ ಪ್ರಥಮಪಾದ ಇಂಥಾದ್ದು ಪ್ರಾಪ್ತವಾಗಿ, ಇಂಥಾ ನಕ್ಷತ್ರ ಪ್ರಥಮಪಾದದಲ್ಲಿ ಸೂರ್ಯನು ದಾವಾಗ ಇರುತ್ತಾನೋ ತದಾರಭ್ಯ ವರ್ಷದವರಿಗೂ ಇಡಾವತ್ಸರ ಎಂತ ನಾಮ. ಇದಕ್ಕೆ ಅನಿರುದ್ಧರೂಪಿ ಪರಮಾತ್ಮ ಅಭಿಮಾನಿ, ಸಂವತ್ಸರವೊಳು–ಮಾಘಮಾಸ ಶುಕ್ಲಪಕ್ಷ ಪ್ರತಿಪದ, ಉತ್ತರಾಯಣ, ಶತಭಿಷಾದಿ ರೇವತ್ಯಂತ ನಕ್ಷತ್ರಗಳ ಒಳಗೆ ದಾವದಾದರೂ ಒಂದು ನಕ್ಷತ್ರ ಸಂಬಂಧಿಸಿ ಚಂದ್ರಸೂರ್ಯಾದಿಗಳು ಸಹ ಉದಯದಿಂದ ಕೂಡಿಗೊಂಡು ಇದ್ದಂಥಾ ಕಾಲದಲ್ಲಿ ಪೂರ್ವೋಕ್ತ ನಕ್ಷತ್ರಗಳ ಒಳಗೆ ದಾವದಾದರೂ ಒಂದು ನಕ್ಷತ್ರದಲ್ಲಿ ಸೂರ್ಯ ಇರಬೇಕು. ಇಂಥಾ ವರುಷಕ್ಕೆ ಸಂವತ್ಸರ ಎಂತ ನಾಮ. ಇದಕ್ಕೆ ಪ್ರದ್ಯುಮ್ನ ನಾಮಕ ಪರಮಾತ್ಮ ಅಭಿಮಾನಿಯಾಗಿ ಇರೋವನಾಗಿ ಇದ್ದಾನೆ. ಬಾರ್ಹಸ್ಪತ್ಯ–

ಬೃಹಸ್ಪತಿ ದಾವ ವರ್ಷದಲ್ಲಿ, ದಾವ ನಕ್ಷತ್ರದಲ್ಲಿ ಉದಯಿಸತಾನೋ ಅದಕ್ಕೆ ಬಾರ್ಹಸ್ಪತ್ಯ ವರ್ಷ ಎಂತ ನಾಮ. ಉದಯವಾದ ರಾಶಿ ಒಳಗೆ ಒಂದು ವರುಷ ಇರತಾನೆ. ಆ ವರ್ಷಕ್ಕೆ ದಾವ ನಕ್ಷತ್ರದಲ್ಲಿ ಉದಯಿಸತಾನೋ ಆ ನಕ್ಷತ್ರನಾಮವು ಆ ವರ್ಷಕ್ಕೆ ಉಂಟು. ಇದೇ ಬಾರ್ಹಸ್ಪತ್ಯ ವರ್ಷ ಎಂತ ನಾಮ. ಇದಕ್ಕೆ ಸಂಕರ್ಷಣನಾಮಕ ಪರಮಾತ್ಮ ಅಭಿಮಾನಿಯಾಗಿದ್ದಾನೆ. ಸೌರಭ–ಸೂರ್ಯನು ಒಂದೊಂದು ತಿಂಗಳು ಒಂದೊಂದು ರಾಶಿ ಸಂಚಾರದ ಮ್ಯಾರಿಗೆ ೧೨ ರಾಶಿಗೆ ೧೨ ತಿಂಗಳು ಸಂಚಾರ ಮಾಡೋಣದರಿಂದ ಆಗತಕ್ಕ ವರ್ಷಕ್ಕೆ ಸೌರಭ ಎಂತ ನಾಮ. ಈ ವರ್ಷಕ್ಕೆ ವಾಸುದೇವನಾಮಕ ಪರಮಾತ್ಮ ಅಭಿಮಾನಿಯಾಗಿ ಇರೋವನಾಗಿದ್ದಾನೆ. ಚಾಂದ್ರಮನು–ಈ ಅಮಾವಾಸ್ಯೆಯಿಂದ ಬರುವ ಅಮಾವಾಸ್ಯೆಗೆ ಒಂದು ತಿಂಗಳು ಮ್ಯಾರಿಗೆ ಆಗತಕ್ಕ ವರುಷಕ್ಕೆ ಚಾಂದ್ರಮ ವರುಷ ಎಂತ ನಾಮ. ಇದಕ್ಕೆ ಶ್ರೀ ನಾರಾಯಣದೇವರೇ ಅಭಿಮಾನಿಯಾಗಿದ್ದಾನೆ. ಅನಿರುದ್ಧಾದಿ ರೂಪವ ಧರಿಸಿ–ಈ ಪ್ರಕಾರ ಐದು ವಿಧವಾದ ವರ್ಷಗಳಲ್ಲಿ ಅನಿರುದ್ಧಾದಿ ಐದು ರೂಪಗಳ ಧರಿಸಿ, ಒಂದೊಂದು ವರ್ಷದಲ್ಲಿ ಒಂದೊಂದು ರೂಪದಿಂದ, ಎನಿಸಿ ಇರುತಿಹ–ಆಯಾ ಸಂವತ್ಸರನಾಮಕನು ಎನಿಸಿದವನಾಗಿ ಇರೋವನಾಗಿದ್ದಾನೆ. ಜಗನ್ನಾಥವಿಠ್ಠಲನು– ಜಗತ್ತಿಗೆ ಸ್ವಾಮಿಯಾದ ವಿಠ್ಠಲನಾಮಕ ಶ್ರೀಪರಮಾತ್ಮ, ಸ್ಮರಿಸುವವರನು–ಈ ಪ್ರಕಾರ ಅನುಸಂಧಾನದಿಂದ ಸ್ಮರಣೆ ಮಾಡತಕ್ಕವರನ್ನು, ಸಂತಯಿಪನೆಂದು–ಸಂರಕ್ಷಣೆ ಮಾಡತಾನೆಂದು ದಾರಢ್ಯಮನಸ್ಕರಾದವರನ್ನು ಉರುಪರಾಕ್ರಮನು–ಉತ್ಕೃಷ್ಟಪರಾಕ್ರಮಿಯಾದ ಶ್ರೀ ಪರಮಾತ್ಮ, ಉಚಿತಸಾಧನ–ಅವರವರು ಮಾಡಿದ ಯೋಗ್ಯವಾದ ಸಾಧನೆಗಳ, ಯೋಗ್ಯತೆಯ – ಸ್ವರೂಪಯೋಗ್ಯತಾವನ್ನು, ಅರಿತು–ಅರಿತವನಾಗಿ ಸಂರಕ್ಷಿಸತಾನೆ ಎಂತ ತಾತ್ಪರ್ಯ.

ಪ್ರಮಾಣ :– ಭಾಗವತ ತೃತೀಯಸ್ಕಂದದಲ್ಲಿ ಹನ್ನೆರಡನೇ ಅಧ್ಯಾಯದಲ್ಲಿ ಈ ಸಂವತ್ಸರಗಳ ವಿಚಾರ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ವಿಭೂತಿಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಆರನೆಯ ಸಂಧಿ

## ಪಂಚಮಹಾಯಜ್ಞ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಜನನಿ ಪಿತ ಭೂ ವಾರಿದಾಂಬರ |**
**ವಿನಿಪ ಪಂಚಾಗ್ನಿಯಲಿ ನಾರಾ |**
**ಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ||**
**ನೆನೆದು ದಿವಸಗಳೆಂಬ ಸಮಿಧೆಗ |**
**ಳನು ನಿರಂತರ ಹೋಮಿಸುತ ಪಾ |**
**ವನಕೆ ಪಾವನನೆನಿಪ ಪರಮನ ಬೇಡು ಪರಮಸುಖ || ೧ ||**

**ಅವತಾರಿಕಾ :–** "ತತ್ರ ನರಕೇ ಕರ್ಮಫಲಂ ಭುಂಕ್ತ್ವಾ ವೃಷ್ಟಿರೂಪೇಣ ನರ ಲೋಕಂ ಪ್ರಾಪ್ತೋ ವ್ರೀಹ್ಯಾದೀತರಜೀವದೇಹಗತೋ ದೈವಾಧೀನೇನ ಕರ್ಮಣಾ ಶರೀರ ಸ್ವೀಕಾರಾಯ ಪುರುಷಭುಕ್ತಾನ್ನಪರಿಣತರೇತೋಬಿಂದುಃ ಉದರಂ ಪ್ರವಿಷ್ಟೋ ಭವತಿ" ಇತಿ. ಪಂಚಾಗ್ನಿಗೆ ಪ್ರಮಾಣ. "ದ್ಯುಪರ್ಜನ್ಯಧರಾಪುಂಸ್ತ್ರೀ ಕ್ರಮಾತ್ಪಂಚಾಗ್ನಯಃ ಸ್ಮೃತಾಃ || ಎಂತ ಭೂಮಿಯಲ್ಲಿ ಜೀವ ಜನಿಸಬೇಕಾದರೆ ಪ್ಲೋಕೋಕ್ತ ಐದು ಸ್ಥಾನ ಗಳ ದ್ವಾರಾ ಜನಿಸತಾನೆ. ಆ ಐದು ಸ್ಥಾನಗಳಲ್ಲಿ ಆಯಸ್ಸು ಸಹಿತ ಹೋಮಕ್ರಮವನ್ನ ಹೇಳತಾರೆ. ಜೀವಹೋಮವೂ, ಆಯುಷ್ಯಹೋಮವೂ, ಕರ್ಮಹೋಮವೂ ಹೇಳತಾರೆ.

**ಟೀಕಾ :**

ಅಂಬರ–ಭೂಮಿಯಲ್ಲಿ ಜನನ ಆಗತಕ್ಕ ಜೀವ ಜನನಾತ್ಪೂರ್ವದಲ್ಲಿ ರಾಹು ಮಂಡಲಕ್ಕೆ ಅಧೋಭಾಗದಲ್ಲಿ ಇರತಕ್ಕ, ಅಂತ್ಯಪುಣ್ಯ ಭೋಗ ಮಾಡತಕ್ಕ ಅಂಬರಗತ ಪಾಡಿ ನಕ್ಷತ್ರ ಮಂಡಲದಲ್ಲಿ ಇರತಾನೆ. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬ ಪ್ರಮಾಣಾನುಸಾರ ಪುಣ್ಯ ಕ್ಷೀಣವಾಗೋಣವೇ ಅಲ್ಲಿಂದ ಯಮದೂತರಿಂದ

ನೂಕಲ್ಪಟ್ಟು ಮರ್ತ್ಯಲೋಕ ಪ್ರವೇಶ ಮಾಡತಾನೆ. ಭೂಮಿಯಲ್ಲಿ ಜನಿಸುವುದಕ್ಕೆ ಪೂರ್ವ, ವಾರಿದ–ಆ ಪ್ರವೇಶ ಕಾಲಕ್ಕೆ ಪ್ರಥಮತಃ ಅಲ್ಲಿಂದ ಅಂಬರಗತ ಮೇಘಮಂಡಲ ಪ್ರವೇಶ ಮಾಡತಾನೆ. ವಾರಿದ ಎಂದರೆ ಮೇಘ, ಭೂ–ಮೇಘ ಮಂಡಲದಿಂದ ಭೂ ಪ್ರವೇಶ ಮಾಡಿ ಭೂಮಿಗೆ ಬಂದು ವ್ರೀಹ್ಯಾದಿಗಳಲ್ಲಿ ಪ್ರವಿಷ್ಟನಾಗಿ ಇರತಾನೆ. ಪಿತ–ತದನಂತರ ವ್ರೀಹ್ಯಾದಿ ದ್ವಾರಾ ಪಿತರುದರ ಪ್ರವೇಶ ಮಾಡಿ ರೇತಃಸ್ಥಾನದಲ್ಲಿ ಇರತಾನೆ. ಜನನಿ–ಅಲ್ಲಿಂದ ಪಿತೃದ್ವಾರಾ ಮಾತೃ ಉದರ ಪ್ರವೇಶಮಾಡತಾನೆ. ತದನಂತರ ಮಾತೃ ದ್ವಾರಾ ಶಿಶುತ್ವೇನ ಭೂಮಿಯಲ್ಲಿ ಜನಿಸತಾನೆ.

ಈ ಪ್ರಕಾರ ಜನನಕ್ರಮ ಮತ್ತು ಇದರ ವಿವರ.

೧. ನಕ್ಷತ್ರಮಂಡಲ ಬಿಡೋ ಕಾಲಕ್ಕೆ ಅಲ್ಲಿರತಕ್ಕ ದೇಹ ಅಲ್ಲಿನ ಆಯಸ್ಸು ನಕ್ಷತ್ರಗಳು ಆಶ್ರಯಿಸಿ ಇರುವ ಅಂಬರವೆನಿಪ ಅಗ್ನಿಯಲ್ಲಿ ಹೋಮತ್ವೇನ ಅನುಸಂಧಾನ ಮಾಡಿ ಹೋಮ ಮಾಡಬೇಕು.

೨. ಅಲ್ಲಿಂದ ಮೇಘಮಂಡಲಕ್ಕೆ ಬಂದು ಪೂರ್ವದ ದೇಹ ಮೇಘಮಂಡಲದಲ್ಲಿ ಬಿಟ್ಟು ದೇಹಾಂತರವನ್ನು ಅಲ್ಲಿ ಹೊಂದಿ ಕೆಲವು ಕಾಲ ಅಲ್ಲಿ ಇರತಾನೆ. ಆದ್ದರಿಂದ ಆ ದೇಹ ಅಲ್ಲಿನ ಆಯಸ್ಸು ವಾರಿದ ಎಂಬ ಅಗ್ನಿಯಲ್ಲಿ ಅನುಸಂಧಾನದಿಂದ ಹೋಮಿಸಬೇಕು.

೩. ಅಲ್ಲಿಂದ ಭೂಮಿಗೆ ಬಂದು ಆ ದೇಹವನ್ನು ಭೂಮಿಗೆ ಬಿಟ್ಟು ವ್ರೀಹ್ಯಾದಿ ದೇಹ ಧರಿಸಿ ಇರುತ್ತಾನೆ. ಆದ್ದರಿಂದ ಆ ದೇಹದಲ್ಲಿನ ಆಯಸ್ಸು ಭೂಸಾಂಕೇತವಾದ ಅಗ್ನಿಯಲ್ಲಿ ಅನುಸಂಧಾನದಿಂದ ಹೋಮಿಸಬೇಕು.

೪. ಅಲ್ಲಿಂದ ಪಿತರುದರವನ್ನ ಭೋಜನ, ಪಾನದ್ವಾರಾ ಪ್ರವೇಶಮಾಡಿ ಅಲ್ಲಿ ಪೂರ್ವದ ದೇಹವನ್ನು ಬಿಟ್ಟು ರೇತೋದೇಹ ಧರಿಸಿ ಕೆಲವು ಕಾಲ ಅಲ್ಲಿ ಇರುತ್ತಾನೆ. ಆದ್ದರಿಂದ ಆ ದೇಹ ಅಲ್ಲಿನ ಆಯಸ್ಸು ಪಿತೃಸಾಂಕೇತವಾದ ಅಗ್ನಿಯಲ್ಲಿ ಅನುಸಂಧಾನದಿಂದ ಹೋಮಿಸಬೇಕು.

೫. ಅಲ್ಲಿಂದ ಮಾತೃ ಉದರವನ್ನ ರೇತೋದೇಹ ಸಹಿತನಾಗಿ ಪಿತೃದ್ವಾರಾ ಪ್ರವೇಶಮಾಡತಾನೆ. ಅಲ್ಲಿ ಪಿತೃಸಂಬಂಧ ರೇತಸ್ಸು, ಮಾತೃಸಂಬಂಧ ಶೋಣಿತ ಎರಡೂ ಮೇಳನವಾಗಿ ಉಭಯಮಿಶ್ರದೇಹವನ್ನು ಧರಿಸಿ ಕೆಲವು ಕಾಲ ಅಲ್ಲಿ ಇರತಾನೆ. ಆದ್ದರಿಂದ ಅಲ್ಲಿನ ಆಯಸ್ಸು ಆ ದೇಹ ಜನನ್ಯಾಖ್ಯ ಅಗ್ನಿಯಲ್ಲಿ ಅನುಸಂಧಾನದಿಂದ ಹೋಮಿಸಬೇಕು. ಈ ಪ್ರಕಾರ ಜೀವನಿಗೆ ಸಂಬಂಧಿಸಿದ ಜನನಯಜ್ಞ.

ಮಾತೃ ಉದರದಿಂದ ಜನಿಸಿದ ನಂತರ ಮರಣಾಂತವರಿಗೂ ಆ ದೇಹ, ಅದಕ್ಕೆ ಅನುಸರಿಸಿದ ಆಯಸ್ಸು ದೇಹಾಂತರ್ಗತ ಪಂಚಾಗ್ನಿಯಲ್ಲಿ ಹಾಂಗೆ ಪೂರ್ವಾದಿಯಲ್ಲಿ ಚತುರ್ದಿಕ್ಕಿನಲ್ಲಿ ಊರ್ಧ್ವಭಾಗದಲ್ಲಿ ಅಂತು ಐದು ದಿಕ್ಕುಗಳಲ್ಲಿ, ದಿಕ್ಕು ಒಂದಕ್ಕೆ ಇನ್ನೂರು

ಕಿರಣಗಳ ಮೇರೆಗೆ, ಪಂಚವಿಧವಾಗಿ ವ್ಯಾಪಿಸಿದ ಕಿರಣಗಳೆಂಬ ಪಂಚಾಗ್ನಿಯಲ್ಲಿ ಅನುಸಂಧಾನದಿಂದ ಹೋಮಿಸುತಾ ಇರಬೇಕು. ಇದರಂತೆ ಮರಣಯಜ್ಞವು ಅದರ ವಿವರ ಹ್ಯಾಂಗೆಂದರೆ :–

೧. ಮರಣಹೊಂದಿದ ಸ್ಥೂಲಶರೀರ,

೨. ಮರಣಾನಂತರ ಬರತಕ್ಕ ಪ್ರೇತದೇಹ,

೩. ದಶದಿನಾನಂತರ ಬರತಕ್ಕ ಆಂತರಿಕ ದೇಹ,

೪. ತದನಂತರ ವೈತರಣೀ ತೀರದಲ್ಲಿ ಬರತಕ್ಕ ಯಾತನಾಶರೀರ,

೫. ಯಮಲೋಕದಿಂದ ನರಕಪ್ರವೇಶಕಾಲಕ್ಕೆ ಹೊಂದತಕ್ಕ ಯಾತನಾಶರೀರ,

ಈ ಪ್ರಕಾರ ದೇಹಗಳ ಅಲ್ಲಿನ ಆಯಸ್ಸುಗಳ ಅಲ್ಲಲ್ಲೇ ಅನುಸಂಧಾನದಿಂದ ಹೋಮಿಸಬೇಕು. ಎನಿಪ–ಜನನ್ಯಾದಿ ಪಂಚ ಎನತಕ್ಕ, ಪಂಚಾಗ್ನಿಯಲಿ–ಅಂಬರಾದಿ ಜನನ್ಯಾಂತ ಪಂಚಾಗ್ನಿಯಲ್ಲಿ, ನಾರಾಯಣನ–ಪ್ರಥಮಾಗ್ನಿಯಲ್ಲಿ ನಾರಾಯಣನ (ತದ್ವತ್ ಅವಶಿಷ್ಟಾಗ್ನಿಗಳಲ್ಲಿ ಕ್ರಮಾತ್ ವಾಸುದೇವಾದಿ ಅನಿರುದ್ಧಾಂತ ನಾಲ್ಕು ರೂಪಗಳ), ತ್ರಿಂಶತಿಮೂರ್ತಿಗಳ–ಯಜ್ಞೋಪಕರಣ ಅನುಸರಿಸಿ ಒಂದೊಂದು ಅಗ್ನಿಗೆ ಆಗತಕ್ಕ ರೂಪಗಳು ಆರು. ಆರು ಮೇರೆಗೆ ಮೂವತ್ತು ಭಗವನ್ಮೂರ್ತಿಗಳ, ವ್ಯಾಪಾರ–ಯಜ್ಞೋಪಕರಣಗಳ ದ್ವಾರಾ ಆಯಾ ಭಗವದ್ರೂಪಗಳಿಂದ ಆಗತಕ್ಕ ವ್ಯಾಪಾರ, ವ್ಯಾಪ್ತಿಗಳ–ದಾವ ದಾವ ಭಗವದ್ರೂಪ ದಾವ ದಾವ ಉಪಕರಣಗಳಲ್ಲಿ ವ್ಯಾಪ್ತಿಯೋ ಆ ವ್ಯಾಪ್ತಿಗಳ, ನೆನೆದು–ಅನುಸಂಧಾನದಿಂದ ತಿಳಿದು ಸ್ಮರಿಸಿ, ದಿವಸಗಳೆಂಬ – ದಿವಸಾಂತ್ಯಗಳೆಂಬದರನ್ನು, ಸಮಿಧೆಗಳನು – ಸಮಿತ್ತುಗಳನ್ನಾಗಿ ಅನುಸಂಧಾನ ಮಾಡಿ, ನಿರಂತರ ಹೋಮಿಸುತ, ಪ್ರತಿದಿನದಲ್ಲೂ ಹೋಮ ಮಾಡುತಾ, ಪಾವನಕೆ–ಸ್ವರೂಪತಃ ಪಾವನನಾದ ಭಗವದ್ಭಕ್ತನಾದ ಜೀವನ ಲಿಂಗಭಂಗ ಐದಿಸಿ, ಪಾವನನೆನಿಪ–ಪಾವನ ಎನಿಸತಕ್ಕ ಮತ್ತು ಪಾವನಸಾಂಕೇತನಾದ ಅಗ್ನಿಯನ್ನು ಪಾವನಮಾಡತಕ್ಕ ಶ್ರೀ ಪರಮಾತ್ಮನ, ಪರಮನ ಬೇಡು–ಉತ್ತಮವಾದ ಜ್ಞಾನಭಕ್ತಿವೈರಾಗ್ಯಯುಕ್ತವಾದ ಮನಸ್ಸು ಸದಾ ಇರುವಂತೆ ಪ್ರಾರ್ಥಿಸು. ಪರಮ ಸುಖ–ಉತ್ತಮವಾದ ಪದವನ್ನ ಐದೋದಕ್ಕೋಸ್ಕರ ಶ್ರೀ ಪರಮಾತ್ಮನ ಪ್ರಾರ್ಥನ ಮಾಡು. ಇಹದಲ್ಲೂ ಮಹದೈಶ್ವರ್ಯಾದಿಗಳಿಂದ ಇರುವಂಥಾದರನ್ನ ಬೇಡು ಎಂತ ತಾತ್ಪರ್ಯ.

**ವಿಶೇಷಾರ್ಥ** :– ಜನನಿ, ಪಿತ, ಭೂ, ವಾರಿದ, ಅಂಬರ ಇವುಗಳಲ್ಲಿ ಐದು ಅಗ್ನಿಗಳು ಚಿಂತಿಸಬೇಕು. ಆ ಐದು ಅಗ್ನಿಗಳು ದಾವುದೆಂದರೆ :– ಜನನಿಯಲ್ಲಿ ಆಹವನೀಯಾಗ್ನಿ, ಪಿತನಲ್ಲಿ ಗಾರ್ಹಸ್ಪತ್ಯಾಗ್ನಿ, ಭೂಮಿಯಲ್ಲಿ ಅಂದರೆ ಭೂ ಎನತಕ್ಕ ಅನ್ನರೂಪವಾದ ವ್ರೀಹ್ಯಾದಿಗಳಲ್ಲಿ ದಕ್ಷಿಣಾಗ್ನಿ, ಮೇಘದಲ್ಲಿ ಸೋಮಾಗ್ನಿ (ಸಭ್ಯಂಚಿತಿ ಎಂತ ಹೆಸರು), ಆಕಾಶದಲ್ಲಿ ನಾವಸತಿ ಎಂಬ ಅಗ್ನಿ. ಅಂತು ಐದು ಅಗ್ನಿಗಳು ಐದರಲ್ಲಿ ಚಿಂತಿಸಬೇಕು.

ತ್ರಿಂಶತಿಮೂರ್ತಿಗಳು :– ಅಂದರೆ ಜನನ್ಯಾದಿ ಪಂಚ ಅಗ್ನಿಗಳಲ್ಲಿ ಕ್ರಮಾಲಂಕಾರದಿಂದ ಅಭಿವ್ಯಕ್ತವಾದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾಲ್ಕು ರೂಪಗಳು, ನಾರಾಯಣ ಮೂಲರೂಪ ಒಂದು, ಅಂತು ಐದು ರೂಪಗಳು ತಿಳಿಯಬೇಕು. ಈ ಐದು ರೂಪಗಳೇ ಐದು ಅಗ್ನಿಗಳಲ್ಲಿ ಮೂವತ್ತು ರೂಪಗಳ ಧರಿಸಿದ್ದಾರೆ. ಮೂವತ್ತು ಹ್ಯಾಂಗೆಂದರೆ ಒಂದೊಂದು ಅಗ್ನಿಯಲ್ಲಿ ಆರಾರು ರೂಪಗಳು. ದಾವದು ಎಂದರೆ ಜನನೀಗತ ಆಹವನೀಯಾಗ್ನಿಯಲ್ಲಿ ಅನಿರುದ್ಧರೂಪ ಒಂದು. ಇದರಿಂದ ಅಭಿವ್ಯಕ್ತವಾದದ್ದು ಅನಿರುದ್ಧ ರೂಪದಿಂದ ಅನಿರುದ್ಧಪ್ರದ್ಯುಮ್ನ, ಅನಿರುದ್ಧಸಂಕರ್ಷಣ, ಅನಿರುದ್ಧವಾಸುದೇವ, ಅನಿರುದ್ಧನಾರಾಯಣ, ಮೂಲರೂಪ ನಾರಾಯಣರೂಪ. ಅಂತು ಆರು ರೂಪಗಳು. ಇದೇ ಪ್ರಕಾರ ಒಂದು ಅಗ್ನಿಯಲ್ಲಿ ಆರು ರೂಪಗಳ ಪ್ರಕಾರ ಆರುಐದು ಮೂವತ್ತು ರೂಪಗಳು ಆಯಿತು.

ವ್ಯಾಪಾರ ವ್ಯಾಪ್ತಿಗಳ ನೆನೆದು – ವ್ಯಾಪಾರ ಎಂದರೆ ಕರ್ಮ. ವ್ಯಾಪ್ತಿಗಳು ಎಂದರೆ ಅನಿರುದ್ಧಾದಿ ರೂಪಗಳ ವ್ಯಾಪ್ತಿಗಳ ನೆನೆದು ಎಂತ ಅರ್ಥ.

ಮೇಲೆ ಹೇಳಿದ ಜಡಹೋಮದಿಂದ ಪರಮಾತ್ಮಗೆ ಅರ್ಪಣ ಮಾಡೋಣದರಿಂದ ದೋಷ ಎಂತಲೂ, " ಶುಭಂ ಪಿಬತ್ಯಸೌ ನಿತ್ಯಂ " ಎಂತ ಹೇಳತಕ್ಕ ವಚನಾನುಸಾರ ದಿವಸಗಳೇನು, ಶುಭಾಶುಭ ಕರ್ಮಗಳೇನು, ಪರಮಾತ್ಮಗೆ ಅರ್ಪಿತ ರೂಪವಾದ ಹೋಮ ಮಾಡೋಣದರಿಂದ ದೋಷ ಎಂತಾಗಲಿ, ವಿಕಾರವನೈದತಾನೆ ಎಂತಾಗಲೀ ಶಂಕಿಸಬಾರದು. ಯಾಕೆಂದರೆ ಶ್ರೀ ಪರಮಾತ್ಮ ಪಾವನಕೆ ಪಾವನ ಎಂದರೆ ಸರ್ವವೂ ಭಕ್ಷಿಸತಕ್ಕ ಅಗ್ನಿ ಅದದರ ದೋಷದಿಂದ ಸಂಬಂಧನಾಗದೇ ಅಗ್ನಿಯಲ್ಲಿ ಕಾಷ್ಠಾದಿ ಕುರುಳುಗಳು ಹಾಕಿದವ ದೋಷಿ ಎಂತ ಎನವೇ ಪುಣ್ಯಫಲವನ್ನ ಯಜ್ಞಯಾಗಾದಿ ಕ್ರಿಯೆಗಳಿಂದ ಹ್ಯಾಂಗೆ ಫಲ ಲಾಭವನ್ನ ಹೊಂದತಾನೋ ತದ್ವತ್ ಪರಮಾತ್ಮನೆಂದು ತಿಳಿ. ಹ್ಯಾಂಗೆಂದರೆ ಸರ್ವವೂ ಭುಜಿಸಿ ಪಾವನನಾಗಿ ಇರತಕ್ಕ ಅಗ್ನಿಯನ್ನು ಪಾವನ ಮಾಡತಕ್ಕ ಪರಮಾತ್ಮನು ಎನಿಪ ಶ್ರೀಪತಿಯಾದವಗೆ ಶುಭಾಶುಭಕರ್ಮಗಳು ಅರ್ಪಿಸೋಣದರಿಂದ ವಿಕಾರವನೈದೋದಿಲ್ಲ. ಅರ್ಪಿಸಿದವನು ದೋಷಿ ಆಗತಾನಾ ಎಂದರೆ ಇವನೂ ದೋಷಿಯಾಗೋದಿಲ್ಲ.

ಪರಮಾತ್ಮ ಅರ್ಪಿತ ಮಾಡಿದ್ದರನ್ನ ಸ್ವೀಕಾರ ಮಾಡತಾನೆ. ದಾವದರನ್ನ ಎಂದರೆ :– ಅರ್ಪಿತ ಮಾಡಿದ್ದರಲ್ಲಿ ಅಂತರ್ಗತನಾಗಿ ತದಾಕಾರದಿಂದ ಇರತಕ್ಕ ತನ್ನ ಸ್ವರೂಪವನ್ನು ತಾನು ಸ್ವೀಕಾರ ಮಾಡತಾನೇ ಹೊರ್ತು ತದನ್ಯ ಸ್ವೀಕಾರ ಮಾಡೋದಿಲ್ಲ ಎಂತ ತಾತ್ಪರ್ಯ.

ಜನನಾನಂತರದಲ್ಲಿ ಮರಣಾಂತವೇನು. ಮರಣ ಐದಿದ ನಂತರ ನಕ್ಷತ್ರರೂಪನಾಗಿ ಆಕಾಶ ಪ್ರವೇಶವಾಗೋವರಿಗೂ ಹ್ಯಾಂಗೆ ಅರ್ಪಣೆ ಕ್ರಮ ಎಂದರೆ—ಮಾತೃಗರ್ಭದಿಂದ ಜನಿಸಿದ ನಂತರ ಮರಣಾಂತದವರಿಗೂ ಪಂಚಾಗ್ನಿ ಹೋಮ ಕ್ರಮ.

ಇದರ ವಿವರ : ಪಂಚಾಗ್ನಿ ದಾವದೆಂದರೆ ಸೂರ್ಯಕಿರಣಗಳಲ್ಲಿ ಪಂಚಾಗ್ನಿಗಳು ಅವೆ. ಹ್ಯಾಂಗೆಂದರೆ ತೇಜೋಗುಣ ಸೂರ್ಯನದು, ಸುಡತಕ್ಕ ಗುಣ ಅಗ್ನಿಯದು, ಹಗಲಲ್ಲಿ ಅಗ್ನಿ ಒಂದಂಶದಿಂದ ಸೂರ್ಯಕಿರಣಗಳಲ್ಲಿ ಪ್ರವಿಷ್ಟನಾಗಿರತಾನೆ. ರಾತ್ರಿಯಲ್ಲಿ ಅಗ್ನಿಯಲ್ಲಿ ಸೂರ್ಯಕಿರಣಗಳು ಒಂದಂಶದಿಂದ ಪ್ರವಿಷ್ಟವಾಗಿ ಇರತವೆ. ದೀಪದಲ್ಲಿ ಪ್ರಕಾಶ ಸೂರ್ಯನದು. ಸುಡೋಣ ಅಗ್ನಿಯದು. ಈ ಪ್ರಕಾರ ನೇಮ. ಆದ್ದರಿಂದ ಸೂರ್ಯ ಕಿರಣಗಳಲ್ಲಿ ಪಂಚಾಗ್ನಿಗಳು ಇವೆ. ದಾವ ಅಗ್ನಿ ಎಲ್ಲೆಲ್ಲಿ ಅದೆ ಎಂದರೇ : ಸೂರ್ಯ ಕಿರಣಗಳು ಸಾವಿರ. ಸಾವಿರಕ್ಕೂ ಐದು ದಿಕ್ಕಿನಲ್ಲಿ ದಿಕ್ಕು ಒಂದಕ್ಕೆ ಇನ್ನೂರು ಪ್ರಕಾರ ಐದು ದಿಕ್ಕುಗಳಿಗೆ ಸಾವಿರ ಕಿರಣಗಳು ಆಯಿತು. ದಿಕ್ಕುಗಳು, ದಿಕ್ಕುಗತ ಕಿರಣಗಳು, ಕಿರಣಗತ ಅಗ್ನಿಗಳು, ಅಗ್ನಿಗತ ಭಗವದ್ರೂಪಗಳು, ಈ ಕೆಳಗಿನ ಪ್ರಕಾರ ತಿಳಿಯಬೇಕು.

---

೧. ಪೂರ್ವ ದಿಕ್ಕಿನಲ್ಲಿ ಇನ್ನೂರು ಕಿರಣಗಳು. ನೀಲವರ್ಣ, ಆಹವನೀಯಾಗ್ನಿ, ಅನಿರುದ್ಧನಾಮಕ ಪರಮಾತ್ಮ.

೨. ದಕ್ಷಿಣ ದಿಕ್ಕಿನಲ್ಲಿ ೨೦೦ ಕಿರಣಗಳು. ಪೀತವರ್ಣ, ಗಾರ್ಹಪತ್ಯ ಅಗ್ನಿ, ಪ್ರದ್ಯುಮ್ನನಾಮಕ ಪರಮಾತ್ಮ.

೩. ಪಶ್ಚಿಮ ದಿಕ್ಕಿನಲ್ಲಿ ೨೦೦ ಕಿರಣಗಳು, ಸ್ವರ್ಣವರ್ಣ, ದಕ್ಷಿಣಾಗ್ನಿ, ಸಂಕರ್ಷಣ ನಾಮಕ ಪರಮಾತ್ಮ.

೪. ಉತ್ತರ ದಿಕ್ಕಿನಲ್ಲಿ ೨೦೦ ಕಿರಣಗಳು, ಶುಭ್ರವರ್ಣ, ಸೋಮಾಗ್ನಿ ಅಲ್ಲದೇ ಸಭ್ಯಂಚಿತಿ. ವಾಸುದೇವನಾಮಕ ಪರಮಾತ್ಮ.

೫. ಊರ್ಧ್ವ ದಿಕ್ಕಿನಲ್ಲಿ ೨೦೦ ಕಿರಣಗಳು. ರಕ್ತವರ್ಣ, ನಾವಸತ್ತಿಅಗ್ನಿ, ನಾರಾಯಣನಾಮಕ ಪರಮಾತ್ಮ.

---

ಈ ಪ್ರಕಾರ ಐದು ವಿಧ ಕಿರಣಗಳಲ್ಲಿ ಐದು ವಿಧ ಅಗ್ನಿ ಅದೆ. ಐದು ಭಗವದ್ರೂಪಗಳು ಪೂರ್ವೋಕ್ತ ಕ್ರಮದಿಂದ ಒಂದೊಂದರಲಿ ಆರಾರು ರೂಪಗಳ ಕ್ರಮಕ್ಕೆ ಮೂವತ್ತು ರೂಪಗಳ ಚಿಂತಿಸಿ ಜನನವಾದ ಸ್ಥೂಲದೇಹ ಸಹಿತ, ಜೀವನ್ನ ಸ್ಥೂಲ ದೇಹಗತ ಕರ್ಮ ಗಳೂ, ಸ್ಥೂಲ ದೇಹಕ್ಕೆ ಏರ್ಪಟ್ಟು ಇರುವ ಆಯಸ್ಸುಗಳ ಸೂರ್ಯಕಿರಣಾಂತರ್ಗತ ಪಂಚಾಗ್ನಿಗಳಲ್ಲಿ ಹೋಮಿಸಬೇಕು. ಜನನಾನಂತರ ಮರಣದವರಿಗೂ ಹೋಮಿಸತಕ್ಕ ಪಂಚಾಗ್ನಿಗಳ ಕ್ರಮವಿದು. ಇದು ಬಹಿಯಲ್ಲಿ ಹೋಮಕ್ರಮ. ದೇಹದಲ್ಲಿ ದೇಹವನ್ನ ಜೀವನ್ನ ಹೋಮಕ್ರಮ :— ದೇಹದಲ್ಲಿ ಪಂಚಾಗ್ನಿಗಳು ಇವೆ. ಅದರ ಸ್ಥಾನಗಳು ದಾವದೆಂದರೆ :— ಮುಖದಲ್ಲಿ ಆಹವನೀಯಾಗ್ನಿ, ಹೃದಯದಲ್ಲಿ ಗಾರ್ಹಪತ್ಯಾಗ್ನಿ, ನಾಭಿ ಯಲ್ಲಿ ದಕ್ಷಿಣಾಗ್ನಿ, ವಾಮಪಾರ್ಶ್ವಕುಕ್ಷಿಯಲ್ಲಿ ಸಭ್ಯಂಚಿತಿ ಅಗ್ನಿ, ಸವ್ಯಪಾರ್ಶ್ವಕುಕ್ಷಿಯಲ್ಲಿ ನಾವಸತ್ತಿ ಅಗ್ನಿ. ಈ ಐದರಲ್ಲಿ ಸೂರ್ಯಕಿರಣಗಳು ಭಗವದ್ರೂಪಗಳು ಮೂವತ್ತು ಇರೋದಾಗಿ ಅದೆ. ಈ ದೇಹಗತ ಪಂಚಾಗ್ನಿಗಳಲ್ಲಿ ಮೂವತ್ತು ರೂಪಗಳ ತಿಳದು

ದೇಹವನ್ನ, ಜೀವನ್ನ, ಆಯುಷ್ಯವನ್ನ, ಕರ್ಮಗಳನ್ನ ಯಾವತ್ತು ಹೋಮ ಮಾಡ ಬೇಕು. ಜನನಯಜ್ಞ ಒಂದು, ಸ್ಥಿತಿಯಜ್ಞ ಒಂದು, ಅಧ್ಯಾತ್ಮಯಜ್ಞ ಒಂದು. ಈ ರೀತಿ ಮೂರು ಪ್ರಕಾರವಾಯಿತು. ಮರಣಯಜ್ಞವನ್ನ ಉತ್ತರೋತ್ತರ ಹೇಳತಾರೆ.

**ಗಗನ ಪಾವಕ ಸಮಿಧೆ ರವಿ ರ ।**
**ಶ್ಮಿಗಳೆ ಧೂಮವು ಅರ್ಚಿಯನಿಪುದೇ ।**
**ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರ ॥**
**ಮೃಗವರೋದರನೊಳಗೆ ಐದು ರೂ ।**
**ಪಗಳ ಚಿಂತಿಸಿ ಭಕ್ತಿರಸ ಮಾ ।**
**ತುಗಳೆ ಮಂತ್ರವ ಮಾಡಿ ಹೋಮಿಸುವರು ವಿಪಶ್ಚಿತರು ॥ ೨ ॥**

ಪಂಚಾಗ್ನಿಗಳಿಗೆ ಯಜ್ಞೋಪಕರಣಗಳು. ಮೂವತ್ತು ರೂಪಕ್ಕೆ ಕೃತ್ಯಗಳು. ಪೂರ್ವೋಕ್ತ ಪಂಚಾಗ್ನಿಗಳಲ್ಲಿ ಅಂಬರ ಸಾಂಕೇತವಾದ ಅಗ್ನಿಯಲ್ಲಿ ಹೋಮಕ್ರಮ ಹೇಳ ತಾರೆ :– ಇದು ಪ್ರಥಮ ಹೋಮಾಗ್ನಿ. ಈ ಅಗ್ನಿಗೆ ಪ್ರಾಣನಾಮಕ ವಾಯುದೇವರು (ಅಭಿಮಾನಿ) ನಾರಾಯಣ ನಾಮಕ ಶ್ರೀ ಪರಮಾತ್ಮನೆಂದು ಅನುಸಂಧಾನವನ್ನು ಮಾಡ ಬೇಕು. ವಿವರ ಹೇಳತಾರೆ.

ಗಗನ ಪಾವಕ–ಪಾಡಿ ನಕ್ಷತ್ರಗಳು ಇರತಕ್ಕ ಆಕಾಶವೆಂಬೋದೇ ಹೋಮಕ್ಕೆ ಯೋಗ್ಯವಾದ ಅಗ್ನಿ. ಈ ಯಜ್ಞಕ್ಕೆ ಇಂಥಾದ್ದೇ ಅಗ್ನಿ. ಇದಕ್ಕೆ ಪ್ರಾಣನಾಮಕ ವಾಯುದೇವರು, ಶ್ರೀ ನಾರಾಯಣದೇವರು, ಸಮಿಧೆ ರವಿ–ಇಂಥಾ ಅಗ್ನಿಯಲ್ಲಿ ಹಾಕತಕ್ಕ ಕಾಷ್ಠ ಎಂಬೋದೇ ದ್ವಾದಶಾದಿತ್ಯರು. ಪ್ರಾಣಾಂಶೇ ಪ್ರಾಣನಾಮಕ ವಾಯುದೇವರು– ನಾರಾಯಣನಾರಾಯಣ. ರಶ್ಮಿಗಳೇ ಧೂಮವು–ಸೂರ್ಯನಿಂದ ಹೊರಡತಕ್ಕ ರಶ್ಮಿ ಗಳೆಂಬೋದೇ ಅಗ್ನಿಸಂಯೋಗದಿಂದ ಕಾಷ್ಠದಿಂದ ಹೊರಡತಕ್ಕ ಹೊಗೆ. ಪ್ರಾಣಾಂಶ ಅಪಾನನಾಮಕ ವಾಯುದೇವರು ನಾರಾಯಣವಾಸುದೇವ, ಅರ್ಚಿಯನಿಪುದೇ ಹಗಲು– ಕಾಷ್ಠ ಸಂಯೋಗದಿಂದ ಅಗ್ನಿಯಿಂದ ಹೊರಡತಕ್ಕ ಉರಿಯು, ಉರಿ ಎಂಬೋದೇ ಸೂರ್ಯೋದಯದಿಂದ ಆದ ಹಗಲು. ಪ್ರಾಣಾಂಶ ವ್ಯಾನ ವಾಯುದೇವರು. ನಾರಾಯಣ ಪ್ರದ್ಯುಮ್ನ. ಚಂದ್ರಮಾಂಗಾರ–ಕಾಷ್ಟ ಸುಡೋಣದರಿಂದ ಆದ ಅಗ್ನಿಕೆಂಡಗಳೆಂಬೋದೇ ಚಂದ್ರನು. ಅಂಗಾರವೆಂದರೆ ಕೆಂಡವು. ಪ್ರಾಣನಾಮಕ ಸಮಾನ ವಾಯುದೇವರು. ನಾರಾಯಣಅನಿರುದ್ಧ. ಈ ಪ್ರಥಮಾಗ್ನಿಗೆ ಮೂಲರೂಪಿ ನಾರಾಯಣ ಅಭಿಮಾನಿ. ಅನ್ಯವಾದ ನಾರಾಯಣಾದಿ ಐದು ರೂಪಗಳ ಧರಿಸಿ ಅಗ್ನಿಯಲ್ಲಿ ಮೂಲ ರೂಪದಿಂದಲೂ ಅನ್ಯವಾದ ಐದು ರೂಪಗಳಿಂದ ಕಾಷ್ಠ ಧೂಮಾದಿ ಉಪಕರಣದಲ್ಲಿ ಇದ್ದಾನೆ. ಪ್ರಥಮ ಶ್ಲೋಕದಲ್ಲಿ ವ್ಯಾಪಾರ ವ್ಯಾಪ್ತಿಗಳ ನೆನೆದು ಎಂತ ಹೇಳಿದ್ದಾರೆ. ಆದಕಡಿಯಿಂದ ಈ ಪ್ರಕಾರ ತಿಳಿದು, ಮೃಗವರೋದರನೊಳಗೆ–ಮೃಗಶ್ರೇಷ್ಠನಾದ ಸಿಂಹನೋಪಾದಿಯಲಿ, ಉದರ ಅಲ್ಲದೆ ಕಟಿಯುಳ್ಳ ಮತ್ತು ಮೃಗಗಳೊಳಗೆ ಶ್ರೇಷ್ಠನಾದ ಸಿಂಹನೋಪಾದಿಯಲಿ,

ಜೀವರೊಳಗೆ ಶ್ರೇಷ್ಠರಾದ ಮುಖ್ಯ ಪ್ರಾಣದೇವರ ಈ ವಾಯುದೇವರೊಳಗೆ, ಐದು ರೂಪಗಳ—ಪೂರ್ವೋಕ್ತ ಮೂಲರೂಪ ಒಂದು. ಅನ್ಯವಾದ ಅನಿರುದ್ಧಾದಿಗಳು ಎಂದರೆ ವಿವರ :—

| | | | |
|---|---|---|---|
| ೧. | ಪ್ರಾಣರೂಪದಲಿ | — | ಶ್ರೀ ನಾರಾಯಣ. ಈ ಪ್ರಾಣರೂಪದಿಂದ ಹೊರಟಿರುವ |
| ೨. | ಪ್ರಾಣ ರೂಪದಲಿ | — | ನಾರಾಯಣ ನಾರಾಯಣ |
| ೩. | ಅಪಾನ ರೂಪದಲಿ | — | ನಾರಾಯಣ ವಾಸುದೇವ |
| ೪. | ವ್ಯಾನ ರೂಪದಲಿ | — | ನಾರಾಯಣ ಸಂಕರ್ಷಣ |
| ೫. | ಉದಾನ ರೂಪದಲಿ | — | ನಾರಾಯಣ ಪ್ರದ್ಯುಮ್ನ |
| ೬. | ಸಮಾನ ರೂಪದಲಿ | — | ನಾರಾಯಣ ಅನಿರುದ್ಧ |

ಈ ಪ್ರಕಾರ ಐದು ರೂಪಗಳ ಹಾಂಗೆ ಮೂಲ ರೂಪ ಸಹಿತ ಆರು ರೂಪಗಳ, ಚಿಂತಿಸಿ— ಆರು ಮುಖ್ಯ ಪ್ರಾಣ ರೂಪಗಳ ಚಿಂತಿಸಿ, ಭಕ್ತಿರಸ ಮಾತುಗಳೇ—ಭಕ್ತಿಯಿಂದ ಯುಕ್ತ ನಾಗಿ ತಜ್ಜನಿತ ರಸಾಖ್ಯ ಆನಂದದಿಂದ ಅನುಸಂಧಾನಪೂರ್ವಕ ಅರ್ಪಿಸತಕ್ಕ ಮಾತು ಗಳೇ, ಮಂತ್ರವು ಮಾಡಿ—ಮಂತ್ರತ್ವೇನ ಅನುಸಂಧಾನ ಮಾಡಿ, ಹೋಮಿಸುವರು— ಗಗನಾಗ್ನಿಯಲ್ಲಿ ಅಲ್ಲಿರುವ ದೇಹವು, ಅಲ್ಲಿನ ಆಯಸ್ಸು, ಭಗವತ್ಪ್ರೀತಿಗಾಗಿ ಹೋಮಿಸು ವರು. ವಿಪಶ್ಚಿತರು—ಜ್ಞಾನಿಗಳು ಎಂತ ಅರ್ಥ.

ಈ ಅನುಸಂಧಾನ ಎಂಬುದು ಭೂಮಿಯಲ್ಲಿ ಜನಿಸಿದ ನಂತರ ಗುರುಮುಖದಿಂದ ಜ್ಞಾನ ಸಂಪಾದಿಸಿ ಗತವಾದದ್ದರನ್ನ ವರ್ತಮಾನದಲ್ಲಿ ಅನುಸಂಧಾನ ಮಾಡಿ ಅರ್ಪಿಸೋವ ನಾಗಬೇಕು ಎಂತ ತಾತ್ಪರ್ಯ. ಉತ್ತರದಲ್ಲಿ ಹೇಳತಕ್ಕದ್ದರಲ್ಲೂ ಇದೇ ರೀತ್ಯಾ ತಿಳಿದು ಅರ್ಪಿತ ಮಾಡಬೇಕೆಂದು ಅರ್ಥವು.

**ಪಾವಕನು ಪರ್ಜನ್ಯ ಸಮಿಧೆಯು ।**
**ಪ್ರಾವಹೀಪತಿ ಧೂಮಗಳೆ ಮೇ ।**
**ಘಾವಳಿಗಳರ್ಚಿ ಕ್ಷಣಪ್ರಭೆ ಗರ್ಜನವೆ ಕಿಡಿಯು ॥**
**ಭಾವಿಸುವುದಂಗಾರ ಸಿಡಿಲೆಂ ।**
**ದೀ ವಿಧಾಗ್ನಿಯೊಳಬ್ಧಿ ಜಾತನ ।**
**ಕೋವಿದರು ಹೋಮಿಸುವರನುದಿನ ಪರಮಭಕುತಿಯಲಿ ॥ ೩ ॥**

ದ್ವಿತೀಯಾಗ್ನಿಯಾದ ವಾರಿದ ಎಂಬ ಮೇಘಾಗ್ನಿಯಲ್ಲಿ ಹೋಮಕ್ರಮ ಹೇಳತಾರೆ. ಈ ಅಗ್ನಿಗೆ ಅಪಾನನಾಮಕ ವಾಯುದೇವರು, ವಾಸುದೇವನಾಮಕ ಪರಮಾತ್ಮ.

ಪಾವಕನು ಪರ್ಜನ್ಯ—ಪರ್ಜನ್ಯನಾಮಕ ಮೇಘವೆಂಬೋದೇ ಅಗ್ನಿ. ಈ ಅಗ್ನಿ ಯಲ್ಲಿ ಅಪಾನನಾಮಕ ವಾಯುದೇವರು, ವಾಸುದೇವರೂಪಿ ಪರಮಾತ್ಮ, ಸಮಿಧೆಯು

ಪ್ರಾವಹೀಪತಿ–ಮೇಘಾಖ್ಯ ಅಗ್ನಿಗೆ ಸಮಿಧೆ ಸಾಂಕೇತವಾದ ಕಾಷ್ಠ, ಪ್ರಾವಹೀಪತಿ–ಪ್ರವಹವಾಯುದೇವರು, ಅಪಾನನಾಮಕ ಪ್ರಾಣದೇವರು, ವಾಸುದೇವಾಖ್ಯ ನಾರಾಯಣ, ಧೂಮಗಳೇ ಮೇಘಾವಳಿಗಳು–ಅಗ್ನಿಸಂಯೋಗದಿಂದ ಕಾಷ್ಠದಿಂದ ಹೊರಡತಕ್ಕ ಹೊಗೆ ಎಂಬುದೇ ಸಂಚಾರ ಮಾಡತಕ್ಕ ಮೇಘಪಂಕ್ತಿಗಳು (ಇದಕ್ಕೆ ಅಪಾನನಾಮಕ ವಾಯುದೇವರು, ವಾಸುದೇವ ವಾಸುದೇವ), ಅರ್ಚಿ ಕ್ಷಣಪ್ರಭೆ–ಕಾಷ್ಠಸಂಯೋಗದಿಂದ ಅಗ್ನಿಯಿಂದ ಹೊರಡತಕ್ಕ ಅಗ್ನಿ ಎಂಬ ಉರಿಯೇ, ಕಾಂತಿ ತೋರಿಸಿ ತಕ್ಷಣದಲ್ಲೇ ಆ ಕಾಂತಿ ಲುಪ್ತವಾಗತಕ್ಕ ಮಿಂಚು (ಅಪಾನನಾಮಕ ವ್ಯಾನವಾಯುದೇವರು, ವಾಸುದೇವ ಸಂಕರ್ಷಣ), ಗರ್ಜನವೆ ಕಿಡಿಯು–ಇಂಥಾ ಉರಿಯಿಂದ ಹೊರಡತಕ್ಕ ಕಿಡಿಗಳು ಎಂಬುದೇ ಮೇಘಗರ್ಜನೆಯು, ಇದೆಂಬುದೇ ಕಿಡಿಗಳು, (ಅಪಾನನಾಮಕ ಉದಾನ ವಾಯುದೇವರು, ವಾಸುದೇವ ಅನಿರುದ್ಧ), ಎಂದು–ಈ ಪ್ರಕಾರ ವಾಯುದೇವರು ಶ್ರೀ ಪರಮಾತ್ಮ ಇದ್ದಾರೆಂದು, ಭಾವಿಸುವುದು–ಅನುಸಂಧಾನದಿಂದ ಭಾವನಾ ಮಾಡುವುದು. ಈ ವಿಧ ಅಗ್ನಿಯೊಳು–ಏತಾದೃಶವಾದ ಮೇಘಾಗ್ನಿಯೊಳು, ಅಬ್ಧಿಜಾತನ–ಅಬ್ಧಿ ಎಂದರೆ ಸಮುದ್ರ ಎಂತ ಅರ್ಥವಾಗತದೆ. ಪ್ರಕೃತ ಅಬ್ಧಿಶಬ್ದ ಸಮುದ್ರಕ್ಕೆ ಪರ ಮಾಡಿದರೆ ಅರ್ಥ ಸಮನ್ವಯವಾಗಲಾರದು. ಅಬ್ಧಿ ಶಬ್ದಕ್ಕೆ ಲಕ್ಷಣಾ ಕಲ್ಪನಾ ಮಾಡಿ ಆ ಲಕ್ಷಣಾಕ್ಕೆ ಸಾದೃಶ್ಯವನ್ನು ತೆಗೆದುಕೊಂಡು ಅರ್ಥ ಹೇಳಿದರೆ ಅರ್ಥವ್ಯತ್ಯಾಸವಾಗಲಾರದು. ಆದ್ದರಿಂದ ಅಬ್ಧಿ ಎಂದರೆ ಅಪ್ಪಿಗೆ ದೊಡ್ಡದಾಗಿ ಆಶ್ರಯವಾಗಿ ಇರತಕ್ಕದ್ದು ದಾವುದೋ ಅದು ಅಬ್ಧಿ ಎಂತ ಲಕ್ಷಣಾ. ಈ ಲಕ್ಷಣಾದಿಂದ ವರ್ಷ ಸುರಿಸತಕ್ಕ ಉದಕಕ್ಕೆ ಆಶ್ರಯವಾದದ್ದು ಮೇಘವಾದ್ದರಿಂದ ಅಬ್ಧಿಶಬ್ದವನ್ನ ಮೇಘವಾಚಕ ಮಾಡಿಕೋಬೇಕು. (ಪಾಠಾಂತರ ಅಭ್ರಜಾತ ಎಂತಲೂ ಅದೆ. ಅಭ್ರ–ಮೇಘದಿಂದ ಜ–ವರ್ಷರೂಪದಿಂದ ಉತ್ಪನ್ನವಾಗತಕ್ಕದ್ದು ಉದಕ ಎಂತ ತಾತ್ಪರ್ಯ.) ಆದಕಾರಣ ನಕ್ಷತ್ರಮಂಡಲದಿಂದ ಪತನವಾಗಿ ಮೇಘಮಂಡಲದಲ್ಲಿ ಜನಿಸಿದ ಜೀವನ್ನ, ಹೋಮಿಸುವರು-ಮೇಘಗತ ಜೀವನ್ನ, ಅಲ್ಲಿನ ಆಯಸ್ಸನ್ನ ಮೇಘಾಗ್ನಿಯಲ್ಲಿ ಹೋಮಿಸುವರಾಗತಾರೆ. ಅನುದಿನ ಕೋವಿದರು–ಪ್ರತಿದಿನದಲ್ಲೂ ಜ್ಞಾನಿಗಳಾದವರು, ಪರಮಭಕುತಿಯಲಿ–ಅತ್ಯಂತ ಭಕ್ತಿಯಿಂದ ಮಾತುಗಳ ಯಾವತ್ತು ಮಂತ್ರತ್ವೇನ ಅನುಸಂಧಾನ ಮಾಡತಾರೆ. ಅದರಂತೆ ಗತವಾದದ್ದರನ್ನ ಅಸ್ಮದಾದಿಗಳು ವರ್ತಮಾನದಲ್ಲಿ ಅರ್ಪಿಸಬೇಕೆಂತ ತಾತ್ಪರ್ಯ.

**ಧರಣಿಯೆಂಬುದೆ ಅಗ್ನಿ ಸಂವ ।**
**ತ್ಸರವೆ ಸಮಿಧೆ ವಿಹಾಯಸವೆ ಹೊಗೆ ।**
**ಇರುಳುರಿ ದಿಶಾಂಗಾರವಾಂತರದಿಗ್ವಲಯ ಕಿಡಿಯು ॥**
**ವರುಷವೆಂಬಾಹುತಿಗಳಿಂದಲಿ ।**
**ಹರಿಯ ಮೆಚ್ಚಿಸಿ ಸಕಲರೊಳಗ ।**
**ಧ್ವರಿಯನಾಗಿರು ಸರ್ವರೂಪಾತ್ಮಕನ ಚಿಂತಿಸುತ ॥ ೪ ॥**

ತೃತೀಯಾಗ್ನಿಯಾದ ಭೂಮಿಯೆಂಬ ಅಗ್ನಿಯಲ್ಲಿ ಹೋಮಕ್ರಮ ಹೇಳತಾರೆ. ಇದಕ್ಕೆ ವ್ಯಾನನಾಮಕ ವಾಯುದೇವರು, ಸಂಕರ್ಷಣರೂಪಿ ಪರಮಾತ್ಮ.

ಧರಣಿಯೆಂಬುದೆ ಅಗ್ನಿ–ಭೂಮಿ ಎನತಕ್ಕದ್ದೇ ಅಗ್ನಿ. ಈ ಅಗ್ನಿಯಲ್ಲಿ ವ್ಯಾನನಾಮಕ ವಾಯುದೇವರು, ಸಂಕರ್ಷಣರೂಪಿ ಪರಮಾತ್ಮ. ಸಂವತ್ಸರವೆ ಸಮಿಧೆ–ಪ್ರಭವಾದಿ ವರುಷಗಳೊಳಗೆ ದಾವ ವರುಷದಲ್ಲಿ ಆದರೆ ಮೇಘಮಂಡಲದಿಂದ ಭೂಮಿಯಲ್ಲಿ ಪ್ರವೇಶ ಮಾಡಿ ವ್ರೀಹ್ಯಾದಿಗಳಲ್ಲಿ ಇರತಾನೋ ಆ ವರುಷ ಎಂಬೋದೇ ಅಗ್ನಿ ಒಳಗೆ ಹಾಕತಕ್ಕ ಕಾಷ್ಠ. ಸಂವತ್ಸರ ಎಂದರೆ ವರುಷ. ಇದಕ್ಕೆ ವ್ಯಾನನಾಮಕ ಪ್ರಾಣವಾಯುದೇವರು, ಸಂಕರ್ಷಣನಾರಾಯಣ. ವಿಹಾಯಸವೆ ಹೊಗೆ – ಅಗ್ನಿಗೆ ಕಾಷ್ಠಸಂಯೋಗದಿಂದ ಹೊರಡತಕ್ಕ ಹೊಗೆ ಎಂಬೋದೇ ವಿಹಾಯಸ ಎಂದರೆ ಆಕಾಶ. ಈ ಆಕಾಶ ಎಂಬೋದೇ ಹೊಗೆ. ಇದರಲ್ಲಿ ವ್ಯಾನನಾಮಕ ಅಪಾನವಾಯುದೇವರು, ಸಂಕರ್ಷಣಾಖ್ಯ ವಾಸುದೇವ. ಇರುಳುರಿ–ಇರುಳು ಎಂದರೆ ರಾತ್ರಿ. ರಾತ್ರಿ ಎನತಕ್ಕದ್ದೇ ಉರಿ. ಇದರಲ್ಲಿ ವ್ಯಾನನಾಮಕ ವಾಯುದೇವರು, ಸಂಕರ್ಷಣರೂಪಿ ಪರಮಾತ್ಮನಿಂದ ಹೊರಟ ಸಂಕರ್ಷಣರೂಪಿ ಪರಮಾತ್ಮ, ದಿಶಾಂಗಾರ–ಪೂರ್ವಾದಿ ನಾಲ್ಕು ದಿಕ್ಕುಗಳು ಅಗ್ನಿಕೆಂಡಗಳು. ಇದರಲ್ಲಿ ವ್ಯಾನನಾಮಕ ಉದಾನ ವಾಯುದೇವರು, ಸಂಕರ್ಷಣ ಪ್ರದ್ಯುಮ್ನ. ಅವಾಂತರ ದಿಗ್ವಲಯ ಕಿಡಿಯು–ಅಗ್ನಿಕಾಷ್ಠಸಂಯೋಗದಿಂದ ಹೊರಟ ಉರಿಯಿಂದ ವ್ಯಕ್ತವಾದ ಕಿಡಿಗಳು ಆಗ್ನೇಯಾದಿ ವಿದಿಕ್ಕುಗಳು. ಇದರಲ್ಲಿ ವ್ಯಾನಾಖ್ಯ ಸಮಾನ ವಾಯುದೇವರು, ಸಂಕರ್ಷಣಾಖ್ಯ ಅನಿರುದ್ಧ. ವರುಷವೆಂಬಾಹುತಿಗಳಿಂದಲಿ–ದಾವ ವರುಷದಲ್ಲಿ ಪ್ರವೇಶ ಮಾಡಿದನೋ ತದಾರಭ್ಯ ವ್ರೀಹ್ಯಾದಿದೇಹದಲ್ಲಿ ಇದ್ದ ಒಂದು ವರುಷ ಕಾಲ ವರುಷಗತ ಕಾಲ ಆಯಸ್ಸು. ಆ ವ್ರೀಹಿದೇಹವನ್ನ ಧರಣಿ ಎಂಬ ಅಗ್ನಿಯಲ್ಲಿ ಆಹುತಿ ರೂಪದಿಂದ ಹೋಮಿಸಿ ಇಂಥಾ ಆಹುತಿಗಳಿಂದ, ಹರಿಯ ಮೆಚ್ಚಿಸಿ–ಬಿಂಬರೂಪಿ ಶ್ರೀ ಪರಮಾತ್ಮನ ತನ್ನ ಸ್ವಾಖ್ಯರೂಪಗಳಿಂದ ಮೆಚ್ಚಿಸಿ, ಸಕಲರೊಳಗೆ–ಸಮಸ್ತಪ್ರಾಣಿಗಳ ಮಧ್ಯದಲ್ಲಿ ಸಂಚಾರಮಾಡುತಾ–ಸರ್ವರೂಪಾತ್ಮಕನ–ಸಮಸ್ತವಾದ ಚರಾಚರದಲ್ಲಿ ತದಾಕಾರರೂಪದಿಂದ ಪ್ರಚುರನಾದ ಶ್ರೀಪರಮಾತ್ಮನ, ಚಿಂತಿಸುತ–ಅನುಸಂಧಾನ ಮಾಡುತಾ, ಅಧ್ವರಿಯನಾಗಿರು–ಅಧ್ಯಕ್ಷನಾಗಿರು. ಮಹಾಯಜ್ಞಮಾಡಿದವನು ಎಂತ ಎನಿಸೋವನಾಗು. ಅಧ್ವರ್ಯುಕಾರ್ಯ ಲೋಪಗಳು ಬಾರದಂತೆ ಮಾಡುವ ಕಾರ್ಯವಾದ್ದರಿಂದ ಲೋಪಗಳು ಬಾರದಂತೆ ಸಂಚರಿಸು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಸಂವತ್ಸರವೇ ಸಮಿಧೆ. ವರುಷವೆಂಬಾಹುತಿ ಎಂತ ಹೇಳತಾರೆ. ಪುನರುಕ್ತಿ ಆಗತದೆ ಎಂದಲ್ಲಿ ಸಂವತ್ಸರ ಎಂದರೆ ೩೬೦ ದಿನ ಸೇರಿದ ಒಂದು ವರುಷಕ್ಕೆ ಸಮೂಹ ಸಾಂಕೇತನಾಮ. ವತ್ಸರ ಎಂಬುವುದಕ್ಕೆ ದಿನಗಳ ವಿವಕ್ಷಯಾ ವರುಷ ಎಂತ ಸಾಂಕೇತ. ೩೬೦ ದಿನಗಳ ಆಹುತಿ ಎಂತ ಆಹುತಿ ಶಬ್ದಕ್ಕೆ ತಾತ್ಪರ್ಯ.

**ಪುರುಷ ಶಿಖಿ ವಾಕ್ಸಮಿಧೆ ಧೂಮವು ।**
**ಕರಣವರ್ಚಿಯು ಜಿಂಹ್ವೆ ಶ್ರೋತ್ರಗ ।**
**ಳೆರಡು ಕಿಡಿಗಳು ಲೋಚನಗಳಂಗಾರವೆನಿಸುವುವು ॥**
**ನಿರುತ ಭುಂಜಿಸುವನ್ನ ಯದುಕುಲ ।**
**ವರನಿಗವದಾನಗಳು ಯೆಂದೀ ।**
**ಪರಿಸಮರ್ಪಣೆ ಗೈಯೆ ಕೈಗೊಂಡನುದಿನದಿ ಪೊರೆವ ॥ ೫ ॥**

ಚತುರ್ಥಾಗ್ನಿಯಾದ ಪುರುಷಾಗ್ನಿಯಲ್ಲಿ ಹೋಮಕ್ರಮ ಹೇಳತಾರೆ. ಈ ಅಗ್ನಿಯಲ್ಲಿ ಉದಾನನಾಮಕ ವಾಯುದೇವರು, ಪ್ರದ್ಯುಮ್ನರೂಪಿ ಶ್ರೀಪರಮಾತ್ಮ ಅನುಸಂಧಾನ ಮಾಡಬೇಕೆಂದು ಹೇಳತಾರೆ.

ಪುರುಷ ಶಿಖಿ–ಪುರುಷ ಎಂಬುವನೇ ಅಗ್ನಿ. ಇವನೇ ತಂದೆ ಎಂತ ಅರ್ಥ. ಇದರಲ್ಲಿ ಉದಾನಾಖ್ಯ ವಾಯುದೇವರು, ಪ್ರದ್ಯುಮ್ನರೂಪಿ ಪರಮಾತ್ಮ. ವಾಕ್ಸಮಿಧೆ–ವಾಗಿಂದ್ರಿಯದಿಂದ ಉಚ್ಚರಿಸತಕ್ಕ ಮಾತುಗಳೇ ಕಾಷ್ಠರೂಪ ಸಮಿತ್ತು. ಇದರಲ್ಲಿ ಉದಾನ ನಾಮಕ ಪ್ರಾಣವಾಯು ದೇವರು, ಪ್ರದ್ಯುಮ್ನಾಖ್ಯ ನಾರಾಯಣ. ಧೂಮವು ಕರಣ–ಹೊಗೆ ಎನತಕ್ಕದ್ದೇ ಇಂದ್ರಿಯಗಳು. ಜಿಹ್ವೆ, ಶ್ರೋತ್ರ, ಲೋಚನ, ವಾಗಿಂದ್ರಿಯ, ಇವುಗಳ ವ್ಯತಿರಿಕ್ತ ತ್ವಗಿಂದ್ರಿಯ, ಪಾಣಿಪಾದಗಳು ಇವು ಧೂಮಸ್ಥಾನಾಪನ್ನಗಳು. ಇದರಲ್ಲಿ ಉದಾನಾಖ್ಯ ವ್ಯಾನವಾಯುದೇವರು, ಪ್ರದ್ಯುಮ್ನ ವಾಸುದೇವ. ಅರ್ಚಿಯು ಜಿಂಹ್ವೆ–ಉರಿ ಎನತಕ್ಕದ್ದೇ ನಾಲಿಗೆ. ಇದರಲ್ಲಿ ಉದಾನಾಖ್ಯ ವ್ಯಾನವಾಯು ದೇವರು, ಪ್ರದ್ಯುಮ್ನಾಖ್ಯ ಸಂಕರ್ಷಣ. ಶ್ರೋತ್ರಗಳೆರಡು ಕಿಡಿಗಳು–ಕಿವಿಗಳು ಎರಡು ಕಿಡಿಗಳು. ಇದರಲ್ಲಿ ಉದಾನಾಖ್ಯ ಉದಾನವಾಯುದೇವರು, ಪ್ರದ್ಯುಮ್ನಾಖ್ಯ ಪ್ರದ್ಯುಮ್ನ. ಲೋಚನ ಗಳಂಗಾರ–ಎರಡು ಕಣ್ಣುಗಳು ಬೆಂಕಿಕೆಂಡಗಳು. ಇದರಲ್ಲಿ ಉದಾನಾಖ್ಯ ಸಮಾನವಾಯು ದೇವರು, ಪ್ರದ್ಯುಮ್ನ ಅನಿರುದ್ಧ. ಎನಿಸುವವು–ಪೂರ್ವೋಕ್ತಗಳು ಈ ಪ್ರಕಾರ ಎನಿಸೋದಾಗತವೆ. ನಿರುತ ಭುಂಜಿಸುವನ್ನ–ನಿರುತ ಭೋಜನಮಾಡತಕ್ಕ ಅನ್ನ ಎಂದರೆ ವ್ರೀಹ್ಯಾದಿ ಗಳಲ್ಲಿ ಪ್ರವೇಶಮಾಡಿದ ಜೀವ ಪುರುಷನ ಉದರಪ್ರವೇಶವಾಗಬೇಕಾದರೆ ಭಕ್ಷಣಪದಾರ್ಥ ದ್ವಾರಾ ಉದರಪ್ರವೇಶ ಮಾಡಬೇಕು. ಭಕ್ಷಣಕ್ಕೆ ಯೋಗ್ಯವಾದ ಪದಾರ್ಥಗಳಲ್ಲಿ ದಾವ ಪದಾರ್ಥ ಆಶ್ರಯಿಸಿ ಇರತಾನೋ ತಿಳಿಯದು. ಆದ್ದರಿಂದ ತನ್ನ ತಂದೆ ನಿರಂತರ ಭೋಜನ ಮಾಡಿದ ಪದಾರ್ಥಗಳ ಅನುಸಂಧಾನದಿಂದ, ಯದುಕುಲವರನಿಗೆ–ಶ್ರೀಕೃಷ್ಣ ರೂಪಿ ಪರಮಾತ್ಮನಿಗೆ, ಅವದಾನಗಳು ಎಂದು–ಆಹುತಿಗಳು ಎಂತ, ಈ ಪರಿ ಸಮರ್ಪಣೆ ಗೈಯೆ – ಈ ಪ್ರಕಾರ ಅನುಸಂಧಾನದಿಂದ ಸಮರ್ಪಣೆ ಮಾಡಿದರೆ ಪುರುಷಾಖ್ಯ ಅಗ್ನಿ ಯಲ್ಲಿ ಅನ್ನದ್ವಾರಾ ಆಹುತಿಕೊಟ್ಟಂತೆ ಆಯಿತು. ತನ್ನ ಪಿತನ ಉದರಪ್ರವೇಶನಾಗಿ ಅಲ್ಲಿ ಕೆಲವು ಕಾಲ ಇರತಾನೆ. ಆದ್ದರಿಂದ ಅಲ್ಲಿನ ಆಯುಸ್ಸು, ಅಲ್ಲಿನ ದೇಹ, ಪುರುಷಾಖ್ಯ ಅಗ್ನಿಯಲ್ಲಿ ಹೋಮತ್ವೇನ ಅರ್ಪಿಸಿದರೆ, ಕೈಗೊಂಡು–ಇಂಥಾ ಅನುಸಂಧಾನಯಜ್ಞವನ್ನು

ಸ್ವೀಕಾರಮಾಡಿ, ಅನುದಿನದಿ ಪೊರೆವ–ಅರ್ಹಿಸತಕ್ಕ ಅಧಿಕಾರಿಯನ್ನು ದೇವರು ಪ್ರತಿದಿನ ದಲ್ಲೂ ಸಂರಕ್ಷಣೆ ಮಾಡತಾನೆ ಎಂತ ತಾತ್ಪರ್ಯ.

**ಮತ್ತೆ ಯೋಷಾಗ್ನಿಯೊಳು ತಿಳಿವದು ।**
**ಪಸ್ಥ ತತ್ತ್ವವೆ ಸಮಿಧೆ ಕಾಮೋ ।**
**ತ್ಪತ್ತಿ ಪರಮಾತುಗಳೇ ಧೂಮವು ಯೋನಿ ಮಹದರ್ಚಿ ॥**
**ತತ್ಪ್ರವೇಶಾಂಗಾರ ಕಿಡಿಗಳು ।**
**ಉತ್ಸಹಗಳುತ್ಸರ್ಜನವು ಪುರು ।**
**ಷೋತ್ತಮನಿಗವದಾನವೆನೆ ಕೈಗೊಂಡು ಮನ್ನಿಸುವ ॥ ೬ ॥**

ಐದನೇ ಅಗ್ನಿ ಜನನಿ. ಇವಳಲ್ಲಿ ಹೋಮಕ್ರಮವನ್ನು ಹೇಳತಾರೆ. ಇದಕ್ಕೆ ಸಮಾನ ವಾಯುದೇವರು, ಅನಿರುದ್ಧರೂಪಿ ಪರಮಾತ್ಮ.

ಮತ್ತೆ ಯೋಷಾಗ್ನಿಯೊಳು–ಪುನಶ್ಚ ಪಿತೃಗತನಾದ ಜೀವನ, ಯೋಷಾ ಎಂದರೆ ಸ್ತ್ರೀ, ಸ್ತ್ರೀ ಎನತಕ್ಕ ತನ್ನ ಮಾತೃಶರೀರವೆಂಬ ಅಗ್ನಿಯಲ್ಲಿ, ತಿಳಿವದು–ಹೋಮ ಮಾಡತಕ್ಕ ಕ್ರಮ ತಿಳಿಯಬೇಕು. ಹ್ಯಾಂಗೆಂದರೆ :– ತನ್ನ ಜನನಿ ಎಂಬುದೇ ಅಗ್ನಿ. ಇದರಲ್ಲಿ ಸಮಾನ ವಾಯು, ಅನಿರುದ್ಧ ಪರಮಾತ್ಮ. ಉಪಸ್ಥತತ್ವವೇ ಸಮಿಧೆ–ಉಪಸ್ಥ ಎನತಕ್ಕ ಮರ್ಮಸ್ಥಾನ ಎಂಬೋದೇ ಸಮಿತ್ತು ಕಾಷ್ಠ, ಸಮಾನವಾಯು ಪ್ರಾಣ ದೇವರು, ಅನಿರುದ್ಧ ನಾರಾಯಣ. ಕಾಮೋತ್ಪತ್ತಿ–ಪುರುಷನ ಸಂಗಡ ಕ್ರೀಡಾ ಮಾಡೋ ದಕ್ಕೆ ಕಾಮವನ್ನು ಉತ್ಪತ್ತಿ ಮಾಡಿ ಕೊಡತಕ್ಕ, ಪರಮಾತುಗಳೇ–ತತ್ಸಂಬಂಧವಾದ ಮಾತುಗಳೇ, ಧೂಮವು–ಕಾಷ್ಠಾಗ್ನಿಗಳು ಸಂಯೋಗದಿಂದ ಹೊರಡತಕ್ಕ ಹೊಗೆಯು, ಸಮಾನ ವಾಯುದೇವರು (ಅಪಾನ), ಅನಿರುದ್ಧ ವಾಸುದೇವ. ಯೋನಿ ಮಹದರ್ಚಿ– ಉಪಸ್ಥಗತ, ಭಗ–ರೇತಸ್ಸು ಪ್ರವೇಶ ಮಾಡುವ ಮಾರ್ಗವೆನತಕ್ಕದ್ದೆ ದೊಡ್ಡದಾದ ಉರಿ. ಅರ್ಚಿ ಎಂದರೆ ಉರಿ. ಇದಕ್ಕೆ ಸಮಾನ ವ್ಯಾನವಾಯು ದೇವರು. ಅನಿರುದ್ಧ ಸಂಕರ್ಷಣ. ತತ್ಪ್ರವೇಶಾಂಗಾರ–ಈ ಭಗದಲ್ಲಿ ಶಿಶ್ನಪ್ರವೇಶ ಎಂಬುದೇ ಕಾಷ್ಠ ದಹಿಸದ ಅಂಗಾರ ಎಂದರೆ ಕೆಂಡಗಳು. ಸಮಾನ ಉದಾನ ವಾಯುದೇವರು. ಅಸಿರುದ್ಧನ ಅಂಶ ಪ್ರದ್ಯುಮ್ನರೂಪಿ ಪರಮಾತ್ಮ. ಉತ್ಸರ್ಜನ–ರತಿಕ್ರೀಡಾದಲ್ಲಿ ವ್ಯಕ್ತಗಳಾದ, ಉತ್ಸಹ ಗಳು–ಆನಂದಗಳೆಂಬದೇ, ಕಿಡಿಗಳು–ಉರಿಯಿಂದ ಹೊರಡತಕ್ಕ ಕಿಡಿಗಳು. ಇದರಲ್ಲಿ ಸಮಾನಾಂಶ ಸಮಾನ ವಾಯು ದೇವರು. ಅನಿರುದ್ಧಾಂಶ ಅನಿರುದ್ಧ. ಪುರುಷೋತ್ತಮ ನಿಗವದಾನವೆನೆ-ಪುರುಷ ಶ್ರೇಷ್ಠನಾದ ಶ್ರೀಪರಮಾತ್ಮಗೆ ಅಲ್ಲಿನ ದೇಹ, ಅಲ್ಲಿನ ಆಯಸ್ಸು, ಆಹುತಿ ಎಂದರೇ, ಕೈಗೊಂಡು–ಇಂಥಾ ಯಜ್ಞವನ್ನು ಸ್ವೀಕಾರ ಮಾಡಿ, ಮನ್ನಿಸುವ– ಅಜ್ಞಾನಾದಿ ದೋಷಗಳ ನಾಶ ಮಾಡತಾ ಜ್ಞಾನಾಭಿವೃದ್ಧಿ ಮಾಡಿ ರಕ್ಷಿಸತಾನೆ.

ಈ ಶ್ಲೋಕದಲ್ಲಿ ಹೇಳಿದ ಕ್ರಮವನ್ನ ಮಾತಾಪಿತೃಗಳ ಕಾರ್ಯವೆಂದು ತಿಳಿಯ ಬೇಕು. ಈ ಪ್ರಕಾರ ಅಗ್ನಿಕಾಷ್ಠಾದಿ ಸಾಂಕೇತಗಳಾದ ಅಧಿಷ್ಠಾನಗಳು ಆರರಲ್ಲಿ

ಅಂತರ್ಗತ ಭಗವದ್ರೂಪಗಳು ತಿಳಿದು ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಹೋಮ ತ್ವೇನ ಅರ್ಪಿಸೋವನಾಗಬೇಕೆಂದು ತಾತ್ಪರ್ಯ.

**ಐದು ಅಗ್ನಿಗಳಲ್ಲಿ ಮರಿಯದಲೆ ।**
**ಐದು ರೂಪಾತ್ಮಕನ ಇಪ್ಪ ।**
**ತ್ರೈದು ರೂಪಗಳನುದಿನದಿ ನೆನೆವರಿಗೆ ಜನುಮಗಳ ॥**
**ಐದಿಸನು ನಳಿನಾಕ್ಷ ರಣದೊಳು ।**
**ಮೈದುನನ ಕಾಯ್ದಂತೆ ಸಲಹುವ ।**
**ಬೈದವಗೆ ಗತಿಯಿತ್ತ ಭಯಹರ ಭಕ್ತವತ್ಸಲನು ॥ ೭ ॥**

ಇಂಥಾ ಅನುಸಂಧಾನದಿಂದ ಭಗವದನುಗ್ರಹ ಎಂಥಾದ್ದು ಆಗತದೆ ಎಂತ ಹೇಳತಾರೆ.

ಐದು ಅಗ್ನಿಗಳಲ್ಲಿ ಮರಿಯದಲೆ_ಗಗನಾದಿ ಐದು ಅಗ್ನಿಗಳಲ್ಲಿ ಅಂತರ್ಗತನಾಗಿ ಇರತಕ್ಕ ಶ್ರೀ ಪರಮಾತ್ಮನ ಮರಿಯದೇನೇ, ಐದು ರೂಪಾತ್ಮಕನ_ಅನಿರುದ್ಧಾದಿ ಐದು ರೂಪಗಳಿಂದ ಐದು ಅಗ್ನಿಗಳಲ್ಲಿ ಒಂದೊಂದು ಅಗ್ನಿಯಲ್ಲಿ ಒಂದೊಂದು ರೂಪದಿಂದ ಐದು ರೂಪದಿಂದ ಪ್ರಚುರನಾದ ಶ್ರೀ ಪರಮಾತ್ಮನ, ಇಪ್ಪತ್ತೈದು ರೂಪಗಳ_ಒಂದೊಂದು ಅಗ್ನಿಗತ ಒಂದೊಂದು ರೂಪದಿಂದ ಅನಿರುದ್ಧಾದಿ ಐದು ರೂಪಗಳ ಅಂಶ ವಿಶೇಷ ಗಳಿಂದ ಒಂದೊಂದು ಅಗ್ನಿಗೆ ಏರ್ಪಟ್ಟ ಕಾಷ್ಠಾದಿ, ಧೂಮಾದಿ ಐದು ಅಧಿಷ್ಠಾನಗಳಲ್ಲಿ ಐದು ರೂಪದಿಂದ ಇದ್ದಾನೆ. ಈ ಪ್ರಕಾರ ಆಗತಕ್ಕ ರೂಪಗಳು, ಇಪ್ಪತ್ತೈದು ರೂಪಗಳು. ಅಂತು ಅಗ್ನಿಗತ ರೂಪಗಳು ಐದು, ಧೂಮಾದಿಗತ ರೂಪಗಳು ಇಪ್ಪ ತ್ತೈದು. ಅಂತು ಮೂವತ್ತು ರೂಪಗಳು. ಪ್ರಥಮ ಶ್ಲೋಕದಲ್ಲಿ ಹೇಳಿದ ತ್ರಿಂಶತಿ ಮೂರ್ತಿಗಳು ಇದೇವೇ. ಈ ರೂಪಗಳ ಅನುದಿನದಿ ನೆನೆವರಿಗೆ_ಪ್ರತಿದಿನದಲ್ಲೂ ಪೂರ್ವೋಕ್ತ ಪ್ರಕಾರ ಯಜ್ಞಾನುಸಂಧಾನದಿಂದ ಅಂತರ್ಗತ ಭಗವದ್ರೂಪಗಳ ಸ್ಮರಣೆ ಮಾಡುತಾ ಇರತಕ್ಕವರಿಗೆ, ಜನುಮಗಳ ಐದಿಸನು_ಪುನಶ್ಚ ಜನ್ಮಕ್ಕೆ ತರೋದಿಲ್ಲ ಎಂದರೇ ಜೀವನ್ಮುಕ್ತನ್ನ ಮಾಡಿ ಮಹರಾದಿ ಲೋಕಗಳಲ್ಲಿ ಇಟ್ಟು ಜನ್ಮಕ್ಕೆ ನಳಿನಾಕ್ಷ_ಕಮಲದಳ ದೋಪಾದಿಯಲಿ ನೇತ್ರಗಳು ಉಳ್ಳ ಪರಮಾತ್ಮ, ರಣದೊಳು ಮೈದುನನ_ಭಾರತ ಯುದ್ಧದಲ್ಲಿ ಅರ್ಜುನನ, ಕಾಯ್ದಂತೆ_ಶತ್ರುಗಳನ್ನು ಪರಾಜಯ ಮಾಡಿ ರಕ್ಷಿಸಿದಂತೆ, ಸಲಹುವ_ಪಾಪಗಳ ನಾಶಮಾಡಿ ಸಂರಕ್ಷಿಸತಾನೆ. ಬೈದವಗೆ ಗತಿಯಿತ್ತ-ಶ್ರೀಪರಮಾತ್ಮನ್ನ ಶಿಶುಪಾಲ ಬೈದವ. ಇವನಲ್ಲಿ ಜೀವದ್ವಯಾವೇಶ, ಜಯವೆಂಬ ದ್ವಾರಪಾಲಕ, ಶಿಶು ಪಾಲನೆಂಬೋ ದೈತ್ಯ ಇಬ್ಬರು. ಬೈದ ಶಿಶುಪಾಲನಿಗೆ ದುರ್ಗತಿ. ಜಯನೆಂಬ ದ್ವಾರ ಪಾಲಕನಿಗೆ ಸದ್ಗತಿ ಕೊಡೋವನಾದ. ಭಯಹರ_ಸಂಸಾರಭಯಪರಿಹಾರಕನಾದವ. ಭಕ್ತವತ್ಸಲನು_ಭಕ್ತರಲ್ಲಿ ದಯಾವುಳ್ಳ ಪರಮಾತ್ಮನು. ಶಿಶುಪಾಲ ಜಯನ ದೃಷ್ಟಾಂತ ದಿಂದ ಅಸುರಾವೇಶದಿಂದ ಭಕ್ತರು ಪಾಪಗಳು ಮಾಡಿದ ಕಾಲಕ್ಕೂ ಆ ಪಾಪಫಲದಿಂದ

ದೇಹಗತ ಅಸುರರಿಗೆ ದುರ್ಗತಿಯೂ, ಭಕ್ತಗೆ ಸದ್ಗತಿಯೂ ಕೊಡತಾನೆ ಎಂತ ತಿಳಿಯ ಬೇಕು ಎಂತ ತಾತ್ಪರ್ಯ.

**ಪಂಚನಾರೀತುರಗದಂದದಿ ।**
**ಪಂಚರೂಪಾತ್ಮಕನು ತಾ ಷಟ್ ।**
**ಪಂಚ ರೂಪವ ಧರಿಸಿ ತತ್ತನ್ನಾಮದಿಂ ಕರಿಸಿ ॥**
**ಪಂಚಪಾವಕ ಮುಖದಿ ಗುಣಮಯ ।**
**ಪಂಚಭೂತಾತ್ಮಕ ಶರೀರವ ।**
**ಪಂಚವಿಧ ಜೀವರಿಗೆ ಕೊಟ್ಟಲ್ಲಲ್ಲೆ ರಮಿಸುವನು ॥ ೮ ॥**

ಪೂರ್ವೋಕ್ತ ಪ್ರಕಾರ ಜನನದ್ವಾರಾ ಪಂಚಭೂತ ಶರೀರಗಳ ಕೊಡತಾನೆ ಎಂತ ಹೇಳತಾರೆ.

ಪಂಚನಾರೀತುರಗದಂದದಿ–ಐದು ಸ್ತ್ರೀ ರೂಪಗಳಿಂದ ಒಂದು ಕುದರಿ ಚಿತ್ರಾಕಾರ ವಾಗಿ ಬರಿಯೋದು ಶಾಸ್ತ್ರಸಿದ್ಧ. ಈ ಪಂಚನಾರೀತುರಗದೋಪಾದಿಯಲಿ, ಪಂಚ ರೂಪಾತ್ಮಕನು–ಅನಿರುದ್ಧಾದಿ ಪಂಚರೂಪಾತ್ಮಕನು, (ಪಂಚರೂಪಿ ಪರಮಾತ್ಮನು) ಒಂದೊಂದೂ ರೂಪದಲಿ ಈ ಪಂಚನಾರೀತುರಗದೃಷ್ಟಾಂತಾನುಸಾರ ಅನಂತಾನಂತ ರೂಪಗಳಿಂದ ಪ್ರಚುರವಾದ ಒಂದೊಂದು ರೂಪ ಉಳ್ಳವನು. ತಾ ಷಟ್‌ಪಂಚರೂಪವ ಧರಿಸಿ–ಒಂದೊಂದು ಅಗ್ನಿಯಲ್ಲಿ ಐವೈದು ರೂಪಗಳು, ಅಗ್ನಿಗತರೂಪ ಒಂದು ಅಂತು ಆರು. ಈ ಪ್ರಕಾರ ಐದು ಅಗ್ನಿಗಳಲ್ಲಿ ಆರಾರು ರೂಪದ ಮ್ಯಾರಿಗೆ ಮೂವತ್ತು ರೂಪಗಳ ಧರಿಸಿ, ತತ್ತನ್ನಾಮದಿಂ ಕರೆಸಿ–ಆಯಾ ಅಗ್ನಿಗಳಲ್ಲಿ ಆಯಾ ಕಾಷ್ಠಧೂಮಾದಿಗಳಲ್ಲಿ ಅಂತ ರ್ಗತನಾಗಿ ಆಯಾ ನಾಮದಿಂದ ಕರೆಸಿ, ಪಂಚಪಾವಕಮುಖದಿ – ಪೂರ್ವೋಕ್ತ ಪಂಚಾಗ್ನಿಗಳ ದ್ವಾರಾ, ಗುಣಮಯ–ಸತ್ವರಜಸ್ತಮೋಗುಣಗಳಿಂದ ಪ್ರಚುರವಾದ, ಪಂಚಭೂತಾತ್ಮಕ–ಪಂಚಭೂತಗಳಿಂದ ಪ್ರಚುರವಾದ ಇನ್ನೂ ಪಿತೃಸಂಬಂಧಶುಕ್ಲ, ಮಾತೃಸಂಬಂಧ ಶೋಣಿತ ಇವುಗಳಿಂದ ಪಿಂಡೀಭೂತವಾದ, ಶರೀರವ–ಸ್ಥೂಲ ಶರೀರ ವನ್ನು, ಪಂಚವಿಧ ಜೀವರಿಗೆ–ಋಷಿ, ಪಿತೃ, ಅರಸರು, ನರ, ಗಂಧರ್ವರು (ನರಗಂಧರ್ವ ಸಾಂಕೇತದಿಂದ ತೃಣಾಂತ ಜೀವರು ಗ್ರಾಹ್ಯ), ಕೊಟ್ಟು–ಈ ಪಂಚವಿಧವಾದ ಜೀವರಿಗೆ ಸ್ಥೂಲದೇಹಗಳಲ್ಲಿ ಕೊಟ್ಟು, ಅಲ್ಲಲ್ಲೆ ರಮಿಸುವನು–ಆಯಾ ಸ್ಥೂಲದೇಹಗಳಲ್ಲಿ ತನ್ನೊಳು ತಾನಿದ್ದು, ರಮಿಸುವನು–ಕ್ರೀಡಾ ಮಾಡತಾ ಇರತಾನೆ.

ಈ ಪೂರ್ವೋಕ್ತ ಪಂಚವಿಧ ಜೀವರಲ್ಲಿ ದೇವತೆಗಳು ಸೇರಿದ್ದಾರೆ. ಅವರೊಳಗೆ ಋಜುಗಳು ವ್ಯತಿರಿಕ್ತ ಮಿಗಲಾದ ದೇವತೆಗಳಿಗೆ ಮಾತೃಗರ್ಭದ್ವಾರಾ ಜನನಾದಿಗಳು ಮಾತ್ರ ಉಂಟು. ನಿರಂಶಪೋಪಾದಿಯಲಿ ಪಂಚಾಗ್ನಿಗಳ ದ್ವಾರಾ ಜನನವಿಲ್ಲ. ಮತ್ತು ಪಂಚವಿಧ ಜೀವರು ದಾರೆಂದರೆ :– ಮನುಷ್ಯಗಂಧರ್ವರಾರಭ್ಯ ಮನುಷ್ಯೋತ್ತಮರವರಿಗೆ ಒಂದು, ಕ್ಷತ್ರಿಯಜೀವರು ಎರಡು, ವೈಶ್ಯಜೀವರು ಮೂರು, ಶೂದ್ರಜೀವರು ನಾಲ್ಕು,

ತದನ್ಯ ತೃಣಾಂತಜೀವರು ಐದು. ಈ ಐದು ಮಂದಿ ನಿರಂಶರು ಪೂರ್ವೋಕ್ತ ಪಂಚಾಗ್ನಿಗಳ ದ್ವಾರಾ ಜನನಕ್ಕೆ ಯೋಗ್ಯರು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಪಂಚನಾರೀತುರಗ ಎಂಬುವದು ಸಮೂಹನಾಮ. ಹಾಂಗೆ ನವನಾರೀಕುಂಜರ ಸಮೂಹನಾಮ. ಹ್ಯಾಂಗೆಂದರೆ ಐದು ನಾರಿಗಳು ಸೇರಿ ಒಂದು ತುರಗವಾಗತದೆ. ತುರಗವು ಒಂದು ನಾರಿ. ಖಂಡಾಖಂಡಗಳು ಹ್ಯಾಂಗೆ ಇದರಲ್ಲಿ ಅದೋ ಆ ಪ್ರಕಾರ ಅನಿರುದ್ಧ ಎಂಬುದು ಸಮೂಹನಾಮ. ಅನಿರುದ್ಧಾದಿ ಐದು ನಾಮಗಳು ತದ್ಗತ ರೂಪಗಳು ಖಂಡರೂಪಗಳು ಎಂತ ತಿಳಿಯಬೇಕು ಎಂತ ತಾತ್ಪರ್ಯ.

ಮೇಲೆ ಹೇಳಿದ್ದು ಜನನಯಜ್ಞ. ಸ್ಥಿತಿಯಜ್ಞ ಮೊದಲು ಶ್ಲೋಕದಲ್ಲಿ ಹೇಳಲ್ಪಟ್ಟದೆ. ಮರಣಯಜ್ಞ ದಾವದೆಂದರೆ, ೧. ನರಕಕ್ಕೆ ಹೋಗಿ ಸೇರೋವರೆಗೆ ಐದು ಕಡೆ ದೇಹಗಳ ಬಿಡುತ್ತಾನೆ. ಸ್ಥೂಲ ಪಾಂಚಭೌತಿಕ ಶರೀರವನ್ನು ಅಗ್ನಿಯಲ್ಲಿ ಬಿಡೋವನಾಗತಾನೆ. ೨. ತದನಂತರ ಪೈಶಾಚದೇಹವನ್ನು ಹೊಂದಿ ಅದರನ್ನ ಇಲ್ಲೇ ಬಿಡೋವನಾಗತಾನೆ. ೩. ತದನಂತರ ಆಂತರಿಕ ದೇಹದಿಂದ ಯಮಲೋಕಕ್ಕೆ ಹೋಗಿ ಆ ಶರೀರವನ್ನ ಬಿಡತಾನೆ. ೪. ತದನಂತರ ನರಕಮಾರ್ಗ ನಡಿಯೋಕಾಲಕ್ಕೆ ತದಪೇಕ್ಷಯಾ ದುಃಖಶರೀರಪ್ರಾಪ್ತಿ. ಅನಂತರ ಆ ಶರೀರ ಬಿಟ್ಟು ವೈತರಣೀತೀರದಲ್ಲಿ ಯಾತನಾಶರೀರ ಪ್ರಾಪ್ತಿ. ಈ ಶರೀರ ದಿಂದಲೇ ನರಕಭೋಗ. ಈ ಶರೀರ ಅಂತ್ಯಕ್ಕೆ ಅಲ್ಲೇ ಬಿಡೋವನಾಗತಾನೆ. ಈ ಪ್ರಕಾರ ಮರಣಯಜ್ಞವು. ಆಯಾ ಶರೀರಗಳು ದಾವ ದಾವ ಸ್ಥಾನದಲ್ಲಿ ಬಿಡತಾನೋ ಅಲ್ಲಲ್ಲಿ ಪೂರ್ವೋಕ್ತಪ್ರಕಾರ ಪಂಚಾಗ್ನಿಗಳ ಅನುಸಂಧಾನಮಾಡಿ ದೇಹವನ್ನ ಹೋಮಿಸೋವನಾಗ ಬೇಕು.ಅಂತು ಮೂರು ವಿಧ ಯಜ್ಞಗಳ ಅನುಸಂಧಾನ ಮಾಡಬೇಕು ಎಂತ ತಾತ್ಪರ್ಯ.

**ವಿಧಿಭವಾದಿ ಸಮಸ್ತ ಜೀವರ ।**
**ಹೃದಯುದೊಳಗೇಕಾತ್ಮನೆನಿಸುವ ।**
**ಪದುಮನಾಭನು ಅಚ್ಯುತಾದಿಯನಂತರೂಪದಲಿ ॥**
**ಅಧಿಸುಭೂತಾಧ್ಯಾತ್ಮವಧಿದೈ ।**
**ವದೊಳು ಕರೆಸುವ ಪ್ರಾಣ ನಾಗಾ ।**
**ಭಿಧನು ದಶರೂಪದಲಿ ದಶವಿಧಪ್ರಾಣರೊಳಗಿದ್ದು ॥ ೯ ॥**

ಪ್ರಪಂಚದಲ್ಲಿ ಅನೇಕ ರೂಪಗಳಿಂದ ಭಿನ್ನ ಭಿನ್ನ ಜೀವರಲ್ಲಿ ಇರತಕ್ಕ ಪರಮಾತ್ಮನ ರೂಪಗಳು ಅಭಿನ್ನಗಳೇ. ಈ ಪರಮಾತ್ಮನ ದ್ವಾರಾ ಅಂತರ್ಗತನಾಗಿ ಉಪಾಸನಾ ಮಾಡಬೇಕು ಎಂದರೆ ಹೇಳತಾರೆ.

ವಿಧಿಭವಾದಿ ಸಮಸ್ತಜೀವರ–ಬ್ರಹ್ಮರುದ್ರಾದಿ ಸಮಸ್ತ ತೃಣಾಂತ ತ್ರಿವಿಧ ಜೀವರ, ಹೃದಯದೊಳಗೆ – ಸ್ಥೂಲಹೃದಯದೊಳಗೆ, ಏಕಾತ್ಮನೆನಿಸುವ – ಸರ್ವೋತ್ತಮನಾದವ ನೊಬ್ಬನಾದ ಜೀವಾಕಾರದೋಪಾದಿಯಲ್ಲಿ ತದಾತ್ಮಕನಾದ ಬಿಂಬ ಎಂತ ಎನಿಸುವ ಅಗ್ರೇಶನಾಮಕನು. ಇವಗೆ ಆತ್ಮ ಎಂತ ನಾಮ. ಪದುಮನಾಭನು–ಪದ್ಮನಾಭರೂಪಿ

ಪರಮಾತ್ಮನು, ಅಚ್ಯುತ–ಅಚ್ಯುತ ಎಂಬ ನಾಮದಿಂದಲೂ, ಅನಂತ–ಅನಂತನಾಮದಿಂದಲೂ, ಆದಿ–ಆದಿಶಬ್ದದಿಂದ ಗೋವಿಂದ ಎಂಬ ನಾಮದಿಂದಲೂ, ರೂಪದಲಿ–ಅಂತು ಈ ಮೂರು ರೂಪಗಳಿಂದ (ಅಚ್ಯುತ, ಅನಂತ, ಗೋವಿಂದ), ಅಧಿಸುಭೂತ–ಸಮೀಚೀನವಾದ ಅಧಿಭೂತ ಸಾಂಕೇತವಾದ ಸ್ಥೂಲದೇಹದೊಳು ಅಚ್ಯುತರೂಪಿ ಪರಮಾತ್ಮ, ಅಧಿದೈವದೊಳು–ಅಧಿದೈವಗಳಾದ ದಶೇಂದ್ರಿಯಗಳಲ್ಲಿ ಗೋವಿಂದಪರಮಾತ್ಮ, ಅಧ್ಯಾತ್ಮ–ಅಧ್ಯಾತ್ಮವಾದ ಮನೋ ಇಂದ್ರಿಯದಲ್ಲಿ ಅನಂತನಾಮಕ ಪರಮಾತ್ಮ, ಕರೆಸುವ–ಈ ರೂಪಗಳಿಂದ ಅಧಿಭೂತಾದಿ ಮೂರು ಅಧಿಷ್ಠಾನಗಳಲ್ಲಿ ತತ್ತನ್ನಾಮಗಳಿಂದ ಕರಿಸೋವನಾಗತಾನೆ. ಪ್ರಾಣ–ಪ್ರಾಣಶಬ್ದದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಈ ಐದು ರೂಪಗಳು, ನಾಗ–ನಾಗಶಬ್ದದಿಂದ ನಾಗ, ಕೂರ್ಮ, ಕೃಕಲ, ದೇವದತ್ತ ಮತ್ತು ಧನಂಜಯ ಈ ಐದು ರೂಪಗಳೂ, ಅಂತು ಮುಖ್ಯಪ್ರಾಣರೂಪಗಳು ಹತ್ತು. ಏವಂ ಸಂಮೇಳನವೇ ೧. ಹೃದಯದಲ್ಲಿ ಆತ್ಮರೂಪ, ೨. ಅಧಿಭೂತದಲ್ಲಿ ಅಚ್ಯುತ, ೩. ಅಧ್ಯಾತ್ಮದೊಳು ಅನಂತ, ೪. ಅಧಿದೈವದೊಳು ಗೋವಿಂದ, ಈ ನಾಲ್ಕು ಸ್ಥಾನಗಳಲ್ಲಿ ದಶವಿಧ ಮುಖ್ಯಪ್ರಾಣರೂಪಗಳು ಇರೋದಾಗಿ ಅವೆ. ೧. ಹೃದಯಕಮಲಕ್ಕೆ ದಶದಿಕ್ಕುಗಳಲ್ಲಿ ದಶಪ್ರಾಣರೂಪಗಳು, ತದಂತರ್ಗತ ಆತ್ಮರೂಪ ಶ್ರೀ ಪರಮಾತ್ಮ, ೨. ಅಧಿಭೂತವಾದ ದೇಹಗತ ದಶಪ್ರಾಣಗಳಲ್ಲಿ ಅಚ್ಯುತ, ೩. ಅಧಿದೈವಗಳಾದ ದಶ ಇಂದ್ರಿಯಗತ ದಶಪ್ರಾಣಗಳಲ್ಲಿ ಗೋವಿಂದ, ೪. ಅಧ್ಯಾತ್ಮವಾದ ಮನೋಇಂದ್ರಿಯದಲ್ಲಿ ದಶವಿಧ ವೃತ್ತಿಗಳಲ್ಲಿ ದಶಪ್ರಾಣರೂಪಗಳು, ತದ್ಗತ ಅನಂತರೂಪಿ ಪರಮಾತ್ಮ, ಅಭಿಧನು–ಈ ಪ್ರಕಾರ ಪರಮಾತ್ಮ ದಶವಿಧ ಪ್ರಾಣನಾಮದಿಂದ ಕರೆಸುತ, ದಶರೂಪದಲಿ–ಹತ್ತುರೂಪದಿಂದ, ದಶವಿಧ–ಪ್ರಾಣನಾಗಾದಿ ದಶವಿಧ, ಪ್ರಾಣರೊಳಗಿದ್ದು–ಮುಖ್ಯಪ್ರಾಣರೂಪಗಳಲ್ಲಿದ್ದು ವ್ಯಾಪಾರಗಳ ಮಾಡತಾನೆ ಎಂತ ತಾತ್ಪರ್ಯ.

**ತಾ||** ಈ ಪರಮಾತ್ಮನ ಅಚ್ಯುತ, ಅನಂತ, ಗೋವಿಂದರೂಪಗಳು ಅಧಿಭೂತಾದಿ ಮೂರು ಸ್ಥಾನಗಳಲ್ಲಿ ಇರತಕ್ಕ ದಶವಿಧ ಪ್ರಾಣರೊಳಗೆ ಅಂತರ್ಯಾಮಿಯಾಗಿದ್ದು ಪಂಚಪ್ರಾಣದಿಂದಲೂ, ಪಂಚನಾಗಾದಿ ನಾಮದಿಂದಲೂ ಕರೆಸತಾನೆ ಎಂತ ಪ್ರಾಣಾಂತರ್ಗತನಾದ ಭಗವಂತನನ್ನ ಚಿಂತಿಸಬೇಕು.

**ವಿಶೇಷಾರ್ಥ :–** ವಿಧಿಭವಾದಿ ಸಮಸ್ತಜೀವರೊಳು ಎಂದರೆ :–ಜೀವರಲ್ಲಿ ನಾಲ್ಕು ವಿಧವಾದ ಗಣಸಮೂಹಗಳುಂಟು. ಅದು ದಾವದೆಂದರೆ, ೧. ಬ್ರಹ್ಮದೇವರು ಆರಂಭ ಮಾಡಿ ಶತಸ್ಥದೇವ ಪರಿಯಂತರ ದೇವಶಬ್ದವಾಚ್ಯರು, ೨. ಶತಸ್ಥರ ಅನಂತರ ಪುಷ್ಕರನ ಪರಿಯಂತರ ಕರ್ಮಜರು, ೩. ಪುಷ್ಕರನ ಅನಂತರ ಆಜಾನಜರು ದೇವಗಂಧರ್ವ ಪರಿಯಂತ, ೪. ತದನಂತರ ನಿರಂಶ ಜೀವರು (ಮನುಷ್ಯಗಂಧರ್ವಾರಭ್ಯ ತೃಣಾಂತವರಿಗೂ) ಈ ನಾಲ್ಕು ವಿಧ ಜೀವರ ಸ್ಥೂಲಹೃದಯದಲ್ಲಿ ಆತ್ಮಶಬ್ದವಾಚ್ಯನಾಗಿ ಇರೋವನಾಗಿದ್ದಾನೆ.

ಪದುಮನಾಭ ಎಂತ ಯಾಕೆ ಪ್ರಯೋಗವೆಂದರೆ, ನಾಭಿಯಿಂದ ಕಮಲ ಉತ್ಪತ್ತಿ ಮಾಡಿದವ. ಪ್ರಳಯೋದಕದಲ್ಲಿ ಒಬ್ಬನೇ ಶಯನನಾಗಿರತಾನೆ. ಪರಮಾತ್ಮನ ಅನಂತ ರೂಪಗಳು ಭಿನ್ನಗಳಾಗಿ ಇದ್ದರೆ ಪ್ರಳಯದಲ್ಲಿ ಅನಂತ ರೂಪಗಳು ಶಯನಿಸಿ ಇರಬೇಕು. ಹಾಂಗಿಲ್ಲವಾದ್ದರಿಂದಲೇ ಪರಮಾತ್ಮ ಒಬ್ಬನೇ ಅನಂತರೂಪಗಳು ಧರಿಸಿ ಅನಂತ ಅಧಿಷ್ಠಾನಗಳಲ್ಲಿ ಒಬ್ಬನೇ ಪರಮಾತ್ಮ ವ್ಯಾಪ್ತ ಎಂಬೋದಕ್ಕೆ ಸೂಚನೆಗಾಗಿ ಪದ್ಮನಾಭ ಎಂತ ಪ್ರಯೋಗವು.

ಅಧಿಸುಭೂತ ಎಂದರೆ :– ಸು–ಸಮೀಚೀನವಾದ ಸಾಧನಿಗೆ ಯೋಗ್ಯವಾದ ಜೀವಗೆ ಅಧಿ ಎಂದರೆ ಅಧಿಷ್ಠಾನಭೂತವಾದ ಭೂತ ಎಂದರೆ ಪಂಚಭೂತಮಯವಾದ ಸ್ಥೂಲ ಶರೀರ ಎಂತ ತಾತ್ಪರ್ಯ.

ಅಧಿಭೂತ–ಸ್ಥೂಲಶರೀರವು ಇದರ ಸಜಾತಿ ದೃಷ್ಟಾಂತ. ಸ್ವರೂಪದೇಹವು ಅಧಿಭೂತವೇ. ಅಧ್ಯಾತ್ಮ ಎಂದರೆ ಮನಸ್ಸು. ಜಡಮನಸ್ಸು, ಚಿನ್ಮನಸ್ಸು ಎರಡೂ ತಿಳಕೋಬೇಕು. ಅಧಿದೈವ ಎಂದರೆ ದಶೇಂದ್ರಿಯಗಳು. ಸ್ವರೂಪ, ಬಾಹ್ಯ ಎರಡೂ ತೆಗೆದುಕೋಬೇಕು.

**ಈರೆರಡು ಸಾವಿರದ ಇಪ್ಪ ।**
**ತ್ತಾರಧಿಕ ಮುನ್ನೂರು ರೂಪಗ ।**
**ಳೀರೆರಡು ಸ್ಥಾನದಲಿ ಚಿಂತಿಪುದನುದಿನದಿ ಬುಧರು ॥**
**ನೂರ ಇಪ್ಪತ್ತೇಳಧಿಕ ಮೂ ।**
**ರಾರು ಸಾವಿರ ರೂಪದಿಂ ದಶ ।**
**ಮಾರುತರೊಳಿದ್ದವರವರ ಪೆಸರಿಂದ ಕರೆಸುವನು ॥ ೧೦ ॥**

ದಶಮಾರುತರೊಳಗಿದ್ದ ರೂಪಗಳು, ಈರೆರಡು ಸ್ಥಾನಗಳು, ಆ ಸ್ಥಾನಗಳಲ್ಲಿರತಕ್ಕ ಭಗವದ್ರೂಪಗಳು ಹೇಳತಾರೆ.

ಈರೆರಡು ಸ್ಥಾನದಲಿ–ಪೂರ್ವೋಕ್ತ ಅಧಿಭೂತ, ಅಧಿದೈವ, ಅಧ್ಯಾತ್ಮ, ಹೃದಯ ಸ್ಥಾನ. ಈ ನಾಲ್ಕು ಸ್ಥಾನದಲಿ ಅಂದರೆ, ಈ ಸ್ಥಾನಗಳಲ್ಲಿ, ಈರೆರಡು ಸಾವಿರದ ಮುನ್ನೂರು ಅಧಿಕ ಇಪ್ಪತ್ತಾರು–೪,೩೨೬ ನಾಲ್ಕು ಸಾವಿರದ ಮುನ್ನೂರ ಇಪ್ಪತ್ತಾರು ರೂಪಗಳ, ಚಿಂತಿಪುದು–ಭಗವದ್ರೂಪಗಳ ಚಿಂತನ ಮಾಡಬೇಕು. ಎಂದರೆ ಇದಕ್ಕೆ ವಿವರ ಹೇಳತಾರೆ.

(೧) ೧೩೧ ಅಧಿಭೂತಗತ ಅಚ್ಯುತ ರೂಪಗಳು ಅಕ್ಷರ ಸಾಂಕೇತದಿಂದ ಆಗೋ ರೂಪಗಳು. ಅ–೧, ಚ್ಯು–೩, ತ–೧ = ೧೩೧ ಬಲದಿಂದ ಎಡಕ್ಕೆ ಲೆಕ್ಕ. ಚ್ಚ್ಯ = ಚ+ಚ+ಯ = ೩, ಅ=೧, ಚ್ಚ್ಯ=೩, ತ=೧ – ೧೩೧

(೨) ಅಧಿದೈವಗತ ಭಗವದ್ರೂಪಗಳು — ೩೦೪೩. ಹೇಗೆಂದರೆ ಅಕ್ಷರ ಸಾಂಕೇತವಾದ ಗೋವಿಂದ ರೂಪಗಳು. ಗೋ=೩, ವಿಂ=೪೦, ದ=೩ – ೩೦೪೩ ಬಲದಿಂದ ಎಡಕ್ಕೆ.

(೩) ಅಧ್ಯಾತ್ಮಗತ ಭಗವದ್ರೂಪಗಳು—೧೦೫೨ ಹೇಗೆಂದರೆ ಅಕ್ಷರ ಸಾಂಕೇತವಾದ ಅನಂತರೂಪಗಳು. ಅ=೨, ನಂ=೫೦, ತ=೧ — ೧೦೫೨ ರೂಪಗಳು. ಬಲದಿಂದ ಎಡಕ್ಕೆ.

(೪) ಹೃದಯಸ್ಥಾನಗತ ಆತ್ಮನ ಅಕ್ಷರ ಸಾಂಕೇತವಾದ ಭಗವದ್ರೂಪಗಳು ೬೩. ಹೇಗೆಂದರೆ ಆ—೨, ತ್ಮ—೬ (ತ + ಮ) = ೬೨ ರೂಪಗಳು. ತ್ಮದಲ್ಲಿ ಎರಡು ಅಕ್ಷರಗಳು ತ+ಮ = ೧+೫=೬

(೫) ಒಂದೊಂದು ಅಗ್ನಿಯಲಿ ಆರಾರು ರೂಪದ ಪ್ಯಾರಿಗೆ ಮೂವತ್ತು ಭಗವದ್ರೂಪಗಳು ೬×೫=೩೦ ರೂಪಗಳು.

(೬) ಗುಣತ್ರಯಾದಿ ಅಂದರೆ ವಿಶ್ವಾದಿ ರೂಪಗಳು—೩ ರೂಪಗಳು.

(೭) ದೇಹಗತ ಪಂಚಭೂತಾಂತರ್ಗತ ಅನಿರುದ್ಧಾದಿ ಐದು (೫) ರೂಪಗಳು.
ಅಂತು ೧೩೧+೩೦೪೩ + ೧೦೫೨+೬೨+೩೦+೩+೫ = ೪೩೨೬ ರೂಪಗಳು (ನಾಲ್ಕುಸಾವಿರದ ಮುನ್ನೂರ ಇಪ್ಪತ್ತಾರು ರೂಪಗಳು)

ಅಂತು ಪೂರ್ವೋಕ್ತ ಮೊತ್ತಕ್ಕೆ ಲೆಕ್ಕವಾಯಿತು. ಈ ಪ್ರಕಾರ ಬ್ರಹ್ಮಾಂತ ತ್ರಿವಿಧ ಜೀವರಲ್ಲಿ ಪ್ರತಿ ಪ್ರತಿ ಜೀವರಲ್ಲಿ ಇರೋದಾಗಿ ಅದೆ. ಅನುದಿನದಿ ಬುಧರು—ಪ್ರತಿದಿನದಲ್ಲೂ ಜ್ಞಾನಿಗಳಾದವರು ಚಿಂತಿಸೋವರಾಗಬೇಕು, ಎಂತ ತಾತ್ಪರ್ಯ. ಮತ್ತು ಮೂರಾರುಸಾವಿರ—(೧೮,೦೦೦) ಹದಿನೆಂಟು ಸಾವಿರ, ಅಧಿಕ ನೂರ ಇಪ್ಪತ್ತೇಳು—೧೨೭ ನೂರಾ ಇಪ್ಪತ್ತೇಳು ಅಂತು (೧೮,೧೨೭) ಹದಿನೆಂಟು ಸಾವಿರದ ನೂರ ಇಪ್ಪತ್ತೇಳು ರೂಪದಿಂದ, ದಶಮಾರುತರೊಳಿದ್ದು—ಪೂರ್ವೋಕ್ತ ಪ್ರಾಣಾದಿ ಐದು (೫), ನಾಗಾದಿ ಐದು. ಅಂತು (೧೦) ಹತ್ತು. ದಶವಿಧ ಮುಖ್ಯಪ್ರಾಣರೊಳಗಿದ್ದು ಅಂದರೆ ವಿವರ.

| ವಿವರ | ರೂಪಗಳು | ವಿವರ | ರೂಪಗಳು |
|---|---|---|---|
| ೧. ಪ್ರಾಣ<br>೩ ೫ | ೫೩ | ೧. ನಾಗ<br>೫ ೩ | ೩೫ |
| ೨. ಅಪಾನ<br>೧ ೧ ೫ | ೫೧೧ | ೨. ಕೃಕಲ<br>೩ ೧ ೩ | ೩೧೩ |
| ೩. ವ್ಯಾನ<br>೫ ೫ | ೫೫ | ೩. ಕೂರ್ಮ<br>೧ ೭ | ೭೧ |
| ೪. ಉದಾನ<br>೫ ೩ ೫ | ೫೩೫ | ೪. ದೇವದತ್ತ<br>೩ ೪ ೩ ೨ | ೨೩೪೩ |
| ೫. ಸಮಾನ<br>೭ ೫ ೫ | ೫೫೭ | ೫. ಧನಂಜಯ<br>೪೫೦೩೧ | ೧೩೦೫೪ |
| ಅಂತು | ೧೭೧೧<br>ರೂಪಗಳು | ಅಂತು | ೧೫೪೧೬<br>ರೂಪಗಳು |

ಎಲ್ಲಾ ಸೇರಿ ಒಟ್ಟು ಮೊತ್ತ – ೧,೭೧೧ + ೧೫,೮೧೬ = ೧೭,೫೨೭ ಹದಿನೇಳು ಸಾವಿರದ ಐನೂರ ಇಪ್ಪತ್ತೇಳು ಭಗವದ್ರೂಪಗಳು.

## ೬೦೦ ರೂಪಗಳಿಗೆ ವಿವರ

| | | | | | |
|---|---|---|---|---|---|
| ೧) | ಪಂಚಭೂತಗಳು | ೫ | ೧) | ಪಂಚಭೂತ ಕಾರ್ಯಗಳು | ೫ |
| ೨) | ಪಂಚ ತನ್ಮಾತ್ರಗಳು | ೫ | ೨) | ತನ್ಮಾತ್ರ ಕಾರ್ಯಗಳು | ೫ |
| ೩) | ದಶೇಂದ್ರಿಯಗಳು | ೧೦ | ೩) | ದಶೇಂದ್ರಿಯ ಕಾರ್ಯಗಳು | ೧೦ |
| ೪) | ದಶೇಂದ್ರಿಯಗಳಿಗೆ ಅನುಸರಿಸಿದ ಮನೋವೃತ್ತಿಗಳು | ೧೦ | ೪) | ದಶಮನೋವೃತ್ತಿಗಳಿಗೆ ಅನುಸರಿಸಿದ ಕಾರ್ಯಗಳು | ೧೦ |
| | ಅಂತು | ೩೦ | | ಅಂತು | ೩೦ |

ಒಟ್ಟು ೩೦ + ೩೦ = ೬೦ ರೂಪಗಳು.

ಈ ಪ್ರಕಾರ ಒಂದೊಂದು ಪ್ರಾಣ ಶರೀರದಲ್ಲಿ ಇರೋದಾಗಿ ಅದೆ. ಈ ರೀತ್ಯಾ ದಶ ಪ್ರಾಣ ಶರೀರಗಳಲ್ಲಿ ಲೆಕ್ಕ ಮಾಡಿದರೆ ೬೦ × ೧೦ = ೬೦೦ ಆರುನೂರು ಆಗತದೆ. ಈ ಮೇಲೆ ವಿವರಿಸಿದ ಆರುನೂರು ರೂಪಗಳು ಯಾವುದು ಎಂದರೆ ಇದಕ್ಕೆ ಪ್ರಮಾಣ "ತದುಕ್ತಂ ಭಾಗವತೇ ತೃತೀಯಸ್ಕಂಧೇ ದಶಮೇಧ್ಯಾಯೇ :— ಪ್ರಾಣೋಽಪಾನಸ್ತಥಾ ವ್ಯಾನಸ್ತಥೋದಾನಸಮಾನಕೌ | ನಾಗಃ ಕೂರ್ಮೋಽಥ ಕೃಕಲೋ ದೇವದತ್ತೋ ಧನಂಜಯಃ || " ಇತಿ ದಶಪ್ರಾಣಗತ ಇಂದ್ರಿಯಸ್ಥ ರೂಪಾಣಿ ೬೦೦ ರೂಪಗಳು. ಈ ಪ್ರಕಾರ ಆಗತಕ್ಕ ರೂಪಗಳು ೧೮,೧೨೭. ಹೇಗೆಂದರೆ

| | | |
|---|---|---|
| ೧. | ಪೂರ್ವೋಕ್ತ ಪ್ರಾಣಾದಿ ರೂಪಗಳು | ೧,೭೧೧ |
| ೨. | ಪೂರ್ವೋಕ್ತ ನಾಗಾದಿ ರೂಪಗಳು | ೧೫,೮೧೬ |
| ೩. | ಪೂರ್ವೋಕ್ತ ಪಂಚಭೂತಾದಿ ತಥಾ ಕಾರ್ಯಾದಿ ದಶಪ್ರಾಣ ಶರೀರಗತ ರೂಪಗಳು | ೬೦೦ |
| | ಅಂತು | ೧೮,೧೨೭ |

ಅಂತು ಹದಿನೆಂಟು ಸಾವಿರದ ನೂರ ಇಪ್ಪತ್ತೇಳು ಭಗವದ್ರೂಪಗಳು ಆದಂತಾಯಿತು. ಈ ರೂಪಗಳಿಂದ ದಶವಿಧ ನಾಮಗಳು ಉಳ್ಳ, ದಶಮುಖ್ಯಪ್ರಾಣರೂಪಗಳ ಒಳಗಿದ್ದು, ಅವರವರೊಳಗಿದ್ದು—ಆಯಾ ಮಾರುತರಲ್ಲಿ ಇದ್ದಂಥಾವನಾಗಿ, ಅವರವರ ಪೆಸರಿಂದ — ಆಯಾ ಮಾರುತರ ಹೆಸರಿನಿಂದ, ಕರೆಸುವನು—ಕರಿಸೋವನಾಗಥಾನೆ ಎಂತ ತಾತ್ಪರ್ಯ. ಈ ರೀತಿ ತಿಳಕೋಬೇಕು.

**ವಿಶೇಷಾರ್ಥ** :—ಮೇಲೆ ಹೇಳಿದ ಆರುನೂರು ರೂಪಗಳು ಹ್ಯಾಂಗೆ ಅಂದರೆ ಅದರ ವಿವರವನ್ನು ಕೊಟ್ಟಿದೆ.

"ಗೋಳಕವು ಕುಂಡಾಗ್ನಿಕರ್ಣವು" ಎಂತ ಹೇಳಿದ ಅನುಸಂಧಾನದಿಂದ ಅಂದರೆ ಅನುಸಂಧಾನಕ್ರಮದಿಂದ ಒಂದೊಂದು ಗೋಳಕದಲ್ಲಿ ಆರಾರು ಭಗವದ್ರೂಪಗಳ ಚಿಂತಿಸ ಬೇಕು. (ಗೋಳಕ ಎಂದರೆ ಇಂದ್ರಿಯಗಳಿಗೆ ಆಶ್ರಯವಾದ ಸ್ಥಾನಗಳು ಅಂತ ಅರ್ಥ.) ಆರು ದಾವದು ಎಂದರೆ :– ೧. ಗೋಳಕದಲ್ಲಿ ಅಗ್ನಿ ಒಂದು. ೨. ಅಗ್ನಿಯಲ್ಲಿ ಹಾಕತಕ್ಕ ಕಾಷ್ಠ ಒಂದು, ೩. ಅಗ್ನಿ ಮತ್ತು ಕಾಷ್ಠ ಎರಡೂ ಸಂಪರ್ಕವಾದ ಕೂಡಲೆ ಉತ್ಪತ್ತಿ ಯಾಗುವ ಧೂಮ ಒಂದು, ೪. ತದನಂತರ ಉತ್ಪತ್ತಿಯಾಗುವ ಜ್ವಾಲೆ ಒಂದು, ೫. ಈ ಜ್ವಾಲೆಗಳಿಂದ ಹೊರಡತಕ್ಕ ಕಿಡಿಗಳು ಒಂದು, ೬. ಕಾಷ್ಠವು ಸುಟ್ಟಮೇಲೆ ಉಂಟಾಗುವ ಕೆಂಡಗಳು ಒಂದು. ಹೀಗೆ ಅಗ್ನಿ, ಕಾಷ್ಠ, ಧೂಮ, ಜ್ವಾಲೆ, ಕಿಡಿ, ಕೆಂಡ ಅಂತು ಆರು. ಆರಕ್ಕೆ ಆರು ಭಗವದ್ರೂಪಗಳು. ಈ ಪ್ರಕಾರ ದಶ ಇಂದ್ರಿಯಗಳಲ್ಲಿ (ಪಂಚ ಜ್ಞಾನೇಂದ್ರಿಯಗಳು, ಮತ್ತು ಪಂಚ ಕರ್ಮೇಂದ್ರಿಯಗಳು) ಹತ್ತು ಆರು ಅಂದರೆ ಅರವತ್ತು ಭಗವದ್ರೂಪಗಳು ಆಯಿತು. ಇಷ್ಟು ಒಂದು ಮರುತಾಂತರ್ಗತದಲ್ಲಿ ಎಂತ ತಿಳಿಯೋದರಾಗಬೇಕು. ಕ್ರಮದಿಂದ ಭಾಗವತ ಉಕ್ತ ಪ್ರಕಾರ ದಶಮರುತರ ಒಳಗೆ (ಪ್ರಾಣಾದಿ ಪಂಚ+ನಾಗಾದಿ ಪಂಚ) ಒಂದೊಂದು ಮರುತಗತ ಒಂದೊಂದು ಇಂದ್ರಿಯ ಗಳಲ್ಲಿ ಆರಾರು ರೂಪಗಳ ಕ್ರಮಕ್ಕೆ ಅರುವತ್ತು ರೂಪ ಒಂದು. ಮರುತನ ದೇಹಗತ ದಶ ಇಂದ್ರಿಯಗಳಲ್ಲಿ ಲೆಖ್ಖವಾಗತದೆ. ಆದ್ದರಿಂದ ದಶ ಮರುತಾಂತರ್ಗತವಾಗಿ ಇರತಕ್ಕ ರೂಪಗಳ ಸಂಖ್ಯಾ ಆರುನೂರು ಎಂತ ತಿಳಿಯಬೇಕು. ಅಂತು ಲೆಕ್ಕ ೬೦೦ ರೂಪಗಳು.

ದಶಪ್ರಾಣರಲ್ಲಿ ವರ್ಣಸಾಂಕೇತ ಭಗವದ್ರೂಪಗಳು ೧೭೫೨೭ ರೂಪಗಳು ಅಂತ ಹಿಂದೆ ವಿವರಿಸಿ ಅದೆ. ದಶಪ್ರಾಣಗತ ಇಂದ್ರಿಯಗತ ಅನುಸಂಧಾನಕ್ಕೆ ಯೋಗ್ಯವಾದ ರೂಪಗಳು ೬೦೦ ಅಂತ ಮೇಲೆ ವಿವರಿಸಿ ಅದೆ. ಇವೆರಡೂ ಸೇರಿದರೆ ೧೭೫೨೭+೬೦೦ ೧೮೧೨೭ ರೂಪಗಳು. ಹದಿನೆಂಟು ಸಾವಿರದ ನೂರಇಪ್ಪತ್ತೇಳು ಭಗವದ್ರೂಪಗಳು ಸರಿ ಆಯಿತು.

ಅಧಿಭೂತಾದಿ ಪ್ರಾಣರೂಪಗಳು ದಶ ಯಾಕೆ ಹೇಳಬೇಕೆಂದರೆ ಅಧಿಭೂತಾದಿಗಳಲ್ಲಿ ಒಂದೊಂದರಲ್ಲಿ ದಶವಿಧ ಅಧಿಷ್ಠಾನಗಳು ಬ್ಯಾರೆ ಬ್ಯಾರೆ ಆದ್ದರಿಂದ ದಶಕ್ಕೆ ದಶವಾಯು ರೂಪಗಳು ತಿಳಿಯಬೇಕು.

ಅದಕ್ಕೆ ವಿವರ :– (ಭೂತಗಳಲ್ಲಿ ೧೦). ದೇಹಗತ ಪಂಚಭೂತಗಳಲ್ಲಿ ಪ್ರಾಣಾದಿ ರೂಪಗಳು ೫, ತನ್ಮಾತ್ರಗಳಲ್ಲಿ ನಾಗಾದಿ ವಾಯುರೂಪಗಳು ೫, ಅಂತು ೫+೫=೧೦ (ಇಂದ್ರಿಯಗಳಲ್ಲಿ ೧೦). ಪಂಚಜ್ಞಾನೇಂದ್ರಿಯಗಳಲ್ಲಿ ಪ್ರಾಣಾದಿ ರೂಪಗಳು ೫, ಪಂಚ ಕರ್ಮೇಂದ್ರಿಯಗಳಲ್ಲಿ ನಾಗಾದಿ ರೂಪಗಳು ೫. ಅಂತು ೫+೫=೧೦ (ಹತ್ತು) ಆಯಿತು. (ಮನೋವೃತ್ತಿಗಳು ೧೦).

| ವೃತ್ತಿಗಳು | | | ಅಂತರ್ಭೂತ ವೃತ್ತಿಗಳು |
|---|---|---|---|
| ೧. | ಮನಸ್ಸು | ಪ್ರಾಣ | ಸಂಕಲ್ಪವಿಕಲ್ಪ, ಮನಸ್ಸಿನ ವೃತ್ತಿ. |
| ೨. | ಬುದ್ಧಿ | ಅಪಾನ | ನಿಶ್ಚಯವೃತ್ತಿ, ಬುದ್ಧಿಯದು. |
| ೩. | ಚಿತ್ತ | ವ್ಯಾನ | ಸ್ಮರಣವೃತ್ತಿ, ಚಿತ್ತದ್ದು. |
| ೪. | ಅಹಂಕಾರ | ಉದಾನ | ವಿಷಯವೃತ್ತಿ, ಅಹಂಕಾರದ್ದು. |
| ೫. | ಅಂತಃಕರಣ | ಸಮಾನ | ಭೋಗವೃತ್ತಿ, ಅಂತಃಕರಣದ್ದು. |

ಭೂತಗಳಲ್ಲಿ ೧೦, ಇಂದ್ರಿಯಗಳಲ್ಲಿ ೧೦, ಮನೋವೃತ್ತಿಗಳಲ್ಲಿ ೧೦. ಅಂತು ೩೦ ಆಯಿತು. ಮತ್ತು ವಿವರ :–

೧. ಪಂಚಭೂತ, ಪಂಚತನ್ಮಾತ್ರಗಳು ೧೦, ಈ ಒಂದೊಂದರಲ್ಲಿ ಸಂಸೃಷ್ಟಗಳು ಹತ್ತು ಹತ್ತು ಪ್ರಕಾರ ೧೦೦

೨. ಇಂದ್ರಿಯಗಳು ೧೦, ಈ ಒಂದೊಂದರಲ್ಲಿ ಸಂಸೃಷ್ಟಗಳು ಹತ್ತು ಹತ್ತು ಪ್ರಕಾರ ೧೦೦

೩. ಮನೋವೃತ್ತಿಗಳು ೫, ತತ್ಕಾರ್ಯಗಳು ೫, ಅಂತು ೧೦. ಒಂದೊಂದರಲ್ಲಿ ಹತ್ತು ಹತ್ತು ಪ್ರಕಾರ ೧೦೦

ಅಂತು ೩೦೦

ಇನ್ನು ಉಳಿದ ಮುನ್ನೂರಕ್ಕೆ ವಿವರ :–

೧. ಪಂಚಭೂತಗಳಲ್ಲಿ ಒಂದೊಂದರಲ್ಲಿ ಪ್ರಾಣಾದಿ ರೂಪಗಳು ಹತ್ತು ಹತ್ತು ಪ್ರಕಾರ ೫×೧೦ ೫೦

೨. ಪಂಚತನ್ಮಾತ್ರಗಳಲ್ಲಿ ನಾಗಾದಿ ರೂಪಗಳು ಒಂದೊಂದರಲ್ಲಿ ಹತ್ತು ಹತ್ತು ಪ್ರಕಾರ ೫×೧೦ ೫೦

೩. ಪಂಚ ಜ್ಞಾನೇಂದ್ರಿಯಗಳಲ್ಲಿ ಪ್ರಾಣಾದಿ ರೂಪಗಳು ಒಂದೊಂದರಲ್ಲಿ ಹತ್ತು ಹತ್ತು ಪ್ರಕಾರ ೫×೧೦ ೫೦

೪. ಪಂಚ ಕರ್ಮೇಂದ್ರಿಯಗಳಲ್ಲಿ ನಾಗಾದಿ ರೂಪಗಳು ಒಂದೊಂದರಲ್ಲಿ ಹತ್ತು ಹತ್ತು ಪ್ರಕಾರ ೫×೧೦ ೫೦

೫. ಮನೋವೃತ್ತಿಗಳಲ್ಲಿ, ಐದು ಪ್ರಾಣಾದಿ ರೂಪಗಳು, ಒಂದೊಂದರಲ್ಲಿ ಹತ್ತು ಹತ್ತು ಪ್ರಕಾರ ೫×೧೦ ೫೦

೬. ಮನೋವೃತ್ತಿ ಕಾರ್ಯಗಳಲ್ಲಿ ನಾಗಾದಿ ರೂಪಗಳು ಒಂದೊಂದರಲ್ಲಿ ಹತ್ತು ಹತ್ತು ಪ್ರಕಾರ ೫×೧೦ ೫೦

ಅಂತು ೩೦೦

ಒಟ್ಟು ೩೦೦+೩೦೦=೬೦೦ (ಆರುನೂರು) ಆಯಿತು. ಈ ಆರುನೂರು ರೂಪಗಳಲ್ಲಿ ಮುನ್ನೂರು ಅನಿರುದ್ಧಾದಿ ರೂಪಗಳು, ಉಳಿದ ಮುನ್ನೂರು ಕೃದ್ಧೋಲ್ಕಾದಿ ಭಗವದ್ರೂಪಗಳು. ಅನಿರುದ್ಧಾದಿಗಳ ಪತ್ನೀರು ಮತ್ತು ಕೃದ್ಧೋಲ್ಕಾದಿ ಭಗವದ್ರೂಪಗಳ ಪತ್ನೀರು ಇವರುಗಳ ಹೆಸರುಗಳನ್ನು ಹೇಳತಾರೆ (ವ್ಯಾಖ್ಯಾನಕಾರರು).

| | | | | |
|---|---|---|---|---|
| ೧. | ಮಾಯಾ | – ವಾಸುದೇವ | ದುರ್ಗಾ | – ಕೃದ್ಧೋಲ್ಕ |
| ೨. | ಜಯಾ | – ಸಂಕರ್ಷಣ | ಅಂಭ್ರಣೀ | – ಮಹೋಲ್ಕ |
| ೩. | ಕೃತೀ | – ಪ್ರದ್ಯುಮ್ನ | ಲಕ್ಷ್ಮೀ | – ವೀರೋಲ್ಕ |
| ೪. | ಶಾಂತೀ | – ಅನಿರುದ್ಧ | ದಕ್ಷಿಣಾ | – ದ್ಯುಲ್ಕ |
| ೫. | ಲಕ್ಷ್ಮೀ | – ನಾರಾಯಣ | ಜಯಂತೀ | – ಸಹಸ್ರೋಲ್ಕ |

ಅಂತು ೧೦ ಭಗವದ್ರೂಪಗಳು ಮತ್ತು ಅವರ ಪತ್ನಿಯರ ಹೆಸರುಗಳು ಹೇಳಿದಂತಾಯಿತು.

ಈ ಕಾರಣದಿಂದ ಅಧಿಭೂತ, ಅಧಿದೈವ, ಅಧ್ಯಾತ್ಮ ಈ ಮೂರರಲ್ಲಿ ಒಂದೊಂದರಲ್ಲಿ ದಶಪ್ರಾಣರೂಪಗಳು ಚಿಂತಿಸಬೇಕು. ತದ್ಗತ ಭಗವದ್ರೂಪಗಳು ೧೦. ಪೂರ್ವೋಕ್ತ ಪ್ರಕಾರ ಚಿಂತನಾ ಮಾಡಬೇಕು ಎಂತ ತಾತ್ಪರ್ಯ.

ಈರೆರಡು ಸ್ಥಾನ ಎಂದರೆ :– ದೇಹ, ಇಂದ್ರಿಯಗಳು, ಮನಸ್ಸು, ಹೃದಯಾಕಾಶ (ಅಚ್ಯುತ, ಅನಂತ, ಗೋವಿಂದ, ಆತ್ಮ) ಈ ನಾಲ್ಕು ಸ್ಥಾನದಲ್ಲಿ ನಾಲ್ಕು ರೂಪಗಳ ತಿಳಿಯಬೇಕೆಂತಲೂ ತಾತ್ಪರ್ಯವೇ ಆಗಿದೆ. ಈ ಪೂರ್ವೋಕ್ತ ವಿಭಾಗಕ್ರಮದಿಂದ ನೂರಾಇಪ್ಪತ್ತೇಳಧಿಕ ಮೂರಾರು ಸಾವಿರ ರೂಪದಿಂದ ದಶಮಾರುತರೊಳಿದ್ದು ಅವರವರ ಹೆಸರಿನಿಂದ ಕರೆಸೋವನಾಗತಾನೆಂತ ತಿಳಿಯಬೇಕು ಎಂತ ತಾತ್ಪರ್ಯ.

ಈ ಕೆಳಗೆ ಹೇಳಿರುವುದನ್ನು ಮನನಕ್ಕೋಸ್ಕರ ಬರೆದಿದ್ದಾಗಿದೆ.

೧. ಇಲ್ಲಿ ಪ್ರಾರಂಭದಲ್ಲಿ ನಾಲ್ಕು ಸ್ಥಾನ ತೆಗೆದುಕೊಂಡರು. ಅಧಿಭೂತ, ಅಧಿದೈವ, ಅಧ್ಯಾತ್ಮ ಮತ್ತು ಹೃದಯಸ್ಥಾನ ಈ ನಾಲ್ಕು ಸ್ಥಾನಗಳು. ಈ ಸ್ಥಾನಗಳಲ್ಲಿ ಕ್ರಮವಾಗಿ ಅಂತರ್ಗತ ಭಗವದ್ರೂಪಗಳು ಅಚ್ಯುತ, ಗೋವಿಂದ, ಅನಂತ, ಆತ್ಮ ಇವು ಅವೆ. ಹೃದಯಸ್ಥಾನಪನ್ನನಾದವ ಆತ್ಮ. ಈ ಭಗವದ್ರೂಪಗಳ ಅಕ್ಷರ ಸಾಂಕೇತದಿಂದ ಆಗತಕ್ಕ ಭಗವದ್ರೂಪಗಳು ಪಂಚಾಗ್ನಿಗಳ ಅಂತರ್ಗತ ಭಗವದ್ರೂಪಗಳ, ಗುಣತ್ರಯಗಳ ಅಂತರ್ಗತ ವಿಶ್ವ, ತೈಜಸ, ಪ್ರಾಜ್ಞಾದಿ ಮೂರು

ರೂಪಗಳು, ಪಂಚಭೂತ ಅಂದರೆ ಸ್ಥೂಲದೇಹಗತ ಪಂಚಭೂತಾಂತರ್ಗತ ಅನಿರುದ್ಧಾದಿ ಐದು ರೂಪಗಳೂ ಸೇರಿ ನಾಲ್ಕುಸಾವಿರ ಮುನ್ನೂರ ಇಪ್ಪತ್ತಾರು ಭಗವದ್ರೂಪಗಳನ್ನು ಚಿಂತಿಸಬೇಕು.

೨. ತದನಂತರ ಏಕವಿಂಶತಿ ತತ್ವಗಳನ್ನು ತೆಗೆದುಕೊಂಡು ಅವುಗಳಲ್ಲಿ ಪಂಚಭೂತಗಳು, ಪಂಚ ತನ್ಮಾತ್ರಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಇವುಗಳಲ್ಲಿ ಇರತಕ್ಕ ದಶಪ್ರಾಣಾದಿಗಳು ಅಂದರೆ ಪ್ರಾಣಾದಿಪಂಚಕಗಳು, ನಾಗಾದಿಪಂಚಕಗಳು ಇವುಗಳನ್ನು ವಿವರಿಸಿ ಅನಂತರ ಮನೋ ಇಂದ್ರಿಯದ ಪ್ರಭೇದಗಳನ್ನು ಮತ್ತು ಅವುಗಳ ವೃತ್ತಿಗಳನ್ನು ತಿಳಿಸಿ ಇವುಗಳಲ್ಲಿ ಕ್ರಮವಾಗಿ ಇರುವ ಪ್ರಾಣಾದಿಪಂಚಕಗಳನ್ನೂ ಮತ್ತು ನಾಗಾದಿಪಂಚಕಗಳನ್ನೂ ವಿವರಿಸಿ ಒಟ್ಟು ಆಗತಕ್ಕ ಭಗವದ್ರೂಪಗಳು ೧೮,೧೨೭ ಹದಿನೆಂಟು ಸಾವಿರದ ನೂರ ಇಪ್ಪತ್ತೇಳು ಭಗವದ್ರೂಪಗಳು ಎಂತ ವಿವರಿಸಿ, ಇವುಗಳಲ್ಲಿ ಒಳಗೊಂಡ ಆರು ನೂರು ಭಗವದ್ರೂಪಗಳ ಪೈಕಿ ಮುನ್ನೂರು ಅನಿರುದ್ಧಾದಿ ರೂಪಗಳೆಂತಲೂ, ಉಳಿದ ಮುನ್ನೂರು ಕೃದ್ಧೋಲ್ಕಾದಿ ರೂಪಗಳು ಎಂತಲೂ ವಿವರಿಸಿದ್ದಾರೆ. ನಾವು ಯಾವಾಗಲೂ ಚಿಂತಿಸಬೇಕಾದರೆ ಲಕ್ಷ್ಮೀನಾರಾಯಣ ಸಮೇತ ಚಿಂತಿಸಿ ಧ್ಯಾನ ಮಾಡಬೇಕು ಎಂತ ತಾತ್ಪರ್ಯ.

**ಚಿತ್ತವಿಸುವುದು ಎಂಟಧಿಕ ಇ ।**
**ಪ್ಪತ್ತು ಸಾವಿರ ನಾಲ್ಕು ಶತದೈ ।**
**ವತ್ತ ಮೂರು ಸುಮೂರ್ತಿಗಳು ಇಹವಲ್ಲಿ ಪರಿಯಂತ ॥**
**ಹತ್ತು ನಾಲಕು ರೂಪಗಳ ನೆರ ।**
**ವುತ್ತರವನೀಪರಿ ತಿಳಿದು ಪುರು ।**
**ಷೋತ್ತಮನ ಸರ್ವತ್ರ ಪೂಜೆಯ ಮಾಡು ಕೊಂಡಾಡು ॥ ೧೧ ॥**

ಈ ನುಡಿಯಲ್ಲಿ ನೆರವುತ್ತ ಎಂಬ ಪದಕ್ಕೆ ನೆನೆವುತ್ತ ಅಂತಲೂ ಪಾಠಾಂತರವಿದೆ.

ಪೂರ್ವೋಕ್ತ ಕ್ರಮಾನುಸಾರ ದೇಹಗತ ರೂಪಗಳು ೨೮,೪೩೩ ರೂಪಗಳ ತಿಳಿದು ಪೂಜಾ ಮಾಡಬೇಕೆಂದು ಹೇಳುತ್ತಾರೆ. ಈ ಸಂಖ್ಯಾರೂಪಗಳಿಗೆ ವಿವರ. ೧೧ನೇ ಶ್ಲೋಕದಲ್ಲಿ ಹೇಳಿದ ಪ್ರಕಾರ ಆತ್ಮಾದಿ ರೂಪಗಳು ೪,೩೨೬. ಪ್ರಾಣಾದಿ ರೂಪಗಳು ೧೮,೧೨೭. ಅಂದರೆ ಒಟ್ಟು ೪,೩೨೬ + ೧೮,೧೨೭ = ೨೨,೪೫೩. ಇನ್ನೂ ೬,೦೦೦ ರೂಪಗಳು ಕಡಿಮೆ ಆಗತದೆ. ೬,೦೦೦ ರೂಪಗಳು ದಾವದೆಂದರೆ ಈರೆರಡು ಸ್ಥಾನಾಂತರ್ಗತ ರೂಪಗಳು ಹೇಳಲ್ಪಟ್ಟಿತು. ಈರೆರಡು ಸ್ಥಾನಗತ ರೂಪಗಳೇ ೬,೦೦೦ ರೂಪಗಳು ಎಂತ ತಿಳಿಯಬೇಕು.

ಅದಕ್ಕೆ ವಿವರ :— ೧,೦೦೦ ಪೃಥಿವ್ಯಾದಿ ಪಂಚಭೂತಸ್ಥ ಅಕ್ಷರ ವಾಚ್ಯರೂಪಗಳು.

| | | | | | | |
|---|---|---|---|---|---|---|
| ಪೃಥಿವಿ | — | ವಿ ಥಿ ಪೃ | — | ೪೨೩ | | ವಿ—೪, ಥಿ—೨, ಪೃ—೩ |
| ಅಪ್ಪು | — | ಪ್ಪು ಅ | — | ೨೧ | | ಪ್ಪು—೨, ಅ—೧ |
| ತೇಜ | — | ಜ ತೇ | — | ೩೧ | | ಜ—೩, ತೇ—೧ |
| ವಾಯು | — | ಯು ವಾ | — | ೧೪ | | ಯು—೧, ವಾ—೪ |
| ಆಕಾಶ | — | ಶ ಕಾ ಆ | — | ೫೧೧ | | ಶ—೫, ಕಾ—೧, ಆ—೧ |
| | | ಒಟ್ಟು | | ೧,೦೦೦ | | |

೧,೦೮೦ ಪಂಚ ತನ್ಮಾತ್ರಗಳು

| | | | | | |
|---|---|---|---|---|---|
| ಶಬ್ದ | — | ಬ್ದ ಶ | — | ೬೫ | ಬ್ದ—೬, ಶ—೫ |
| ಸ್ಪರಿಶ | — | ಶ ರಿ ಸ್ಪ | — | ೫೨೮ | ಶ—೫, ರಿ—೨, ಸ್ಪ—೮ |
| ರೂಪ | — | ಪ ರೂ | — | ೧೨ | ಪ—೧, ರೂ—೨ |
| ರಸ | — | ಸ ರ | — | ೭೨ | ಸ—೭, ರ—೨ |
| ಗಂಧ | — | ಧಂ ಗ | — | ೪೦೩ | ಧಂ—೪೦, ಗ—೩ |
| | | ಅಂತು | | ೧,೦೮೦ | |

೨,೧೬೮ ಆರು ಜ್ಞಾನೇಂದ್ರಿಯ ರೂಪಗಳು

| | | | | | |
|---|---|---|---|---|---|
| ಮನಸ್ಸು | — | ಸ್ಸು ನ ಮ | — | ೭೫೫ | ಸ್ಸು—೭, ನ—೫, ಮ—೫ |
| ತ್ವಕು | — | ಕು ತ್ವ | — | ೧೫ | ಕು—೧, ತ್ವ—೫ |
| ಚಕ್ಷು | — | ಕ್ಷು ಚ | — | ೧೦೨ | ಕ್ಷು—೧೦, ಚ—೨ |
| ಶ್ರೋತ್ರ | — | ತ್ರ ಶ್ರೋ | — | ೩೭ | ತ್ರ—೩, ಶ್ರೋ—೭ |
| ಜಿಂಹ್ವಾ | — | ಹ್ವಾ ಂ ಜಿ | — | ೧,೨೦೩ | ಹ್ವಾ—೧,೨೦೦, ಜಿ—೩ |
| ಘ್ರಾಣ | — | ಣ ಘ್ರಾ | — | ೫೬ | ಣ—೫, ಘ್ರಾ—೬ |
| | | ಅಂತು | | ೨,೧೬೮ | |

೯೩೧ ಪಂಚ ಕರ್ಮೇಂದ್ರಿಯಗತ ರೂಪಗಳು

| | | | | | | |
|---|---|---|---|---|---|---|
| ವಾಕ್ಕು | — | ಕ್ಕು ವಾ | — | ೨೪ | | ಕ್ಕು—೨, ವಾ—೪ |
| ಪಾಣಿ | — | ಣಿ ಪಾ | — | ೫೧ | | ಣಿ—೫, ಪಾ—೧ |
| ಪಾದ | — | ದ ಪಾ | — | ೩೧ | | ದ—೩, ಪಾ—೧ |
| ಪಾಯು | — | ಯು ಪಾ | — | ೧೧ | | ಯು—೧, ಪಾ—೧ |
| ಉಪಸ್ಥ | — | ಸ್ಥ ಪ ಉ | — | ೮೧೪ | | ಸ್ಥ—೮೦೦, ಪ—೧, ಉ—೫ |
| | | ಅಂತು | | ೯೩೧ | | |

| | |
|---|---|
| ಮನೋಗತ ರೂಪಗಳು ಅಧ್ಯಾತ್ಮ | ೭೫೫ |
| ಅಧಿದೈವ (ದಶ ಇಂದ್ರಿಯ ಗತರೂಪ) | ೨,೩೪೯ |
| ಅಂದರೆ ಮೂರು ಸಾವಿರದ ತೊಂಭತ್ತೊಂಭತ್ತು | ೩,೦೯೯ |
| ಅಧಿಭೂತ, ಪಂಚಭೂತ ಪಂಚತನ್ಮಾತ್ರಗತ ರೂಪಗಳು | ೨,೦೮೦ |
| ಅಂದರೆ ಐದುಸಾವಿರದ ಒಂದನೂರ ಎಪ್ಪತ್ತೊಂಭತ್ತು | ೫,೧೭೯ |

ಅಂದರೆ ೬,೦೦೦ಕ್ಕೆ ೮೨೧ ಕಡಿಮೆ ಆಯಿತು.

ಈ ಎಂಟನೂರ ಇಪ್ಪತ್ತೊಂದು ರೂಪಗಳು ದಾವದೆಂದರೆ :— ವಿಧಿಭವಾದಿ ಸಮಸ್ತ ಜೀವರ ಹೃದಯಾಕಾಶದೊಳು ಏಕಾತ್ಮಕನೆಂದು ಒಂಭತ್ತನೇ ಶ್ಲೋಕದಲ್ಲಿ ಪ್ರಯೋಗ ಮಾಡಿದ್ದಾರೆ. ಆತ್ಮರೂಪೀ ಪರಮಾತ್ಮ ಹೃದಯಾಕಾಶದಲ್ಲಿ ಎಂತ ಇರೋಣದರಿಂದ ಹೃದಯ ಒಂದು, ಆಕಾಶ ಒಂದು. ಈ ಆಕಾಶ ದಹರಾಕಾಶ. ಈ ಆಕಾಶ ಬ್ಯಾರೆ.

| | | | |
|---|---|---|---|
| ಹೃದಿ | — | ದಿ ಹೃ—೩೧೦ | ದಿ—೩೦೦, ಹೃ—೧೦ |
| ಆಕಾಶ | — | ಶ ಕಾ ಆ—೫೧೧ | ಶ—೫, ಕಾ—೧, ಆ—೧ |
| | ಅಂತು | ೮೨೧ | |

ಅಂತು ೫೧೭೯+೮೨೧=೬೦೦೦ ರೂಪಗಳು.

೨೮೪೫೩ ಚಿತ್ತವಿಸುವುದು—ಎಂಟಧಿಕ ಇಪ್ಪತ್ತುಸಾವಿರ ನಾಲಕ್ಕು ಶತದ ಐವತ್ತು ಮೂರು ಮೂರ್ತಿಗಳು ಎಂದರೆ ಪೂರ್ವೋಕ್ತ ಸಂಖ್ಯಾನುಸಾರ ಆಗತಕ್ಕ ವರ್ಣವಾಚ್ಯ ರೂಪಗಳು. ಮೊತ್ತಸಂಖ್ಯಾ ಇಪ್ಪತ್ತೆಂಟುಸಾವಿರದ ನಾನೂರಐವತ್ತಮೂರು ಮೂರ್ತಿಗಳು, ಇಹವಲ್ಲಿ ಪರಿಯಂತ— ಇಹವು ಎಂದರೆ ಇರೋದಾಗಿ ಅದೆ. ಅಲ್ಲಿ ಅಂದರೆ ದೇಹದಲ್ಲಿ ಅಂತ ಅರ್ಥ. ಪರಿಯಂತ ಎಂದರೆ ಸೃಜ್ಯರಾಗಿ ಇರತಕ್ಕ ಯಾವತ್ತು ಜೀವರ ಅಂತ.

(ಯಾವತ್ತು ಚರಾಚರ ಅಂತ ಪರಿಯಂತಲೂ ತಾತ್ಪರ್ಯವೇ) ಹ್ಯಾಂಗೆಂದರೆ :— ಪರಿ ಎಂದರೆ ಈ ಪರಿ ಅಂತ ಎಂದರೆ ಸೃಷ್ಟಿ ಅಂತದವರಿಗೆ. ಜೀವರಿಗೆ ಅಂತ ದಾವದೆಂದರೆ ಹತ್ತುನಾಲಕ್ಕು. ಹತ್ತು ಒಂದು ಅಂತ್ಯ, ನಾಲ್ಕು ಒಂದು. ಹತ್ತು ಎಂದರೆ ಏನು, ನಾಲ್ಕು ಎಂದರೆ ಏನು ಅಂದರೆ, ಹತ್ತೂನೂ ಜೀವರ ಸಂಖ್ಯಾವೇ, ನಾಲ್ಕೂನೂ ಜೀವರ ಸಂಖ್ಯಾವೇ. ಹತ್ತಕ್ಕೆ ವಿವರ :— ೧. ದೈವ, ೨. ಋಷಿ, ೩. ಪಿತೃ, ೪. ಜನಪ, ೫. ಜಲಚರ, ೬. ಸ್ಥಾವರ, ೭. ಕ್ರಿಮಿ, ೮. ಪಕ್ಷಿ, ೯. ಪಶುಗಳು, ೧೦. ಮನುಷ್ಯರು. ಅಂತು ಹತ್ತು.

ನಾಲಕ್ಕಿಗೆ ವಿವರ :— ೧. ಸ್ವೇದಜ, ೨. ಪೃಥ್ವಿಜ, ೩. ಅಂಡಜ, ೪. ಜರಾಯುಜ. ಯಾವತ್ತು ಜೀವರು. ಹತ್ತುನಾಲಕ್ಕು ಪರಿಯಂತರ, ಅಲ್ಲಿ—ಆಯಾ ಜೀವರಲ್ಲಿ ಪೂರ್ವೋಕ್ತ ರೂಪಗಳು ಇಹವು. ಹತ್ತುನಾಲಕ್ಕು ರೂಪಗಳು ನೆರವುತ್ತ (ನೆನೆವುತ್ತ)— ಮ್ಯಾಲೆ ಉದಹರಿಸಿದ್ದ ಹತ್ತು ವಿಧ ನಾಲ್ಕು ವಿಧ ಜೀವರುಗಳಲ್ಲಿ ೨೮೪೫೩ ರೂಪಗಳ ನೆನೆವುತ್ತಾ, ಅವನೀಪರಿ ತಿಳಿದು— ಅವನಿ—ಭೂಮಿಯಲ್ಲಿ, ಈ ಪರಿ—ಪೂರ್ವೋಕ್ತಪ್ರಕಾರ, ತಿಳಿದು—ವಿವರ ತಿಳಿದು, ಅನುಸಂಧಾನಗಳ ತಿಳಿದು, ಪುರುಷೋತ್ತಮನ—ಕ್ಷರಾಕ್ಷರ ಪುರುಷರಿಗೆ ಉತ್ತಮನಾದ ಪರಮಾತ್ಮನ, ಸರ್ವತ್ರ—ಚರಾಚರಗಳಲ್ಲಿ, ಸರ್ವತ್ರ ತನ್ನ ಬಿಂಬನ್ನ ತಿಳಿದು, ತಾರತಮ್ಯಾನುಸಾರ ಪೂಜಾವಿಧಿಗಳ ತಿಳಿದು, ಪೂಜೆಯ ಮಾಡು ಕೊಂಡಾಡು— ಈ ಮಾರ್ಗವನ್ನು ಉಪದೇಶಿಸಿದ ಗುರುಗಳ, ಗುರುಗಳಂತರ್ಗತ ಪರಮಾತ್ಮನ ಸರ್ವಗತ ಪರಮಾತ್ಮನ ಕೊಂಡಾಡು ಎಂತ ತಾತ್ಪರ್ಯ.

ಮತ್ತು ಹತ್ತುನಾಲ್ಕು ರೂಪಗಳು ಎಂದರೆ :— ಹತ್ತು—ದಶೇಂದ್ರಿಯಗಳು (ಪಂಚಭೂತ, ಪಂಚತನ್ಮಾತ್ರ), ದಶಮಾರುತರು ೧೦. ನಾಲಕ್ಕು ಎಂದರೆ ಶತಸ್ಥರ ಪರಿಯಂತ ದೇವತೆಗಳು, ಕರ್ಮಜರು, ಅಜಾನಜರು, ನಿರಂಶರು ಅಂತು ನಾಲ್ಕು. ಅಧಿಭೂತ, ಅಧ್ಯಾತ್ಮ, ಅಧಿದೈವ, ಹೃದಯ ಅಂತು ನಾಲ್ಕು. ಈ ಪ್ರಕಾರ ಹತ್ತುನಾಲಕ್ಕು. ಈ ಹತ್ತುನಾಲಕ್ಕರಲ್ಲಿ ಪೂರ್ವೋಕ್ತಪ್ರಕಾರ ರೂಪಗಳ ನೆನೆವುತ್ತ, ಅವನೀ ಪರಿ ತಿಳಿದು— ಅವನ—ಬಿಂಬರೂಪಿ ಪರಮಾತ್ಮನ, ಈ ಪರಿ—ಈ ರೀತಿ ಹೇಳಿದ ಕ್ರಮದಿಂದ ಇರತಕ್ಕ ರೂಪಗಳಲ್ಲಿ ತನ್ನ ಬಿಂಬನ್ನ ತಿಳಿದು ಎಂದರೆ ಐಕ್ಯ ಚಿಂತಿಸಿ ಅನುಸಂಧಾನ ತಿಳಿದು, ಪುರುಷೋತ್ತಮನ—ಪುರುಷಶ್ರೇಷ್ಠನಾದ ಪರಮಾತ್ಮನ, ಸರ್ವತ್ರ—ಐಕ್ಯಚಿಂತನಿ, ಪರಸ್ಪರ ರೂಪಗಳಿಗೆ ಐಕ್ಯಚಿಂತನಿರೂಪವಾದ, ಪೂಜಾವನ್ನು ಮಾಡಿ, ಕೊಂಡಾಡು—ಜ್ಞಾನ, ಭಕುತಿ, ವೈರಾಗ್ಯಗಳನ್ನು ಹೊಂದಿದವನಾಗಿ, ಆಹ—ಸಂಚಾರಮಾಡು ಎಂತ ತಾತ್ಪರ್ಯ.

**ಈರೆರಡುಶತ ದ್ವ್ಯಷ್ಟಧಿಕ ಹದಿ ।**
**ನಾರುಸಾವಿರ ರೂಪ ಸರ್ವ ಶ ।**
**ರೀರದೊಳು ಶಬ್ದಾದಿಗಳಧಿಷ್ಠಾನದೊಳಗಿಪ್ಪ ॥**

**ಮಾರುತನು ನಾಗಾದಿ ರೂಪದಿ ।**
**ಮೂರನೇ ಗುಣಮಾನಿ ಶ್ರೀ ದು ।**
**ಗಾ೯ರಮಣ ವಿದ್ಯಾಕುಮೋಹನ ಕೊಡುವ ಕರಣಕ್ಕೆ ॥ ೧೨ ॥**

ಪಂಚ ಅವಿದ್ಯಾಗತ ಪ್ರಾಣರೂಪಗಳು, ತದ್ಗತ ಭಗವದ್ರೂಪಗಳು, ಉತ್ತರ ಶ್ಲೋಕದ ಸಂಗತಿಯೂ ಸಹ ಹೇಳತಾರೆ.

ಈರೆರಡು ಶತ–ನಾಲಕ್ಕು ನೂರು, ದ್ವ್ಯಷ್ಟಧಿಕ– ದ್ವಿ–ಎರಡು, ಅಷ್ಟ–ಎಂಟು, ಅಧಿಕ–ಅಧಿಕವಾಗಿ ಉಳ್ಳ (ಅಂದರೆ ೪೧೬), ಹದಿನಾರುಸಾವಿರ–೧೬೦೦೦, (ಒಟ್ಟಿಗೆ ಲೆಕ್ಕ ೧೬,೪೧೬), ರೂಪ–೧೬೪೧೬ ರೂಪಗಳ ಧರಿಸಿ, ಸರ್ವಶರೀರದೊಳು–ಸರ್ವ ಜೀವರಾಶಿಗಳ ಸ್ಥೂಲದೇಹದಲ್ಲಿ ಅವೆ. (ಇರತಕ್ಕ ಸ್ಥಾನ ದಾವದೆಂದರೆ) ಶಬ್ದಾದಿಗಳಧಿಷ್ಠಾನದೊಳಗಿಪ್ಪ, ಶಬ್ದಾದಿಗಳ–ಪಂಚಭೂತಾಂತರ್ಗತ ತದ್ಗುಣಗಳಾದ, ಶಬ್ದಾದಿ ಐದು ಸಾಂಕೇತಗಳಾದ, ಅಧಿಷ್ಠಾನದೊಳಗಿಪ್ಪ–ಅಧಿಷ್ಠಾನಾಂತರ್ಗತದಲ್ಲಿ ಇರತಕ್ಕ ಅವಿದ್ಯಾಸಾಂಕೇತಗಳಾದ ಪಂಚ ಅವಿದ್ಯಾಗಳೊಳಗೆ, ಮಾರುತನು – ಶ್ರೀ ವಾಯುದೇವರು, ನಾಗಾದಿ ರೂಪದಿ–ನಾಗಾದಿ ಪಂಚರೂಪಗಳಿಂದ ಇದ್ದಾನೆ. ಇದರ ವಿವರ ಹ್ಯಾಂಗೆಂದರೆ :–

| | | | | | | | |
|---|---|---|---|---|---|---|---|
| ೩೫ | ಶಬ್ದ | ತಮ | ನಾಗ ೫೩ | 1 | ತಮ | ಅಜ್ಞಾನ ಕಾರ್ಯ | ಕೃದ್ಧೋಲ್ಕ |
| ೩೧೩ | ಸ್ಪರ್ಶ | ಮೋಹ | ಕೃಕಲ ೩೧೩ | 2 | ಮೋಹ | ಭ್ರಾಂತಿ ಕಾರ್ಯ | ಮಹೋಲ್ಕ |
| ೭೧ | ರೂಪ | ಮಹಾಮೋಹ | ಕೂರ್ಮ ೧೭ | 3 | ಮಹಾಮೋಹ | ಮಹಾ ಭ್ರಾಂತಿ | ವೀರೋಲ್ಕ |
| ೨೩೪೩ | ರಸ | ತಾಮಿಸ್ರ | ದೇವದತ್ತ ೩೪೩೨ | 4 | ತಾಮಿಸ್ರ | ಮಹಾ ಕ್ರೋಧ | ದ್ಯುಲ್ಕ |
| ೧೩೦೫೪ | ಗಂಧ | ಅಂಧತಾಮಿಸ್ರ | ಧನಂಜಯ ೪೫೦೩೧ | 5 | ಅಂಧತಾಮಿಸ್ರ | ಮಹಾ ಕ್ರೋಧ | ಸಹಸ್ರೋಲ್ಕ |
| ೧೫೮೧೬ | | | | | ೫ | ೬ | ಅಂತು ೧೦ |

ಕೃದ್ಧೋಲ್ಕಾದಿ ಹತ್ತು ಭಗವದ್ರೂಪಗಳು. (ಐದು ರೂಪಗಳೇ ಹತ್ತು ರೂಪಗಳಿಂದ ಅದೆ.) ಇದರೊಳಗೆ ಪ್ರಾಚುರ್ಯದಿಂದ ಒಂದೊಂದರಲ್ಲಿ ಸಂಸೃಷ್ಟಗಳಾಗಿ ಅವಿದ್ಯಾ ಐದರಲ್ಲಿ, ತತ್ಕಾರ್ಯ ಐದರಲ್ಲಿ, ಒಂದೊಂದರಲ್ಲಿ ಐದು ಐದು ಪ್ರಕಾರ ಇರೋದಾಗಿ ಅದೆ. ಈ ರೀತ್ಯಾ ಲೆಖ್ಖಮಾಡಿದರೆ ಐದು ಹತ್ತುಗಳು ಐವತ್ತು. ಅವಿದ್ಯಾ ತತ್ಕಾರ್ಯಸಹಿತ ೫೦ ಏಕಾದಶೇಂದ್ರಿಯಗಳ ಒಳಗೆ ಒಂದೊಂದು ಇಂದ್ರಿಯದಲ್ಲಿ ೫೦ ಪ್ರಕಾರ ವ್ಯಾಪ್ತವಾಗಿ ಇದೆ. ಈ ಪ್ರಕಾರ ಇದ್ದದ್ದರನ್ನ ಲೆಖ್ಖಮಾಡಿದರೆ ೫೫೦, ಹನ್ನೊಂದು ಐವತ್ತುಗಳು

ಅಂದರೆ ಐದುನೂರ ಐವತ್ತುಗಳು. ಅಂತು ಆರುನೂರು ಕೃಷ್ಣೋಲ್ಕಾದಿ ೫ ರೂಪಗಳೇ ಆರುನೂರು ರೂಪಗಳಿಂದ ಇರೋದಾಗಿ ಅವೆ. ಅಂತು ೧೬೪೧೬ ಸರಿ ಆಯಿತು. (೧೫೮೧೬+೬೦೦=೧೬೪೧೬). ಮೂರನೆ ಗುಣಮಾಸಿ–ತಮೋಗುಣಾಭಿಮಾನಿಯಾದ, ಶ್ರೀ ದುರ್ಗಾರಮಣ–ದುರ್ಗಾದೇವೇರಿಗೆ ಪತಿಯಾದ ರುದ್ರರೂಪೀ ಶ್ರೀ ಪರಮಾತ್ಮ, ವಿದ್ಯಾಕುಮೋಹವ–ಕುತ್ಸಿತವಾದ ಮೋಹಗಳ ಜ್ಞಾನದ್ವಾರಾ, ಕರಣಕ್ಕೆ–ಏಕಾದಶೇಂದ್ರಿಯಗಳಿಗೆ ಅಜ್ಞಾನಾದಿಗಳು ವ್ಯಕ್ತಮಾಡಿ, ಕೊಡುವ–ಕೊಡತಾ ಇರತಾನೆ ಎಂತ ತಾತ್ಪರ್ಯ.

**ತಾ||** ಪೂರ್ವೋಕ್ತ ಶಬ್ದಾದಿಗಳ ಅಧಿಷ್ಠಾನಗಳಲ್ಲಿರತಕ್ಕ ಅವಿದ್ಯಾಗಳಲ್ಲಿ ಶ್ರೀ ವಾಯುದೇವರೇ ನಾಗಾದಿ ರೂಪಗಳು ಧರಿಸುವರು. ರುದ್ರರೂಪಿ ಪರಮಾತ್ಮ ಕೃದ್ಧೋಲ್ಕಾದಿ ರೂಪಗಳಿಂದ ನಾಗಾದಿ ಪಂಚಪ್ರಾಣರೂಪಗಳಲ್ಲಿದ್ದು ಯಾವತ್ತು ಜೀವರ ದೇಹಗತ ಇಂದ್ರಿಯಗಳಲ್ಲಿ ಇದ್ದು ಆಯಾ ಇಂದ್ರಿಯಗಳಿಗೆ ಕುತ್ಸಿತವಾದ ಮೋಹ ಕೊಡತಾನೆ ಎಂತ ತಾತ್ಪರ್ಯ.

**ಐದವಿದ್ಯೆಗಳೊಳಗೆ ಇಹ ನಾ ।**
**ಗಾದಿಗಳಧಿಷ್ಠಾನದಲಿ ಲಕು ।**
**ಮೀಧವನು ಕೃದ್ಧೋಲ್ಕ ಮೊದಲಾದೈದು ರೂಪಗಳ ॥**
**ತಾ ಧರಿಸಿ ಸಜ್ಜನರ ವಿದ್ಯವ ।**
**ಛೇದಿಸುವ ತಾಮಸರಿಗಜ್ಞಾ ।**
**ನಾದಿಗಳ ಕೊಟ್ಟವರವರ ಸಾಧನವ ಮಾಡಿಸುವ ॥ ೧೩ ॥**

ಅವಿದ್ಯಾ ಕಾರ್ಯ ಸಜ್ಜನರಲ್ಲಿ ನಡಿಸೋ ಬಗೆ ಹೇಳತಾರೆ.

ಐದವಿದ್ಯೆಗಳೊಳಗೆ ಇಹ–ಪೂರ್ವೋಕ್ತ ತಮೋಮೋಹಾದಿ ಐದು ಅವಿದ್ಯೆಗಳಲ್ಲಿರತಕ್ಕ, ನಾಗಾದಿರೂಪಗಳ–ನಾಗಾದಿ ಪಂಚಪ್ರಾಣರೂಪಗಳ, ಅಧಿಷ್ಠಾನದಲಿ–ಅಂತರ್ಗತದಲ್ಲಿ, ಲಕುಮೀಧವನು–ಲಕ್ಷ್ಮೀಪತಿಯಾದ ನಾರಾಯಣ ದೇವರು, ಕೃದ್ಧೋಲ್ಕ ಮೊದಲಾದ ಐದು ರೂಪಗಳ–ಕೃದ್ಧೋಲ್ಕಾದಿ ಪಂಚರೂಪಗಳ, ತಾ ಧರಿಸಿ–ನಾರಾಯಣನಾದ ತಾನು ಧರಿಸಿ, ಸಜ್ಜನರ ವಿದ್ಯವ ಛೇದಿಸುವ–ಸಜ್ಜನರಿಗೆ ಮಧ್ಯೆ ಮಧ್ಯೆ ಅಜ್ಞಾನ ಕೊಡುತಾ ಪರಿಹಾರವೂ ಮಾಡುತಾ ಜ್ಞಾನಾಭಿವೃತ್ತಿ ಮಾಡುವ, ತಾಮಸರಿಗೆ–ತಮೋಯೋಗ್ಯರಿಗೆ, ಅಜ್ಞಾನಾದಿಗಳ ಕೊಟ್ಟು–ಅಜ್ಞಾನಾದಿಗಳು ಪೂರ್ಣವಾಗಿ ಕೊಟ್ಟು, ಅವರವರ ಸಾಧನವ–ಅವರವರ ಸಾಧನಗಳ, ಮಾಡಿಸುವ–ತತ್ವೇಶರ ದ್ವಾರಾ ಮಾಡಿಸತಾ ಇರತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಅವಿದ್ಯಾಗತ ಆರುನೂರು ರೂಪಗಳು ಯಾಕೆ ಹೇಳಬೇಕೆಂದರೇ ಈ ಆರುನೂರು ರೂಪಗಳಿಂದ ಸಜ್ಜನರ ಅವಿದ್ಯಾ ಪರಿಹಾರಕ್ಕೂ, ದುರ್ಜನರ ಅವಿದ್ಯಾ

ವೃದ್ಧಿಗಾಗಿಯೂ ಇವು ಕಾರಣ ರೂಪಗಳು. ಅವಿದ್ಯಾ ಎಂಬುದು ತೃತೀಯ ಪರಿಚ್ಛೇದದ ಲಿಂಗದೇಹದಲಿ ಬೀಜಾತ್ಮಕವಾದದ್ದು. ಅದರ ಕಾರ್ಯ ಸ್ಥೂಲ ದೇಹದಲಿ ಆಗತದೆ. ಸ್ಥೂಲ ದೇಹದಲಿ ವಿದ್ಯಮಾನವಾದ ತ್ರಿಗುಣಗಳ ಒಳಗೆ ತಮೋಗುಣದಲ್ಲಿ ಅವಿದ್ಯಾ ಪಂಚಕವದೇ ಎಂತ ತಿಳೀಬೇಕು. ಆದರೆ ಈ ಅವಿದ್ಯಾ ಪಂಚಕದಲಿ ನಾಗಾದಿ ಪ್ರಾಣ ರೂಪಗಳು, ಪ್ರಾಣಾದಿ ಪಂಚಪ್ರಾಣರೂಪಗಳು ಉಂಟೋ ಎಂತ ಶಂಕಾ ಇಲ್ಲಾ, ಎಂದರೆ ಇದೇ ಹರಿಕಥಾಮೃತಸಾರದಲ್ಲಿ "ಸರಸಿಜಾಸನ ವಾಣಿ ಭಾರತಿ ಭರತರಿಂದೊಡಗೂಡಿ ಲಿಂಗದಿ ಇರುತಿಹರು" ಎಂತ ಹೇಳಿದ್ದಾರೆ. ಆದ್ದರಿಂದ ಇಲ್ಲಾ ಎಂತ ಹೇಳಲಿಕ್ಕೆ ಇಲ್ಲ. ಶ್ರೀ ವಿಜಯದಾಸರಾಯರು ತಾವು ಮಾಡಿದ "ಲಿಂಗಪರಿಚ್ಛೇದ ಸುಳಾದಿ" ಯಲ್ಲಿ "ತತ್ವೇಶರು ಲಿಂಗದೇಹದಲಿ ಇಲ್ಲ ಎತ್ತನೋಡಿದರತ್ತ ಶ್ರೀ ವ್ಯಾಪ್ತಳು ಕರ್ತನು ಸರ್ವಜ್ಞ ವಿಜಯವಿಠ್ಠಲರೇಯಾ" ಎಂತ ಹೇಳಿದ್ದಾರೆ.

ಮತ್ತು ವಿಜಯರಾಯರು ಮಾಡಿರುವ "ಜೀವಸುಳಾದಿ" ಯಲ್ಲಿ ಬ್ರಹ್ಮ, ವಾಯು, ಭಾರತಿ, ಸರಸ್ವತಿ ಈ ನಾಲ್ವರು ಲಿಂಗದ ತೃತೀಯ ಪರಿಚ್ಛೇದವಾದ ತಮೋಗುಣದ ಮುಂಭಾಗದಲ್ಲಿ ಇದ್ದಾರೆ ಎಂತ ಹೇಳಿದ್ದಾರೆ. ಪರಸ್ಪರ ವಾಕ್ಯಗಳಿಗೆ ವಿರೋಧ ಪ್ರಾಪ್ತವಾಯಿತು. ದಾವದು ನಿತಾಂತವೆಂದರೆ ಎರಡೂ ನಿತಾಂತವೇ. ವಿವಕ್ಷಾಭೇದ ಅಷ್ಟೇ. ಅದು ದಾವದೆಂದರೆ ಲಿಂಗಗಳು ಎರಡು. ಅನಾದಿ ಲಿಂಗ ಒಂದು, ವೈಷಯಿಕ ಲಿಂಗ ಒಂದು. ವೈಷಯಿಕ ಲಿಂಗ ಎಂದರೆ ಸೃಷ್ಟಿಕಾಲದಲ್ಲಿ ವೈಷಯಿಕ ಶರೀರ ಎಂದು ಲಿಂಗದ ಮ್ಯಾಲೆ ಆಯಿತು. ಈ ವೈಷಯಿಕ ಶರೀರಕ್ಕೆ ಅಣುಲಿಂಗ ಎಂದು ಹೆಸರು. ಲಿಂಗಸದೃಶ, ಲಿಂಗದೇಹಸದೃಶ ಲಿಂಗದೇಹಗತ ವಿದ್ಯಮಾನಗಳು ಯಾವತ್ತು ಈ ಅಣುಲಿಂಗದಲ್ಲಿ ಇರೋದಾಗದೆ. ಇದರಲ್ಲಿ ವಾಯುದೇವರ ಪ್ರವೇಶವು. ಇಲ್ಲಾದರೋ ಮುಖ್ಯಾಭಿಮಾನಿ ರಮಾ. ಅಮುಖ್ಯಾಭಿಮಾನಿ ವಾಯುದೇವರು, ಅಂತ ತಿಳಿಯಬೇಕು. ಆದ್ದರಿಂದ ಶ್ರೀ ವಿಜಯರಾಯರು ಲಿಂಗದೇಹದಲ್ಲಿ ತತ್ವೇಶರು ಇಲ್ಲ ಎಂತ ಹೇಳಿದ್ದು ಅನಾದಿಲಿಂಗ ವಿವಕ್ಷಯಾ. ಶ್ರೀ ಜಗನ್ನಾಥದಾಸರಾಯರು ಲಿಂಗದೇಹದಲಿ ವಾಯುದೇವರು ಇದ್ದಾರೆ ಎಂತ ಹೇಳಿದ್ದು ಅಣುಲಿಂಗ ವಿವಕ್ಷಯಾ. ಆದ್ದರಿಂದ ದಾವ ವಾಕ್ಯಕ್ಕೂ ವಿರೋಧ ಬರಲಿಲ್ಲಾ. ಈ ರೀತಿ ತಿಳಿಯಬೇಕು.

**ಗೋವುಗಳೊಳುದ್ಗೀಥನಿಹ ಪ್ರ ।**
**ಸ್ತಾವ ಹಿಂಕಾರೆರಡು ರೂಪದ ।**
**ಲಾವಿಯ ಜಗಳೊಳಿಹನು ಪ್ರತಿಹಾರಾಹ್ವ ಹಯಗಳೊಳು ॥**
**ಜೀವನಪ್ರದ ನಿಧನ ಮನುಜರೊ ।**
**ಳೀ ವಿಧದೊಳಿಹ ಪಂಚಸಾಮವ ।**
**ಜಾವಜಾವಕೆ ನೆನೆವರಿಗೆ ಐದಿಸನು ಜನುಮಗಳ ॥ ೧೪ ॥**

ಪೂರ್ವೋಕ್ತ ಜೀವರಲ್ಲಿ ಆಯಾ ಕಾಲಗಳಲ್ಲಿ ಸಂರಕ್ಷಣೆ ಮಾಡತಕ್ಕ ಭಗವದ್ರೂಪಗಳು, ನಾಮ ಸಾಂಕೇತಗಳಾದ ಭಗವದ್ರೂಪಗಳ ಚಿಂತನಾ ವಿಚಾರವು ಹೇಳತಾರೆ.

ಈ ನುಡಿಯ ಟೀಕಾ ಬರೆಯುವುದಕ್ಕೆ ಮುಂಚಿತವಾಗಿ ಇದರಲ್ಲಿ ಹೇಳುವ ಯಾಮ ಶಬ್ದಕ್ಕೆ ಅರ್ಥ ವಿವರಿಸಬೇಕಾಗಿ, ದಿನದ ಭಾಗಗಳನ್ನೂ ವಿವರಿಸಿ ಆಯಾ ಕಾಲಾಭಿಮಾನಿ ಭಗವದ್ರೂಪಗಳನ್ನು ವಿವರಿಸುತ್ತಾರೆ.

ಒಂದು ಹಗಲಿಗೆ ಐದು ಯಾಮ. ಯಾಮ ಒಂದಕ್ಕೆ ಆರು ಘಳಿಗಿ. ಅಂತು ಮೂವತ್ತು ಘಳಿಗಿ. ಪ್ರಥಮ ಯಾಮಕ್ಕೆ ಉದ್ಗೀಥ ನಾಮಕ ಪರಮಾತ್ಮ ಅನಿರುದ್ಧ (ಭಗವದ್ರೂಪ) ಆರು ಘಳಿಗಿ, ಮತ್ತು

| | | | |
|---|---|---|---|
| ಪ್ರಥಮಯಾಮಕ್ಕೆ | ಉದ್ಗೀಥನಾಮಕ | ಅನಿರುದ್ಧ | ಆರು ಘಳಿಗೆ |
| ದ್ವಿತೀಯಯಾಮಕ್ಕೆ | ಪ್ರಸ್ತಾವನಾಮಕ | ಪ್ರದ್ಯುಮ್ನ | ,, |
| ತೃತೀಯಯಾಮಕ್ಕೆ | ಹಿಂಕಾರನಾಮಕ | ಸಂಕರ್ಷಣ | ,, |
| ಚತುರ್ಥಯಾಮಕ್ಕೆ | ಪ್ರತಿಹಾರನಾಮಕ | ವಾಸುದೇವ | ,, |
| ಪಂಚಮಯಾಮಕ್ಕೆ | ನಿಧನನಾಮಕ | ನಾರಾಯಣ | ,, |

ಒಂದು ದಿನಕ್ಕೆ ಯಾಮುಗಳು ನಾಲ್ಕು. ವಿವಕ್ಷಾಭೇದದಿಂದ ಐದು ಯಾಮ ಆಗುತ್ತದೆ. ಮುಹೂರ್ತಕ್ಕೆ ಎರಡು ಘಳಿಗಿ ವಿವಕ್ಷಾ ಒಂದು, ಎರಡುವರಿ ಘಳಿಗಿ ವಿವಕ್ಷಾ ಒಂದು. ಎರಡು ಘಳಿಗಿ ವಿವಕ್ಷಾದಿಂದ ಯಾಮಕ್ಕೆ ಆರು ಘಳಿಗಿ ಆಗುತ್ತದೆ. ಆಗ್ಗೆ ಒಂದು ಹಗಲಿಗೆ ಐದು ಯಾಮ ಆಗುತ್ತದೆ. ಈ ಐದು ಯಾಮಕ್ಕೆ ಅಭಿಮಾನಿ ಭಗವದ್ರೂಪಗಳು ಮ್ಯಾಲೆ ಹೇಳಿದ್ದು. ಈ ಕಾಲಾಂತರ್ಗತ ಪರಮಾತ್ಮನೇ ಜೀವರಲ್ಲಿ ಇದ್ದುಕೊಂಡು ಆಯಾ ಜೀವರಿಗೆ ಆಹಾರ ರೂಪವಾದದ್ದರನ್ನ ಕೊಡೋ ನಿಮಿತ್ತ ಅಲ್ಲಿಗಲ್ಲಿಗೆ ಕರಕೊಂಡು ಹೋಗಿ ಅವರವರ ದ್ವಾರಾ ಕೊಡಲ್ಪಟ್ಟ ಜೀವಕ್ಕೆ ಯೋಗ್ಯವಾದ ಆಹಾರರೂಪಗಳಾದ ಪದಾರ್ಥಗಳಲ್ಲಿದ್ದು ಆಹಾರಾಂತರ್ಗತನಾಗಿ ಆಹಾರ ರೂಪದಿಂದ ಪ್ರಾಪ್ತನಾಗತಾನೆ. ಆಹಾರ ಕೊಡತಕ್ಕವರಲ್ಲಿ ಆಹಾರ ಪದಾರ್ಥದಲ್ಲಿ ಆಹಾರ ಪದಾರ್ಥ ತೆಗೆದುಕೊಂಬೋವರಲ್ಲಿ ಅವರವರಿಗೆ ನಿಯಮನವಾದ ಕಾಲಾಂತರ್ಗತದಲ್ಲಿ ಭಗವಂತ ಇರುತ್ತಾನೆ. ಅದಕ್ಕೆ ವಿವರ.

ಗೋವುಗಳೊಳು–ಆಕಳುಗಳ ಒಳಗೆ, ಉದ್ಗೀಥನಿಹ–ಉದ್ಗೀತನಾಮಕ ಪರಮಾತ್ಮ. ಇವ ಪ್ರಥಮಯಾಮಾಭಿಮಾನಿ. ಗೋವುಗಳು ಆರಂಭ ಮಾಡಿ ಆವಿವರಿಗೂ ಮಧ್ಯೆ ಇರತಕ್ಕ ಯಾವತ್ತು ಜೀವರು ಇದರಲ್ಲೇ ಅಂತರ್ಭೂತರು. ಆವಿ ಪ್ರಸ್ತಾವ–ಆವಿ–ಕರುಗಳ ಒಳಗೆ ಪ್ರಸ್ತಾವ ನಾಮಕ. ಇವ ದ್ವಿತೀಯಯಾಮಾಭಿಮಾನಿ. ಆವಿ ಆರಂಭ ಮಾಡಿ ಅಜದವರಿಗೂ ಮಧ್ಯೆ ಇರತಕ್ಕ ಯಾವತ್ತು ಜೀವರು ಇದರಲ್ಲಿ

ಅಂತರ್ಭೂತರು. ಅಜ ಹಿಂಕಾರ– ಅಜ–ವ್ಯಾಕಿಗಳ ಒಳಗೆ ಹಿಂಕಾರನಾಮಕ. ಇವ ತೃತೀಯಯಾಮಾಭಿಮಾನಿ. ಅಜ ಆರಂಭ ಮಾಡಿ ಹಯದವರಿಗೂ ಯಾವತ್ತು ಜೀವರು ಅಂತರ್ಭೂತರು. ಹಯುಗಳೊಳು ಪ್ರತಿಹಾರ–ಕುದುರಿಗಳ ಒಳಗೆ ಪ್ರತಿಹಾರ ನಾಮಕ. ಇವ ಚತುರ್ಥಯಾಮಕ್ಕೆ ಅಭಿಮಾನಿ. ಹಯ ಆರಂಭ ಮಾಡಿ ಮನು ಜಾಂತವರಿಗೂ ಇರತಕ್ಕ ಯಾವತ್ತು ಜೀವರು ಅಂತರ್ಭೂತರು. ಇಹನು ಮನುಜ ರೊಳು ನಿಧನ–ಮನುಷ್ಯರೊಳು ನಿಧನ ನಾಮಕ. ಮನುಜ ಶಬ್ದದಿಂದ ಯಾವತ್ತು ಮನುಷ್ಯರು ಇವರಲ್ಲಿ ಅಂತರ್ಭೂತರು. ನಿಧನ ಪಂಚಮಯಾಮಕ್ಕೆ ಅಭಿಮಾನಿ. ಪಂಚಮಕಾಲ ಲಯಕಾಲವಾದ್ದರಿಂದ ನಿಧನ ನಾಮಕ ಪರಮಾತ್ಮ ಎಂತ ತಿಳಿಯಬೇಕು. ಜೀವರುಗಳು ತ್ರಿವಿಧ. ೧) ಖೇಚರರು (ಪಕ್ಷಿಗಳು), ೨) ಭೂಚರರು (ಮನುಜಾದಿಗಳು) ೩) ವಾರಿಚರರು (ಜಲದಲ್ಲಿ ಸಂಚಾರ ಮಾಡತಕ್ಕವರು), ನಿಶಾಚರರು, ನಿಶಿಯಲ್ಲಿ ಸಂಚಾರ ಮಾಡತಕ್ಕವರು, ಇವರು ವಿವಕ್ಷಾ ಭೇದದಿಂದ ಭೂಚರರಲ್ಲೇ ಅಂತರ್ಭೂತರು. ಈ ಪೂರ್ವೋಕ್ತ ಐದರಲ್ಲಿ ಯಾವತ್ತು ಜೀವರು ಬಂದಂತಾಯಿತು. ಎರಡು ರೂಪದಲಿ ಈ ವಿಧದೊಳಿಹ–ಪೂರ್ವೋಕ್ತ ಎರಡು ರೂಪಗಳಿಂದ ಇದ್ದವನಾಗಿ, ಜೀವನಪ್ರದ–ಆಯಾ ಪ್ರಾಣಿಗಳಿಗೆ ಜೀವನೋಪಾಯಗಳಿಂದ ಆಹಾರಗಳ ಕೊಡೋವನಾಗತಾನೆ. ಪಂಚ ಸಾಮನ–ಐದು ಭಗವದ್ರೂಪಗಳು (ಭಗವದ್ರೂಪಗಳು ದಾವುದೆಂದರೆ, ಋಗ್ವೇದ ಸಾಮ ಪ್ರತಿಪಾದ್ಯಗಳು) ಈ ರೂಪಗಳನ್ನು, ಝೂವ ಝೂವಕೆ–ಪೂರ್ವೋಕ್ತ ಐದು ಝೂಮು ಗಳಲ್ಲಿ ಝೂಮಾಂತರ್ಗತ ಆಯಾ ಜೀವಾಂತರ್ಗತನೆಂದು, ನೆನೆವರಿಗೆ–ಅನುಸಂಧಾನ ದಿಂದ ಸ್ಮರಣೆ ಮಾಡತಕ್ಕವರಿಗೆ, ಜನುಮಗಳ – ಈ ಅನುಸಂಧಾನದಿಂದ ಅಹಂಮಮ ಎಂಬ ಜನ್ಮಕ್ಕೆ ಕಾರಣವಾದ ಕರ್ಮ ಉತ್ಪತ್ತಿ ಆಗೋದಿಲ್ಲವಾದ್ದರಿಂದ, ಐದಿಸನು– ಕೊಡೋದಿಲ್ಲ ಅಂದರೆ ಜನ್ಮಗಳ ತಪ್ಪಿಸಿ ಮೋಕ್ಷ ಕೊಡೋವನಾಗತಾನೆ.

**ವಿಶೇಷಾರ್ಥ :–** ಇದುವರಿಗೆ ಪಂಚಕಾಲ ಹೇಳಿತು. ಹಗಲು ವಿವಕ್ಷಯಾ ತಿಳಿಯತಕ್ಕ ಮತ್ತೊಂದು ಕ್ರಮವದೆ. ಆರಾರು ಘಳಿಗಿ ಝೂಮ ಒಂದಕ್ಕೆ ಏಳು ಝೂಮಾ ಒಂದು ವಿವಕ್ಷಯಾ ಹೇಳಥೇವೆ. ಸೂರ್ಯೋದಯಾತ್ಪೂರ್ವ ಆರು ಘಳಿಗಿ ಕಾಲ ಒಂದು. ಅಸ್ತಮಯಾನಂತರ ಆರು ಘಳಿಗಿ ಕಾಲ ಒಂದು. ಇದು ಎರಡೂ ಸೇರಿ ಏಳು ಕಾಲವಾಗತದೆ. ಅದರ ವಿವರ :– ಆದಿತ್ಯಮಂಡಲದಲ್ಲಿ ನಾರಾಯಣ ದೇವರು ವಾಯುದೇವರನ ಅಧಿಷ್ಠಾನ ಮಾಡಿಕೊಂಡು ಇದ್ದಾನೆ. ಈ ನಾರಾಯಣ ಸರ್ವರಿಗೂ ಸಮನಾಗಿ ಜೀವನಪ್ರದನಾಗಿ ಇರೋಣದರಿಂದ ಮಾಯಸಾಂತ (ಮಾಯಸ ಅಂತ) ಹೆಸರು. ಇವ ಋಗ್ವೇದ ಸಾಮದಿಂದ ಸ್ತೂಯಮಾನನಾದ್ದರಿಂದ ಸಾಮ ಎಂತ ಹೆಸರು.

ಇವನು ಸರ್ವ ಪ್ರಾಣಿಗಳಿಗೂ ಜೀವನಪ್ರದನಾಗಿ ಅವರವರಲ್ಲಿ ಆಯಾ ಕಾಲದಲ್ಲಿ ಆಶ್ರಯನಾಗಿದ್ದಾನೆ. ಕಾಲಗಳು ಏಳು. ಆ ಕಾಲಾಂತರ್ಗತ ಭಗವದ್ರೂಪಗಳು ಏಳು.

ಇದರ ವಿವರ :— ಕಾಲಗಳು ಭಗವದ್ರೂಪಗಳು ಸೂರ್ಯಮಂಡಲವನ್ನು ಆಶ್ರಯಿಸಿ ಅವೆ. ನಾರಾಯಣನೇ ಏಳು ರೂಪ ಧರಿಸಿ ಇದ್ದಾನೆ. ಅವಕ್ಕೆ ವಿವರ.

**ಆದಿ :—** ಸೂರ್ಯೋದಯಾತ್ಪೂರ್ವದಲ್ಲಿ ಆರು ಘಳಿಗೆ ಅವಶಿಷ್ಟ ಉಳಿದಿರುವ ಕಾಲ ಒಂದು. ಈ ಕಾಲದಲ್ಲಿ ಸೂರ್ಯಾಂತರ್ಗತನಾದ ಸಾಮಶಬ್ದವಾಚ್ಯ ನಾರಾಯಣ ಧರಿಸಲ್ಪಟ್ಟ ಏಳು ರೂಪಗಳೊಳಗೆ ಆದಿನಾಮವಾಚ್ಯ ವರಾಹರೂಪಿ ಪರಮಾತ್ಮ ಸೃಜ್ಯರಾದ ಸರ್ವಪ್ರಾಣಿಗಳಿಗೂ ಈ ಪ್ರಥಮ ಕಾಲಕ್ಕೂ ಆಶ್ರಯನಾದವ ಅಂದರೆ ಸಣ್ಣ ಬಾಲಕರಿಗೆ ಎಂತ ತಾತ್ಪರ್ಯ.

**ಉದ್ಗೀಥ :—** ದ್ವಿತೀಯ ಕಾಲ ಉದ್ಗೀಥ ನಾಮಕ ಪರಮಾತ್ಮ ಗೋವುಗಳಲ್ಲಿ ಖೇಚರರಿಗೆ, ಜಲಚರರಿಗೆ ಮತ್ತು ದೇವತೆಗಳಲ್ಲಿ ಗೋವುಗಳೇ ಮೊದಲಾದುವುಗಳಲ್ಲಿ ಆಶ್ರಯನು.

**ಪ್ರಸ್ತಾವ :—** ತೃತೀಯ ಕಾಲಕ್ಕೆ ಪ್ರಸ್ತಾವ. ಕುರಿಗಳೇ ಮೊದಲಾದವಕ್ಕೆ ಆಶ್ರಯನು.

**ಹಿಂಕಾರ :—** ಚತುರ್ಥಕಾಲಕ್ಕೆ ಹಿಂಕಾರ. ಮೇಕೆಗಳೇ ಮೊದಲಾದವಕ್ಕೆ ಆಶ್ರಯ. ಆಯಾ ಕಾಲಾಭಿಮಾನಿ ರೂಪಗಳ ವ್ಯತ್ಯಾಸದಿಂದ ರಕ್ಷಕರಾಗಿ ಇದ್ದಾರೆ. ಕಾಲಾಭಿಮಾನಿತ್ವ ಕ್ರಮವನುಸರಿಸಿ ಅವೆ. ಅವೇ ರೂಪಗಳೇ ವ್ಯತ್ಯಾಸದಿಂದ ರಕ್ಷಕರು.

**ಪ್ರತಿಹಾರ :—** ಪಂಚಮಕಾಲಕ್ಕೆ ಪ್ರತಿಹಾರ. ಹಯಗಳೇ ಮೊದಲಾದುವಕ್ಕೆ ಆಶ್ರಯ. ಮತ್ತು ಪುರುಷರ ಗರ್ಭಗತ ಸ್ತ್ರೀಯರ ಗರ್ಭಗತ ಜೀವರಿಗೂ ಆಶ್ರಯನಾದವ.

**ನಿಧನ :—** ಆರನೇ ಕಾಲಕ್ಕೆ ನಿಧನ. ಮನುಜಾದಿಗಳೇ ಮೊದಲಾದವರಿಗೆ ಆಶ್ರಯ.

**ಉಪದ್ರವ :—** ಏಳನೇ ಕಾಲಕ್ಕೆ ಉಪದ್ರವಶಬ್ದವಾಚ್ಯ ನರಸಿಂಹ ಅರಣ್ಯಗತ ಮೃಗಾದಿಗಳಿಗೆ ಆಶ್ರಯ. ಅಸ್ತಮಾನಾನಂತರ ಎಂತ ತಿಳಿಯಬೇಕು.

ಈ ಪ್ರಕಾರ ಯಾವತ್ತು ಕಾಲದಲ್ಲಿ ಯಾವತ್ತು ಜೀವರಲ್ಲಿ ತಿಳಿಯಬೇಕು. ರಾತ್ರಿಯಲ್ಲಿ ಉಳಿದ ಕಾಲ ಐದು. ವರಾಹದೇವರನ ಎರಡೂವರಿ ಕಾಲಕ್ಕೆ ನರಸಿಂಹನ ಎರಡೂವರಿ ಕಾಲಕ್ಕೂ ತಿಳಿಯಬೇಕು. ಇದು ಸರ್ವಪ್ರಾಣಿಗಳಿಗೂ ನಿದ್ರಾಶ್ರಯಕಾಲಗಳು. ನಿದ್ರಾಕ್ಕೆ ಒಂದಂಶದಿಂದ ಸರ್ವಪ್ರಾಣಿಗಳಲ್ಲಿ ಇರುತ್ತಾರೆಂದು ತಿಳಿಯಬೇಕು ಎಂತ ಅನುಸಂಧಾನ ಮಾಡಬೇಕು. ಇನ್ನೂ ಅನೇಕ ಪ್ರಾಣಿಗಳು ಇರಲಾಗಿ, ಗೋವು ಅವಿ ಅಜಗಳನ್ನ ಯಾಕೆ ಹೇಳಬೇಕು ಎಂದರೆ ಯಾವತ್ತು ಪ್ರಾಣಿಗಳು ಇವುಗಳಲ್ಲಿ ಅಂತ ರ್ಭೂತರು. ಅದರ ಸಮನ್ವಯ ಹ್ಯಾಂಗೆಂದರೆ, ಗಳಕಂಬಳ ಯುಕ್ತವಾದ ಯಾವತ್ತು ಜೀವರು ಗೋವುಗಳಲ್ಲಿ ಅಂತರ್ಭೂತರು. ಅಜಕ್ಕೆ ಗಳಕಂಬಳವಿಲ್ಲ, ಶೃಂಗವುಂಟು. ಏತಾದೃಶ ಜೀವರು ಇದರಲ್ಲೇ ಅಂತರ್ಭೂತರು. ಕುದುರೆಗೆ ಗಳಕಂಬಳವಿಲ್ಲ, ಶೃಂಗವಿಲ್ಲ. ಏಕಶಫವುಳ್ಳದ್ದು. ಈ ಸಜಾತೀಯ ಜೀವರೆಲ್ಲಾ ಇದರಲ್ಲೇ ಅಂತರ್ಭೂತರು. ಮನುಷ್ಯರು

ದ್ವಿಪಾದವುಳ್ಳವರು. ದ್ವಿಪಾದವುಳ್ಳ ಯಾವತ್ತು ಜೀವರು ಈ ಜಾತಿ ಒಳಗೆ ಸೇರಿದವರು. ಪಂಚಶಫದಿಂದ ಯುಕ್ತವಾದ ಪಂಚನಖವುಳ್ಳ ಜೀವರು ದಾವದರಲ್ಲಿ ಗಣನ ಎಂದರೆ, ಶೃಂಗವು ಇಲ್ಲದ ಗಳಕಂಬಳವು ಇಲ್ಲದ ದ್ವಿಶಫರವುಳ್ಳ ಆವಿಯಲ್ಲಿ ಅಂತರ್ಭೂತರು. ದ್ವಿಪಾದಕ್ಕೆ ಅಧಿಕವುಳ್ಳ ಕ್ರಿಮಿಕೀಟಾದಿಗಳು ಮನುಷ್ಯರಲ್ಲಿ ಅಂತರ್ಭೂತರು. ತಾರತಮ್ಯದಲ್ಲಿ ಮನುಷ್ಯೋತ್ತಮರ ದ್ವಾರಾ ಹಿಡದು ಹೇಳತಾರೆ. ತದವರರೆಲ್ಲಾ ಮನುಷ್ಯರಲ್ಲಿ ಗಣನಾ ಎಂತ ತಿಳಿಯಬೇಕೆಂದು ಹೇಳಿರುವ ಮರ್ಯಾದಾನುಸಾರ ತಿಳಿಯಬೇಕು. ಅಂತು ಯಾವತ್ತು ಜೀವರು ಐದು ವಿಧದಲ್ಲಿ ಅಂತರ್ಭೂತರು. ಅಂತರವಿವರಗಳು ವಿಶೇಷಗಳು ಉಂಟು. ಗ್ರಂಥಾಂತರದಿಂದ ತಿಳಿಯಬೇಕು.

**ಯುಗಚತುಷ್ಟಯಗಳಲಿ ತಾನಿ ।**
**ದ್ದ್ಯುಗಪ್ರವರ್ತಕ ಧರ್ಮಕರ್ಮಗ ।**
**ಳಿಗೆ ಪ್ರವರ್ತಕ ವಾಸುದೇವಾದೀರೆರಡು ರೂಪ ॥**
**ತೆಗೆದುಕೊಂಡು ಯುಗಾದಿಕೃತು ತಾ ।**
**ಯುಗಪ್ರವರ್ತಕನೆನಿಸಿ ಧರ್ಮ ।**
**ಪ್ರಘಟಕನು ತಾನಾಗಿ ಭಕುತಂಗೀವ ಸಂಪದವ ॥ ೧೫ ॥**

ಈ ಶ್ಲೋಕದಲ್ಲಿ ಜೀವರು ಮಾಡತಕ್ಕ ನಾಲ್ಕು ಪ್ರಕಾರವಾದ ಧರ್ಮಕರ್ಮಗಳ ನಡೆಸುತಾ ಧರ್ಮಕರ್ಮಾಂತರ್ಗತವಾಗಿ ದೇಹದಲ್ಲಿ ಇರತಕ್ಕ ರೂಪಗಳ ಹೇಳತಾರೆ.

ಯುಗಚತುಷ್ಟಯಗಳಲ್ಲಿ ತಾನಿದ್ದು ಎಂದರೆ :–

| ಯುಗಗಳು | ಪರಮಾತ್ಮನ ರೂಪಗಳು | ಧರ್ಮ | ಕರ್ಮ | ಪಾಪ | ಪುಣ್ಯ | ಅಧರ್ಮ |
|---|---|---|---|---|---|---|
| ಕೃತಯುಗ | ವಾಸುದೇವ | ನಾರಾಯಣಾದಿ ಧರ್ಮಗಳು | ಸ್ನಾನಾದಿ ಕರ್ಮ | ಒಂದು ಭಾಗ | ನಾಲ್ವತ್ತು ಭಾಗ | ಇಲ್ಲ |
| ತ್ರೇತಾಯುಗ | ಸಂಕರ್ಷಣ | ದಾನಾದಿ ಧರ್ಮಗಳು | ,, | ಹತ್ತು ಭಾಗ | ಮೂವತ್ತು ಭಾಗ | |
| ದ್ವಾಪರಯುಗ | ಪ್ರದ್ಯುಮ್ನ | ,, | ,, | ಇಪ್ಪತ್ತು ಭಾಗ | ಇಪ್ಪತ್ತು ಭಾಗ | |
| ಕಲಿಯುಗ | ಅನಿರುದ್ಧ | ,, | ,, | ಮೂವತ್ತಾರು ಭಾಗ | ಒಂದು ಭಾಗ | |

ಯುಗಚತುಷ್ಟಯಗಳಲಿ–ಕೃತಯುಗಾದಿ ನಾಲ್ಕು ಯುಗಗಳಲ್ಲಿ, ತಾನಿದ್ದು–ಶ್ರೀ ಪರಮಾತ್ಮನು ಇದ್ದು, ಯುಗಪ್ರವರ್ತಕ – (ಯುಗವನ್ನು ಆವೃತ್ತಿ ಮಾಡತಕ್ಕವನು) ಆಯಾ ಯುಗಗಳಲ್ಲಿ ಜೀವರು ಆಚರಿಸತಕ್ಕ, ಧರ್ಮಕರ್ಮಗಳಿಗೆ – ಸ್ನಾನ, ಸಂಧ್ಯಾ, ಯಜ್ಞ, ದಾನ ಈ ಕರ್ಮಗಳಿಗೆ, ಪ್ರವರ್ತಕ–ಯುಗಾನುಸಾರವಾಗಿ

ಆಯಾ ಪ್ರಾಣಿಗಳಿಗೆ ತತ್ವೇಶರ ದ್ವಾರಾ ಪ್ರೇರಿಸಿ ಆಚರಣೆಮಾಡಿಸತಕ್ಕವ, ವಾಸುದೇವಾದಿ ಈರೆರಡುರೂಪ–ವಾಸುದೇವಾದಿ ನಾಲ್ಕು ರೂಪ ತೆಗೆದುಕೊಂಡು, ಯುಗಾದಿ–ನಾಲ್ಕು ಯುಗಕ್ಕೆ ಆದಿಯಾದ, ಕೃತಯುಗ–ಕೃತಯುಗಕ್ಕೆ ಅನುಸರಿಸಿದ, ಪ್ರವರ್ತಕನೆನಿಸಿ–ಧರ್ಮಕರ್ಮಗಳಿಗೆ ಪ್ರವರ್ತಕನು ಎಂದೆನಿಸಿ, ಧರ್ಮಪ್ರಘಟಕನು–ಧರ್ಮವನ್ನು ಪ್ರಾಣಿಗಳಿಗೆ ಛಂದಾಗಿ ಘಟನ ಮಾಡತಕ್ಕವನು, ತಾನಾಗಿ–ತನ್ನ ಇಚ್ಛಾದಿಂದ ತಾನೇ ಪ್ರವರ್ತಿಸೋವನಾಗಿ, ಭಕುತರಿಗೆ ಸಂಪದವ–ಧರ್ಮಕ್ಕೆ ಮರ್ಭಿಕ್ಷವಾದ ಕಲಿಯುಗದಲ್ಲಿ ಭಕ್ತರಿಂದ ಅಲ್ಪಸಾಧನ ಮಾಡಿಸಿ ಅಂಥ ಸಾಧಕನಿಗೆ, ಅವರಿಗೆ ಜ್ಞಾನ ಭಕ್ತ್ಯಾದಿ ಸಂಪತ್ತು ಯಜ್ಞಯಾಗಾದಿಗಳು ಮಾಡಿದರೆ ಯಾವ ಫಲ ಬರಬೇಕೋ ಅಂಥ ಫಲರೂಪವಾದ ಐಶ್ವರ್ಯವನ್ನು, ಈವ–ಕೊಡೋವನಾಗಿದ್ದಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**—ಸಂಪತ್ತು ಎಂದರೆ ಜ್ಞಾನ, ಭಕ್ತಿ, ವೈರಾಗ್ಯಗಳು. ಮುಕ್ತಿಯೋಗ್ಯರಿಗೆ ಸಂಪತ್ತು, ಭೇದಜ್ಞಾನ, ತಮೋಯೋಗ್ಯರಿಗೆ ಸಂಪತ್ತು, ಅಭೇದಜ್ಞಾನ. ಅದನನುಸರಿಸಿ ಕೃತಯುಗದಲ್ಲಿ ಧರ್ಮಕರ್ಮಗಳು. ಮುಕ್ತಿಯೋಗ್ಯರ ಸಂಪತ್ತೇ ಅಧಿಕ. ತಮೋಯೋಗ್ಯರ ಸಂಪತ್ತು ಕ್ವಚಿತು. ತ್ರೇತಾಯುಗದಲ್ಲಿಯೂ ಮುಕ್ತಿಯೋಗ್ಯರ ಸಂಪತ್ತೇ ಅಧಿಕ. ತಮೋಯೋಗ್ಯರದು ಕ್ವಚಿತು. ಆದರೂ ಕೃತಯುಗಾಪೇಕ್ಷಯಾ ಮುಕ್ತಿಯೋಗ್ಯರಿಗೆ ಸಂಪತ್ತು ಕಡಿಮೆ. ತಮೋಯೋಗ್ಯರಿಗೆ ಸಂಪತ್ತು ಅಧಿಕವೇ ಆಗುತ್ತದೆ. ದ್ವಾಪರಯುಗದಲ್ಲಿ ಉಭಯರ ಸಂಪತ್ತು ಸಮಾನ. ಕಲಿಯುಗದಲ್ಲಿ ದೈತ್ಯರ ಸಂಪತ್ತೇ ಅಧಿಕ. ಮುಕ್ತಿಯೋಗ್ಯರ ಸಂಪತ್ತು ಕ್ವಚಿತು. ಈ ಪ್ರಕಾರ ಯುಗಗಳಲ್ಲಿ ನಾಲ್ಕು ವಿಧ ಪ್ರವರ್ತಕನಾಗಿ ಇರ್ತಾನೆ. ಇದನನುಸರಿಸಿ ಸರ್ವಜೀವಾಂತರ್ಯಾಮಿ ದೇಹಾಂತರ್ಯಾಮಿಯಾಗಿದ್ದು ಯುಗಾನುಸಾರವಾಗಿ ಪ್ರೇರಿಸಿದವನಾಗಿ ವಾಸುದೇವಾದಿ ರೂಪಗಳಿಂದ ಪ್ರವೃತ್ತಿ ಉಂಟುಮಾಡತಾನೆ.

ಪ್ರತಿದಿನದಲ್ಲಿ ಪ್ರಾಣಿಗಳಲ್ಲಿ ನಾಲ್ಕುಯುಗ ಧರ್ಮಕರ್ಮಗಳನ್ನು ನಡೆಸತಾ ಇದ್ದಾನೆ. ಆಯಾ ಧರ್ಮಕರ್ಮಗಳಲ್ಲಿ ಆಯಾ ಸೂಕ್ಷ್ಮಗಳ ತಿಳಿದು ಆಯಾ ಭಗವದ್ರೂಪಗಳ ಚಿಂತಿಸಬೇಕು. ಒಂದು ದಿನಕ್ಕೆ ನಾಲ್ಕು ಯಾಮುಗಳು. ಪ್ರಥಮಯಾಮ ಕೃತಯುಗ ಸಮಾನ, ಸ್ವಾಮಿ ವಾಸುದೇವ, ದ್ವಿತೀಯಯಾಮ ತ್ರೇತಾಯುಗ ಸಮಾನ, ಸ್ವಾಮಿ ಸಂಕರ್ಷಣ, ತೃತೀಯಯಾಮ ದ್ವಾಪರಯುಗ ಸಮಾನ, ಸ್ವಾಮಿ ಪ್ರದ್ಯುಮ್ನ, ಚತುರ್ಥ ಯಾಮಕ್ಕೆ ಕಲಿಯುಗ ಸಮಾನ, ಇದಕ್ಕೆ ಸ್ವಾಮಿ ಅನಿರುದ್ಧ ಎಂತ ತಿಳೀಬೇಕು. ರಾತ್ರಿಗೂ ಕೂಡ ಇದೇ ರೀತಿ. ಆಯಾ ಯಾಮುಗಳಲ್ಲಿ ಆಯಾ ಧರ್ಮಗಳು ನಡಿಯತದೆ. ಸೂಕ್ಷ್ಮದೃಷ್ಟಿಯಿಂದ ತಿಳಿಯಬೇಕು. ಈ ಪ್ರಕಾರ ನಾಲ್ಕು ರೂಪಗಳಿಂದ ದೇಹದಲ್ಲೀನೂ ಯುಗಾದಿಗಳಲ್ಲೀನೂ ಇದ್ದು ಧರ್ಮಕರ್ಮಗಳ ನಡೆಸತಾನೆ ಎಂತ ತಿಳಿಯಬೇಕು. ವಾಸುದೇವಾದಿ ರೂಪಗಳು ಮನ ಆಶ್ರಯ ಮಾಡಿಕೊಂಡು ಅವೆ.

**ತಲೆಯೊಳಿಹ ನಾರಾಯಣನು ಗಂ ।**
**ಟಲೆಡೆ ಒಡಲೊಳು ವಾಸುದೇವನು ।**
**ಬಲದಲಿಹ ಪ್ರದ್ಯುಮ್ನ ಎಡಭಾಗದೊಳಗನಿರುದ್ಧ ॥**
**ಕೆಳಗಿನಂಗದಿ ಸಂಕರುಷಣನ ।**
**ತಿಳಿದು ಈ ಪರಿ ಸಕಲ ದೇಹಗ ।**
**ಳೊಳಗೆ ಪಂಚಾತ್ಮಕನ ರೂಪವ ನೋಡು ಕೊಂಡಾಡು ॥ ೧೬ ॥**

ಈ ಸ್ಥೂಲ ದೇಹದಲಿ ಶ್ರೀ ಪರಮಾತ್ಮನ ಖಂಡಾಖಂಡ ರೂಪಗಳ ತಿಳಿಯಬೇಕೆಂತ ಹೇಳತಾರೆ. ನಾರಾಯಣಾದಿ ಐದು ರೂಪಗಳು ದೇಹದಲಿ ಕವಚಾಕಾರದಿಂದ ಇರತಕ್ಕ ಕ್ರಮ ಹೇಳತಾರೆ.

ತಲೆಯೊಳಿಹ ನಾರಾಯಣನು–ಶಿರಃಸ್ಥಾನದಲ್ಲಿ ಮೂಲರೂಪ ನಾರಾಯಣನು ಇದ್ದಾನೆ. ಗಂಟಲೆಡೆ–ಕುತ್ತಿಗೆ ಪ್ರವೇಶದಲಿ, ಒಡಲೊಳು–ಕುತ್ತಿಗೆ ಕೆಳಗೆ ಟೊಂಕದ ಪರಿಯಂತ ಮಧ್ಯಗತ ದೇಹಭಾಗದಲಿ (ಅಂದರೆ ಎರಡು ಪ್ರದೇಶಗಳಲ್ಲಿ), ವಾಸುದೇವನು–ವಾಸುದೇವ ರೂಪಿಯಾದ ಪರಮಾತ್ಮನು ಇದ್ದಾನೆ. ಬಲದಲಿಹ ಪ್ರದ್ಯುಮ್ನ–ಬಲ ಭಾಗದಲ್ಲಿ (ಬಲಹಸ್ತ) ಪ್ರದ್ಯುಮ್ನರೂಪಿ ಪರಮಾತ್ಮ, ಎಡಭಾಗದಲಿ ಅನಿರುದ್ಧ–ಎಡ ಭಾಗದಲಿ (ಎಡದ ಕಯ್ಯಿ) ಅನಿರುದ್ಧರೂಪಿ ಪರಮಾತ್ಮ, ಕೆಳಗಿನಂಗದಿ–ಟೊಂಕದ ಕೆಳಗೆ ಪಾದಾಂತವಾಗಿ, ಸಂಕರುಷಣನ ತಿಳಿದು–ಸಂಕರುಷಣರೂಪಿ ಪರಮಾತ್ಮನು ಇದ್ದಾನೆ. ಪ್ರಥಮತಃ ತನ್ನ ದೇಹದಲಿ ತಿಳಿದು, ಈ ಪರಿ–ಇದೇ ಪ್ರಕಾರ, ಸಕಲ ದೇಹಗಳೊಳಗೆ–ಸಮಸ್ತ ಪ್ರಾಣಿಗಳ ಸ್ಥೂಲಶರೀರಗಳೊಳಗೆ, ಪಂಚಾತ್ಮಕನ ರೂಪವ–ಪೂರ್ವೋಕ್ತ ಅನಿರುದ್ಧಾದಿ ಪಂಚರೂಪಗಳಿಂದ ಪ್ರಚುರವಾದ ಅಖಂಡರೂಪವ, ನೋಡು–ಅನುಸಂಧಾನದಿಂದ ನೋಡಿದವನಾಗಿ (ಪರಮಾತ್ಮನ ಮಹಿಮಾವನ್ನ ), ಕೊಂಡಾಡು–ಅವನ ಗುಣಗಳನ್ನು ಕೊಂಡಾಡು.

**ತಾ॥** ಸರ್ವ ಪ್ರಾಣಿಗಳಲ್ಲಿ ಸರ್ವವ್ಯಾಪಾರಗಳು ನಡಿಸತಕ್ಕದ್ದು ಈ ಐದು ರೂಪ ಗಳೇ. ಅನಂತಾನಂತರೂಪಗಳು. ಈ ರೂಪಗಳಿಂದ ವ್ಯಕ್ತವಾಗಿ ಅನಂತಾನಂತ ನಾಮ ಗಳಿಂದ ವ್ಯಾಪಾರಗಳು ನಡೆಯುತ್ತವೆ. ಯುಗಪ್ರವರ್ತಕವಾದ ನಾರಾಯಣಾದಿ ಪಂಚ ರೂಪಗಳು ನಾರಾಯಣ ವ್ಯತಿರಿಕ್ತ ನಾಲ್ಕು ರೂಪಗಳು. ನಾಲ್ಕು ಯುಗಧರ್ಮಗಳು ಪ್ರಾಚುರ್ಯಾಪ್ರಾಚುರ್ಯದಿಂದ ಪ್ರತಿದಿನದಲ್ಲಿಯೂ ಪ್ರಾಣಿಗಳ ದ್ವಾರಾ ಮಾಡಸ ತಾನೆಂತ ತಾತ್ಪರ್ಯ.

**ತನುವಿಶಿಷ್ಟದಿ ಇಪ್ಪ ನಾರಾ ।**
**ಯಣನು ಕಟಿಪಾದಾಂತ ಸಂಕರು ।**
**ಷಣನು ಶಿರಜಘನಾಂತವಾಗಿಹ ವಾಸುದೇವಾಖ್ಯ ॥**

**ಅನಿಮಿಷೇಷನಿರುದ್ಧ ಪ್ರದ್ಯು ।**
**ಮ್ನನು ಎಡದಿ ಬಲಭಾಗದಲ್ಲಿ ಚಿಂ ।**
**ತನೆಯ ಮಾಳ್ಪರಿಗುಂಟೆ ಮೈಲಿಗೆ ವಿಧಿನಿಷೇಧಗಳು ॥ ೧೭ ॥**

ಕವಚಾಕಾರದಿಂದ ಇದ್ದು ಸಂರಕ್ಷಣ ಮಾಡತಾನೆಂತ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಮೈಲಿಗೆ ಪರಿಹಾರವಾಗತಕ್ಕ ಅನುಸಂಧಾನ ಹೇಳತಾರೆ. ಮೈಲಿಗೆ ಪರಿಹಾರ ಮಾಡತಕ್ಕ ರೂಪಗಳು ದೇಹದಲ್ಲಿ ಇರತಕ್ಕ ಕ್ರಮ.

ತನುವಿಶಿಷ್ಟದಿ – ಸ್ಥೂಲದೇಹದ ಉಂಗುಷ್ಟ ಆರಂಭಮಾಡಿ ಶಿರಃ ಪರಿಯಂತ, ನಾರಾಯಣನು–ನಾರಾಯಣರೂಪಿ ಪರಮಾತ್ಮ, ಇಪ್ಪ–ವ್ಯಾಪ್ತನಾಗಿದ್ದಾನೆ. ಕಟಿ ಪಾದಾಂತ ಸಂಕರುಷಣನು–ಟೊಂಕ ಆರಂಭಮಾಡಿ ಪಾದಾಂತವರಿಗೂ ಸಂಕರ್ಷಣರೂಪಿ ಪರಮಾತ್ಮ (ಇದ್ದಾನೆ). ಶಿರಜಘನಾಂತವಾಗಿಹ ವಾಸುದೇವಾಖ್ಯ–ಶಿರಜಘನಾಂತವಾಗಿ ತಲೆ ಆರಂಭಮಾಡಿ ಮೊಳಕಾಲು ಕೆಳಗೆ ಪಾದ ಬಿಟ್ಟು ತುರ್ಯ (ತುರೀಯ) ಪ್ರದೇಶ ಅಂತ್ಯದವರೆಗೂ, ವಾಸುದೇವಾಖ್ಯ–ವಾಸುದೇವ ಎಂತ ಹೆಸರು ಹೊತ್ತ ಪರಮಾತ್ಮನು ಇದ್ದಾನೆ. ಅನಿಮಿಶೇಷ–ದೇವತೆಗಳಿಗೆ ಸ್ವಾಮಿಯಾದಂಥಾ, ಅನಿರುದ್ಧ–ಅನಿರುದ್ಧರೂಪಿ ಪರಮಾತ್ಮ, ಎಡದಿ–ಎಡಭಾಗದಲ್ಲಿ (ಇದ್ದಾನೆ). ಪ್ರದ್ಯುಮ್ನ–ಪ್ರದ್ಯುಮ್ನರೂಪಿ ಪರಮಾತ್ಮ ಬಲಭಾಗದಲ್ಲಿ(ಇದ್ದಾನೆ). (ಪೂರ್ವೋಕ್ತಪ್ರಕಾರ ಭಗವದ್ರೂಪಗಳ ಅನುಸಂಧಾನದಿಂದ, ಚಿಂತನೆಯ ಮಾಳ್ಪರಿಗೆ–ತದ್ದ್ವಾರಾ ಆಗತಕ್ಕ ಬಿಂಬಪ್ರತಿಬಿಂಬಕ್ರಿಯಾ ಚಿಂತನಿ ಮಾಡೋವರಿಗೆ ಮೈಲಿಗಿ ನಿಷೇಧಗಳೂ, ಮೈಲಿಗೆ–ಸ್ಪರ್ಶರೂಪವಾದ ಮೈಲಿಗಿ, ವಿಧಿ–ಮಡಿ ಎನತಕ್ಕ ವಿಧಿಯೇನು, ನಿಷೇಧ–ಮೈಲಿಗಿ ಎನತಕ್ಕ ನಿಷೇಧವೇನು, ಉಂಟೇ–ಏನು ಇಲ್ಲ. ಪೂರ್ವೋಕ್ತ ಪ್ರಕಾರ ಚಿಂತನಿ ಮಾಡೋವರು ಸರ್ವದಾ ಮಡಿಯೇವೇ.

**ತಾ॥** ಜಡದೇಹಭಾಗವನ್ನು ಮರೆತು ಜಡದೇಹಾಂತರ್ಗತವಾಗಿ ಇರತಕ್ಕ ಪೂರ್ವೋಕ್ತಪ್ರಕಾರ ತನ್ನ ಮನ ಜಡದೇಹವನ್ನ ನೋಡದೇ ಸರ್ವದಾ ಅಂತರ್ಗತ ಪರಮಾತ್ಮನ್ನ ದೇವತಾ ಅಧಿಷ್ಠಾನವಲಿ ನೋಡತಾ ಅನುಸಂಧಾನ ಮಾಡತಾ ಇರತಕ್ಕವರು ದಾರೋ ಅಂಥವರು ಸರ್ವದಾ ಮಡಿಯೇ ಹೊರ್ತು ತದನ್ಯರು ಇಲ್ಲ.

ಈ ಪೂರ್ವೋಕ್ತಕ್ಕೆ ದೃಷ್ಟಾಂತ :– ದರ್ಪಣವನ್ನ (ಕನ್ನಡಿ) ನೋಡತಕ್ಕ ಪುರುಷ ದರ್ಪಣದಲ್ಲಿ ಲಕ್ಷ್ಯ ಇಡದೆ ಅಂತರ್ಗತದಲ್ಲಿ ತಿಳಿಯುವ ತನ್ನ ಪ್ರತಿಬಿಂಬವನ್ನ ಮಾತ್ರ ಹ್ಯಾಂಗೆ ಲಕ್ಷ್ಯ ಇಟ್ಟು ನೋಡತಾನೋ ತದ್ವತ್ ದೇಹಾಂತರ್ಗತ ಕವಚಾಕಾರದಿಂದ ಇರತಕ್ಕ ಪೂರ್ವೋಕ್ತ ಅನಿರುದ್ಧಾದಿ ಭಗವದ್ರೂಪಗಳ ಅನುಸಂಧಾನದಿಂದ ಲಕ್ಷ್ಯಯುಕ್ತನಾಗಿ ನೋಡತಕ್ಕ ಭಕ್ತನಿಗೆ ಮೈಲಿಗಿ ವಿಧಿನಿಷೇಧ ಇಲ್ಲ ಎಂತ ತಾತ್ಪರ್ಯ. (೧೬ನೇ ಶ್ಲೋಕಕ್ಕೂ ಇದೇ ತಾತ್ಪರ್ಯ.)

**ಪದುಮನಾಭನು ಪಾಣಿಯೊಳಗಿಹ ।**
**ವದನದಲಿ ಹೃಷೀಕೇಶ ನಾಸಿಕ ।**
**ಸದನದಲಿ ಶ್ರೀಧರನು ಜಿಂಹ್ವದೊಳಿಪ್ಪ ವಾಮನನು ॥**
**ಮೃದುಳ ತ್ವಗ್ದೇಶದಿ ತ್ರಿವಿಕ್ರಮ ।**
**ಮಧು ವಿರೋಧಿಯು ಲೋಚನದಿ ಕ ।**
**ರ್ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ॥ ೧೮ ॥**

ದೇಹಗತ ಚತುರ್ವಿಂಶತಿ ತತ್ವಗತವಾದ ಆಯಾ ಇಂದ್ರಿಯಗಳ ಶುದ್ಧಿಮಾಡತಕ್ಕ ಭಗವದ್ರೂಪಗಳ ಹೇಳತಾರೆ.

ಪದುಮನಾಭನು–ಪದ್ಮನಾಭದೇವರು, ಪಾಣಿಯೊಳಗಿಹ–ಕೈಯಲ್ಲಿ ಇದ್ದಾನೆ. ವದನದಲಿ–ಬಾಯಿಯಲ್ಲಿ, ಹೃಷಿಕೇಶ–ಹೃಷಿಕೇಶನೂ, ನಾಸಿಕಸದನದಲಿ–ಮೂಗಿನ ದ್ವಾರದ್ವಯದಲ್ಲಿ, ಶ್ರೀಧರನು–ಶ್ರೀಧರನೂ, ಜಿಂಹ್ವದೊಳಿಪ್ಪ ವಾಮನನ–ನಾಲಿಗೆಯಲ್ಲಿ ವಾಮನದೇವರೂ ಇದ್ದಾರೆ. ಮೃದುಳ–ಮೃದುಕಠಿಣ ಶೀತೋಷ್ಣಗಳ ತಿಳಿಸಿಕೊಂಡಂಥಾ, ತ್ವಗ್ದೇಶದಿ–ತ್ವಗಿಂದ್ರಿಯಪ್ರದೇಶದಲ್ಲಿ, ತ್ರಿವಿಕ್ರಮದೇವರು ಇದ್ದಾರೆ. ಮಧುವಿರೋಧಿಯು–ಮಧುನಾಮಕ ದೈತ್ಯಗೆ ಶತ್ರುವಾದಂಥಾ ಮಧುಸೂದನದೇವರು, ಲೋಚನದಿ–ನೇತ್ರಗಳಲ್ಲಿ ಇದ್ದಾರೆ. ವಿಷ್ಣುನಾಮಕ–ವಿಷ್ಣುರೂಪಿ ಪರಮಾತ್ಮನು, ಕರ್ಣದಲಿ–ಕಿವಿಗಳಲ್ಲಿ, ಶ್ರವಣನೆಂದೆನಿಸಿ–ದಿಕ್ಪ್ರದರ್ಶನದಿಂದ ತತ್ತದಿಂದ್ರಿಯಗಳಲ್ಲಿ ತತ್ತನ್ನಾಮಗಳಿಂದ ಕರಿಸುತ್ತಾನಾದ್ದರಿಂದ ಶ್ರವಣ ಎಂಬ ಹೆಸರಿನಿಂದ, ಇಪ್ಪನು–ಇದ್ದಾನೆ.

**ತಾ॥** ಈ ಪ್ರಕಾರ ಇಂದ್ರಿಯಗಳಲ್ಲಿ ಇಂದ್ರಿಯಾಕಾರಗಳಿಂದ ಇದ್ದು, ಆಯಾ ಇಂದ್ರಿಯನಾಮಗಳಿಂದ ಕರಿಸೋವನಾಗಿ ಇಂದ್ರಿಯಗಳ ಕಾರ್ಯ ಮಾಡುತಾ ಇದ್ದಾನೆ. ಖಂಡಾಖಂಡರೂಪದಿಂಪ ಅಂದರೆ ಪದ್ಮನಾಭಾದಿ ರೂಪಗಳಿಂದ ನಿಯಾಮಕನಾಗಿ ಇದ್ದಾನೆಂದು ಅನುಸಂಧಾನಮಾಡಬೇಕು. ಇಂದ್ರಿಯಾಕಾರರೂಪ ಪವಿತ್ರ ಮಾಡತಕ್ಕ ರೂಪ. ಪದ್ಮನಾಭಾದಿ ರೂಪಗಳು ತತ್ವನಿಯಾಮಕ ರೂಪಗಳು.

**ಮನದೊಳಿಹ ಗೋವಿಂದ ಮಾಧವ ।**
**ಧನಪಸಖತತ್ತ್ವದಲಿ ನಾರಾ ।**
**ಯಣ ಮಹತ್ತತ್ತ್ವದಲಿ ಅವ್ಯಕ್ತದೊಳು ಕೇಶವನು ॥**
**ಇನಿತು ರೂಪವ ದೇಹದೊಳು ಚಿಂ ।**
**ತನೆಯು ಗೈವ ಮಹಾತ್ಮರಿಳೆಯೊಳು ।**
**ಮನುಜರವರಲ್ಲಮರರೇ ಸರಿ ಹರಿಕೃಪಾಬಲದಿ ॥ ೧೯ ॥**

ಈ ಶ್ಲೋಕದಲ್ಲಿ ತತ್ವಾಂತರ್ಗತ ರೂಪಗಳ ಹೇಳತಾರೆ.

ಮನದಲಿ–ಮನಸ್ತತ್ವದಲ್ಲಿ, ಗೋವಿಂದ–ಗೋವಿಂದನಾಮಕ ಶ್ರೀ ಪರಮಾತ್ಮ, ಇಹ–ಇದ್ದಾನೆ. (ಈ ಮನಸ್ತತ್ವಕ್ಕೆ ಗರುಡ, ಶೇಷ, ರುದ್ರ, ಇಂದ್ರ, ಮನ್ಮಥ ಅಭಿಮಾನಿ ದೇವತೆಗಳು), ಧನಪಸಖತತ್ವದಲಿ– ಧನಪ–ಧನವನ್ನು ಪಾಲನೆ ಮಾಡತಕ್ಕ ಕುಬೇರನಿಗೆ, ಸಖ–ಸ್ನೇಹಿತನಾದ ರುದ್ರದೇವರ, ತತ್ವದಲಿ–ಅಹಂಕಾರತತ್ವದಲ್ಲಿ, ಮಾಧವ–ಮಾಧವ ದೇವರು, ಇಹ–ಇದ್ದಾರೆ. ಮಹತ್ತತ್ವದಲಿ–ಬ್ರಹ್ಮದೇವರ ಅಭಿಮಾನ್ಯಮಾನವಾದ ಮಹತ್ತತ್ವದಲ್ಲಿ, ನಾರಾಯಣ–ನಾರಾಯಣದೇವರು, ಇಹ–ಇದ್ದಾರೆ. ಅವ್ಯಕ್ತದಲಿ– ರಮಾಭಿಮನ್ಯವಾದ ತ್ರಿಗುಣಾತ್ಮಕ ಅವ್ಯಕ್ತತತ್ವದಲ್ಲಿ, ಕೇಶವ–ಕೇಶವನಾಮಕ ಪರಮಾತ್ಮ ಇದ್ದಾನೆ. ಇನಿತು–ಪೂರ್ವೋಕ್ತಪ್ರಕಾರ, ರೂಪವ–ಭಗವದ್ರೂಪವ, ದೇಹದೊಳು–ತನ್ನ ದೇಹದಲ್ಲೇನು, ಅನ್ಯರ ದೇಹದಲ್ಲೇನು, ಯಾವತ್ತರ ದೇಹಗಳೊಳು, ಚಿಂತನೆಯ ಗೈವ– ವ್ಯಾಪಾರಗಳನ್ನು ಅನುಸಂಧಾನ ಮಾಡತಕ್ಕವರೇ ಅಹಂಮಮತಾದಿಗಳು ಬಿಡತಕ್ಕವರು (ಇವರೇ), ಮಹಾತ್ಮರು–ಕೇವಲಜ್ಞಾನಿಗಳು. ಇವರುಗಳು, ಇಳೆಯೊಳು–ಭೂಮಿಯಲ್ಲಿ ಮಾನುಷಶರೀರದಿಂದ ಸಾಧನೆಗಾಗಿ ಅವತಾರಮಾಡಿದ, ಅಮರರೇ ಸರಿ–ದೇವತೆಗಳೆಂ ಬೋದೇ ನಿಶ್ಚಯ. ಮನುಜರವರಲ್ಲ–ಇವರು ಮನುಷ್ಯರಲ್ಲ, ಹರಿಕೃಪಾಬಲದಿ–ಶ್ರೀ ಪರ ಮಾತ್ಮನ ಅಂತಃಕರಣಬಲದಿಂದ ತಮ್ಮ ಸಾಧನೆ ಪೂರ್ತಿ ಆಗೋಣವೇ ವರ್ತಮಾನದೇಹ ಬಿಟ್ಟು ದೇವತಾದೇಹದಿಂದ ದೇವಲೋಕದಲ್ಲಿ ಇರತಾರೆ. ಮನುಷ್ಯರು ದೇವತ್ವವನ್ನು ಐದತಾರೆ ಎಂಬುದು ಇಂಥಾ ಮಾನುಷರೆಂದು ತಾತ್ಪರ್ಯ.

**ನೆಲದೊಳಿಪ್ಪನು ಕೃಷ್ಣರೂಪದಿ ।**
**ಜಲದೊಳಿಪ್ಪನು ಹರಿಯೆನಿಸಿ ಶಿಖಿ ।**
**ಒಳಗೆ ಇಪ್ಪನು ಪರಶುರಾಮನುಪೇಂದ್ರನೆಂದೆನಿಸಿ ॥**
**ಎಲರೊಳಿಪ್ಪ ಜನಾರ್ಧನನು ಬಾಂ ।**
**ದಳದೊಳಚ್ಯುತ ಗಂಧ ನರಹರಿ ।**
**ಪೊಳೆವಧೋಕ್ಷಜ ರಸಗಳೊಳು ರಸರೂಪ ತಾನಾಗಿ ॥ ೨೦ ॥**

ದೇಹತತ್ವಗತ ಭಗವದ್ರೂಪಗಳ ಹೇಳತಾರೆ.

ನೆಲದೊಳಿಪ್ಪನು ಕೃಷ್ಣರೂಪದಿ– ನೆಲದೊಳು–ದೇಹಗತ ಪೃಥ್ವೀತತ್ವದೊಳು, ಕೃಷ್ಣರೂಪದಿ–ಕೃಷ್ಣರೂಪಿ ಪರಮಾತ್ಮನು, ಇಪ್ಪನು–ಇದ್ದಾನೆ. ಜಲದೊಳಿಪ್ಪನು ಹರಿ ಯೆನಿಸಿ– ಜಲದಲಿ–ಅಪ್ಪುತತ್ವದಲ್ಲಿ, ಹರಿಯೆನಿಸಿ–ಹರಿನಾಮಕ ಪರಮಾತ್ಮ ವರುಣಾಂತ ರ್ಗತನಾಗಿ, ಇಪ್ಪನು–ಇದ್ದಾನೆ. ಶಿಖಿ ಒಳಗೆ ಇಪ್ಪನು ಪರಶುರಾಮನು ಉಪೇಂದ್ರನೆನಿಸಿ– ಶಿಖಿ ಒಳಗೆ–ಅಗ್ನಿತತ್ವದೊಳಗೆ, ಉಪೇಂದ್ರನೆಂದೆನಿಸಿ–ಉಪೇಂದ್ರ ಎಂತ ಕರೆಸಿದವನಾಗಿ, ಪರಶುರಾಮನು–ಪರಶುರಾಮದೇವರು, ಇಪ್ಪನು–ಇದ್ದಾನೆ. ಎಲರೊಳು–ವಾಯುತತ್ವ ದಲ್ಲಿ, ಜನಾರ್ದನನು–ಜನಾರ್ದನರೂಪಿ ಪರಮಾತ್ಮ, ಇಪ್ಪ–ಇದ್ದಾನೆ. ಬಾಂದಳ ದೊಳಚ್ಯುತ– ಬಾಂದಳದೊಳು–ಆಕಾಶತತ್ವದಲ್ಲಿ, ಅಚ್ಯುತರೂಪಿ ಪರಮಾತ್ಮ, ಇಪ್ಪ–

ಇದ್ದಾನೆ. ಗಂಧ–ಪೃಥ್ವೀತತ್ವದಲ್ಲಿ, ನರಹರಿ–ನರಸಿಂಹನಾಮಕ ಪರಮಾತ್ಮ ಇದ್ದಾನೆ. ರಸಗಳೊಳು–ಉದಕಾಶ್ರಯವಾದ ಉದಕಗುಣವಾದ ಆಮ್ಲಾದಿ ಆರು ರಸಗಳಲ್ಲಿ, ಹೊಳೆವಧೋಕ್ಷಜ–ಪ್ರಕಾಶಮಾನನಾದ ಅಧೋಕ್ಷಜಮೂರ್ತಿ, ರಸರೂಪ ತಾನಾಗಿ–ರಸಾಕಾರದಿಂದ ರಸರೂಪನಾಗಿ ಇರತಾನೆ.

**ತಾ||** ಅಖಂಡರೂಪದಿಂದ ಇಂದ್ರಿಯಗಳ ದೇಹಗತ ಪಂಚಭೂತಗಳ ಪವಿತ್ರವು, ಖಂಡರೂಪದಿಂದ ಇಂದ್ರಿಯಗಳ ನಿಯಮನವು ಮಾಡತಾನೆಂದು ಅನುಸಂಧಾನ ಮಾಡಬೇಕು.

**ರೂಪ ಪುರುಷೋತ್ತಮನು ಸ್ಪರ್ಶ |**
**ಪ್ರಾಪಕನು ಅನಿರುದ್ಧ ಶಬ್ದದಿ |**
**ವ್ಯಾಪಿಸಿಹ ಪ್ರದ್ಯುಮ್ನುಪಸ್ಥದಿ ವಾಸುದೇವನಿಹ ||**
**ತಾ ಪೊಳೆವ ಪಾಯುಸ್ಥನಾಗಿ ಜ |**
**ಯಾಪತಿಯು ಸಂಕರುಷಣನು ಸು |**
**ಸ್ಥಾಪಕನು ಅಹ ಪಾದದೊಳು ದಾಮೋದರನು ಪೊಳೆವ || ೨೦ ||**

ಇನ್ನೂ ದೇಹತತ್ವ, ತದ್ಗತ ಭಗವದ್ರೂಪಗಳ ಹೇಳತಾರೆ.

ರೂಪ ಪುರುಷೋತ್ತಮನು–ಅಗ್ನಿಗುಣವಾದ ರೂಪದಲ್ಲಿ ಸಮಾನವಾಯ್ವಂತರ್ಗತ ಪುರುಷೋತ್ತಮನಾಮಕ ಪರಮಾತ್ಮನು ಇದ್ದಾನೆ. ಸ್ಪರ್ಶಪ್ರಾಪಕನು–ವಾಯುಗುಣವಾದ ಸ್ಪರ್ಶತತ್ವದಲ್ಲಿ ಅಪಾನನಾಮಕ ವಾಯ್ವಂತರ್ಗತ, ಅನಿರುದ್ಧ–ಅನಿರುದ್ಧನಾಮಕ ಪರಮಾತ್ಮನು, ಶಬ್ದದಿ ವ್ಯಾಪಿಸಿಹ–ಆಕಾಶಗುಣವಾದ ಶಬ್ದದಲ್ಲಿ ಇರತಕ್ಕವನು ಪ್ರಾಣವಾಯ್ವಂತರ್ಗತ, ಪ್ರದ್ಯುಮ್ನ–ಪ್ರದ್ಯುಮ್ನನಾಮಕ ಪರಮಾತ್ಮನು, ಉಪಸ್ಥದಿ–ಕರ್ಮೇಂದ್ರಿಯವಾದ ಉಪಸ್ಥತತ್ವ ಎಂದರೆ ಮೂತ್ರವಿಸರ್ಜನಲಿಂಗ ಎಂತ ನಾಮ. ಈ ತತ್ವದಲ್ಲಿ ಸ್ವಾಯಂಭುವನು, ವಾಸುದೇವನು–ಇವನಂತರ್ಗತದಲ್ಲಿ (ಸ್ವಾಯಂಭುವನಂತರ್ಗತದಲ್ಲಿ) ವಾಸುದೇವರೂಪಿ ಪರಮಾತ್ಮ, ತಾ ಪೊಳೆವ ಪಾಯುಸ್ಥನಾಗಿ–ಪ್ರಕಾಶನಾದ ತಾನು ಮಲವಿಸರ್ಜನಕರ್ಮಕಾರ್ಯತತ್ವವಾದ ಪಾಯುತತ್ವದಲ್ಲಿ ತದಾಕಾರನಾಗಿ, ಜಯಾಪತಿಯು ಸಂಕರ್ಷಣನು–ಜಯಾನಾಮಕ ಲಕ್ಷ್ಮೀಪತಿಯಾದ ಪರಮಾತ್ಮನು ಮಿತ್ರನಾಮಕ ಸೂರ್ಯಾಂತರ್ಗತನಾಗಿ ಇದ್ದಾನೆ. ಪಾದದೊಳು–ಪಾದತತ್ವದಲ್ಲಿ ಇರತಕ್ಕವನು ಜಯಂತನಾಮಕ ದೇವತಾ. ಇವನಂತರ್ಗತದಲ್ಲಿ, ದಾಮೋದರನು ಪೊಳೆವ–ದಾಮೋದರನಾಮಕ ಪರಮಾತ್ಮ ಪ್ರಕಾಶಮಾನನಾಗಿ ಇದ್ದಾನೆ. ಸುಸ್ಥಾಪಕನು ಅಹ–ಪಾದಾಧಾರದಿಂದ ದೇಹವನ್ನು ಛಂದಾಗಿ ನಿಲ್ಲುವಂತೆ ಆಧಾರಮಾಡತಾನೆ. ಈ ಪ್ರಕಾರ ದೇಹತತ್ವದಲ್ಲಿ, ಬಾಹ್ಯತತ್ವದಲ್ಲಿ ತಿಳಿಯಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಪೊಳೆವ ಎಂತ ಎರಡು ಆವೃತ್ತಿ ಅದೆ. ತತ್ವಗಳಲ್ಲಿ ಇದ್ದು ಹೊಳೆಯತಕ್ಕ ಪರಮಾತ್ಮನ ಅನುಸಂಧಾನ ಮಾಡತಕ್ಕವರ ಮನಸ್ಸಿಗೆ ಪೊಳೆವ ಎಂತ ಎರಡಕ್ಕೂ ಕೃತ್ಯವು.

**ಚತುರವಿಂಶತಿ ತತ್ವದೊಳು ಶ್ರೀ ।**
**ಪತಿಯು ಅನಿರುದ್ಧಾದಿ ರೂಪದಿ ।**
**ವಿತತನಾಗಿದ್ದಖಿಳ ಜೀವರ ಸಂಹನನದೊಳಗೆ ॥**
**ಪ್ರತತಿಯಂದದಿ ಸುತ್ತಿ ಸುತ್ತುತ ।**
**ಪಿತೃಗಳಿಗೆ ತರ್ಪಕನೆನಿಸಿಕೊಂ ।**
**ಡತುಳಮಹಿಮನು ಷಣ್ಣವತಿನಾಮದಲಿ ನೆಲಸಿಹನು ॥ ೨೨ ॥**

ಹಿಂದಿನ ಶ್ಲೋಕದಲ್ಲಿ ದೇಹತತ್ವ ತದಂತರ್ಗತ ರೂಪಗಳ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಆಯಾ ತತ್ವಾಂತರ್ಗತ ಪಿತೃಗಳಿಗೆ ತೃಪ್ತಿಗೆ ಕಾರಣವಾದ ರೂಪಗಳು ಎಷ್ಟು, ಆಯಾ ರೂಪಗಳು ದಾವದು, ಆ ರೂಪಗಳಿಗೆ ಆವಾಸ ಎಲ್ಲಿ ? ಈ ವಿವರಗಳನ್ನು ಹೇಳತಾರೆ.

ಚತುರವಿಂಶತಿತತ್ವದೊಳು–ಇಪ್ಪತ್ತುನಾಲ್ಕು ತತ್ವದಲ್ಲಿ, ಶ್ರೀಪತಿಯು–ಲಕ್ಷ್ಮೀಪತಿಯಾದ ಪರಮಾತ್ಮನು, ಅನಿರುದ್ಧಾದಿ ರೂಪದಿ–ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಈ ನಾಲ್ಕು ರೂಪದಿಂದ ಪ್ರತ್ಯೇಕವಾಗೆ, ವಿತತವಾಗಿದ್ದು–ವ್ಯಾಪ್ತನಾಗಿದ್ದು, ಅಖಿಳಜೀವರ–ಸಮಸ್ತಜೀವರ, ಸಂಹನನದೋಳಗೆ–ದೇಹದೊಳಗೆ, ಪ್ರತತಿಯಂದದಿ–ಚಿತ್ರದೋಪಾದಿಯಲ್ಲಿ, ಸುತ್ತಿಸುತ್ತುತ–ಸುತ್ತಿಕೊಂಡು ಸಂಚಾರ ಮಾಡುತಾ, ಪಿತೃಗಳಿಗೆ–ತನ್ನ ಪಿತೃಗಳಾದ ಪಿತೃಪಿತಾಮಹಾದಿ ಪಿತೃಗಳಿಗೆ, ತರ್ಪಕನೆನಿಸಿಕೊಂಡು–ತೃಪ್ತಿಪಡಿಸತಕ್ಕವನೆಂದು ಎನಿಸಿಕೊಂಡು (ಅಂದರೆ ಈ ಪಾಂಚಭೌತಿಕ ಸ್ಥೂಲಶರೀರ ತನ್ನ ಮಾತಾಪಿತೃಗಳ ಅಂಶವಾದ ಪ್ರಯುಕ್ತ ಈ ಶರೀರದಿಂದ ಮಾಡಲ್ಪಟ್ಟ ಕಾರ್ಯಾಕಾರ್ಯಗಳಲ್ಲಿ ಪಿತೃಗಳಿಗೆ ಭಾಗ ಇರೋದಾಗಿ ಅದೆ. ಮಾತಾಪಿತೃಗಳ ದೇಹಾಂಶಪ್ರಯುಕ್ತವಾಗಿ (ಇದರ ವಿಸ್ತಾರ ಹಿಂದೆ ಹೇಳಿದ ಭೋಜನರಸವಿಭಾಗಸಂಧಿಯಾದ ನಾಲ್ಕನೇ ಸಂಧಿಯಲ್ಲಿ ವಿಸ್ತಾರವಾಗಿ ಹೇಳಿದೆ). ಅತುಳಮಹಿಮನು–ಅಸದೃಶನಾದ ಮಹಾಮಹಿಮನು, ಷಣ್ಣವತಿನಾಮದಲಿ– ತೊಂಬತ್ತಾರು ನಾಮದಿಂದ ಅಂದರೆ ೨೪ ತತ್ವದಲ್ಲಿ ಒಂದೊಂದರಲ್ಲಿ ಅನಿರುದ್ಧಾದಿ ನಾಲ್ಕು ರೂಪದ ಪ್ರಾಯಿಗೆ ೨೪ರನ್ನ ೪ರಿಂದ ಗುಣಿಸಿದರೆ ೯೬ ಆಗತದೆ. ಮತ್ತು ಷಣ್ಣವತಿ ಶ್ರಾದ್ಧಗಳಿಗೆ ದಾವ ನಾಮವೋ ಆಯಾ ನಾಮದಿಂದಲೂ ಅನಿರುದ್ಧಾದಿ ನಾಮದಿಂದಲೂ, ನೆಲಸಿಹನು–ಆವಾಸನಾಗಿದ್ದು ಅವರ ಪಿತೃಗಳಿಗೆ ತೃಪ್ತಿಪಡಿಸತಾನೆ ಎಂತ ತಾತ್ಪರ್ಯ.

**ಚತುರವಿಂಶತಿ ತತ್ತ್ವದೊಳು ತ ।**
**ತ್ಪತಿಗಳೆನಿಸುವ ಬ್ರಹ್ಮಮುಖ ದೇ ।**
**ವತೆಗಳೊಳು ಹನ್ನೊಂದುನೂರೈವತ್ತೆರಡು ರೂಪ ॥**
**ವಿತತನಾಗಿದ್ದೆಲ್ಲ ಜೀವರ ।**
**ಜತನ ಮಾಡುವಗೋಸುಗ ಜಗ ।**
**ತ್ಪತಿಗೆ ಏನಾದರು ಪ್ರಯೋಜನವಿಲ್ಲವಿದರಿಂದ ॥ ೨೩ ॥**

ಹಿಂದಿನ ಶ್ಲೋಕದಲ್ಲಿ ಇಪ್ಪತ್ತುನಾಲ್ಕು ರೂಪದಿಂದ ದೇಹಧಾರಿಗಳಾದವರ, ತೊಂಬತ್ತಾರು ರೂಪಗಳಿಂದ ಪಿತೃಗಳ ಸಂರಕ್ಷಣೆ ಮಾಡತಾನೆಂತ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಇಪ್ಪತ್ತುನಾಲ್ಕು ರೂಪದಿಂದಲೇ ದೇಹಧಾರಿಗಳ ಸಂರಕ್ಷಣ, ಅಲ್ಲಿ ಇನ್ನೂ ಅಧಿಕ ರೂಪಗಳ ಧರಿಸಿ ರಕ್ಷಿಸತಾನೆ ಎಂತ ಹೇಳತಾರೆ. ಆ ರೂಪಗಳು ಎಷ್ಟು ಎಂದರೆ ಅದರ ವಿವರ :—

ಚತುರವಿಂಶತಿತತ್ವದೊಳು—ಜೀವ ಸ್ಥೂಲದೇಹಗತ ತತ್ವಗಳು ಇಪ್ಪತ್ನಾಲ್ಕು. ಈ ೨೪ ತತ್ವದಲ್ಲಿ ಸಂಸೃಷ್ಟ ತತ್ವಗಳು ಇಪ್ಪತ್ತುನಾಲ್ಕು ವ್ಯಾರಿಗೆ ಆಗತಕ್ಕ ತತ್ವಗಳು (೫೭೬) ೨೪×೨೪ ಐನೂರುಪ್ಪತ್ತಾರು ತತ್ವಗಳು, ಅಷ್ಟೇ ಸಂಖ್ಯಾ ಭಗವದ್ರೂಪಗಳು, ತತ್ಪತಿಗಳೆನಿಸುವ—ಆಯಾ ತತ್ವಗಳಿಗೆ ಅಭಿಮಾನಿಗಳು ಎಂದು ಕರಿಸತಕ್ಕ, ಬ್ರಹ್ಮಮುಖ—ಬ್ರಹ್ಮದೇವರೇ ಮೊದಲಾದ, ಚತುರವಿಂಶತಿ ದೇವತೆಗಳೊಳು—ಇಪ್ಪತ್ತುನಾಲ್ಕು ತತ್ವಾಭಿಮಾನಿ ದೇವತೆಗಳ ಸ್ಥೂಲದೇಹಗಳೊಳು ಎಂದರೆ ಒಬ್ಬೊಬ್ಬ ದೇವತೆಯಲ್ಲಿ ಒಂದೊಂದು ತತ್ವದಲ್ಲಿ ಸಂಸೃಷ್ಟ ತತ್ವಗಳು ಇಪ್ಪತ್ತುನಾಲ್ಕು ವ್ಯಾರಿಗೆ ಆಗತಕ್ಕ ತತ್ವಗಳು ೫೭೬ ಎಂದು ದೇವತಾ ಶರೀರದಲ್ಲಿ ಅಷ್ಟೇ ಸಂಖ್ಯಾ ಭಗವದ್ರೂಪಗಳು. ೫೭೬ ಜೀವ ಸ್ಥೂಲದೇಹಗತ ಭಗವದ್ರೂಪಗಳು, ೫೭೬ ಒಬ್ಬ ದೇವತಾಶರೀರಗತ ಭಗವದ್ರೂಪಗಳು ೧೧೫೨ ಎಂದರೆ, ಹನ್ನೊಂದು ನೂರಐವತ್ತೆರಡು—ಜೀವನ ಸ್ಥೂಲಶರೀರಗತ, ಒಬ್ಬ ದೇವತಾಶರೀರಗತ, ಈ ಉಭಯಗತ ಭಗವದ್ರೂಪಗಳ ಸಂಖ್ಯಾ ೧೧೫೨ ಆಗತದೆ. ಈ ರೀತ್ಯಾ ದೇವತಾ, ಮಾನುಷ ಪ್ರತಿ ಜೀವರಲ್ಲೂನೂ ೫೭೬ ಭಗವದ್ರೂಪಗಳ ವ್ಯಾರಿಗೆ ತಿಳಿಯಬೇಕು.

ಒಂದೊಂದು ದೇವತೆಯಲ್ಲಿ ೫೭೬ ವ್ಯಾರಿಗೆ ೨೪ ದೇವತೆಗಳಲ್ಲಿ ಆಗೋ ಭಗವದ್ರೂಪಗಳು (೫೭೬×೨೪) ೧೩೮೨೪. ಜೀವನ ದೇಹಗತ ಭಗವದ್ರೂಪಗಳು ಅಂತು ೧೩೮೨೪+೫೭೬=೧೪೪೦೦ ಅಂದರೆ ಹದಿನಾಲ್ಕುಸಾವಿರದ ನಾಲ್ಕುನೂರು ಆಗತದೆ. ಈ ಪ್ರಕಾರ ಪ್ರತಿಜೀವರಲ್ಲಿ, ರೂಪ—ಇಷ್ಟು ರೂಪಗಳಿಂದ, ವಿತತನಾಗಿದ್ದೆಲ್ಲ ಜೀವರ—ಸಮಸ್ತ ಜೀವರಲ್ಲಿ ವ್ಯಾಪ್ತನಾಗಿ ಇದ್ದು, ಜತನಮಾಡುವಗೋಸುಗ—ಸಂರಕ್ಷಣ ಮಾಡುವುದಕ್ಕೋಸ್ಕರ, ತತ್ವಾಭಿಮಾನಿಗಳಾದ ದೇವತೆಗಳ ದೇಹದಲ್ಲಿ ಪ್ರವೇಶ ಮಾಡಿಸೋವನಾಗಿ ಇದ್ದಾನೆ. ದೇವತೆಗಳಿಂದ ಸಹಿತನಾಗಿ ತಾನಿದ್ದು ಸಂರಕ್ಷಣ ಮಾಡತಾನೆ.

ಜಗತ್ಪತಿಗೆ–ಈ ಪ್ರಕಾರ ಇರುವ ಪರಮಾತ್ಮಗೆ, ಇದರಿಂದ ಏನಾದರೂ–ಈ ಜೀವರ ಸಂರಕ್ಷಣದಿಂದ ಸ್ವಪ್ರಯೋಜನ ಏನಾದರೂ ಉಂಟೋ ಎಂದರೆ ದಾವ ಮಾತ್ರವಾದರೂ, ಪ್ರಯೋಜನವಿಲ್ಲ–ಸರ್ವಶ್ರೇಷ್ಠನಾಗಿ ಸ್ವಸಾಮರ್ಥ್ಯದಿಂದ ಇದ್ದಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಶ್ರೀ ಪರಮಾತ್ಮಗೆ ಸ್ವಪ್ರಯೋಜನವಿಲ್ಲ ಎಂತ ಹೇಳಿತು. ಆದರೆ ಪರಪ್ರಯೋಜನ ಏನಾದರೂ ಉಂಟೋ ಎಂದರೆ ಜೀವರ ಉದ್ಧಾರ ಮಾಡೋಣವೇ. ಈ ಸೃಷ್ಟ್ಯಾದಿ ವ್ಯಾಪಾರಗಳಿಂದ ಯಾಕೆ ಇಲ್ಲಾ ಎಂದರೆ ಪೂರ್ಣಕಾಮನಾದ ಪ್ರಯುಕ್ತ ಪ್ರಯೋಜನರಹಿತ ಎಂತ ತಾತ್ಪರ್ಯ. ಚತುರ್ವಿಂಶತಿ ತತ್ವ ಎಂತ ಪ್ರಯೋಗವದೆ. ರಮಾಭಿಮನ್ಯಮಾನವಾದ ತ್ರಿಗುಣತತ್ವದ ಕೂಡ ಚತುರ್ವಿಂಶತಿ ತತ್ವಗಳು ಆಗತದೆ. ಬ್ರಹ್ಮದೇವರದಾರಭ್ಯ ತತ್ವಾಭಿಮಾನಿಗಳು ಎಂತ ಹೇಳಿ ಇರೋಣದರಿಂದ ರಮಾಭಿಮನ್ಯ ಮಾನತತ್ವ ವ್ಯಾವರ್ತವಾಯಿತು. ಲಕ್ಷ್ಮೀತತ್ವ ವ್ಯಾವರ್ತನವಾದಮೇಲೆ ತತ್ವಗಳು ಇಪ್ಪತ್ತಮೂರೇ ಆಯಿತು. ಬ್ರಹ್ಮನದಾರಭ್ಯ ಇಪ್ಪತ್ತುನಾಲ್ಕು ತತ್ವಗಳು ಹ್ಯಾಂಗಾಗುತ್ತದೆ ಎಂದರೆ ಸಮಾಧಾನ :– ತತ್ವನ್ಯಾಸದಲ್ಲಿ “ಅವ್ಯಕ್ತಸ್ಥಾನೇ ಬ್ರಹ್ಮಾಣೀಭಾರತೀಭ್ಯಾಂ ನಮಃ” ಎಂತ ಹೇಳಿ ಇರೋಣದರಿಂದ ಮಹತ್ತತ್ವದಲ್ಲಿ ವಿಭಾಗವದೆ. ಬ್ರಹ್ಮಾಣೀ ಭಾರತೀ ಅಭಿಮನ್ಯಮಾನವಾದ ಅವ್ಯಕ್ತತತ್ವ ಸೇರಿಕೊಂಡು ಇಪ್ಪತ್ತುನಾಲ್ಕು ತತ್ವ ಎಂತ ತಾತ್ಪರ್ಯ. ಭಾರತೀರಮಣಮುಖ್ಯಪ್ರಾಣಾಂತರ್ಗತವರಿಗೂ ಚತುರ್ವಿಂಶತಿ ತತ್ವಗಳು, ಲಕ್ಷ್ಮ್ಯಂತರ್ಗತ ತಿಳಿಯಬೇಕಾದರೆ ಪಂಚವಿಂಶತಿ ತತ್ವಗಳು ಆಗತದೆ. ವಿವಕ್ಷಾಭೇದದಿಂದ ಷಡ್ವಿಂಶತಿ ತತ್ವಗಳು ಕೂಡ ಆಗತದೆ. ಅತ ಏವ ಸಂಧ್ಯಂತರದಲ್ಲಿ ಚತುರ್ವಿಂಶತಿಗಾನೆನಿಸಿ ಪಂಚವಿಂಶತಿಗಾನೆನಿಸಿ ಎಂತ ಹೇಳಿ ಇದ್ದಾರೆ. ಇಪ್ಪತ್ತಾರು ಹ್ಯಾಂಗೆಂದರೆ, ಅಹಂಕಾರತತ್ವ, ವೈಕಾರಿಕತತ್ವ, ತೈಜಸ, ತಾಮಸ, ಈ ಮೂರು ಪ್ರತ್ಯೇಕ ಪ್ರತ್ಯೇಕ ವಿವಕ್ಷಾದಿಂದ ಇಪ್ಪತ್ತಾರು ಆಗತದೆ ಎಂತ ತಿಳಿಯಬೇಕು. ೧೧೩೩ ರೂಪದಿಂದ ಜೀವರನ್ನು ಸ್ವಾಮಿ ಸಂರಕ್ಷಣ ಮಾಡತಾನೆಂದು ಅನುಸಂಧಾನ ಮಾಡಬೇಕು.

**ಇಂದಿರಾಧವ ಶಕ್ತಿ ಮೊದಲಾ ।**
**ದೊಂದಧಿಕ ದಶರೂಪದಿಂದಲಿ ।**
**ಪೊಂದಿಹನು ಸಕಲೇಂದ್ರಿಯಗಳಲಿ ಪುರುಷನಾಮಕನು ।**
**ಸುಂದರಪ್ರದ ಪೂರ್ಣಜ್ಞಾನಾ ।**
**ನಂದಮಯ ಚಿದ್ದೇಹದೊಳು ತಾ ।**
**ವಂದರೆಕ್ಷಣವಗಲದಲೆ ಪರಮಾಪ್ತನಾಗಿಪ್ಪ ॥ ೨೪ ॥**

ಈ ಶ್ಲೋಕದಲ್ಲಿ ಪೂರ್ವೋಕ್ತ ಇಂದ್ರಿಯಗತ ರೂಪಗಳಲ್ಲದೆ ಪ್ರತ್ಯೇಕ ರೂಪಗಳ ಹೇಳಿಧಾರೆ. ದಾವ ದಾವ ರೂಪ, ದಾವ ದಾವ ಇಂದ್ರಿಯದಲಿ ಎಂದರೆ ವಿವರ.

| | | | |
|---|---|---|---|
| ೧. | ಮನದಲ್ಲಿ | — | ಶಕ್ತಿನಾಮಕ ಪರಮಾತ್ಮ |
| ೨. | ಕರ್ಣದಲ್ಲಿ | — | ಸಂವಿದ್ ನಾಮಕ ಪರಮಾತ್ಮ |
| ೩. | ನೇತ್ರದಲ್ಲಿ | — | ಪ್ರತಿಷ್ಠಾನಾಮಕ ಪರಮಾತ್ಮ |
| ೪. | ತ್ವಕ್ಕಿನಲ್ಲಿ | — | ಸ್ಫೂರ್ತಿನಾಮಕ ಪರಮಾತ್ಮ |
| ೫. | ಜಿಂಹ್ವೆಯಲ್ಲಿ | — | ಪ್ರಕೃತಿನಾಮಕ ಪರಮಾತ್ಮ |
| ೬. | ನಾಸಿಕೆಯಲ್ಲಿ | — | ಕಳಾನಾಮಕ ಪರಮಾತ್ಮ |
| ೭. | ವದನದಲ್ಲಿ | — | ವಿದ್ಯಾನಾಮಕ ಪರಮಾತ್ಮ |
| ೮. | ಪಾಣಿಯಲ್ಲಿ | — | ಮತಿನಾಮಕ ಪರಮಾತ್ಮ |
| ೯. | ಪಾದದಲ್ಲಿ | — | ನಿಯತಿನಾಮಕ ಪರಮಾತ್ಮ |
| ೧೦. | ಪಾಯುವಿನಲ್ಲಿ | — | ಮಾಯಾನಾಮಕ ಪರಮಾತ್ಮ |
| ೧೧. | ಉಪಸ್ಥದಲ್ಲಿ | — | ಕಾಲನಾಮಕ ಪರಮಾತ್ಮ |
| ೧೨. | ದೇಹಾಕಾರದಲ್ಲಿ | — | ಪುರುಷನಾಮಕ ಪರಮಾತ್ಮ |

ಇಂದಿರಾಧವ–ಲಕ್ಷ್ಮೀಪತಿಯಾದ ಪರಮಾತ್ಮ, ಶಕ್ತಿಮೊದಲಾದೊಂದಧಿಕ ದಶ ರೂಪದಿಂದಲಿ–ಶಕ್ತಿ ಎಂತಲೂ ಪ್ರತಿಷ್ಠಾ ಎಂತಲೂ ಮೊದಲಾಗಿ ಉಳ್ಳ, ಒಂದಧಿಕ ದಶ ಎಂದರೆ ಹನ್ನೊಂದು ರೂಪದಿಂದ, ಪೊಂದಿಹನು–ಆಶ್ರಯ ಮಾಡಿಕೊಂಡು ಇದ್ದಾನೆ. ದಾವದನ್ನು ಎಂದರೆ, ಸಕಲೇಂದ್ರಿಯಗಳಲ್ಲಿ–ಸಮಸ್ತರಾದ ಪ್ರಾಣಿಗಳ ಏಕಾದಶೇಂದ್ರಿಯ ಗಳಲ್ಲಿ, ಪೂರ್ವೋಕ್ತ ನಾಮಗಳಿಂದಲೂ, ಪುರುಷನಾಮಕನು–ದೇಹಾಕಾರ ರೂಪ ದಿಂದಲೂ ಅಂತು ಹನ್ನೆರಡು ರೂಪಗಳಿಂದ ಜೀವರ ಸ್ಥೂಲ ದೇಹದಲಿ ತದ್ಗತ ಇಂದ್ರಿಯ ಗಳಲ್ಲಿ ಇರೋವನಾಗಿದ್ದಾನೆ. (ಇದೇ ಪ್ರಕಾರ ಸರ್ವಜೀವರ ಸ್ವರೂಪ ದೇಹದಲ್ಲಿಯೂ ಇದ್ದಾನೆಂತ ತಿಳಿಯಬೇಕು,) ಸುಂದರಪ್ರದ– ಸುಂದರ–ತ್ರಿವಿಧ ಜೀವರಿಗೆ ಮನೋಹರ ವಾದಂತಾ ಅಂದರೆ ಅವರವರ ಸ್ವರೂಪಕ್ಕೆ ಇಷ್ಟಭೂತವಾದಂತಾ ಜ್ಞಾನವನ್ನು, ಪ್ರದ– ವ್ಯಕ್ತಿಯನ್ನು ಮಾಡಿಕೊಡುವ. ಪೂರ್ಣಜ್ಞಾನಾನಂದಮಯ– ಪೂರ್ಣ–ಸರ್ವ ವಿಷಯ ದಿಂದಲೂ ಪೂರ್ಣನಾದಂಥಾ ಬಿಂಬರೂಪಿ ಪರಮಾತ್ಮ, ಜ್ಞಾನಾನಂದಮಯ–ಜ್ಞಾನ ವೇನು, ಆನಂದವೇನು, ಇವುಗಳಿಗೆ ಪ್ರಚುರನಾದಂಥಾ (ಪರಮಾತ್ಮ) ಚಿದ್ದೇಹದೊಳು– ಜೀವನ ಚಿದ್ದೇಹ ಸ್ವರೂಪದೇಹಗಳೊಳು, ಪೂರ್ವೋಕ್ತ ಪ್ರಕಾರ ೧,೧೫೨ ರೂಪ ಗಳಿಂದಲೂ, ಶಕ್ತ್ಯಾದಿ ರೂಪಗಳಿಂದಲೂ ಇರೋವನಾಗಿ, ಒಂದರಕ್ಷಣಬಿಡದೆ–ಒಂದರ ಕ್ಷಣವಾದರೂ, ಅಗಲದೆ–ಜೀವರ ಬಿಟ್ಟು ಪ್ರತ್ಯೇಕವಾಗದೆ, ಪರಮಾಪ್ತನಾಗಿಪ್ಪ–ಅವರಿಗೆ

ಅತ್ಯಂತ ಸ್ನೇಹಿತನಾಗಿ ಇರೋವನಾಗಿದ್ದಾನೆ. ಅಂದರೆ ಅವರವರ ಇಷ್ಟವನ್ನ ಪೂರ್ತಿ ಮಾಡತಾನಾದ ಪ್ರಯುಕ್ತ ಆಪ್ತನೇ ಸರಿ.

**ತಾ||** ಪೂರ್ವೋಕ್ತ ರೂಪಗಳಿಂದ ಇಂದ್ರಿಯಗಳಲ್ಲಿ ಇದ್ದು ಸ್ವರೂಪಗಳಿಂದ ಇಂದ್ರಿಯಗಳಲ್ಲಿದ್ದು, ಸ್ವರೂಪ, ಬಾಹ್ಯ ಎರಡರಲಿ, ಸ್ವರೂಪಜ್ಞಾನ ಅಭಿವ್ಯಕ್ತ ಮಾಡ ತಕ್ಕ ಕಾರ್ಯ ಶಕ್ತ್ಯಾದಿ ರೂಪಗಳದೂ ಎಂತ ತಿಳಿಯಬೇಕು. ಇವನ ವ್ಯತಿರಿಕ್ತ ಜೀವನ ಸ್ವರೂಪ ದೇಹದಲಿ ಬ್ರಹ್ಮ, ವಾಯು ಮೊದಲಾದ ದಾವ ದೇವತೆಗಳು ಇಲ್ಲ. ಪರಮಾತ್ಮ ಒಬ್ಬನೇ ಇದ್ದಾನೆ. ಬ್ರಹ್ಮಾದಿಗಳಿಗೆ ಇಲ್ಲಿ ಪ್ರವೇಶವು ಇಲ್ಲ.

**ಆರಧಿಕ ದಶರೂಪದಿಂದಲಿ ।**
**ತೋರುತಿಪ್ಪನು ವಿಶ್ವ ಲಿಂಗ ಶ ।**
**ರೀರದೊಳು ತೈಜಸನು ಪ್ರಾಜ್ಞನು ತುರ್ಯನಾಮಕನು ॥**
**ಮೂರರಯಿದು ರೂಪಗಳ ಧರಿಸುತ ।**
**ಲೀರಯಿದು ಕರಣದೊಳು ಮಾತ್ರದಿ ।**
**ಕ್ಷೀರ ಶಿಖಿ ಜಲಭೂಮಿಯೊಳಗಿಹನಾತ್ಮನಾಮದಲಿ ॥ ೨೫ ॥**

ಹಿಂದಿನ ಶ್ಲೋಕದಲ್ಲಿ ಸ್ವರೂಪದೇಹದ ವಿಚಾರ ಹೇಳಿದರು. ಈಗ ಲಿಂಗದೇಹದ ವಿಚಾರವನ್ನು ಹೇಳತಾರೆ. ಲಿಂಗದೇಹ ಷೋಡಶಕಳಾತ್ಮಕವಾದದ್ದು. ಷೋಡಶಕಳಾ ದಾವದೆಂದರೆ ಅದಕ್ಕೆ ವಿವರ.

(೧) ಪ್ರಥಮಾವರಣ ಜೀವನ ಮ್ಯಾಲೆ ಸತ್ವಾವರಣವು. ಇದಕ್ಕೆ ವಿಶ್ವರೂಪಿ ಪರಮಾತ್ಮ. ಇದರಲ್ಲಿ ಇರತಕ್ಕ ವಿಚಾರ.

| | | | |
|---|---|---|---|
| ೧. | ಅವ್ಯಕ್ತ ತತ್ವ | — | ಜ್ಞಾನಾತ್ಮ |
| ೨. | ಮಹತ್ತತ್ವ | — | ಪರಮಾತ್ಮ |
| ೩. | ಅಹಂಕಾರ ತತ್ವ | — | ಅಂತರಾತ್ಮ |
| ೪. | ಮನಸ್ಸು | — | ಆತ್ಮರೂಪಿ ಪರಮಾತ್ಮ |

(೧) ಸತ್ವಾವರಣಕ್ಕೆ ಮೇಲೆ ದ್ವಿತೀಯಾವರಣ ರಜೋ ಆವರಣದಲ್ಲಿ ತೈಜಸ ರೂಪಿ ಪರಮಾತ್ಮ ಇರತಕ್ಕ ವಿಚಾರ.

ಐದು ರೂಪದಿಂದಲಿ ಈರೈದು ಕರಣದಲಿ ಅಂದರೆ,

ಈರೈದು ಕರಣಗಳು – ದಶೇಂದ್ರಿಯಗಳೊಳು

ಐದು ರೂಪಗಳು – ಅನಿರುದ್ಧಾದಿ ಐದು ರೂಪಗಳು.

| | | | | |
|---|---|---|---|---|
| ೧. | ಶ್ರೋತ್ರೇಂದ್ರಿಯ | → ಅನಿರುದ್ಧ | ← | ವಾಗಿಂದ್ರಿಯ |
| ೨. | ನೇತ್ರೇಂದ್ರಿಯ | → ಪ್ರದ್ಯುಮ್ನ | ← | ಪಾಣೀಂದ್ರಿಯ |
| ೩. | ತ್ವಗಿಂದ್ರಿಯ | → ಸಂಕರ್ಷಣ | ← | ಪಾದೇಂದ್ರಿಯ |
| ೪. | ಜಿಹ್ವೇಂದ್ರಿಯ | → ವಾಸುದೇವ | ← | ಪಾಯು ಇಂದ್ರಿಯ |
| ೫. | ನಾಸಿಕೇಂದ್ರೀಯ | → ನಾರಾಯಣ | ← | ಉಪಸ್ಥೇಂದ್ರಿಯ |

ಈ ಐದು ರೂಪಗಳು ದಶೇಂದ್ರಿಯಗಳಲ್ಲಿ ಅವೆ.

(೩) ರಜೋ ಆವರಣದ ಮೇಲೆ ತೃತೀಯಾವರಣ. ತಮೋ ಆವರಣ. ಇದಕ್ಕೆ ಪ್ರಾಜ್ಞರೂಪಿ ಪರಮಾತ್ಮ. ಇದರ ವಿಚಾರ.

ಮಾತ್ರದಿ ಕ್ಷೇರ, ಶಿಖಿ, ಭೂಮಿಯೊಳಗಿಹ ಎಂದರೆ ಪಂಚಭೂತಗಳು, ಪಂಚ ತನ್ಮಾತ್ರಗಳು ಇವ್ರಗಳಲ್ಲಿ ದಾವ ರೂಪಗಳು ಎಂದರೆ, ಪೂರ್ವೋಕ್ತ.

| | | | | |
|---|---|---|---|---|
| ೧. | ಪೃಥಿವಿ | → ಅನಿರುದ್ಧ | ← | ಗಂಥ |
| ೨. | ಅಪ್ಪು | → ಪ್ರದ್ಯುಮ್ನ | ← | ರಸ |
| ೩. | ತೇಜ | → ಸಂಕರ್ಷಣ | ← | ರೂಪ |
| ೪. | ವಾಯು | → ವಾಸುದೇವ | ← | ಸ್ಪರ್ಶ |
| ೫. | ಆಕಾಶ | → ನಾರಾಯಣ | ← | ಶಬ್ದ |

ಈ ಐದು ರೂಪಗಳು ಪಂಚಭೂತ ಮತ್ತು ಪಂಚತನ್ಮಾತ್ರಗಳಲ್ಲಿ ಅವೆ.

ವಿವಕ್ಷಾಭೇದದಿಂದ ತನ್ಮಾತ್ರಗಳು ಪಂಚಭೂತಗಳು ಸೇರಿ ಐದು ಸಂಖ್ಯಾವಾಗ ತದೆ. ಪ್ರತ್ಯೇಕ ಪ್ರತ್ಯೇಕ ಸಂಖ್ಯಾದಿಂದ ಹತ್ತು ಆಗತದೆ. ಆದ್ದರಿಂದ ಈ ತೃತೀಯ ಪರಿಚ್ಛೇದದಲ್ಲಿ ಅನಾದಿರೂಪವಾದ ಜಡವಾದ ಅವಿದ್ಯಾಕಾಮ್ಯಕರ್ಮಗಳು ಜನ್ಮಕ್ಕೆ ಕಾರಣವಿರೋದಾಗಿ ಅದೆ. ಅಂತು ತ್ರಿಗುಣಗಳ ವಿಚಾರವಾಯಿತು. ತುರ್ಯನಾಮಕನು— ತುರ್ಯನಾಮಕನಾದ ಪರಮಾತ್ಮನೇ ಪೂರ್ವೋಕ್ತ ಅನಿರುದ್ಧಾದಿ ರೂಪಗಳ ಧರಿಸಿ ದ್ದಾನೆ ಎಂತ ತಾತ್ಪರ್ಯವು.

ಲಿಂಗಶರೀರ ಷೋಡಶಕಳಾತ್ಮಕ ಎಂಬುವುದಕ್ಕೆ ವಿವರ.

೧ ಪ್ರಥಮಪರಿಚ್ಛೇದವಾದ ಸತ್ವಪರಿಚ್ಛೇದಗತ ಮನಸ್ಸು.

೧೦ ದ್ವಿತೀಯಪರಿಚ್ಛೇದವಾದ ರಜಃಪರಿಚ್ಛೇದಗತ ದಶೇಂದ್ರಿಯಗಳು.

೫ ತೃತೀಯಪರಿಚ್ಛೇದವಾದ ತಮಃಪರಿಚ್ಛೇದಗತ ತನ್ಮಾತ್ರಸಹಿತ ಪಂಚಭೂತಗಳು.

———

೧೬ ಅಂತು ಹದಿನಾರು ಕಳಾ ಎಂತ ತಿಳಿಯಬೇಕು.

ತುರ್ಯನಾಮಕನು—ತುರ್ಯನೇ ಅನಿರುದ್ಧಾದಿ ಐದು ರೂಪಗಳು ಧರಿಸುತ ಎಂತ ತಾತ್ಪರ್ಯ. ಲಿಂಗಶರೀರದೊಳು—ಅನಾದಿ ಲಿಂಗ ಶರೀರದಲ್ಲಿ, ಆರಧಿಕದಶ—ಹದಿನಾರು ಕಳೆಗಳು ಅವೆ. ರೂಪದಿಂದಲಿ—ವಿಶ್ವರೂಪದಿಂದ ಸತ್ವಗುಣದಲ್ಲಿ, ತೈಜಸ ರೂಪದಿಂದ ರಜೋಗುಣದಲ್ಲಿ, ಪ್ರಾಜ್ಞ ರೂಪದಿಂದ ತಮೋ ಗುಣದಲ್ಲಿ ಈ ಮೂರು ರೂಪಗಳಿಂದ, ತೋರುತಿಪ್ಪನು—ದಾವದನ್ನು ತೋರಿಸತಾನೆ ಎಂಪರೆ ಜನನ, ಮರಣ, ಪಾಲನ ಈ ಮೂರನ್ನೂ ಪ್ರಾಣಿಗಳಿಗೆ ತೋರಿಸತಾ ಇರತಾನೆ. (ಎಲ್ಲಿ ಇದ್ದು ಎಂದರೆ), ಲಿಂಗಶರೀರ ದೊಳು—ತ್ರಿಗುಣಾತ್ಮಕ ಲಿಂಗಶರೀರದೊಳಿದ್ದು ತೋರಿಸತಾನೆ. (ವಿಶ್ವ—ಜನನ, ತೈಜಸ—ಪಾಲನ, ಪ್ರಾಜ್ಞ—ಸಂಹಾರ) ಅವರವರ ಕಾರ್ಯಗಳು ಅಂದರೆ ವಿಶ್ವಾದಿ ಮೂರು ರೂಪ ಗಳ ಕಾರ್ಯಗಳು ಎಂತ ತಾತ್ಪರ್ಯ. ತುರ್ಯನಾಮಕನು—ತುರ್ಯನಾಮಕ ವಾಸು ದೇವನು, ಐದು ರೂಪಗಳಿಂದಲಿ—ಅನಿರುದ್ಧಾದಿ ಐದು ರೂಪಗಳ ಧರಿಸಿ, ಆ ಐದು ರೂಪ ದಿಂದಲಿ, ಈರೈದುಕರಣದೊಳು—ರಜೋಗತ ದಶ ಇಂದ್ರಿಯಗಳೊಳು, ಐದು ರೂಪ ಗಳಿಂದ—ಐದು ರೂಪಗಳೇ ಅಂಶವಿಶೇಷಗಳಿಂದ, ಹತ್ತಾಗಿ—ಹತ್ತು ಇಂದ್ರಿಯಗಳಲ್ಲಿ ಆವಾಸ ವಾಗಿದ್ದಾನೆ. ಮಾತ್ರದಿ—ತಮಃಪರಿಚ್ಛೇದ ತನ್ಮಾತ್ರಗಳಲ್ಲಿ, ಖ—ಆಕಾಶದಲ್ಲಿ, ಈರ—ವಾಯುವಿನಲ್ಲಿ, ಶಿಖಿ—ಅಗ್ನಿಯಲ್ಲಿ, ಜಲ—ಉದಕದಲ್ಲಿ, ಭೂಮಿಯಲ್ಲಿ ತಮೋಗತ ಪಂಚ ಭೂತಗಳಲ್ಲಿ ಅಂತು ಹತ್ತರಲ್ಲಿ ವಾಸುದೇವನೇ ಅನಿರುದ್ಧಾದಿ ರೂಪಗಳಿಂದ ಅಂಶವಿಶೇಷ ಗಳಿಂದ ಇದ್ದಾನೆ. ಲಿಂಗಶರೀರದಲ್ಲಿ ಅಖಂಡ ತದಾಕಾರ ರೂಪದಿಂದ ತುರ್ಯ ಇದ್ದಾನೆ. ತುರ್ಯ ಅಂದರೆ ಅಂತ್ಯ. ಶರೀರಗಳೊಳಗೆ ಲಿಂಗಶರೀರ ಅಂತ್ಯಶರೀರವಾದ್ದರಿಂದ ಲಿಂಗ ಶರೀರದಲ್ಲಿ ಅಖಂಡಾಕಾರ ರೂಪ ತುರ್ಯಂದು ಎಂತ ತಾತ್ಪರ್ಯ. ಅಂತು ಐದು ರೂಪ ಗಳು ಆಯಿತು. ಮೂರಯಿದು ರೂಪಗಳಿಂದಲಿ— ಮೂರಯಿದು—ಎಂಟು ರೂಪಗಳಿಂದ ಲಿಂಗಶರೀರದಲ್ಲಿ ಇದ್ದಾನೆ ಎಂತ ತಾತ್ಪರ್ಯ. ಎಂಟು ರೂಪಕ್ಕೆ ನಾಲ್ಕು ರೂಪ ಲೆಖ್ಖ ಆಯಿತು. ಇನ್ನು ನಾಲ್ಕು ರೂಪ ದಾವದೆಂದರೆ ೧. ಆತ್ಮ, ೨. ಅಂತರಾತ್ಮ, ೩. ಪರ ಮಾತ್ಮ, ೪. ಜ್ಞಾನಾತ್ಮ. ಈ ನಾಲ್ಕು ರೂಪಗಳು ಲಿಂಗದಲಿ ಇಲ್ಲಿ ಅದೆ ಎಂದು ಹೇಳಿದ್ದಾರೆ. ಮುಂದಿನ ಶ್ಲೋಕದಲ್ಲಿ ಹೇಳಿ ನಿಂತದ್ದು ಮೂರು, ಆತ್ಮರೂಪಿ ಪರಮಾತ್ಮ ಮನದಿ ಇದ್ದಾನೆ.

ಆತ್ಮನ್ನ ಮಾತ್ರ ವಿದ್ಯಮಾನ ಶ್ಲೋಕದಲ್ಲಿ ಹೇಳಿ ಮನಸ್ಸನ್ನು ಮುಂದಿನ ಶ್ಲೋಕ ದಲ್ಲಿ ಹೇಳಿದ್ದಾರೆ. ಎರಡು ಸೇರಿಸಿ ಮನದೊಳು ಆತ್ಮ ಎಂತ ತಿಳಿಯಬೇಕು.

**ಮನದೊಳಹಂಕಾರದಲಿ ಚಿಂ ।**
**ತನೆಯ ಮಾಳ್ಪುದು ಅಂತರಾತ್ಮನ ।**
**ಘನ ಸುತತ್ವದಿ ಪರಮನವ್ಯಕ್ತದಲಿ ಜ್ಞಾನಾತ್ಮಾ ॥**
**ಇನಿತು ಪಂಚಾಶದ್ವರಣ ವೇ ।**
**ದ್ಯನ ಅಜಾದ್ಯೈವತ್ತು ಮೂರ್ತಿಗ ।**
**ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥ ೨೬ ॥**

ಅವಶಿಷ್ಟ ಲಿಂಗದೇಹದ ವಿಚಾರ ಹೇಳತಾರೆ.

ಮನದೊಳು–ಲಿಂಗಗತ ಮನದೊಳು ಪೂರ್ವಶ್ಲೋಕೋಕ್ತ ಆತ್ಮರೂಪನು, ಅಹಂಕಾರದಲಿ ಅಂತರಾತ್ಮನ–ಅಹಂಕಾರ ತತ್ವದಲಿ ಅಂತರಾತ್ಮನು, ಘನಸುತತ್ವದಿ– ಅಸುರಾವೇಶಾದಿ ದೋಷರಹಿತನಾದ ಬ್ರಹ್ಮನ ಸಮೀಚೀನವಾದ ತತ್ವ ಎಂದರೆ ಮಹತ್ತತ್ವ ಎಂದರೆ ಮಹತ್ತತ್ವದಲ್ಲಿ, ಪರಮನು–ಪರಮಾತ್ಮನು, ಅವ್ಯಕ್ತದಲಿ ಜ್ಞಾನಾತ್ಮಾ–ಅವ್ಯಕ್ತ ತತ್ವದಲ್ಲಿ ಜ್ಞಾನಾತ್ಮನು, ಇನಿತು–ಈ ಪ್ರಕಾರ ಲಿಂಗಗತ ಚತುರ್ವಿಂಶತಿ ತತ್ವಗಳಲ್ಲಿ ಎಂಟು ರೂಪಗಳ, ಚಿಂತನೆಯ ಮಾಳ್ಪುದು–ಅನುಸಂಧಾನ ಮಾಡಬೇಕು. ಲಿಂಗದೇಹ ಗುಣತ್ರಯಾತ್ಮಕವಾದದ್ದು. ಮೂರು ಗುಣಗಳು ಮೂರು ಆವರಣಗಳಾಗಿ ಅದೆ. ಪ್ರಥಮಾವರಣ ಜೀವನ ಮೇಲೆ. ಇದರಲ್ಲಿ ೧. ಅವ್ಯಕ್ತತತ್ವ, ೨. ಮಹತ್ತತ್ವ, ೩. ಅಹಂಕಾರತತ್ವ, ೪. ಮನಸ್ಸು, ೫. ಅರಿಷಡ್ವರ್ಗಗಳು, ೬. ಅಹಂಮಮ ಎಂತ ಆರು ಅದೆ. ಇದು ಸತ್ವಾವರಣ ಎಂತ ನಾಮ.

ದ್ವಿತೀಯಾವರಣ ರಜೋ ಆವರಣ. ಇದರಲ್ಲಿ ದಶೇಂದ್ರಿಯಗಳು. ತೃತೀಯ ಆವರಣ ತಮೋ ಆವರಣ. ಇದರಲ್ಲಿ ಪಂಚಭೂತ, ಪಂಚತನ್ಮಾತ್ರ, ಪಂಚ ಅವಿದ್ಯಾ, ೧ ಕಾಮ, ೧ ಅನಾದಿಕರ್ಮ ಈ ಪ್ರಕಾರ ಇರೋದಾಗಿ ಅದೆ. (ಜೀವನ ಅನಾದಿಕರ್ಮವು, ಆ ಜೀವನ ಲಿಂಗದೇಹದ ಮೇಲೆ ಆಚ್ಛಾದಿತವಾಗಿರುವ ಮೂರು ಪರಿಚ್ಛೇದ ಅಂದರೆ ಆವರಣಗಳ ಪೈಕಿ ಅಂದರೆ ಸತ್ವಪರಿಚ್ಛೇದ, ರಜಃಪರಿಚ್ಛೇದ, ತಮಃ ಪರಿಚ್ಛೇದ. ಇವುಗಳ ಪೈಕಿ ಮೂರನೆಯದಾದ ತಮಃಪರಿಚ್ಛೇದದಲ್ಲಿ ಶಕ್ತ್ಯಾತ್ಮಕವಾಗಿ ಇದೆ. ಇದು ನನ್ನ ಸ್ವಂತ ತಿಳುವಳಿಕೆಗಾಗಿ ಬರೆದುಕೊಂಡಿರುವುದು).

ಪಂಚಾಶದ್ವರಣವೇದ್ಯನ–ಐವತ್ತು ಅಕ್ಷರದಿಂದ ತಿಳಿಸಿಕೊಳ್ಳತಕ್ಕ ಶ್ರೀ ಪರಮಾತ್ಮನ, ಅಜಾದಿ ಐವತ್ತು ಮೂರ್ತಿಗಳನು–ಅಂ ಅಜಾಯನಮಃ ಆರಂಭಮಾಡಿ, ಕ್ಷಂ ಶ್ರೀಲಕ್ಷ್ಮೀ ನರಸಿಂಹಾಯನಮಃ ಎಂತ ಐವತ್ತು ಭಗವದ್ರೂಪಗಳ, ಸದಾ–ನಿರಂತರದಲ್ಲೂ, ಸರ್ವತ್ರ ದೇಹಗಳಲ್ಲಿ–ಚರಾಚರ ಸರ್ವತ್ರ ಸ್ವರೂಪದೇಹ ಆರಂಭಮಾಡಿ ಸ್ಥೂಲದೇಹ ಪರಿಯಂತ ದೇಹಗಳಲ್ಲಿ ಸ್ವರೂಪಲಿಂಗ ಅವ್ಯಕ್ತಸಂಕೇತ, ಮಹತ್ತತ್ವ ಅನಿರುದ್ಧಸಂಕೇತ, ಅಹಂಕಾರ ಅನಾದಿಲಿಂಗಶರೀರದ ಮೇಲೆ ವೈಷಯಿಕ ಸಂಕೇತಶರೀರ ಸ್ಥೂಲಶರೀರ ಇತ್ಯಾದಿ ದೇಹ ಗಳಲ್ಲಿ, ಪೂಜಿಪುದು–ಐವತ್ತು ರೂಪಗಳ ಚಿಂತಿಸಿ ಪೂಜಾಮಾಡಬೇಕು. ಈ ಐವತ್ತು ರೂಪ ಗಳಿಗೆ ಸ್ಥಾನಗಳು ದಾವದೆಂದರೆ, ಮಾತೃಕಾಮಂತ್ರದಲ್ಲಿ ಸ್ಥಾನ ಹೇಳಿದ್ದಾರೆ. ಆದ್ದರಿಂದ ಆಯಾ ಸ್ಥಾನಗಳಲ್ಲಿ ಪೂಜಿಸಬೇಕು. ಮತ್ತು ಚರಾಚರಗಳಿಗೆ ನಾಮಗಳು ಅಕ್ಷರದಿಂದ ಯುಕ್ತವಾಗಿ ಅದೆ. ಆಯಾ ಅಕ್ಷರದಿಂದ ದಾವ ದಾವ ಭಗವದ್ರೂಪಗಳು ಸಂಕೇತ ವಾಗತಮೋ ಆಯಾ ಭಗವದ್ರೂಪಗಳು ಸ್ಥಾವರ ಜಂಗಮಗಳಲ್ಲಿ ಅನುಸಂಧಾನದಿಂದ ಪೂಜಿಸಬೇಕು. ಲಿಂಗದಾರಭ್ಯ ಅನಿರುದ್ಧಶರೀರದವರೆಗೂ ಜೀವಾಕಾರ ಸ್ಥೂಲದೇಹ

ತದ್ಭಿನ್ನಕರ್ಮವಶಾತ್ ನಾನಾ ದೇಹಗಳು ಬರುತಾ ಇರುತ್ತವೆ. ಇದರ ವಿಚಾರ ಪ್ರಕಾಶ ಸಂಹಿತಾದಲ್ಲಿ ವಿಸ್ತಾರವದೆ. ೨೫ನೇ ಶ್ಲೋಕದಾರಭ್ಯ ಲಿಂಗಶರೀರದ ವಿಚಾರ ಎರಡರಲ್ಲಿ ವಾಯುಪ್ರಸಕ್ತಿ ಇಲ್ಲ. ೨೫ನೇ ಶ್ಲೋಕದಲ್ಲಿ ಜೀವಸ್ವರೂಪವಿಚಾರ ಬ್ರಹ್ಮಾದಿದೇವತೆ ಗಳು ಆವಾಸಸ್ಥಾನ ಸಂಧ್ಯಂತರದಲ್ಲಿ ಹೇಳತಾರೆ.

**ಚತುರವಿಂಶತಿ ತತ್ವದೊಳು ತ ।**
**ತ್ಪತಿಗಳೆನಿಸುವ ಬ್ರಹ್ಮಮುಖ ದೇ ।**
**ವತೆಗಳೊಳು ಹದಿಮೂರು ಸಾವಿರದೆಂಟು ನೂರಧಿಕ ॥**
**ಚತುರವಿಂಶತಿ ರೂಪದಿಂದಲಿ ।**
**ವಿತತನಾಗಿದ್ದೆಲ್ಲರೊಳು ಪ್ರಾ ।**
**ಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು ॥ ೨೭ ॥**

ಲಿಂಗದೇಹಾನಂತರ ಸ್ಥೂಲಶರೀರ ವಿಚಾರ ಹೇಳತಾರೆ.

ಲಿಂಗದೇಹ ಚತುರ್ವಿಂಶತಿ ತತ್ವದಿಂದ ಯುಕ್ತವಾದದ್ದು. ಸ್ಥೂಲಶರೀರವೂ ಚತುರ್ವಿಂಶತಿ ತತ್ವದಿಂದ ಯುಕ್ತವಾದದ್ದೇ. ಲಿಂಗಶರೀರಗತ ಚತುರ್ವಿಂಶತಿ ತತ್ವಗಳಲ್ಲಿ ಭಗವದ್ರೂಪಗಳ ಅಭಿಮಾನಿತ್ವ ಹೇಳಿದರೂ ಅಲ್ಲಿ ಬ್ರಹ್ಮವಾಯ್ವಾದಿ ತತ್ವೇಶರ ಅಭಿ ಮಾನಿತ್ವ ಹೇಳಲಿಲ್ಲ. ಚತುರ್ವಿಂಶತಿ ತತ್ವಗಳಿಗೆ ಬ್ರಹ್ಮವಾಯ್ವಾದಿ ದೇವತೆಗಳು ಅಭಿ ಮಾನಿಗಳು ಎಂತ ಹೇಳತಕ್ಕ ಪ್ರಮಾಣಕ್ಕೆ ಪ್ರಯೋಜನವಿಲ್ಲೆಂದರೂ ಸ್ಥೂಲದೇಹದಲ್ಲಿ ಪ್ರಯೋಜನವು. ಲಿಂಗದೇಹದ ದಾವ ದಾವ ಗುಣದಲ್ಲಿ ದಾವ ದಾವ ತತ್ವಗಳಿವೆ ಎಂತ ಹಿಂದೆ ಹೇಳಲ್ಪಟ್ಟಿದೆಯೋ ಅದರಂತೆ ಸ್ಥೂಲದೇಹಗತ ಚತುರ್ವಿಂಶತಿ ತತ್ವಗಳಿಗೆ ಅಭಿಮಾನಿ ದೇವತೆಗಳು ಹೇಳತೇವೆ. ಈ ದೇವತಾಂತರ್ಗತ ಭಗವದ್ರೂಪಗಳ ಹಿಂದೆ ಹೇಳಿ ಅವೆ. ಆದರೂ ತಿಳಿಯೋ ನಿಮಿತ್ತ ಕ್ರೋಢೀಕಾರ ಮಾಡಲ್ಪಡತದೆ.

ಚತುರ್ವಿಂಶತಿ ತತ್ವದೊಳು—ಅನಾದಿ ಲಿಂಗಶರೀರದ ಮೇಲೆ ಸೃಷ್ಟಿಪ್ರಾರಂಭದಲ್ಲಿ ಲಿಂಗೋಪಾದಾನದಿಂದ ಸೃಷ್ಟವಾಗಿ ಲಿಂಗದಮೇಲೆ ಪ್ರಥಮಾವರಣವಾದ (ವೈಷಯಿಕ ಲಿಂಗ ಅಂದರೆ ವೈಷಯಿಕ ಶರೀರದಾರಭ್ಯ ಸ್ಥೂಲಶರೀರದವರೆಗೂ ಇರತಕ್ಕ ಶರೀರಗಳಲ್ಲಿ ವಿದ್ಯ ಮಾನವಾದ ಇಪ್ಪತ್ತುನಾಲ್ಕು ತತ್ವದೊಳು), ತತ್ಪತಿಗಳೆನಿಸುವ—ಆಯಾ ತತ್ವಗಳಿಗೆ ಅಭಿ ಮಾನಿಗಳು ಎಂತ ಎನಿಸತಕ್ಕ ಎಂದರೆ ೧೭ನೇ ಶ್ಲೋಕದಾರಭ್ಯ ಹೇಳಿದ ಮೇರೆಗೆ ಅಭಿಮಾನಿ ಗಳೆಂದು ಕರಿಸತಕ್ಕ, ಬ್ರಹ್ಮಮುಖದೇವತೆಗಳೊಳು-ವೈಷಯಿಕಶರೀರದ ಮೇಲೆ ವಿದ್ಯಮಾನ ವಾದ ಚತುರ್ವಿಂಶತಿ ತತ್ವಗಳಲ್ಲಿ ಬ್ರಹ್ಮ, ವಾಯು, ಸರಸ್ವತಿ, ಭಾರತಿ ಈ ನಾಲ್ಕುಮಂದಿ ಅಭಿಮಾನಿಗಳು ರುದ್ರಾದಿ ನಾಮಗಳಿಂದ ಇದ್ದಾರೆ. ಅನಿರುದ್ಧದೇಹ ಆರಂಭಮಾಡಿ ಸ್ಥೂಲದೇಹಪರಿಯಂತ ಆಯಾ ದೇಹಗತ ಚತುರ್ವಿಂಶತಿ ತತ್ವಗಳಲ್ಲಿ ಬ್ರಹ್ಮದೇವರೇ

ಮೊದಲಾದ ಯಾವತ್ತು ದೇವತೆಗಳು ಆಯಾ ತತ್ವಕ್ಕೆ ಅವರವರು ಅಭಿಮಾನಿಗಳಾಗಿದ್ದಾರೆ. ಇದರ ವಿಚಾರ ವಿಸ್ತಾರವಾಗಿ ಪ್ರಕಾಶಸಂಹಿತಾದಲ್ಲಿ ಅದೆ. ಇಂಥಾ ಶಬ್ದಾದಿ ತತ್ವದೇವತೆಗಳಲ್ಲಿ ಹದಿಮೂರುಸಾವಿರದ ಎಂಟುನೂರಧಿಕ ಚತುರವಿಂಶತಿ ರೂಪದಲ್ಲಿ ಇದ್ದಾನೆಂದು ಹೇಳಲ್ಪಟ್ಟದೆ. ಆ ರೂಪಗಳು ದಾವದೆಂದರೆ ಅವಕ್ಕೆ ವಿವರ :– ಇಪ್ಪತ್ತೈದನೇ ಶ್ಲೋಕ, ಇಪ್ಪತ್ತಾರನೇ ಶ್ಲೋಕ ಎರಡರಲ್ಲಿ ಹೇಳಿದ ಭಗವದ್ರೂಪಗಳು ಮತ್ತು ಇದರ ವಿವರ ಕೆಳಗೆ ಮಾಡಲ್ಪಡುತ್ತದೆ. ಲಿಂಗದೇಹಗತ ಚತುರ್ವಿಂಶತಿ ತತ್ವಾಂತರ್ಗತ ಭಗವದ್ರೂಪಗಳು ಈ ಕೆಳಗೆ ವಿವರಮಾಡಲ್ಪಡತದೆ :–

೧ ಲಕ್ಷ್ಮೀ ಅಭಿಮನ್ಯಮಾನ ಅವ್ಯಕ್ತತತ್ವದಲ್ಲಿ ಜ್ಞಾನಾತ್ಮ.
೧೦ ದಶ ಇಂದ್ರಿಯಗಳಲ್ಲಿ ಅನಿರುದ್ಧಾದಿ ರೂಪಗಳು ಹತ್ತು.
೫ ತನ್ಮಾತ್ರಗಳು, ಇದರಲ್ಲಿ ಅನಿರುದ್ಧಾದಿ ರೂಪಗಳು ಐದು.
೧ ಆತ್ಮರೂಪ ಮನದೊಳು.
೧ ಅಂತರಾತ್ಮರೂಪ ಅಹಂಕಾರ ತತ್ವದಲಿ.
೧ ಪರಮಾತ್ಮ ಮಹತ್ತತ್ವದಲಿ.
೫ ಪಂಚಭೂತಗಳು, ಅವುಗಳಲ್ಲಿ ಅನಿರುದ್ಧಾದಿ ರೂಪಗಳು ಐದು.

———

೨೪ ಅಂತು ಇಪ್ಪತ್ತುನಾಲ್ಕು.

ಲಿಂಗದೇಹಗತ ೨೪ ತತ್ವಗಳಲ್ಲಿ ಆತ್ಮಾದಿ ನಾಲ್ಕು, ಅನಿರುದ್ಧಾದಿ ೫, ಅಂತು ೯ ರೂಪಗಳು ೨೪ ರೂಪಗಳಿಂದ ಇದ್ದಾರೆ. ಇದೇ ರೂಪಗಳೇ ಸ್ಥೂಲದೇಹಗತ ೨೪ ತತ್ವಗಳಲ್ಲಿ ೧೩೮೨೪ ರೂಪಗಳಿಂದ ಆಯಾ ತತ್ವನಾಮಗಳ ಧರಿಸಿದವನಾಗಿದ್ದಾರೆ. ಆಯಾ ತತ್ವನಾಮಗಳ ಅಕ್ಷರಸಾಂಕೇತದಿಂದ ಆಗತಕ್ಕ ಭಗವದ್ರೂಪಗಳು ೨೫೧. ಅವ್ಯಕ್ತ ಜ್ಞಾನಾತ್ಮನಾದ ಪರಮಾತ್ಮನ ರೂಪಗಳು ಸ್ಥೂಲದೇಹಗತ ಬ್ರಹ್ಮಾಣೀ, ಭಾರತೀ ಅಭಿಮನ್ಯಮಾನವಾದ ಮಹತ್ತತ್ವದಲ್ಲಿ ವಿಭಾಗವಾದ ಅವ್ಯಕ್ತತತ್ವದಲ್ಲಿ ಇವೆ. ಜ್ಞಾನಾತ್ಮ ಅವ್ಯಕ್ತಶಬ್ದವಾಚ್ಯನಾಗಿ ಅವ್ಯಕ್ತ ಎನತಕ್ಕ ಅಕ್ಷರದಿಂದ ಆಗತಕ್ಕ ಸಂಖ್ಯಾರೂಪದಿಂದ ಅವ್ಯಕ್ತಾಭಿಮಾನಿಗಳಾದ ಬ್ರಹ್ಮಾಣಿ ಭಾರತಿದೇವೇರಲ್ಲಿ ಇದ್ದಾನೆ. ಲಿಂಗದಲ್ಲಿ ಜ್ಞಾನಾತ್ಮ ಅಭಿಮಾನಿ, ಸ್ಥೂಲದೇಹದಲ್ಲಿ ವಾಣಿ ಭಾರತಿಗಳು ಅಭಿಮಾನಿಗಳು. ಇದರಲ್ಲಿ ಲಿಂಗದೇಹಗತ ಅವ್ಯಕ್ತತತ್ವಾಭಿಮಾನಿ ಜ್ಞಾನಾತ್ಮ ಪ್ರವೇಶನಾಗಿದ್ದಾನೆ. ೨೫೧ ರೂಪದಿಂದ ಇದೇ ಕ್ರಮಕ್ಕೆ ಮುಂದೆ ಹೇಳೋದರಲ್ಲಿ ತಿಳಿಯಬೇಕು. ಪರಮಾತ್ಮ ಲಿಂಗದೇಹಗತ ಮಹತ್ತತ್ವದಲ್ಲಿ ಮಹತ್ ಎಂತ ಕರೆಸಿ ಅಕ್ಷರಸಂಖ್ಯಾರೂಪದಿಂದ ೧೮೫ ರೂಪಗಳಿಂದ ಬ್ರಹ್ಮನಲ್ಲಿ ಇದ್ದಾನೆ.

ತಾಮಸ ೭೫೧ ಅಂತರಾತ್ಮ. ತಾಮಸ ಎಂದರೆ ತಾಮಸ ಅಹಂಕಾರ ತತ್ವಾಭಿಮಾನಿ ರುದ್ರದೇವರಲ್ಲಿ ೭೫೧ ರೂಪದಿಂದ ಇದ್ದಾನೆ. ಮನಸ್ಸು ೭೫೫ ಆತ್ಮರೂಪಿ ಪರಮಾತ್ಮ. ಮನೋಭಿಮಾನಿಗಳಾದ ಇಂದ್ರ ಕಾಮರು ರುದ್ರದೇವರಲ್ಲಿ ೭೫೫ ರೂಪದಿಂದ ಇದ್ದಾರೆ. ೨೩೪೩ ದಶ ಇಂದ್ರಿಯಗತ ರೂಪಗಳು ಅಕ್ಷರಸಂಖ್ಯಾದಿಂದ ಆಗತಕ್ಕ ರೂಪಗಳು. ವಿವರ ೧೧ನೇ ಶ್ಲೋಕದಲ್ಲಿ ಅದೆ. ಅನಿರುದ್ಧಾದಿ ರೂಪಗಳು— ದಶೇಂದ್ರಿಯಾಭಿಮಾನಿ ದೇವತೆಗಳಲ್ಲಿ ೨೩೪೩ ರೂಪದಿಂದ ಇದ್ದಾವೆ. ೧೧ನೇ ಶ್ಲೋಕದಲ್ಲಿ ಮನಸ್ಸಿಗೆ ಆಗತಕ್ಕ ಸಂಖ್ಯಾ ಸಹಿತ ಸೇರಿಸಿ ಆದ ಮನಸ್ಸಿಗೆ ಸಂಖ್ಯಾ ೭೫೫ ತೆಗೆದುಹಾಕಿದರೆ ದಶ ಇಂದ್ರಿಯಗಳಲ್ಲಿ ಇರತಕ್ಕ ಭಗವದ್ರೂಪಗಳ ಸಂಖ್ಯಾ ೨೩೪೩ ಆಗತದೆ. ೧೦೦೧ ಅನಿರುದ್ಧಾದಿ ರೂಪಗಳು, ಪಂಚಭೂತಾಭಿಮಾನಿ ದೇವತೆಗಳಲ್ಲಿ ೧೦೦೧ ರೂಪದಿಂದ ಇದ್ದಾವೆ. ೧೧ನೇ ಶ್ಲೋಕದಲ್ಲಿ ವಿವರವದೆ. ೧೮೦ ಪಂಚತನ್ಮಾತ್ರಗತ ಅನಿರುದ್ಧಾದಿ ರೂಪಗಳು, ಇದಕ್ಕೆ ವಿವರ ೧೧ನೇ ಶ್ಲೋಕದಲ್ಲಿ ಅದೆ. ಅಂತು ೬೩೬೬ ರೂಪಗಳು — ೪೩೨೬ ಅಧಿಭೂತ, ಅಧಿದೈವ, ಅಧ್ಯಾತ್ಮಗತ ರೂಪಗಳು. ೧೦ನೇ ಶ್ಲೋಕದಲ್ಲಿ ವಿವರವದೆ. ಅಚ್ಯುತ, ಅನಂತ, ಗೋವಿಂದ ಎಂಬ ಅಕ್ಷರಸಂಖ್ಯಾರೂಪಗಳು ೪೩೨೬ ಆಗತದೆ. ೧೭೧೧ ಇದಕ್ಕೆ ಸೂಚನಾ ೨೬ನೇ ಶ್ಲೋಕದಲ್ಲಿ ಅದೆ. ಅಂತು ೧೦೬೯೨. ಇದಕ್ಕೆ ವಿವರ ೧೧ನೇ ಶ್ಲೋಕದಲ್ಲಿ ಅದೆ. ಆಕಾಶ ಎಂದರೆ ಹೃದಯಾಕಾಶ ರೂಪಗಳು, ಹೃದಿಸ್ಥ ರೂಪಗಳು ಸೇರಿ ೮೨೧. ಅಂತು ೧೧೫೧೩ ರೂಪಗಳು. ೬೦೦ ಇದರ ವಿವರ ಹತ್ತನೇ ಶ್ಲೋಕದಲ್ಲಿ ಚಿಂತಿಪುದು ಎಂತ ಹೇಳಿದ್ದಾರೆ. ಅದಕ್ಕೆ ವಿವರ ಅಕ್ಷರ ೫೧. ೨೪ ತತ್ವದಲ್ಲಿ ಒಂದೊಂದು ತತ್ವದಲ್ಲಿ ೫೧. ೫೧ ಅಕ್ಷರ ಮೇರೆಗೆ ೨೪ ತತ್ವಗತ ಅಕ್ಷರಸಂಖ್ಯಾದಿಂದ ಆಗುವ ೧೨೨೪ ಭಗವದ್ರೂಪಗಳು. ಅಜಾದಿ ರೂಪಗಳ ಸಂಖ್ಯಾ ೪೨೦. ಅ, ಆ ಆರಂಭ ಮಾಡಿ ಅಂ, ಅಃ ವರೆಗೆ ೧೬ ಅಕ್ಷರಗಳು ಹೋಗತಾ ಉಳಿದಿರುವ ಅಕ್ಷರಗಳು ಮೂವತ್ತೈದು. ಈ ಒಂದೊಂದು ಅಕ್ಷರಕ್ಕೆ ಕ, ಕಾ, ಕಿ, ಕೀ ಆರಂಭಮಾಡಿ ಕಂ, ಕಃ ವರೆಗೆ ಹನ್ನೆರಡು ಅಕ್ಷರ ಆಗತದೆ. ೩೫ ಅಕ್ಷರವನ್ನು ೧೨ ಅಕ್ಷರದಿಂದ ಗುಣಿಸಿದರೆ ೪೨೦ ಅಕ್ಷರಗಳು ಆಗತದೆ. ೫೧ ಅಕ್ಷರಕ್ಕೆ ಪೂರ್ವಾಕ್ಷರ ಉತ್ತರಾಕ್ಷರಕ್ಕೆ ಮಧ್ಯೆ ಸಂಧಿಗಳು ಐವತ್ತೊಂದು. ೧೧ ಇಂದ್ರಿಯಗಳಲ್ಲಿ ಶಕ್ತಿಪ್ರತಿಷ್ಠಾದಿ ಭಗವದ್ರೂಪಗಳು ೨೪ನೆ ಶ್ಲೋಕದಲ್ಲಿ ಹೇಳಿದ್ದು ೧೧. ಐದು ಅವಿದ್ಯಾಗತ ಕೃದ್ಧೋಲ್ಕಾದಿ ಭಗವದ್ರೂಪಗಳು. ೧೩ನೇ ಶ್ಲೋಕದಲ್ಲಿ ಹೇಳಿರುವುದು ೫ ರೂಪಗಳು. ಅಂತು ೧೭೧೧ ರೂಪಗಳು.' ೧೩೮೨೪ ಹದಿಮೂರುಸಾವಿರದ ಎಂಟುನೂರ ಇಪ್ಪತ್ತುನಾಲ್ಕು, ಚತುರವಿಂಶತಿ ತತ್ವದೊಳು—ಇಪ್ಪತ್ತುನಾಲ್ಕು ತತ್ವಗಳಲ್ಲಿ, ತತ್ಪತಿಗಳೆನಿಸುವ—ಆಯಾ ತತ್ವಗಳಿಗೆ ಅಭಿಮಾನಿಗಳು ಎಂತ ಕರೆಸುವಂಥಾ ಬ್ರಹ್ಮದೇವರೇ ಮೊದಲಾದ ದೇವತೆಗಳಲ್ಲಿ ಹದಿಮೂರು ಸಾವಿರ ಎಂಟುನೂರ ಇಪ್ಪತ್ತುನಾಲ್ಕು ರೂಪದಿಂದಲಿ, ವಿತತನಾಗಿ—ವ್ಯಾಪ್ತನಾಗಿ, ಎಲ್ಲರೊಳು—ಯಾವತ್ತು ಜೀವರೊಳು (ಇಷ್ಟು ರೂಪದಿಂದ ಇದ್ದು), ಪಂಚಾತ್ಮಕ — ವ್ಯೂಹರೂಪಗಳಾದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ, ಈ ಐದು ರೂಪಗಳಿಂದ ಪೂರ್ವೋಕ್ತ ರೂಪಗಳ

ಧರಿಸಿ, ಪ್ರಾಕೃತಪುರುಷನಂದದಲಿ–ಪ್ರಕೃತಿಸಂಬಂಧರಾದ ಪ್ರಾಣಿಗಳೋಪಾದಿಯಲ್ಲಿ, ಅವರವರ ಯೋಗ್ಯತಾನುಸಾರ, ರಮಿಸುವನು–ಆಯಾ ಜೀವರಲ್ಲಿ ಕರ್ಮಗಳ ಮಾಡಿ ಸುತ್ತ ತದ್ರೂಪವಾದ ಆಟಗಳ ಆಡೋವನಾಗಿ ವಿಹಾರಮಾಡುವನು. ತದ್ಗತ ತನ್ನ ಸ್ವಾಖ್ಯದಿಂದ ತಾನು ರಮಿಸಿ ವಿಹಾರಮಾಡುವನು ಎಂತ ತಾತ್ಪರ್ಯ.

**ಚತುರ್ವಿಂಶತಿ ತತ್ವಗಳ, ತತ್ವಾಭಿಮಾನಿಗಳ, ಭಗವದ್ರೂಪಗಳ ಮತ್ತು ಭಗವದ್ರೂಪಗಳ ಪತ್ನೀರ ವಿವರ.**

| ಕ್ರಮಾಂಕ | ತತ್ವಗಳ ಹೆಸರು | ತತ್ವಾಭಿಮಾನಿ ದೇವತೆಗಳ ಹೆಸರು | ಭಗವದ್ರೂಪಗಳು | ಭಗವದ್ರೂಪಗಳ ಪತ್ನೀರ ಹೆಸರು |
|---|---|---|---|---|
| ೧ | ಅವ್ಯಕ್ತ ತತ್ವ | ಕೇಶವ–ಲಕ್ಷ್ಮೀ | ಕೇಶವ | ಶ್ರೀ |
| ೨ | ಮಹತ್ತತ್ವ | ಬ್ರಹ್ಮ–ನಾರಾಯಣ | ನಾರಾಯಣ | ಲಕ್ಷ್ಮೀ |
| ೩ | ಅಹಂಕಾರ ತತ್ವ | ರುದ್ರಾದಿಗಳು | ಮಾಧವ | ಕಮಲಾ |
| ೪ | ಮನಸ್ತತ್ವ | ಇಂದ್ರ, ಕಾಮ ಗರುಡಾದಿಗಳು | ಗೋವಿಂದ | ಪದ್ಮಾ |
| ೫ | ಕರ್ಣಕ್ಕೆ | ಚಂದ್ರ | ವಿಷ್ಣು | ಪದ್ಮಾ |
| ೬ | ನೇತ್ರಕ್ಕೆ | ಸೂರ್ಯ | ಮಧುಸೂದನ | ಕಮಲಾ |
| ೭ | ತ್ವಕ್ಕು | ಅಹಂಕಾರಿಕ ಪ್ರಾಣ | ತ್ರಿವಿಕ್ರಮ | ರಮಾ |
| ೮ | ಜಿಂಹ್ವೆಗೆ | ವರುಣ | ವಾಮನ | ವೃಷಾಕಪಿ |
| ೯ | ನಾಸಿಕ | ಅಶ್ವಿನಿ ದೇವತೆಗಳು | ಶ್ರೀಧರ | ಪ್ರಕೃತಿ |
| ೧೦ | ವದನಕ್ಕೆ | ವಹ್ನಿ | ಹೃಷಿಕೇಶ | ಬುದ್ಧಿ |
| ೧೧ | ಪಾಣಿ | ದಕ್ಷ | ಪದ್ಮನಾಭ | ಯಜ್ಞಾ |
| ೧೨ | ಪಾದ | ಜಯಂತ | ದಾಮೋದರ | ಇಂದಿರಾ |
| ೧೩ | ಪಾಯು | ಮಿತ್ರ | ಸಂಕರ್ಷಣ | ಹಿರಣ್ಯಾ |
| ೧೪ | ಉಪಸ್ಥ | ಮನು | ವಾಸುದೇವ | ಹರಿಣೀ |
| ೧೫ | ಶಬ್ದ | ಪ್ರಾಣ | ಪ್ರದ್ಯುಮ್ನ | ಸತ್ಯಾ |
| ೧೬ | ಸ್ಪರ್ಶ | ಅಪಾನ | ಅನಿರುದ್ಧ | ನಿತ್ಯಾ |
| ೧೭ | ರೂಪ | ವ್ಯಾನ | ಪುರುಷೋತ್ತಮ | ಆನಂದಿನೀ |
| ೧೮ | ರಸ | ಉದಾನ | ಅಧೋಕ್ಷಜ | ಅಸೌಜ್ಞಾ |
| ೧೯ | ಗಂಧ | ಸಮಾನ | ನರಹರಿ | ಸುಖಾ |

| | | | | |
|---|---|---|---|---|
| ೨೦ | ಆಕಾಶ | ಗಣೇಶ | ಅಚ್ಯುತ | ಸುಗಂಧಿ |
| ೨೧ | ವಾಯು | ಪ್ರವಹ ವಾಯು | ಜನಾರ್ದನ | ಸುಂದರೀ |
| ೨೨ | ತೇಜಸ್ | ಪಾವಕ | ಉಪೇಂದ್ರ ಮತ್ತು ಪರಶುರಾಮ | ವಿದ್ಯಾ |
| ೨೩ | ಅಪ್ಪು | ವರುಣ | ಹರಿ | ಸುಶೀಲಾ |
| ೨೪ | ಪೃಥಿವಿ | ಧರಾ–ಶನಿ | ಶ್ರೀಕೃಷ್ಣ | ಸುಲಕ್ಷಣಾ |

**ಕೇಶವಾದಿ ಸುಮೂರ್ತಿ ದ್ವಾದಶ ।**
**ಮಾಸ ಪುಂಡ್ರಗಳಲ್ಲಿ ವೇದ ।**
**ವ್ಯಾಸ ಅನಿರುದ್ಧಾದಿ ರೂಪಗಳಾರು ಋತುಗಳಲಿ ॥**
**ವಾಸವಾಗಿಹನೆಂದು ತ್ರಿಂಶತಿ ।**
**ವಾಸರದಿ ಸತ್ಕರ್ಮ ಧರ್ಮ ನಿ ।**
**ರಾಶೆಯಿಂದಲಿ ಮಾಡು ಕರುಣವ ಬೇಡು ಕೊಂಡಾಡು ॥ ೨೮ ॥**

ಮಾಸಾಭಿಮಾನಿ, ಋತುಗಳ ಅಭಿಮಾನಿಗಳ ಹೇಳತಾರೆ. ದಾವ ದಾವ ಕಾಲದಲ್ಲಿ ದಾವ ದಾವ ಕರ್ಮ ಮಾಡತಾನೋ ಆ ಕಾಲಾಂತರ್ಗತ, ಋತು ಅಂತರ್ಗತ, ಕರ್ಮಾಂತರ್ಗತ ಭಗವದ್ರೂಪಗಳ ಐಕ್ಯಚಿಂತನಾ ಮಾಡಬೇಕು ಎಂತ ಹೇಳತಾರೆ.

ದ್ವಾದಶಮಾಸ–ಚೈತ್ರಾದಿ ೧೨ ತಿಂಗಳುಗಳಲ್ಲಿ ೧೨ ಸಂಖ್ಯಾಕವಾದ, ಸುಮೂರ್ತಿ–ಸಮೀಚೀನವಾದ ಭಗವನ್ಮೂರ್ತಿಗಳ ಚಿಂತನ ಮಾಡಬೇಕು. ಇದಕ್ಕೆ ವಿವರ :–

| | | | |
|---|---|---|---|
| ೧. | ಚೈತ್ರಕ್ಕೆ | ಕೇಶವ | ಪುರುಷೋತ್ತಮ |
| ೨. | ವೈಶಾಖಕ್ಕೆ | ನಾರಾಯಣ | ಅಧೋಕ್ಷಜ |
| ೩. | ಜ್ಯೇಷ್ಠಕ್ಕೆ | ಮಾಧವ | ನಾರಸಿಂಹ |
| ೪. | ಆಷಾಢಕ್ಕೆ | ಗೋವಿಂದ | ಅಚ್ಯುತ |
| ೫. | ಶ್ರಾವಣಕ್ಕೆ | ವಿಷ್ಣು | ಜನಾರ್ದನ |
| ೬. | ಭಾದ್ರಪದಕ್ಕೆ | ಮಧುಸೂದನ | ಉಪೇಂದ್ರ |
| ೭. | ಆಶ್ವಯುಜಕ್ಕೆ | ತ್ರಿವಿಕ್ರಮ | ಹರಿ |
| ೮. | ಕಾರ್ತಿಕಕ್ಕೆ | ವಾಮನ | ದಾಮೋದರ |
| ೯. | ಮಾರ್ಗಶಿರಕ್ಕೆ | ಶ್ರೀಧರ | ಸಂಕರ್ಷಣ |
| ೧೦. | ಪುಷ್ಯಕ್ಕೆ | ಹೃಷೀಕೇಶ | ವಾಸುದೇವ |
| ೧೧. | ಮಾಘಕ್ಕೆ | ಪದ್ಮನಾಭ | ಪ್ರದ್ಯುಮ್ನ |
| ೧೨. | ಫಾಲ್ಗುಣಕ್ಕೆ | ದಾಮೋದರ | ಅನಿರುದ್ಧ |

ಈ ರೀತ್ಯಾ ಉಭಯಪ್ರಕಾರವಾಗಿ ಭಗವದ್ರೂಪಗಳು ಚಿಂತನಿ ಮಾಡಬೇಕು. ದ್ವಾದಶ–ಪುಂಡ್ರಗಳಲಿ–ದೇಹದಲ್ಲಿ ಧಾರಣಮಾಡತಕ್ಕ ೧೨ ಊರ್ಧ್ವಪುಂಡ್ರಗಳಲ್ಲಿ ಮೇಲೆ ಹೇಳಿದ ಪ್ರಕಾರ ಭಗವನ್ಮೂರ್ತಿಗಳ ಅನುಸಂಧಾನಮಾಡಬೇಕು. ಇದಕ್ಕೆ ದಾವ ದಾವ ಸ್ಥಳಗಳಲ್ಲಿ ಅಂದರೆ, ಲಲಾಟದಲ್ಲಿ ಕೇಶವ, ಉದರದಲ್ಲಿ ನಾರಾಯಣ, ಹೃದಯದಲ್ಲಿ ಮಾಧವ, ಕಂಠಕೂಬರದಲ್ಲಿ ಗೋವಿಂದ, ಉದರದಕ್ಷಿಣಪಾರ್ಶ್ವದಲ್ಲಿ ವಿಷ್ಣು, ದಕ್ಷಿಣಬಾಹುಮೂಲದಲ್ಲಿ ಮಧುಸೂದನ, ಕರ್ಣಮೂಲದಲ್ಲಿ ತ್ರಿವಿಕ್ರಮ, ವಾಮಕುಕ್ಷಿಯಲ್ಲಿ ವಾಮನ, ವಾಮಬಾಹುವಿಗೆ ಶ್ರೀಧರ, ಕಂಧರದಲ್ಲಿ ಹೃಷೀಕೇಶ, ಪೃಷ್ಠದಲ್ಲಿ ಪದ್ಮನಾಭ, ಕಂಠದ ಹಿಂದೆ ದಾಮೋದರ, ಆರು ಋತುಗಳಲಿ–ವಸಂತಾದಿ ಆರು ಋತುಗಳಲ್ಲಿ ೧. ವಸಂತಋತು–ಚೈತ್ರ ವೈಶಾಖ–ವೇದವ್ಯಾಸದೇವರು, ೨. ಗ್ರೀಷ್ಮಋತು–ಜ್ಯೇಷ್ಠ ಆಷಾಢ–ಅನಿರುದ್ಧದೇವರು, ೩. ವರ್ಷಋತು–ಶ್ರಾವಣ ಭಾದ್ರಪದ–ಪ್ರದ್ಯುಮ್ನದೇವರು, ೪. ಶರದ್‌ಋತು–ಆಶ್ವಯುಜ ಕಾರ್ತಿಕ–ಸಂಕರ್ಷಣದೇವರು, ೫. ಹೇಮಂತಋತು–ಮಾರ್ಗಶಿರ ಪುಷ್ಯ–ವಾಸುದೇವದೇವರು, ೬. ಶಿಶಿರಋತು–ಮಾಘ ಫಾಲ್ಗುಣ–ನಾರಾಯಣದೇವರು, ವೇದವ್ಯಾಸಾನಿರುದ್ಧಾದಿ ರೂಪಗಳ–ವೇದವ್ಯಾಸರೂಪ ಒಂದು, ಅನಿರುದ್ಧಾದಿ ನಾರಾಯಣಾಂತ ಐದು. ಅಂತು ಆರು ರೂಪಗಳು, ವಾಸವಾಗಿಹವೆಂದು–ವಾಸವಾಗಿದ್ದಾರೆ ಎಂತ, ತ್ರಿಂಶತಿ ವಾಸರದಿ–ಮೂವತ್ತು ದಿನಗಳಲ್ಲಿ ಪ್ರತಿ ಪ್ರತಿ ದಿನದಲ್ಲೂ, ನಿರಾಶೆಯಿಂದಲಿ–ಫಲ ಆಶಾರಹಿತನಾಗಿ, ನಿಷ್ಕಾಮುಕನಾಗಿ, ಸತ್ಕರ್ಮಧರ್ಮ–ಸಮೀಚೀನಗಳಾದ ಸತ್ಕರ್ಮಗಳೇನು, ದಾನಧರ್ಮಾದಿಗಳೇನು, ಮಾಡಿ–ಮಾಡುವನಾಗಿ, ಕರುಣನ ಬೇಡು–ಶ್ರೀ ಪರಮಾತ್ಮನ (ಬೇಡೋದು ಸಕಾಮುಕವಲ್ಲ) ಬೇಡು, ಕೊಂಡಾಡು–ಅವನ ಮಹಿಮಾವನ್ನು ಸದಾ ಉಚ್ಚಾರ ಮಾಡತಾ ಇರಬೇಕು ಎಂತ ತಾತ್ಪರ್ಯ.

**ಲೋಷ್ಟ ಕಾಂಚನ ಲೋಹ ಶೈಲಜ ।**
**ಕಾಷ್ಠ ಮೊದಲಾದಖಿಳ ಜಡ ಪರ ।**
**ಮೇಷ್ಠಿ ಮೊದಲಾದೆಲ್ಲ ಚೇತನರೊಳಗೆ ಅನುದಿನವು ॥**
**ಚೇಷ್ಟೆಗಳ ಮಾಡಿಸುತ ತಿಳಿಸದೆ ।**
**ಪ್ರೇಷ್ಟನಾಗಿದ್ದೆಲ್ಲರಿಗೆ ಸ ।**
**ರ್ವೇಷ್ಟದಾಯಕ ಸಂತಯಿಸುವುದು ಸರ್ವಜೀವರನು ॥ ೨೯ ॥**

ಈ ಶ್ಲೋಕದಲ್ಲಿ ಪೂರ್ವೋಕ್ತಪ್ರಕಾರ ಅನುಸಂಧಾನ ಮಾಡಿ ನಿಷ್ಕಾಮುಕ ಕರ್ಮ ಮಾಡಿದವರ ರಕ್ಷಿಸತಾನೆ ಎಂತ ಹೇಳತಾರೆ.

ಲೋಷ್ಟ–ಹೆಂಚು, ಕಾಂಚನ–ಭಂಗಾರ, ಲೋಹ–ಕಬ್ಬಿಣ, ಶೈಲಜ–ಪರ್ವತ ಜನಿತ ಶಿಲಾ, ಕಾಷ್ಠ–ಕಟ್ಟಿಗೆ, ಮುಂತಾದಖಿಳಜಡ–ಇವೇ ಮೊದಲಾದ ಸಮಸ್ತ, ಜಡಗಳಲ್ಲಿ (ಸಮಸ್ತ ಚಿತ್ತನಾಗಿರಬೇಕು ಅಂದರೆ ಹೆಂಚನ್ನು ದಾವ ರೀತ್ಯಾ ನೋಡಿ

ನಿಸ್ಪೃಹನಾಗತಾನೋ, ತದ್ವತು ಸ್ವರ್ಣ ರಜತಗಳಲ್ಲಿ ಸ್ಪೃಹಾ ಇರದೆ ಸಮಚಿತ್ತನಾಗ ಬೇಕು, ನಿಷ್ಕಾಮನಾಗಬೇಕು ಎಂತ ಅರ್ಥ) ಈ ಪ್ರಕಾರ ಇರತಕ್ಕವರ ದೇಹಗತ ತತ್ವ ದೇವತೆಗಳಾದ, ಪರಮೇಷ್ಠಿ ಮೊದಲಾದ_ಬ್ರಹ್ಮದೇವರೇ ಮೊದಲಾದ, ಎಲ್ಲ ಚೇತನ ರೊಳಗೆ_ಸಮಸ್ತ ಚೇತನರಾದ ತತ್ವದೇವತೆಗಳ ಒಳಗೆ ಪರಿಪೂರ್ಣನಾಗಿದ್ದು, ಅನು- ದಿನವೂ_ಪ್ರತಿದಿನದಲ್ಲ್ಯೂ, ಚೇಷ್ಟೆಗಳ ಮಾಡಿಸುತ_ವ್ಯಾಪಾರಗಳ ಮಾಡಿಸುತ, ತಿಳಿಸದೆ_ ತನ್ನ ಮಹಿಮಾ ಆ ಅಧಿಕಾರಿಗಳಿಗೆ ಸಂಪೂರ್ಣವಾಗಿ ತಿಳಿಸದೆ ಅಂದರೆ ಯೋಗ್ಯತಾನು ಸಾರ ತಿಳಿಸಿ, ಪ್ರೇಷ್ಟನಾಗಿದ್ದು_ಆಯಾ ಜೀವರ ಸ್ವರೂಪಯೋಗ್ಯತಾನುಸಾರ ಆಪ್ತನಾಗಿ ಅಥವಾ ಇಷ್ಟನಾಗಿದ್ದು, ಎಲ್ಲರಿಗೆ_ಯಾವತ್ತೂ ಜೀವರಿಗೆ (ತನ್ನ ಭಕ್ತರಿಗೆ), ಸರ್ವೇಷ್ಟ ದಾಯಕ_ಸ್ವರೂಪಯೋಗ್ಯತಾಕ್ಕೆ ಅನುಸರಿಸಿದ ಇಷ್ಟಗಳ ಲಿಂಗಭಂಗಾನಂತರ ಕೊಡ ತಕ್ಕವನಾಗಿ, ಸರ್ವಜೀವರನು_ಸಮಸ್ತ ಪ್ರಾಣಿಗಳನ್ನು, ಸಂತಯಿಸುವನು_ಸಮಸ್ತರನ್ನ ಅವರ ಯೋಗ್ಯತಾಸ್ಥಾನದಲ್ಲಿ ಇಟ್ಟು ದಾರದಾರನ್ನ ದಾವ ರೀತ್ಯಾ ಸಂರಕ್ಷಿಸಬೇಕೋ ಆ ರೀತ್ಯಾ ಪಾಲಿಸತಾನೆ.

**ತಾ||** ಪೂರ್ವೋಕ್ತ ಪ್ರಕಾರ ಪರಮಾತ್ಮನ ಮಹಿಮಾ ಅನುಸಂಧಾನ ಮಾಡಿ ತಿಳಿದು ಸದ್ಗತಿ ಐದಬೇಕು ಎಂಬ ತಾತ್ಪರ್ಯ.

**ವಾಸುದೇವನಿರುದ್ಧರೂಪದಿ |**
**ಪುಂಶರೀರದೊಳಿಹನು ಸರ್ವದ |**
**ಸ್ತ್ರೀಶರೀರದೊಳಿಹನು ಸಂಕರುಷಣನು ಪ್ರದ್ಯುಮ್ನ ||**
**ದ್ವಾಸುಪರ್ಣಶ್ರುತಿವಿನುತ ಸ |**
**ರ್ವಸುನಿಲಯ ನಾರಾಯಣನ ಸದು |**
**ಪಾಸನೆಯ ಗೈವವರು ಜೀವನ್ಮುಕ್ತರೆನಿಸುವರು || ೩೦ ||**

ಸ್ತ್ರೀ ಪುರುಷ ಭಗವದ್ರೂಪಗಳ ಹೇಳತಾರೆ. ಲಿಂಗಭಂಗಾಖ್ಯ ಮುಕ್ತಿಗೆ ಪೂರ್ವ ಜೀವನ್ಮುಕ್ತರಾಗತಾರೆ ಮುಕ್ತಿಯೋಗ್ಯಜೀವರೆಂದು ಹೇಳತಾರೆ.

ವಾಸುದೇವನಿರುದ್ಧರೂಪದಿ_ವಾಸುದೇವ ಅನಿರುದ್ಧ ಈ ಎರಡು ರೂಪದಿಂದ, ಪುಂಶರೀರದೊಳಿಹನು – ಪುರುಷ ಶರೀರದೊಳಗೆ ಇದ್ದಾನೆ. ಸಂಕರ್ಷಣ ಪ್ರದ್ಯುಮ್ನ– ಸಂಕರ್ಷಣ, ಪ್ರದ್ಯುಮ್ನ ಈ ಎರಡು ರೂಪದಿಂದ, ಸ್ತ್ರೀಶರೀರದೊಳಿಹನು_ಸ್ತ್ರೀಯರ ಶರೀರಗಳಲ್ಲಿ ಇದ್ದಾನೆ. ಸರ್ವದಾ_ಸರ್ವಕಾಲಗಳಲ್ಲಿ ಈ ಪ್ರಕಾರ ಇದ್ದಾನೆ. ಸ್ವರೂಪ ಬಾಹ್ಯದಲಿ ಎಂತ ಅರ್ಥ (ಮತ್ತು ಪ್ರತಿ ದೇಹದಲ್ಲೂ ಎಡಭಾಗವು ಪುರುಷಗೆ ಸ್ತ್ರೀಭಾಗ ಎಂತಲೂ, ಬಲಭಾಗವು ಪುರುಷಭಾಗವು ಎಂತಲೂ ಶಾಸ್ತ್ರಸಿದ್ಧ. ಸ್ತ್ರೀಯರಿಗೆ ಬಲಭಾಗ ಪುರುಷಭಾಗ ಎಂತಲೂ, ಎಡಭಾಗ ಸ್ತ್ರೀಭಾಗವೆಂತಲೂ ಅದೆ. ಪುರುಷಗೆ ಬಲಭಾಗದಲ್ಲಿ ವಾಸುದೇವ ಅನಿರುದ್ಧ, ಎಡಭಾಗದಲ್ಲಿ ಸಂಕರ್ಷಣ ಪ್ರದ್ಯುಮ್ನ. ಸ್ತ್ರೀಯರುಗಳಿಗೆ ಬಲಭಾಗದಲ್ಲಿ ಸಂಕರ್ಷಣ ಪ್ರದ್ಯುಮ್ನ, ಎಡಭಾಗದಲ್ಲಿ ವಾಸುದೇವ ಅನಿರುದ್ಧ.

ಈ ಪ್ರಕಾರ ಸರ್ವದಾ ಇದ್ದಾನೆ). ದ್ವಾಸುಪರ್ಣಶ್ರುತಿವಿನುತ–ಎರಡು ಪಕ್ಷಿಗಳು ಎಂತ ಹೇಳತಕ್ಕ ವೇದಶ್ರುತಿಯಿಂದ ಸ್ತುತ್ಯನಾದವನು (ಎಂದರೆ ದೇಹಾಖ್ಯ ವೃಕ್ಷದಲ್ಲಿ ಅಪೂರ್ಣವಾದ ಜೀವಾಖ್ಯ ಪಕ್ಷಿ ಎಂದು, ಕರ್ಮಫಲಭೋಗ ಮಾಡತಕ್ಕದ್ದು ಜೀವಾಖ್ಯ ಪಕ್ಷಿ. ತನ್ನ ಸ್ವಾಖ್ಯ ಫಲಭೋಗ ಮಾಡತಕ್ಕದ್ದು ಪರಮಾತ್ಮನೆಂಬ ಪಕ್ಷಿ. ಇವರುಗಳಿಗೆ ಪರಸ್ಪರ ಭೇದ ಎಂತಲೂ, ಜೀವಾಖ್ಯ ಪಕ್ಷಿ ಈಶಾಧೀನ ಎಂತಲೂ ಹೇಳತಕ್ಕ ಶ್ರುತಿ), ಸರ್ವ–ಅನಿರುದ್ಧಾದಿ ನಾಲ್ಕು ರೂಪಗಳಿಗೆ, ಹಾಂಗೆ ಅನಂತಾನಂತ ರೂಪಗಳಿಗೆ, ಸರ್ವ ರೂಪಗಳಿಗೆ, ಸುನಿಲಯ–ಸಮೀಚೀನವಾದ ಆಶ್ರಯಭೂತನಾದವ, ಅಂಶಿರೂಪನಾದ, ನಾರಾಯಣನ – ಮೂಲರೂಪಿಯಾದ ನಾರಾಯಣನ, ಸದುಪಾಸನೆಯ ಗೈವವರು– ಸರ್ವೋತ್ತಮನೆಂದು ತಾರತಮ್ಯ ಪಂಚಭೇದಜ್ಞಾನದಿಂದ, ಸ್ವಾಮಿಭೃತ್ಯನ್ಯಾಯದಿಂದ ಉಪಾಸನಾ ಮಾಡತಕ್ಕವರು ನಾರಾಯಣನ ಅಂಶರೂಪಗಳಿಂದ ಸರ್ವರೂಪಗಳ ಉಪಾಸನಾ ಮಾಡಿದವರು ಆಗತಾರೆ. ಬೇರಿಗೆ ನೀರು ಹಾಕಿದರೆ ಯಾವತ್ತು ಶಾಖೆಗಳಿಗೆ ಸೇರುವಂತೆ ಅನಂತಾನಂತ ರೂಪಗಳಿಗೆ ಮೂಲಸ್ಥಾನಾಪನ್ನವಾದ ನಾರಾಯಣದೇವರ, ಉಕ್ತ–ಅನುಸಂಧಾನ ರೀತ್ಯಾ ಉಪಾಸನಾ ಮಾಡಿದವರೆಂದು ಕರೆಸಿದವರಾಗಿ ಈ ಅಧಿಕಾರಿಗಳು, ಜೀವನ್ಮುಕ್ತರೆನಿಸುವರು – ಪಕ್ವಯೋಗಿಗಳಾಗಿ ಲಿಂಗಭಂಗ ಇಲ್ಲದ, ಜನನ ಮರಣಾದಿಗಳು ಇಲ್ಲದ ಮಹರಾದಿ ಸತ್ಯಾಂತಲೋಕಗಳಲ್ಲಿ ಇದ್ದು ಜೀವನ್ಮುಕ್ತರೆಂತ ಕರೆಸಿ ಬ್ರಹ್ಮಣಾ ಸಹ ಲಿಂಗಭಂಗ ಐದತಾರೆ ಎಂತ ತಾತ್ಪರ್ಯ.

**ತನ್ನನಂತಾನಂತರೂಪ ಹಿ ।**
**ರಣ್ಯಗರ್ಭಾದಿಗಳೊಳಗೆ ಕಾ ।**
**ರುಣ್ಯಸಾಗರ ಹರಹಿ ಅವರವರಖಿಳ ವ್ಯಾಪಾರ ॥**
**ಬನ್ನಬಡದಲೆ ಮಾಡಿ ಮಾಡಿಸಿ ।**
**ಧನ್ಯರೆನಿಸಿ ಸಮಸ್ತ ದಿವಿಜರ ।**
**ಪುಣ್ಯಕರ್ಮವ ಸ್ವೀಕರಿಸಿ ಫಲವಿತ್ತು ಪಾಲಿಸುವ ॥ ೩೧ ॥**

ಮೂಲರೂಪಿ ಶ್ರೀ ನಾರಾಯಣ ರೂಪದಿಂದ ಅಭಿವ್ಯಕ್ತವಾದ ಅನಂತಾನಂತ ರೂಪಗಳಿಂದ ಏನು ವ್ಯಾಪಾರ ಮಾಡತಾನೆಂದರೆ ಹೇಳತಾರೆ.

ಕಾರುಣ್ಯಸಾಗರ–ಕರುಣಾಸಮುದ್ರನಾದ ಶ್ರೀ ನಾರಾಯಣ ದೇವರು, ತನ್ನನಂತಾನಂತರೂಪ–ತನ್ನ ಅನಂತಾನಂತ ರೂಪವನ್ನು ಅಂದರೆ ರೂಪಗಳನ್ನು, ಹಿರಣ್ಯಗರ್ಭಾದಿಗಳೊಳಗೆ–ಬ್ರಹ್ಮ ದೇವರೇ ಮೊದಲಾದ ಯಾವತ್ತು ದೇವತೆಗಳ ಒಳಗೆ, ಹರಹಿ–ನೆರಹಿದವನಾಗಿ, ಅವರವರ–ಆಯಾ ದೇವತೆಗಳ, ಅಖಿಳ–ಸಮಸ್ತವಾದ, ವ್ಯಾಪಾರ–ಕರ್ಮಗಳ, ಬನ್ನಬಡದಲೆ–ಆಯಾಸಬಡದಲೆ, ಮಾಡಿ ಮಾಡಿಸಿ–ಅವರವರ ದೇಹಗತ ಅವರಕಿಂತಲೂ ಸ್ವೋತ್ತಮರಾದ ತತ್ವನಿಯಾಮಕರಾದ ದೇವತೆಗಳಿಂದ ಬಿಂಬಕ್ರಿಯಾ ದ್ವಾರಾ ಮಾಡಿ ತದ್ದ್ವಾರಾ ತತ್ವದೇವತೆಗಳ ದ್ವಾರಾ ದೇಹಧಾರಿಯಾದ ಜೀವನಿಂದ

ಮಾಡಿಸಿದವನಾಗಿ, ಧನ್ಯರೆನಿಸಿ—ಅವರನ್ನು ಪುಣ್ಯವಂತರು ಎಂತ ಎನಿಸಿ, ಸಮಸ್ತ ದಿವಿಜರ— ಬ್ರಹ್ಮಾದಿ ದೇವಗಂಧರ್ವಾಂತ, ಸಮಸ್ತ ದೇವತೆಗಳ, ಪುಣ್ಯಕರ್ಮವ ಸ್ವೀಕರಿಸಿ—ಸ್ವಾಮಿ ಭೃತ್ಯನ್ಯಾಯದಿಂದ ತನ್ನ ಪ್ರೇರಣೆಯಿಂದ ಮಾಡಲ್ಪಟ್ಟ ಪುಣ್ಯ ಕರ್ಮಗಳ ಪುನಶ್ಚ ತನ್ನ ಪ್ರೇರಣೆಯಿಂದ ಅವರ ದ್ವಾರಾ ಸ್ವೀಕಾರ ಮಾಡಿದವನಾಗಿ ಅವರಿಗೆ, ಫಲವಿತ್ತು—ತನ್ನ ಸಂದರ್ಶನ ರೂಪವಾದ ಫಲವನ್ನು ಕೊಟ್ಟು, ಪಾಲಿಸುವ—ಸಂರಕ್ಷಣೆಯನ್ನು ಮಾಡತಾನೆ.

**ತಾ||** ನಿರಂಶರಿಗೆ ಸಾಂಶರ ದ್ವಾರಾ ನಿಯಾಮಕನಾಗಿ ಪುಣ್ಯಕರ್ಮಗಳ ಮಾಡಿಸಿ ಅವುಗಳನ್ನು ಸ್ವೀಕರಿಸಿ ಫಲ ಕೊಡುವೋಪಾದಿಯಲಿ ದೇವತೆಗಳಿಗೆ ಸ್ವೋತ್ತಮ ದೇವತೆ ತತ್ವನಿಯಾಮಕರ ಮಾಡಿ ತದ್ದ್ವಾರಾ ಪುಣ್ಯಕರ್ಮಗಳನ್ನು ಮಾಡಿಸಿ ಅವುಗಳನ್ನು ತಾನು ಸ್ವೀಕರಿಸಿ ಫಲ ಕೊಡತಾನೆ. ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ ಎಂದರೆ ದೇಹದ ನೆರಳು ದೃಷ್ಟಾಂತವೆಂದು ತಾತ್ಪರ್ಯ.

**ವಿಶೇಷಾರ್ಥ :—** ತ್ರಿವಿಧ ಜೀವರ ಯೋಗ್ಯತಾನುಸಾರ ಅನಂತಾನಂತ ರೂಪ ಗಳಿಂದ ಸ್ವರೂಪದಲಿ, ಬಾಹ್ಯದಲಿ ಇದ್ದು ಸಾಧನ ಮಾಡಿ ಮಾಡಿಸಿ, ಸ್ವರೂಪ ಅಭಿವ್ಯಕ್ತಿ ರೂಪವಾದ ಫಲವಿತ್ತು ಪಾಲಿಸುತ್ತಾನೆ. ಅವರವರ ಅನಾದಿ ಯೋಗ್ಯತಾ ಅನುಸರಿಸಿ ಕರ್ಮಗಳು ಮಾಡಿಸಿ ಅದರನ್ನ ತೆಗೆದುಕೊಂಡು ಅದಕ್ಕೆ ದಾವ ಫಲ ಕೊಡಬೇಕೋ ಅದರನ್ನ ಕೊಡತಾನೆ ಹೊರತು ನಿಮಿತ್ತವಿಲ್ಲದೇ ಫಲ ಕೊಡೋದಿಲ್ಲ ಎಂತ ತಾತ್ಪರ್ಯ.

**ಸಾಗರದೊಳಿಹ ನದಿಯ ಜಲಭೇ |**
**ದಾಗಸದೊಳಿಪ್ಪಬ್ದ ಬಲ್ಲವು |**
**ಕಾಗೆಗುಬ್ಬಿಗಳರಿಯಬಲ್ಲದೆ ನದಿಯ ಜಲಸ್ಥಿತಿಯ ||**
**ಭೋಗಿವರ ಪರಿಯಂಕ ಶಯನನೊ |**
**ಳೀ ಗುಣತ್ರಯಬದ್ಧ ಜಗವಿಹ |**
**ದಾಗಮಜ್ಞರು ತಿಳಿವರಜ್ಞಾನಿಗಳಿಗಳವಡದು || ೩೨ ||**

ಸರ್ವ ಚರಾಚರಗಳಲ್ಲಿ ಪರಮಾತ್ಮ ಭಿನ್ನ ಭಿನ್ನವಾಗಿ ವ್ಯಾಪ್ತನಾಗಿ ಇದ್ದಾನೆ ಎಂಬುದು ಜ್ಞಾನಿಗಳು ತಿಳಿಯತಾರೆ. ಅಜ್ಞಾನಿಗಳು ತಿಳಿಯಲಾರರು, ಎಂತ ಹೇಳತಾರೆ.

ಸಾಗರದೊಳಿಹ—ಸಮುದ್ರದಲ್ಲಿ ಕಲೆತು ಇರುವ, ನದಿಯ ಜಲ—ನದಿ ಉದಕದ, ಭೇದ—ಸಮುದ್ರೋದಕದಲ್ಲಿ ಕಲೆತು ಲವಣ ಜಲವಾಗದೇ ಭಿನ್ನ ಭಿನ್ನಗಳಾಗಿ ಇರತಕ್ಕ ಭೇದವನ್ನು, ಆಗಸದೊಳಿಪ್ಪ—ಆಕಾಶದಲ್ಲಿ ಸಂಚಾರ ಮಾಡುವ, ಅಬ್ದ ಬಲ್ಲವು—(ಅಬ್— ನೀರು, ದ—ಕೊಡತಕ್ಕದ್ದು) ಮೇಘಗಳು ಅರಿಯಬಲ್ಲವು. ನದಿಯ ಜಲಸ್ಥಿತಿಯ— ನದ್ಯುದಕ ಲವಣ ಸಮುದ್ರದಲ್ಲಿ ಕಲೆತರೂ ಅದರ ರುಚಿ ಏಕಪ್ರಕಾರವಾಗಿ ಇರುತ್ತದೆ ಎಂಬುವುದು, ಕಾಗೆ ಗುಬ್ಬಿಗಳರಿಯಬಲ್ಲವೆ—ಆಕಾಶದಲ್ಲಿ ಸಂಚಾರ ಮಾಡತಕ್ಕ ಕಾಗೆ, ಗುಬ್ಬಿ ಇತ್ಯಾದಿ ಪಕ್ಷಿಗಳು ತಿಳಿಯಲಾಪವೇ ? ತಿಳಿಯಲಾರವು ಎಂತ ಅರ್ಥ.

ಭೋಗಿವರ–ಸರ್ವಶ್ರೇಷ್ಠನಾದ ಶೇಷದೇವರ, ಪರಿಯಂಕ ಶಯನನೊಳು–ಮಂಚವನ್ನು ಮಾಡಿಕೊಂಡು ಶಯನ ಮಾಡುವ ಸಮುದ್ರಕ್ಕೆ ಸಮನಾದ ಶ್ರೀಪರಮಾತ್ಮನೊಳು ನದಿಗಳಿಗೆ ಸಮವಾದ ಪ್ರಾಕೃತಾಪ್ರಾಕೃತ ಗುಣತ್ರಯಗಳು ಇನ್ನು ಯಾವತ್ತು ಸ್ಥಾವರ ಜಂಗಮಗಳು ಇದ್ದಕಾಲಕ್ಕೂ, ಈ ಗುಣತ್ರಯಬದ್ಧ ಜಗ–ಗುಣತ್ರಯ ಅನಾದಿಯಿಂದ ಗುಣತ್ರಯಾತ್ಮಕ ಲಿಂಗದೇಹದಿಂದ, ಬದ್ಧ–ಬದ್ಧನಾಗಿ, ಆ ಕಾರಣವನ್ನು ಹಿಡದು, ಈ ಜಗವು ವರ್ತಮಾನ ಸೃಷ್ಟಿಯಲ್ಲಿ ಕಾರ್ಯಾತ್ಮನಾ ಪರಿಣಮಿಸಿ ಸಾತ್ವಿಕಾದಿ ಗುಣತ್ರಯದಿಂದ ಸಂಬಂಧಿಸಿ ಅಲ್ಲದೆ ಜ–ಜನಿಸಲ್ಪಟ್ಟ, ಗ–ಗುಣತ್ರಯ ಸ್ಥೂಲ ದೇಹದಿಂದ ಜನಿಸಲ್ಪಟ್ಟ ಜೀವಗೆ ಗುಣತ್ರಯಜನಿತ ಸುಖದುಃಖಾದಿಗಳು, ಇಹದು–ಇರೋದಾಗಿ ಅದೆ. ಪರಮಾತ್ಮಗೆ ಪ್ರಾಕೃತ ಗುಣತ್ರಯ ಸಂಬಂಧ ಇಲ್ಲ ಎಂತಲೂ, ಜೀವ ಪರಮಾತ್ಮರಿಗೆ ಭೇದ ಎಂತಲೂ, ಆಗಮಜ್ಞರು–ಶಾಸ್ತ್ರ ಓದಿದ ಜ್ಞಾನಿಗಳು, ತಿಳಿವರು–ತಿಳಿಯೋವರಾಗತಾರೆ. ಅಜ್ಞಾನಿಗಳಿಗಳವಡದು – ಭೇದಜ್ಞಾನಹೀನರಾದ ತಮೋಯೋಗ್ಯರಿಗೆ, ಅಳವಡದು–ತಿಳಿಯಲಾರದು.

**ವಿಶೇಷಾರ್ಥ :–** ಕಾಗೆ ಗುಬ್ಬಿಗಳು ಅರಿಯದಿದ್ದರೇ ಸಮುದ್ರದಲ್ಲಿ ನದಿಯ ಜಲ ಭೇದರೂಪದಿಂದ ಪ್ರತ್ಯೇಕ ಇಲ್ಲ ಎಂತ ಹೇಳಲಾದೀತೇ ? ಅತ ಏವ ಭೇದ ಸತ್ಯವೂ ತಿಳಿದವರಿಗೆ ಗೋಚರವೇ ಸರಿ. ತಿಳಿಯದವರಿಗೇ ಕ್ಷಾರೋದಕವೆ ಅಂದರೆ ದುಃಖವೇ ಪ್ರಾಪ್ತಿ ಎಂತ ತಾತ್ಪರ್ಯ. ಶ್ರೀ ಪರಮಾತ್ಮನೊಳಗೆ ಚರಾಚರ ಪ್ರಪಂಚ ಇರೋದಾಗಿ ಅದೆ. ಈ ಚರಾಚರ ಪ್ರಪಂಚದಲ್ಲಿ ಅಂತರ್ಗತನಾಗಿ ಪರಮಾತ್ಮ ಇದ್ದಾನೆ. ಇದರ ಭೇದ ಸ್ವರೂಪ ಅಜ್ಞಾನಿಗಳಾದ ಮಿಥ್ಯಾವಾದಿಗಳು ತಿಳಿಯಲಾರರು. ಸಮುದ್ರಸದೃಶನಾದ ಪರಮಾತ್ಮ ಬಲ್ಲ. ನದೀಸದೃಶರಾದ ತಮೋಯೋಗ್ಯರು ಅರಿಯರು.

ನದಿಯ ಜಲವೂ ಸಮುದ್ರೋದಕವೂ ಉದಕ ರೂಪದಿಂದಲೇ ಏಕತ್ರ ಇದ್ದ ಕಾಲಕ್ಕೂ ಭಿನ್ನಗಳು ಹ್ಯಾಂಗೋ ತದ್ವತ್ ಸರ್ವಾಧಿಷ್ಠಾನದಲ್ಲೂ ಪರಮಾತ್ಮ ಮಿಳಿತನಾಗಿ ಇದ್ದ ಕಾಲಕ್ಕೂ ಅಧಿಷ್ಠಾನವೇ ಪರಮಾತ್ಮನಲ್ಲ. ತದ್ಭಿನ್ನ ಎಂತ ತಿಳಿಯತಕ್ಕದ್ದು. ಜೀವನೂ ಭಿನ್ನನೇ ಅಂದರೆ ಗುಣತ್ರಯ ಸಂಬಂಧದಿಂದ ಸುಖದುಃಖಭೋಗ ಜೀವಗೆ ಉಂಟು. ಪರಮಾತ್ಮಗೆ ಇಲ್ಲ. ಏಕೆಂದರೆ ಜೀವ ಸ್ವತಂತ್ರನಲ್ಲ. ಅಪೂರ್ಣ. ಅನಾದಿಯಿಂದ ಗುಣಬದ್ಧ. ಪರಮಾತ್ಮ ಸ್ವತಂತ್ರ. ಪರಿಪೂರ್ಣ. ಪ್ರಾಕೃತಬದ್ಧನಲ್ಲವಾದಕಡಿಯಿಂದ ಪರಮಾತ್ಮಗೆ ಗುಣಸಂಬಂಧ ಸುಖದುಃಖಾದಿಗಳು ಲೇಪವಿಲ್ಲ. ಜೀವಗೆ ಉಂಟು ಎಂತ ತಾತ್ಪರ್ಯ. ಈ ಪ್ರಕಾರ ಸರ್ವಗತ ಪರಮಾತ್ಮನ ತಿಳಿಯಬೇಕು.

**ಕರಣಗುಣಭೂತಗಳೊಳಗೆ ತ ।**<br>
**ದ್ವರರೆನಿಪ ಬ್ರಹ್ಮಾದಿ ದಿವಿಜರೊ ।**<br>
**ಳರಿತು ರೂಪಚತುಷ್ಟಯಗಳನುದಿನದಿ ಸರ್ವತ್ರ ॥**

**ಸ್ಮರಿಸುತನುಮೋದಿಸುತ ಹಿಗ್ಗುತ ।**
**ಪರವಶದಿ ಪಾಡುವವರಿಗೆ ತ ।**
**ನ್ನಿರವ ತೋರಿಸಿ ಭವವಿಮುಕ್ತರ ಮಾಡಿ ಪೋಷಿಸುವ ॥ ೩೩ ॥**

ಪೂರ್ವೋಕ್ತಪ್ರಕಾರ ಅನುಸಂಧಾನ ಮಾಡಿದವರಿಗೆ ಭವವಿಮುಕ್ತರನ್ನ ಮಾಡಿ ಅವರಿಗೆ ಪ್ರತ್ಯಕ್ಷನಾಗತಾನೆ ಎಂತ ಹೇಳತಾರೆ.

ಕರಣ–ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚಮನೋ ವೃತ್ತಿಗಳು, ಭೂತ–ಪೃಥಿವ್ಯಾದಿ ಪಂಚಭೂತಗಳಲ್ಲಿ ಐದು ರೂಪಗಳು, ಗುಣ–ಸತ್ವಾದಿ ಗುಣರೂಪಗಳು ಮೂರು. ಇದರಿಂದ ಜನ್ಯಗಳಾದ ಮಹತ್ತತ್ವ ಎರಡು, ಅಂತು ಗುಣ ತ್ರಯದ ಕೂಡ ಐದರಲ್ಲಿ ಐದು ರೂಪಗಳು. ಜೀವರು ಐದು ವಿಧ. ದೇವ, ಋಷಿ, ಪಿತೃ, ಪ ಎಂದರೆ ಅರಸರು, ಗಂಧರ್ವರು. ಇವರಲ್ಲಿ ಐದು ರೂಪಗಳು. ಈ ಐದು ರೂಪಗಳು ದಾವದೆಂದರೆ, ರೂಪಚತುಷ್ಟಯಗಳು–ರೂಪ ಎಂದರೆ ಅವತಾರ. ರೂಪ ಗಳಿಗೆ ಮೂಲರೂಪವಾದ ನಾರಾಯಣರೂಪ ಒಂದು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಅಂತು ಐದು ರೂಪಗಳು, ಅನುದಿನ–ಪ್ರತಿದಿನದಲ್ಲೂ, ಸರ್ವತ್ರ– ಪೂರ್ವೋಕ್ತ ಸರ್ವಾಧಿಷ್ಠಾನಗಳಲ್ಲಿ, ಸ್ಮರಿಸುತ ಅನುಮೋದಿಸುತ–ಶಾಸ್ತ್ರೋಕ್ತ ಪ್ರಕಾರ ಚಿತ್ತದಲ್ಲಿ ಸ್ಮರಿಸುತ್ತಾ, ಅನು ಎಂದರೆ ಪರಮಾತ್ಮನೇವೇ ಅನುಸರಿಸಿ ಅನ್ಯ ವಿಷಯಗಳ ಅನುಸರಿಸದೆ ಮೋದಪಡುತ್ತಾ, ಹಿಗ್ಗುತ್ತಾ–ಆನಂದೋದ್ರೇಕನಾಗುತ್ತಾ, ಪರವಶದಿ– ಮನಸ್ಸನ್ನು ಪರಮಾತ್ಮನಲ್ಲಿ ವಶಮಾಡಿದವನಾಗಿ, ಮೈಮರೆದು–ದೇಹಭಾವ ಮರೆತು, ಪಾಡುವವರಿಗೆ–ಕೊಂಡಾಡುವವರಿಗೆ, ತನ್ನಿರವ ತೋರಿಸಿ–ದೇಹದಲ್ಲಿ ತಾನು (ಪರಮಾತ್ಮ) ಇರತಕ್ಕ ಸ್ಥಾನವನ್ನು ತೋರಿಸಿ, ತನ್ನ ದರ್ಶನವ ಕೊಟ್ಟು, ಭವವಿಮುಕ್ತರ ಮಾಡಿ– ಜನನಮರಣಾಖ್ಯ ಸಂಸಾರದಿಂದ ಛಂದಾಗಿ ರಹಿತರನ್ನಾಗಿ ಮಾಡಿ, ಪೋಷಿಸುವ–ತನ್ನ ವೈಕುಂಠಲೋಕದಲ್ಲಿಟ್ಟು ಸಂರಕ್ಷಿಸುವ. ಹ್ಯಾಂಗೆ ನೆನೆದವರಿಗೆ ಎಂದರೆ ತದ್ವರವೆನಿಪ– ಕರಣಭೂತಗಳಿಗೆ ವರ ಎಂದರೆ ಅಭಿಮಾನಿಗಳಾದ, ಬ್ರಹ್ಮಾದಿ ದಿವಿಜರ–ಬ್ರಹ್ಮನೇ ಆದಿ ಯಾಗಿ ಚತುರವಿಂಶತಿ ತತ್ವಾಭಿಮಾನಿ ದೇವತೆಗಳಲ್ಲಿ, ರೂಪಚತುಷ್ಟಯಗಳ ಅನುದಿನದಿ ನೆನೆವವರಿಗೆ, ಇನ್ನೂ ಸರ್ವತ್ರ–ಚರಾಚರ ಸರ್ವತ್ರದಲ್ಲಿ ಈ ಪ್ರಕಾರ ನೆನೆವವರಿಗೆ ಎಂತ ತಾತ್ಪರ್ಯ. ಆದ್ದರಿಂದ ಭೇದಜ್ಞಾನದಿಂದ ಸರ್ವತ್ರ ಉಪಾಸನಾ ಮಾಡೋವರಾಗ ಬೇಕು.

**ಮೂಲರೂಪನು ಮನದೊಳಿಹ ಶ್ರವ ।**
**ಣಾಲಯೊಳಗಿಹ ಮತ್ಸ್ಯ ಕೂರ್ಮನು ।**
**ಕೋಲರೂಪನು ತ್ವಗ್ರರಸನದೊಳಗಿಪ್ಪ ನರಸಿಂಹ ॥**
**ಬಾಲವಟು ವಾಮನನು ನಾಸಿಕ ।**
**ನಾಳದೊಳು ವದನದಲಿ ಭಾರ್ಗವ ।**
**ವಾಲಿಭಂಜನ ಹಸ್ತದೊಳು ಪಾದದಲಿ ಶ್ರೀಕೃಷ್ಣ ॥ ೩೪ ॥**

ಮತ್ಸ್ಯಾದಿ ರೂಪಗಳು ಇಂದ್ರಿಯಗಳಲ್ಲಿ ಇರತಕ್ಕದ್ದರನ್ನ ಹೇಳತಾರೆ.

ಮೂಲರೂಪನು–ಮೂಲರೂಪಿ ನಾರಾಯಣ, ಮನದೊಳಿಹ – ಮನಸ್ಸಿನಲ್ಲಿ ಇದ್ದಾನೆ, ಶ್ರವಣಾಲಯೊಳಗಿಹ ಮತ್ಸ್ಯ–ಶಬ್ದಗಳ ಕೇಳೋದರೆ ಆಲಯಭೂತವಾದ ಕಿವಿಗಳಲ್ಲಿ ಮತ್ಸ್ಯರೂಪಿ ಪರಮಾತ್ಮ ಇದ್ದಾನೆ. ಕೂರ್ಮನು–ಕೂರ್ಮರೂಪಿ ಪರಮಾತ್ಮನು, ತ್ವಕ್–ತ್ವಗಿಂದ್ರಿಯದಲ್ಲಿ ಇದ್ದಾನೆ. ರಸನದೊಳಗಿಪ್ಪ–ಜಿಂಹ್ವೆಯಲ್ಲಿ, ಕೋಲರೂಪನು–ವರಾಹರೂಪಿ ಪರಮಾತ್ಮ ಇದ್ದಾನೆ. ನಾಸಿಕದೊಳು–ನಾಸಿಕಾದ್ವಾರಗಳಲ್ಲಿ, ನರಸಿಂಹ–ನರಸಿಂಹರೂಪಿ ಪರಮಾತ್ಮ ಇದ್ದಾನೆ. ಬಾಲವಟು ವಾಮನನು – ಬಾಲ ಬ್ರಹ್ಮಚಾರಿಯಾದ ವಾಮನರೂಪಿ ಪರಮಾತ್ಮ, ವದನದಲಿ–ಬಾಯಿಯಲ್ಲಿ ಇದ್ದಾನೆ. ಭಾರ್ಗವ–ಪರಶುರಾಮದೇವರು, ಹಸ್ತದಲಿ–ಕೈಗಳಲ್ಲಿ ಇದ್ದಾನೆ. ವಾಲಿಭಂಜನ–ವಾಲಿಯನ್ನು ಸಂಹಾರಮಾಡಿದ ಶ್ರೀರಾಮಚಂದ್ರಮೂರ್ತಿ, ಪಾದದಲಿ–ಪಾದಗಳಲ್ಲಿ ಇದ್ದಾನೆ. ಶ್ರೀಕೃಷ್ಣ ನೇತ್ರೇಂದ್ರಿಯದಲ್ಲಿ ಇದ್ದಾನೆ. (ಇದು ಮುಂದಿನ ಶ್ಲೋಕದಲ್ಲಿ ಬರುತ್ತದೆ.)

**ಜಿನ ವಿಮೋಹಕ ಬುದ್ಧ ಪಾಯುಗ ।**
**ದನುಜಮರ್ದನ ಕಲ್ಕಿ ಮೇಢ್ರದಿ ।**
**ಇನಿತು ದಶರೂಪಗಳ ದಶಕರಣಂಗಳಲಿ ತಿಳಿದು ॥**
**ಅನುಭವಿಪ ವಿಷಯಗಳ ಕೃಷ್ಣಾ ।**
**ರ್ಪಣವೆನಲು ಕೈಕೊಂಬ ವೃಜಿನಾ ।**
**ರ್ದನ ವರಜಗನ್ನಾಥವಿಠ್ಠಲ ವಿಶ್ವವ್ಯಾಪಕನು ॥ ೩೫ ॥**

ಅವಶಿಷ್ಟ ಹೇಳತಾರೆ.

ಜಿನವಿಮೋಹಕ – ಜೈನರಲ್ಲಿ ಉತ್ಪನ್ನನಾಗಿ ಅವರ ನೇತ್ರಕ್ಕೆ ಬಾಲಕ ಎಂತ ಮೋಹಗೊಳಿಸಿದ ಮತ್ತು ಅವರಿಗೆ ಪೂರ್ವದಲಿ ಇರತಕ್ಕ ಜ್ಞಾನವನ್ನು ಮೋಹಗೊಳಿಸಿದ ಎಂಬೋಣದರಿಂದ ನೇತ್ರದಿಂದ ಮೋಹಪಟ್ಟದ್ದರಿಂದ ಮೋಹದಿಂದ ಯುಕ್ತರಾದ ನೇತ್ರಗಳಿಗೆ ಶ್ರೀ ಕೃಷ್ಣ ಎಂತ ಮ್ಯಾಲಿನ ಶ್ಲೋಕದಿಂದ ಅರ್ಥ ಮಾಡಿಕೋಬೇಕು. ಬುದ್ಧ–ಬುದ್ಧರೂಪಿ ಪರಮಾತ್ಮ, ಪಾಯುಗ–ಪಾಯು ತತ್ವದಲ್ಲಿ ಇದ್ದಾನೆ. ದನುಜ ಮರ್ದನ–ದೈತ್ಯರ ಸಂಹಾರ ಮಾಡತಕ್ಕ, ಕಲ್ಕಿ ಮೇಢ್ರದಿ–ಕಲ್ಕಿರೂಪಿ ಪರಮಾತ್ಮ ಮೂತ್ರ ಸ್ಥಾನದಲ್ಲಿ ಇದ್ದಾನೆ. ಮೂಲರೂಪಿ ನಾರಾಯಣ ರೂಪ ಒಂದು. ಮತ್ಸ್ಯಾದಿ ರೂಪಗಳು ಹತ್ತು. ಅಂತು ಹನ್ನೊಂದು. ಇನಿತು ದಶರೂಪಗಳ–ಪೂರ್ವೋಕ್ತ ಹತ್ತು ರೂಪಗಳ, ದಶಕರಣಂಗಳಲಿ–ದಶೇಂದ್ರಿಯಗಳಲ್ಲಿಯೂ ಮನದಲಿ ಒಂದು ರೂಪ, ಅಂತು ಹನ್ನೊಂದು ರೂಪಗಳ, ತಿಳಿದು–ಆಯಾ ಇಂದ್ರಿಯಗಳಲ್ಲಿ ತಿಳಿದು ಆಯಾ ರೂಪಗಳ ದ್ವಾರಾ, ಅನುಭವಿಪ ವಿಷಯಗಳೇ–ಭೋಗ ಮಾಡತಕ್ಕ ವಿಷಯಗಳೇ, ಕೃಷ್ಣಾರ್ಪಣ ವೆನಲು–ಕೃಷ್ಣನಿಗೆ ಅರ್ಪಿತ ಎಂದರೆ ಪರಸ್ಪರ ಐಕ್ಯಚಿಂತನಾ ರೂಪವಾದ ಅರ್ಪಿತ ಮಾಡಿದರೆ, ವೃಜಿನಾರ್ದನ–ಪಾಪಗಳನ್ನು ಸಂಹರಿಸತಕ್ಕ ಜನಾರ್ದನ ರೂಪಿ ಪರಮಾತ್ಮ,

ಈ ಅನುಸಂಧಾನ ಮಾಡಿದವರ ದೋಷದೂರರನ್ನಾಗಿ, ಮಾಡುವಂಥಾ ವರ–ಸರ್ವೋತ್ತಮನಾದಂತಾ, ಜಗನ್ನಾಥವಿಠ್ಠಲ ವಿಶ್ವವ್ಯಾಪಕನು–ಸರ್ವ ಚರಾಚರಗಳಲ್ಲಿ ವ್ಯಾಪಕನಾದಂಥಾ ಪರಮಾತ್ಮ ತಾರತಮ್ಯ ಪಂಚಭೇದ ಜ್ಞಾನದಿಂದ ದಾರಾದರೆ ನಂಬಿ ಸದ್ಗತಿ ಪಡೆಯುವುದಕ್ಕೆ ಅರ್ಪಿತ ಮಾಡಿದ್ದರನ್ನ, ಕೈಕೊಂಬ–ಸ್ವೀಕರಿಸುವ.

**ವಿಶೇಷಾರ್ಥ :–** ಮತ್ಸ್ಯಾದಿ ರೂಪಗಳು ಭೋಗ ಮಾಡತಕ್ಕ ರೂಪಗಳು ಎಂತ ತಿಳಿಯಬೇಕು.

| | ದಶಾವತಾರಗಳು | ರಮಾ ರೂಪಗಳು |
|---|---|---|
| ೧. | ಮತ್ಸ್ಯ | ವೇದಾ |
| ೨. | ಕೂರ್ಮ | ವೇದವತೀ |
| ೩. | ವರಾಹ | ಧಾತ್ರೀ |
| ೪. | ನೃಸಿಂಹ | ಮಹಾಲಕ್ಷ್ಮೀ |
| ೫. | ವಾಮನ | ಸುಖಾ |
| ೬. | ಭಾರ್ಗವ | ಹರಿಣೀ |
| ೭. | ರಾಮ | ಸೀತಾ |
| ೮. | ಕೃಷ್ಣ | ರುಕ್ಮಿಣೀ |
| ೯. | ಬುದ್ಧ | ದೇವಕೀ |
| ೧೦. | ಕಲ್ಕಿ | ಪ್ರಭಾ |

ಈ ಆರನೆ ಸಂಧಿಯಲ್ಲಿ ವಿವರಿಸಲ್ಪಟ್ಟ ಮುಖ್ಯ ಅಂಶಗಳು.

೭ನೇ ಶ್ಲೋಕ :– ಶಿಶುಪಾಲನ ಉದರದಲ್ಲಿ ಧರಿಸಿದ ವಿಚಾರ.

೧೩ನೇ ಶ್ಲೋಕ :– ಅವಿದ್ಯಾಕ್ಕೆ ಕೃದ್ಧೋಲ್ಕಾದಿಗಳು. ಲಿಂಗದಲ್ಲಿ ವಾಯು ದೇವರಿಲ್ಲ.

೨೬ನೇ ಶ್ಲೋಕ :– ಅವಿದ್ಯಾಕ್ಕೆ ಕೃದ್ಧೋಲ್ಕಾದಿಗಳು. ಲಿಂಗದಲ್ಲಿ ವಾಯು ದೇವರಿಲ್ಲ.

೧೪ನೇ ಶ್ಲೋಕ :– ಹಿಂಕಾರಾದಿ ಸಪ್ತಕಾಲೋಪಾಸನ.

೨೫ನೇ ಶ್ಲೋಕ :– ಲಿಂಗಶರೀರ ವಿಚಾರ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಪಂಚಮಹಾಯಜ್ಞಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಏಳನೆಯ ಸಂಧಿ

## ಪಂಚತನ್ಮಾತ್ರ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಭೂ ಸಲಿಲ ಶಿಖಿ ಪವನ ಭೂತಾ |**
**ಕಾಶದೊಳಗೈದೈದು ತನ್ಮಾ |**
**ತ್ರಾಸಹಿತ ಒಂದಧಿಕ ಪಂಚಾಶದ್ವರಣವೇದ್ಯ ||**
**ಈ ಶರೀರದಿ ವ್ಯಾಪಿಸಿದ್ದು ಸು |**
**ರಾಸುರರಿಗೆ ನಿರಂತರದಲಿ ಸು |**
**ಖಾಸುಖಪ್ರದನಾಗಿ ಆಡುವ ದ್ವೇಷಿಪರ ಬಡಿವ || ೧ ||**

**ಟೀಕಾ :**

ಹಿಂದಿನ ಸಂಧಿಯಲ್ಲಿ ಸ್ಥೂಲದೇಹದ ಉತ್ಪತ್ತಿವಿಚಾರ ಹೇಳಿ, ಈ ಸಂಧಿಯಲ್ಲಿ ಪೂರ್ವೋಕ್ತ ಸ್ಥೂಲದೇಹದ ವಿಚಾರವನ್ನೇ ವಿಶದವಾಗಿ ನಿರೂಪಣ ಮಾಡತಾರೆ.

ಸ್ಥೂಲದೇಹ ಎಂಥಾದ್ದು ಎಂದರೆ, ವಿವರ :– ಭೂ–ಭೂಮಿ, ಸಲಿಲ–ಉದಕ, ಶಿಖಿ–ಅಗ್ನಿ, ಪವನ–ವಾಯು, ಆಕಾಶ–ಅವಕಾಶಕ್ಕೆ ಆಕಾಶ ಎಂತ ಹೆಸರು. (ಇವುಗಳು), ಭೂತ–ಪಂಚಭೂತಗಳು, ಒಳಗೆ–ಈ ಐದು ಭೂತಗಳೊಳಗೆ, ಐದೈದು–ಒಂದೊಂದು ಭೂತದಲ್ಲಿ ಐದೈದು ಭೂತಗಳು (ಪ್ರಾಚುರ್ಯಾಪ್ರಾಚುರ್ಯದಿಂದ ಸಂಸ್ಪೃಷ್ಟಗಳಾಗಿ, ಇರೋಣದರಿಂದ ಐದೈದು ಇಪ್ಪತ್ತೈದು ಭೂತಗಳು ಎಂತ ತಿಳಿಯಬೇಕು). ಅಂತು ಇಪ್ಪತ್ತೈದು ಭೂತಗಳು ಆಗೋದಾಯಿತು. ತನ್ಮಾತ್ರಾಸಹಿತ–ಪೂರ್ವೋಕ್ತ ಇಪ್ಪತ್ತೈದರಲ್ಲಿ ಒಂದೊಂದರಲಿ ಒಂದೊಂದು ತನ್ಮಾತ್ರಾಸಹಿತ ಇರೋದಾಗಿ ಅದೆ. ಅಂತು ತನ್ಮಾತ್ರಗಳು ಇಪ್ಪತ್ತೈದು (೨೫), ಒಂದೊಂದರಲ್ಲಿ ಐದೈದು ತನ್ಮಾತ್ರಗಳು ಇರೋದಾಗಿ ಅದೆ.

ತನ್ಮಾತ್ರಗಳು ದಾವದೆಂದರೆ, ಗಂಧ, ರಸ, ರೂಪ, ಸ್ಪರ್ಶ, ಶಬ್ದ. ಒಂದೊಂದು ಭೂತದಲ್ಲಿ ಐದೈದು ಭೂತಗಳು, ಐದೈದು ತನ್ಮಾತ್ರಗಳು ಅವೆ. (ಗಂಧ ಪೃಥಿವಿಯಲ್ಲಿ, ರಸ ಉದಕದಲ್ಲಿ ಅಂದರೆ ಅಪ್ಪಿನಲ್ಲಿ, ರೂಪ ಅಗ್ನಿಯಲ್ಲಿ, ಸ್ಪರ್ಶ ವಾಯುವಿನಲ್ಲಿ, ಶಬ್ದ ಆಕಾಶದಲ್ಲಿ) ಸಂಸೃಷ್ಟದಿಂದ ಕೂಡಿಕೊಂಡಿರುವ ಪಂಚಭೂತಗಳು ಇಪ್ಪತ್ತೈದು, ಪಂಚತನ್ಮಾತ್ರಗಳು ಇಪ್ಪತ್ತೈದು, ಅಂತೂ ೫೦. ಈ ಐವತ್ತರಲ್ಲಿ ಸಹಿತ ಎಂದರೆ ಸಹಿತಗಳಾಗಿ ಅವೆ. ದಾವದು ಎಂದರೆ, ಒಂದಧಿಕ ಪಂಚಾಶದ್ವರ್ಣಗಳು ಸಹಿತವಾಗಿ ಅವೆ. ಈ ೫೧ ವರ್ಣಗಳು ಪಂಚಭೂತ, ಪಂಚತನ್ಮಾತ್ರಗಳು ಎನಿಸುವ ಪೂರ್ವೋಕ್ತ ಐವತ್ತರಲ್ಲಿ ಒಂದೊಂದರಲ್ಲಿ ೫೧ – ೫೧ ವರ್ಣಗಳಿಂದ ಯುಕ್ತವಾಗಿ ಅದೆ. ವೇದ್ಯ ಅಂದರೆ ಪರಮಾತ್ಮನ ಅನಂತಾನಂತ ರೂಪಗಳು. ಆ ರೂಪಗಳಿಗೆ ಅನಂತಾನಂತ ನಾಮಗಳು. ಈ ಅಕ್ಷರಗಳಿಂದಲೇ ವೇದ್ಯವಾಗಿ ಇರೋಣದರಿಂದ ಒಂದೊಂದರಲ್ಲಿ ಅನಂತಾನಂತ ರೂಪಗಳಿಂದ ಇರೋವನಾಗಿದ್ದಾನೆ. ಮತ್ತು ಪ್ರತಿ ಪ್ರತಿ ವರ್ಣಸಾಂಕೇತದಿಂದ ಅಜ, ಆನಂದ ಎಂತ ಮಾತೃಕಾನ್ಯಾಸಗತ ನಾಮಗಳಿಂದ ಕರೆಸಿಕೋತಕ್ಕ ಶ್ರೀಪರಮಾತ್ಮ, ಈ ಶರೀರದಿ–ಈ ವರ್ತಮಾನ ಸ್ಥೂಲಶರೀರದಲ್ಲೇನು, ಈ ಶರೀರದಲ್ಲಿ ವ್ಯಾಪಿಸಿದ್ದು, ಸುರ–ದೇವತೆಗಳ ಒಳಗೇನು, ಅಸುರ–ದೈತ್ಯರ ಒಳಗೇನು, ವ್ಯಾಪಿಸಿದ್ದು, ನಿರಂತರದಲಿ–ಪ್ರತಿದಿನದಲ್ಲೂ, ಸುರಾಸುರರಿಗೆ–ದೇಹದೊಳಗಿರುವ ದೇವದೈತ್ಯರಿಗೆ, ಸುಖಾಸುಖ– ಸುಖ–ದೇಹದಿಂದ ಆಗತಕ್ಕ ಸುಖ ದೇವತೆಗಳಿಗೆ, ಅಸುಖ–ದೇಹದಿಂದ ಆಗತಕ್ಕ ದುಃಖ ದೈತ್ಯರಿಗೆ, ಈ ಉಭಯವೂ ದೇಹಗತನಾದ ಜೀವಗೆ ಅವನ ಯೋಗ್ಯತಾನುಸಾರ ಅಲ್ಪವಾದ ಸುಖದುಃಖಗಳೆರಡೂನು, ಪ್ರದನಾಗಿ–ಕರ್ಮಾನುಸಾರ ಕೊಡೋವನಾಗಿ, ಆಡುವ–ದೇಹದಲ್ಲಿದ್ದು ಸಂಚಾರಮಾಡುವ, ದ್ವೇಷಿಪರ–ತನಗೆ ದ್ವೇಷಿಗಳಾದಂಥವರ, ಬಡಿವ–ಶಿಕ್ಷಿಸುವ. ತನ್ನ ಭಕ್ತರನ್ನ ತಾನು ರಕ್ಷಿಸುವ.

**ತಾ||** ಭೂಮಿಯೇ ಮೊದಲಾದ ಪಂಚಭೂತಗಳಲ್ಲಿ ಗಂಧಾದಿ ಐದು ತನ್ಮಾತ್ರಗಳು, ಒಂದೊಂದು ಭೂತದಲ್ಲಿ ಐದೈದು ತನ್ಮಾತ್ರಗಳು. ಆ ಒಂದೊಂದರಲ್ಲಿ ಐದೈದು ತತ್ವಗಳು ಸಹಿತ ಕೂಡಿರತಕ್ಕ ಈ ಸ್ಥೂಲಶರೀರದಲ್ಲಿ ಐವತ್ತೊಂದು ವರ್ಣಗಳಿಂದಲೂ, ತದ್ಗತ ವರ್ಣಗಳಿಂದಲೂ ಕರಿಸತಕ್ಕ ಶ್ರೀ ಪರಮಾತ್ಮನು ಅನಂತಾನಂತರೂಪಗಳಿಂದ ಇದ್ದು, ದೇಹಗತ ತತ್ವಾಭಿಮಾನಿ ದೇವತೆಗಳ ದ್ವಾರಾ ಜೀವನಿಂದ ಮಾಡಿಸಲ್ಪಡುವ ಸುಖದುಃಖಗಳ ದೇವದೈತ್ಯರಿಗೆ ಕರ್ಮಾನುಸಾರ ಕೊಡತಾ ಸಂಚಾರ ಮಾಡತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಭೂತಾಕಾಶ ಎಂದರೆ ಜಡಾಕಾಶ ಎಂತಲೂ ತಾತ್ಪರ್ಯವೆ. ಒಂದಧಿಕ ಪಂಚಾಶದ್ವರ್ಣಗಳ ವಿವರ.

ಅ, ಆ ಆರಂಭಮಾಡಿ ಅಂ, ಅಃ ವರಿಗೂ ೧೬ ಅಚ್‌ಗಳು.

| | | | | |
|---|---|---|---|---|
| ಕ, ಖ | ,, | ಙ | ,, | ೫ ಕ ವರ್ಗ |
| ಚ, ಛ | ,, | ಞ | ,, | ೫ ಚ ವರ್ಗ |
| ಟ, ಠ | ,, | ಣ | ,, | ೫ ಟ ವರ್ಗ |
| ತ, ಥ | ,, | ನ | ,, | ೫ ತ ವರ್ಗ |
| ಪ, ಫ | ,, | ಮ | ,, | ೫ ಪ ವರ್ಗ |
| ಯ, ರ | ,, | ಕ್ಷ | ,, | ೧೦ |
| | | | ಅಂತು | ೫೧ |

ಪ್ರಕಾರಾಂತರ. ಭೂ ಸಲಿಲ........ತನ್ಮಾತ್ರಸಹಿತ ಎಂದರೆ ವಿವರ.

೧) ಪೃಥಿವಿಯಲ್ಲಿ ಅಂದರೆ ಭೂಮಿಯಲ್ಲಿ ಇರತಕ್ಕದ್ದು ಐದು. ಗಂಧ, ಘ್ರಾಣ, ಪಾಯು, ಪ್ರಾಣವಾಯು, ಅಹಂಕಾರ.

೨) ಅಪ್ಪಿನಲ್ಲಿ ಇರತಕ್ಕದ್ದು ಐದು. ರಸ, ಜಿಹ್ವೆ, ಅಪಾನವಾಯು, ಚಿತ್ತ, ಗುದೇಂದ್ರಿಯ.

೩) ತೇಜದಲ್ಲಿ ಇರತಕ್ಕದ್ದು ಐದು. ರೂಪ, ಚಕ್ಷು, ವ್ಯಾನವಾಯು, ಬುದ್ಧಿ, ಪಾದೇಂದ್ರಿಯ.

೪) ವಾಯುವಿನಲ್ಲಿ ಇರತಕ್ಕದ್ದು ಐದು. ಸ್ಪರ್ಶ, ಪಾಣಿ, ಉದಾನವಾಯು, ಮನಸ್ಸು, ತ್ವಗಿಂದ್ರಿಯ.

೫) ಆಕಾಶದಲ್ಲಿ ಇರತಕ್ಕದ್ದು. ಶಬ್ದ, ವಾಗಿಂದ್ರಿಯ, ಸಮಾನವಾಯು, ಶ್ರೋತ್ರೇಂದ್ರಿಯ, ಅಂತಃಕರಣ.

ಈ ಪ್ರಕಾರ ಇಪ್ಪತ್ತೈದು ಎಂತಲೂ ತಾತ್ಪರ್ಯವೇ. ಈ ಎರಡು ಪ್ರಕಾರವೂ ಚಿಂತಿಸಬೇಕು. ಒಂದೊಂದು ಭೂತದಲಿ ಇಂದ್ರಿಯಗಳ ಸಹಿತ ಐದೈದು ಮೇರಿಗೆ ಆದ ಸಂಖ್ಯಾ ಎಂಬುದು ಪೂರ್ವೋಕ್ತ ಇಪ್ಪತ್ತೈದು. ಪೃಥಿವ್ಯಾದಿ ಪಂಚಭೂತಗಳು ಐದು ಇಪ್ಪತ್ತು. ಇದರಲ್ಲಿ ಸೇರದೇ ಇರೋದು ಐದು. ಒಂದೊಂದು ಭೂತದಲ್ಲಿ ಮಹತ್ತತ್ವ ಅಹಂಕಾರ ತತ್ವ, ಅವ್ಯಕ್ತ ತತ್ವ, ಮೂರು ಮೂರು ಪ್ರಕಾರ ಈ ಹದಿನೈದು ಅಂತು ೪೫ ಸಹಿತ ಎಂದರೆ ಈ ಪ್ರಕಾರ ಪಂಚಭೂತಗಳಿಂದ ಸಹಿತವಾದ ೪೫ರಲಿ, ಒಂದೊಂದರಲಿ ೫೧ ವರ್ಣಗಳೇನು, ಆಯಾ ವರ್ಣಗಳಿಂದ ವೇದ್ಯ ಎಂದರೆ ವಾಚ್ಯನಾದ ಅಜಾದಿ

ಐವತ್ತೊಂದು ಭಗವದ್ರೂಪಗಳೇನು. ಈ ಶರೀರದೊಳು ವ್ಯಾಪಿಸಿದ್ದು ಸುರಾಸುರರಿಗೆ ನಿರಂತರದಲ್ಲಿ ಸುಖಾಸುಖಪ್ರದನಾಗಿ ಎಂದರೆ ದೇಹದಿಂದ ಆಗತಕ್ಕ ಸುಖ ದೇವತೆಗಳಿಗೂ, ದೇಹದಿಂದ ಆಗತಕ್ಕ ದುಃಖಾದಿಗಳು ದೈತ್ಯರಿಗೂ, ಪ್ರದ–ಕೊಡೋವನಾಗಿ, ಆಡುವ–ವಿಹಾರಮಾಡುವ, ದ್ವೇಷಿಪರ ಬಡಿವ–ದ್ವೇಷಿಗಳಾದ ದೈತ್ಯರ ಶಿಕ್ಷಾ ಮಾಡುವ ಎಂತ ತಾತ್ಪರ್ಯ.

ಈ ಸ್ಥೂಲದೇಹಕ್ಕೆ ಕಾರಣಗಳಾದ ದೇಹಗಳ ವಿವರ :–

೧. ಸ್ವರೂಪದೇಹ ಒಂದು ಅಂದರೆ ಒಂದನೇದು.

೨. ಲಿಂಗಶರೀರ ಎರಡನೇದು. ಇದು ತ್ರಿಗುಣಸಂಬಂಧವಾದದ್ದು. ತ್ರಿಪರಿಚ್ಛೇದ ಉಳ್ಳದ್ದು. ಇದರಲ್ಲಿ ಕಾರ್ಯೋಪಯೋಗಿ ಗುಣಗಳು, ಸತ್ವಗುಣದಲ್ಲಿ ಸತ್ವ ೧೦, ರಜೋಗುಣದಲ್ಲಿ ರಜ ೧, ತಮೋಗುಣದಲ್ಲಿ ತಮ ೧, ಅಂತು ೧೨. ಈ ೧೨ ಗುಣದೊಳಗೆ ರಜೋಗುಣ ಒಂದು ಹನ್ನೆರಡು ಭಾಗ ಮಾಡಿ ೧೨ ಒಳಗೆ ೧೦ ರಜ ಸತ್ವ ಹತ್ತರಲ್ಲಿ ಸೇರಿತು. ಒಂದು ರಜ ಒಂದು ಸಂಖ್ಯಾವಾದ ತಮದ ತಮದಲ್ಲಿ ಸೇರಿತು. ಅಂತು ರಜದ ಹನ್ನೆರಡರ ಒಳಗೆ ಸತ್ವದಲಿ, ತಮದಲಿ ಸೇರಿದ್ದು ಹನ್ನೊಂದು ಹೋಗತಾ ಉಳಿದ ರಜ ಒಂದು. ಅಂತು ೧೨ ರಜಕ್ಕೆ ಲೆಕ್ಕ ಸರಿ ಆಯಿತು. ಪುನಃ ವೃತ್ತಿಕಾಲಕ್ಕೆ ಹತ್ತು ರಜ, ಹತ್ತು ಸತ್ವದಿಂದ ಸಹಿತವಾಗಿ ಬಂತು. ಅಂತು ಇಪ್ಪತ್ತಾಯಿತು. ತಮದಲ್ಲಿ ಕಲೆತ ಒಂದು, ರಜ ಒಂದು ತಮದಿಂದ ಸಹಿತವಾಗಿ ಬಂತು. ಅಂತು ಇದು ಎರಡು. ಅಂತು ಎಲ್ಲಾ ಸೇರಿ ಇಪ್ಪತ್ತೆರಡಾಯಿತು. ಅಮಿಶ್ರ (ಮಿಶ್ರವಾಗದೇ ಇರುವುದು) ರಜ ಗುಣ ಒಂದು. ಈ ಒಂದರ ಸಹಿತ ಸೇರಿ ಇಪ್ಪತ್ತಮೂರು ಆಯಿತು.

೩. ವೈಷಯಿಕಶರೀರ ಮೂರನೇದು. ಈ ಇಪ್ಪತ್ತಮೂರು ಗುಣಗಳಿಂದ ಸಹಿತವಾದ ಲಿಂಗಶರೀರದ ಮೇಲೆ ವೈಷಯಿಕಶರೀರದ ಸೃಷ್ಟಿ. ಈ ಇಪ್ಪತ್ತುಮೂರು ಗುಣವು ಬೀಜವು. ಬೀಜದ ಹಾಂಗೆ ಅಣು ಲಿಂಗವಾಗಿ ಜೀವನ್ನ ಸಂಬಂಧಿಸಿ ಅವನ ಪ್ರಕಾಶ ತನ್ನೊಳಗೆ ಮಾಡಿಕೊಂಡದೆ. ಇವೇ ಗುಣವೈಷಮ್ಯ ಶರೀರ ಎಂದು ಕರೆಸುವುದು. ಸಕಲ ಪ್ರಾಣಿಗಳಿಗೆ, ಮೋಕ್ಷಾಧಿಕಾರಿಗಳಿಗೆ ಏಕಪ್ರಕಾರ ಇರತದೆ. ಇವಕ್ಕೆ ವೈಷಯಿಕ ಶರೀರ ಎಂತಲೂ, ಅಣುಲಿಂಗ ಎಂತಲೂ ವ್ಯವಹಾರ ಉಂಟು. ಇಲ್ಲಿಗೆ ಜೀವನ ಮೇಲೆ ಇರತಕ್ಕ ಶರೀರಗಳ ವಿವರ : ಜೀವನ ಮೇಲೆ ಅನಾದಿಲಿಂಗಶರೀರ ಒಂದು, ವೈಷಯಿಕ ಶರೀರವೆಂಬ ಅಣುಲಿಂಗಶರೀರ ಒಂದು, ಅಂತು ಎರಡು ಶರೀರ ಆಯಿತು.

೪. ಅಣುಲಿಂಗದ ಮ್ಯಾಲೆ ಮಹತ್ತತ್ವಶರೀರ ಒಂದು, ಪೂರ್ವೋಕ್ತ ಸತ್ವಗುಣ ಹತ್ತು ನೂರಂಶದಿಂದ ಬೆಳೆದು ಸತ್ವ ೧೦೦, ರಜ ಹನ್ನೆರಡು ಅಂಶದಿಂದ ಬೆಳೆದು ೧೨, ರಜ, ತಮ ಒಂದಂಶದಿಂದ ಬೆಳೆದು ೧ ತಮ, ಅಂತು ೧೧೩ ಅಂದರೆ ನೂರಹದಿಮೂರು ಗುಣದಿಂದ ಮಹತ್ತತ್ವಶರೀರವಾಯಿತು.

೫. ಈ ಶರೀರದ ಮೇಲೆ ಅಹಂಕಾರತತ್ವಶರೀರ. ಮಹತ್ತತ್ವಗತ ಅಹಂಕಾರೋಪಾದಾನ ಸತ್ವ ಹತ್ತು, ಮಹತ್ತತ್ವಗತ ರಜ ಒಂದು, ಮಹತ್ತತ್ವಗತ ತಮ ಹತ್ತು, ಅಂತು ಇಪ್ಪತ್ತೊಂದು ಸೇರಿ ಅಹಂಕಾರತತ್ವವಾಯಿತು. ಇದೇ ಅಹಂಕಾರಶರೀರ. ಇದು ಅನಿರುದ್ಧಶರೀರದಲ್ಲಿ ಅಂತರ್ಭೂತ.

ಅನಿರುದ್ಧಶರೀರ ಅಹಂಕಾರಶರೀರದ ಮೇಲೆ ಆಗೋದಾಯಿತು. ಮಹತ್ತತ್ವಗತ ಸತ್ವ ನೂರಕ್ಕೆ ಒಂದೊಂದಕ್ಕೆ ಸಾವಿರ ಪ್ರಕಾರ ಬೆಳೆದು ಒಂದು ಲಕ್ಷ ಸತ್ವ, ರಜ ಹನ್ನೆರಡಕ್ಕೆ ಒಂದೊಂದಕ್ಕೆ ನೂರು ನೂರು ಪ್ರಕಾರ ಬೆಳೆದು ಹನ್ನೆರಡು ನೂರು ರಜ, ತಮ ಒಂದಕ್ಕೆ ಹತ್ತು ಪ್ರಕಾರ ಬೆಳೆದು ಹತ್ತು ತಮ, ಅಂತು ಒಂದು ಲಕ್ಷದ ಒಂದು ಸಾವಿರದ ಇನ್ನೂರಹತ್ತು. ಇಷ್ಟು ಗುಣದಿಂದ ಅನಿರುದ್ಧಶರೀರ ಆಗೋದಾಯಿತು.

(ಸತ್ವ) ೧೦೦×೧೦೦೦=೧೦೦೦೦೦

(ರಜ) ೧೨× ೧೦೦= ೧೨೦೦

(ತಮ) ೧× ೧೦= ೧೦

= ೧೦೦೦೦೦೦+೧೨೦೦+೧೦=೧೦೧೨೧೦ ಗುಣಗಳು.

೬. ಇದರ ಮೇಲೆ ಶುಕ್ಲಶೋಣಿತಮಯವಾದ ಸ್ಥೂಲ ಶರೀರದ ಉತ್ಪತ್ತಿ. ಅಂತು ಸ್ವರೂಪ ಶರೀರ, ಸ್ಥೂಲ ಶರೀರದ ಸಂಗಡ ಆರು ಶರೀರಗಳು. ಎಲ್ಲಾ ಶರೀರಗಳಲ್ಲಿಯೂ ೨೪ ತತ್ವಗಳಿವೆ.

ಅಹಂಕಾರ ಶರೀರದ ವೈಕಾರಿಕದಿಂದ ಮನಸ್ಸು, ತೈಜಸದಿಂದ ಪಂಚಜ್ಞಾನೇಂದ್ರಿಯ ಮತ್ತು ಪಂಚ ಕರ್ಮೇಂದ್ರಿಯ ಅಂದರೆ ದಶೇಂದ್ರಿಯಗಳು, ತಾಮಸಾಹಂಕಾರದಿಂದ ಪಂಚ ತನ್ಮಾತ್ರಗಳು ಮತ್ತು ಪಂಚ ಭೂತಗಳು ಇಪ್ಪತ್ತೊಂದು. ಮಹತ್ತತ್ವಗಳು ಮೂರು ಒಂದು ಅಂಶದಿಂದ ಅನಿರುದ್ಧ ಶರೀರದಲ್ಲಿ ಸೇರಿ ಅನಿರುದ್ಧ ಶರೀರ ೨೪ ತತ್ವದಿಂದ ಯುಕ್ತವಾಯಿತು. ಉಪಚಯಾಪಚಯಗಳು ಸ್ಥೂಲ ಶರೀರಕ್ಕೆ ಹೊರತು ಮಿಗಿಲಾದ ಶರೀರಗಳಿಗೆ ಇಲ್ಲಾ ಎಂತ ತಾತ್ಪರ್ಯ. ಅನಾದಿಲಿಂಗ ಶರೀರದಲ್ಲಿ ರಮಾಮಧುಸೂದನರೇ. ತದ್ವ್ಯತಿರಿಕ್ತ ಬ್ರಹ್ಮವಾಯ್ವಾದಿಗಳ ಪ್ರವೇಶ ಇಲ್ಲ. ಅಣುಲಿಂಗದಲ್ಲಿ ಬ್ರಹ್ಮವಾಯ್ವಾದಿಗಳ ಪ್ರವೇಶ ಉಂಟು. ರುದ್ರಾದಿಗಳ ಪ್ರವೇಶ ಇಲ್ಲಾ. ಮುಖ್ಯಾಭಿಮಾನಿ ರಮಾ. ಅಮುಖ್ಯಾಭಿಮಾನಿಗಳು ಬ್ರಹ್ಮವಾಯುಗಳು. ಮಹತ್ತತ್ವಶರೀರದಲ್ಲಿ ಬ್ರಹ್ಮವಾಯ್ವಾದಿಗಳು ಮುಖ್ಯಾಭಿಮಾನಿಗಳು. ಇದೇ ಇವರಿಗೆ ಆವಾಸಗಳು. ಅಹಂಕಾರತತ್ವ ಅನಿರುದ್ಧಶರೀರದಲ್ಲಿ ಪ್ರಭೇದವಾಗಿ ಇದೆ. ಯಾವತ್ತೂ ದೇವತೆಗಳಿಗೂ ಅನಿರುದ್ಧ ಶರೀರದಲ್ಲಿ ಪ್ರವೇಶ ಉಂಟು. ಎಂದರೆ ಗರುಡಾದಿಗಳು, ಷಣ್ಮಹಿಷಿಯರು, ಬ್ರಹ್ಮಾದಿಗಳು ಅಹಂಕಾರದಲಿ ಆವಾಸ ಉಂಟು. ದೈತ್ಯರ ಪ್ರವೇಶ ಇಲ್ಲ. ಅನಿರುದ್ಧ ಶರೀರದಲ್ಲಿ ಯಾವತ್ತು ದೇವ ದೈತ್ಯರಿಗೆ ಪ್ರವೇಶ ಉಂಟು. ಪಿಶಾಚಾದಿಗಳಿಗೆ ಪ್ರವೇಶವಿಲ್ಲ.

ಸ್ಥೂಲ ದೇಹದಲ್ಲಿ ಯಾವತ್ತು ದೇವತೆಗಳು ಪಿಶಾಚಾದಿಗಳು ಪ್ರವೇಶ ಉಂಟು. ಇತ್ಯಾದಿ ಅಂತರಾಂತರ ದೇಹಸ್ಥಿತಿ ತಿಳಿಯಬೇಕು. ಯಾವತ್ತರಲ್ಲಿ ಅನಿರುದ್ಧಾದಿ ರೂಪ ಗಳೇ ಅನಂತಾನಂತ ರೂಪಗಳ ಧರಿಸಿ ಇದ್ದಾರೆಂತ ತಿಳಿಯಬೇಕು.

**ಪ್ರಣವಪ್ರತಿಪಾದ್ಯ ತ್ರಿನಾಮದಿ ।**
**ತನುವಿನೊಳು ತ್ರಿಸ್ಥಾನಗನಿರು ।**
**ದ್ಧನು ತ್ರಿಪಂಚಕ ಏಕವಿಂಶತಿ ಚತುರವಿಂಶತಿಗ ॥**
**ಎನಿಸಿ ಎಪ್ಪತ್ತೆರಡು ಸಾವಿರ ।**
**ವಿನಿತು ನಾಡಿಗಳೊಳು ನಿಯಾಮಿಸು ।**
**ತಿನಗಭಸ್ತಿಗ ಲೋಕದೊಳು ಸರ್ವತ್ರ ಬೆಳಗುವನು ॥ ೨ ॥**

ಪೂರ್ವೋಕ್ತ ದೇಹಗಳಲ್ಲಿ ಪರಮಾತ್ಮ ಇರತಕ್ಕ ಕ್ರಮ ಹೇಳತಾರೆ.

ಪ್ರಣವ–ಓಂಕಾರದಿಂದ (ಅ, ಉ, ಮ ಎಂಬ ಮೂರು ಅಕ್ಷರದಿಂದ ಯುಕ್ತ ವಾದದ್ದು), ಪ್ರತಿಪಾದ್ಯರೂಪನಾದ ಅನಿರುದ್ಧ, ತ್ರಿನಾಮದಿ–ವಿಶ್ವ (ಅ), ತೈಜಸ (ಉ), ಪ್ರಾಜ್ಞ (ಮ) ಈ ಮೂರು ರೂಪಗಳಿಂದಲೂ (ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ರೂಪಗಳಿಂದಲೂ), ತನುವಿನೊಳು–ದೇಹದಲ್ಲಿ, ತ್ರಿಸ್ಥಾನಗ–ನೇತ್ರ, ಕಂಠ, ಹೃದಯ ಈ ಅವಸ್ಥಾತ್ರಯ ಮೂರು ಸ್ಥಾನದಲಿ, ಅನಿರುದ್ಧ–ಪ್ರಣವಪ್ರತಿಪಾದ್ಯನಾದ, ಅನಿರುದ್ಧ ನಾಮಕ ಶ್ರೀ ಪರಮಾತ್ಮ, ತ್ರಿ–ಮೂರು ನಾಮದಿಂದ ಯುಕ್ತವಾದ ಮೂರು ರೂಪ ದಿಂದ ಇದ್ದಾನೆ. ಮತ್ತು ಸ್ಥಾನಾಂತರದಲಿ, ಪಂಚಕ–ಐದು ರೂಪದಿಂದಲೂ ಇದ್ದಾನೆ. ಏಕವಿಂಶತಿ–ಇಪ್ಪತ್ತೊಂದು ರೂಪದಿಂದಲೂ ಇದ್ದಾನೆ. ಚತುರವಿಂಶತಿ–ಇಪ್ಪತ್ತನಾಲ್ಕು ರೂಪದಿಂದಲೂ, ಗ ಎನಿಸಿ–ಇರತಕ್ಕವನೆನಿಸಿ ಮತ್ತು ಎಪ್ಪತ್ತೆರಡುಸಾವಿರ ನಾಡಿ ಗಳೊಳು ಇನಿತು–೭೨,೦೦೦ ದೇಹಗತ ನಾಡಿಗಳೊಳು ಇದ್ದವನಾಗಿ, ನಿಯಾಮಿಸುತ– ಜೀವರ ಇಂದ್ರಿಯಗಳಲ್ಲಿದ್ದು ಇಂದ್ರಿಯ ಕಾರ್ಯಗಳ ನಿಯಾಮಿಸುತಾ ಇದ್ದಾನೆ. ಇದ್ದ ಕಾಲಕ್ಕೂ ತಾನು ಒಂದಕ್ಕೂ ಸಂಬಂಧಪಡೋದಿಲ್ಲ. ಹ್ಯಾಂಗೆಂದರೆ ದೃಷ್ಟಾಂತ— ಇನಗಭಸ್ತಿ–ಇನ–ಸೂರ್ಯ, ಗಭಸ್ತಿ–ಕಾಂತಿಯಿಂದ ಯುಕ್ತವಾದ ಕಿರಣಗಳು. ಸೂರ್ಯ ತನ್ನ ಕಿರಣಗಳಿಂದ ಯುಕ್ತವಾಗಿ ಅಂಧಕಾರದಲ್ಲಿ ಪ್ರವೇಶಿಸಿದಾಗ್ಯೂ ಅಂಧಕಾರದಿಂದ ಬಾಧಿತನಾಗದೇ ತನ್ನ ಸ್ವಪ್ರಕಾಶದಿಂದಲೇ ಲೋಕದೊಳು ಸರ್ವತ್ರ ಬೆಳಗುವನು–ಹದಿನಾಲ್ಕು ಲೋಕಗಳಲ್ಲಿ ಸಂಚಾರ ಮಾಡುವನು. ಪರಮಾತ್ಮನಾದರೋ, ಇನಗಭಸ್ತಿ–ಸೂರ್ಯನಲ್ಲೇನು, ಕಾಂತಿಸಂಪನ್ನವಾದ ಕಿರಣಗಳಲ್ಲೇನು, ಗ–ಇದ್ದವ ನಾಗಿ, ಸೂರ್ಯಗೆ ಅಂಥಾ ಸಾಮರ್ಥ್ಯ ಕೊಟ್ಟು ಇದ್ದಾನೆ. ಸೂರ್ಯನ ಸ್ವಸಾಮರ್ಥ್ಯ ವಲ್ಲ. ಇಂಥಾ ಪರಮಾತ್ಮ ಲೋಕದೊಳು ಸರ್ವ ಪ್ರಾಣಿಗಳೊಳು, ನಿಯಮಿಸುತಾ– ಅವರವರ ಯೋಗ್ಯ ಕರ್ಮಗಳ ನಿಯಮಿಸುತಾ ಸೂರ್ಯನೋಪಾದಿಯಲಿ ಸರ್ವತ್ರ

ಸಂಚಾರ ಮಾಡುವನು. ತತ್ಸಂಬಂಧ ಇವಗೆ ಲೇಪವಿಲ್ಲ ಎಂತ ತಿಳಿಯತಕ್ಕದ್ದು ಎಂತ ತಾತ್ಪರ್ಯ.

**ವಿಶೇಷಾರ್ಥ :–** ತ್ರಿಪಂಚಕ– ತ್ರಿ–ಮೂರು ರೂಪಗಳು ದಾವದೆಂದರೆ ವಿಷ್ಣು–ಸತ್ವಗುಣದಲ್ಲಿ, ಬ್ರಹ್ಮ–ರಜೋಗುಣದಲ್ಲಿ, ರುದ್ರ–ತಮೋಗುಣದಲ್ಲಿ, ಮತ್ತು ವಿಷ್ಣು ಅವ್ಯಕ್ತತತ್ವದಲ್ಲಿ, ಬ್ರಹ್ಮ ಮಹತ್ತತ್ವದಲ್ಲಿ, ರುದ್ರ ಅಹಂಕಾರತತ್ವದಲ್ಲಿ, ಪಂಚ–ಐದು ರೂಪಗಳು, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ, ತನ್ಮಾತ್ರಸಹಿತ ಪಂಚಭೂತಗಳಲ್ಲಿ, ಏಕವಿಂಶತಿ ದಾವದೆಂದರೆ ಮತ್ಸ್ಯಾದಿ ದಶರೂಪ ಗಳು, ದಶೇಂದ್ರಿಯಗಳಲ್ಲಿ ವಿಮಲಾದಿ ಏಕಾದಶರೂಪಗಳಿಂದ ಏಕಾದಶೇಂದ್ರಿಯಗಳಲ್ಲಿ ಈ ಎರಡು ಪ್ರಕಾರ ಇಂದ್ರಿಯಗಳಲ್ಲಿ ಇರೋದಾಗಿ ಅದೆ ಎಂತ ತಾತ್ಪರ್ಯ. ಚತುರ್ವಿಂಶತಿ ರೂಪಗಳು ದಾವದೆಂದರೆ ಇಪ್ಪತ್ತುನಾಲ್ಕು ತತ್ವಗಳಲ್ಲಿ ಕೇಶವಾದಿ ೨೪ ರೂಪಗಳು.

ಸ್ಥೂಲದೇಹಗತ ಅಷ್ಟದಳ ಕಮಲದಲಿ ಕರ್ಣಿಕಾದ ಮೇಲೆ ಬಿಂಬಗೆ ಪೀಠರೂಪ ದಿಂದ ಸೂರ್ಯ ಇರೋವನಾಗಿ ಇದ್ದಾನೆ. ಈ ಸೂರ್ಯನ ಕಿರಣಗಳು ಸಾವಿರ ಕಿರಣ ಗಳು, ಸಾವಿರ ಪ್ರಧಾನ ನಾಡಿಗಳಲ್ಲಿ ವ್ಯಾಪಿಸಿವೆ. ಅದರಲ್ಲಿ ಸಾವಿರ ರೂಪಗಳಿಂದ ಇದ್ದು ಭಕ್ತರಿಗೆ ಜ್ಞಾನಪ್ರಕಾಶಕನಾಗಿ ಇರುತ್ತಾನೆ ಎಂತ ತಾತ್ಪರ್ಯ.

ಓಂ ಎಂಬ ಅಕ್ಷರದಿಂದ ಹೇಳಿಸಿಕೊಳ್ಳುವ ವ್ಯಾಪ್ತ ಉತ್ಕೃಷ್ಟ ಪೂಜ್ಯನಾದ್ದರಿಂದ, ಅ, ಉ, ಮ ಎಂತ ನಾಮ.

**ಜೀವಲಿಂಗನಿರುದ್ಧ ಸ್ಥೂಲ ಕ |**
**ಳೇವರಗಳಲಿ ವಿಶ್ವ ತುರಗ |**
**ಗ್ರೀವ ಮೂಲೇಶಾಚ್ಯುತತ್ರಯ ಹಂಸಮೂರ್ತಿಗಳ ||**
**ಈ ವಿಧ ಚತುಃಸ್ಥಾನದಲಿ ಶಾಂ |**
**ತೀವರನ ಈರೆರಡು ರೂಪದಿ |**
**ಭಾವಿಸುವುದೇಕೋನವಿಂಶತಿ ಮೂರ್ತಿ ಸರ್ವತ್ರ || ೩ ||**

ಹಿಂದಿನ ಶ್ಲೋಕದಲ್ಲಿ ಪ್ರಣವಪ್ರತಿಪಾದ್ಯನಾದ ಅನಿರುದ್ಧ ತ್ರಿನಾಮದಲಿ ತನುವಿ ನೊಳು ತ್ರಿಸ್ಥಾನದಲಿ ಇರತಕ್ಕವ, ಎಂತ ಹೇಳಿದರು. ಇಲ್ಲಿಗೆ ಒಂದು ದೇಹದ ವಿಚಾರ ವಾಯಿತು. ತದ್ವ್ಯತಿರಿಕ್ತ ದೇಹಗಳ ವಿಚಾರ ಹೇಳತಾರೆ ಮತ್ತು ಈ ಶ್ಲೋಕದಲ್ಲಿ ಪೂರ್ವೋಕ್ತ ಸ್ಥೂಲ ದೇಹವನ್ನು ಆವರ್ತನ ಮಾಡಿಕೊಂಡು ಅಂತು ನಾಲ್ಕು ದೇಹದಲಿ ಅನಿರುದ್ಧನೇ ನಾಮಾಂತರಗಳಿಂದ ಇರುತ್ತಾನೆ ಎಂತ ಹೇಳತಾರೆ.

ಜೀವ–ಜೀವನ ಸ್ವರೂಪ ದೇಹ, ಲಿಂಗ–ಜೀವಗೆ ಆವರಕವಾಗಿಪ್ಪ ಅನಾದಿಲಿಂಗ ಶರೀರ, ಅನಿರುದ್ಧ–ಲಿಂಗೋಪಾದಾನದಿಂದ ನಿರ್ಮಿತವಾದ ಅನಿರುದ್ಧಶರೀರ, ಸ್ಥೂಲ ಕಳೇವರಗಳಲಿ–ಅನ್ಯವಾದ ಮೂಲ ಜಡಪ್ರಕೃತಿಯಿಂದ ನಿರ್ಮಿತವಾದ, ಸ್ಥೂಲಶರೀರಗಳಲ್ಲಿ

ಈ ನಾಲ್ಕು ಶರೀರಗಳು, ವಿಶ್ವ–ವಿಶ್ವರೂಪಿ ಪರಮಾತ್ಮ ಜೀವನ ಸ್ವರೂಪಿ ದೇಹದಲ್ಲಿ, ತುರಗಗ್ರೀವ – ಹಯಗ್ರೀವರೂಪಿ ಪರಮಾತ್ಮ ಅನಾದಿಲಿಂಗಶರೀರದಲ್ಲಿ, ಮೂಲೇಶ–ಮೂಲೇಶನಾಮಕನು, ಅನಿರುದ್ಧಶರೀರದಲ್ಲಿ, ಹಂಸ–ಹಂಸರೂಪಿ ಪರಮಾತ್ಮನು ಸ್ಥೂಲ ಶರೀರದಲ್ಲಿ, ಅಚ್ಯುತ–ಈ ನಾಲ್ಕು ಶರೀರಗಳಲ್ಲಿ ಜೀವನ ಸ್ವರೂಪ ದೇಹ ನಾಶರಹಿತವಾದದ್ದು, ತ್ರಯ–ತದನ್ಯ ಮೂರು ಶರೀರಗಳು ನಾಶ ಐದತಕ್ಕದ್ದು, ಮೂರ್ತಿಗಳು–ಈ ವಿಶ್ವಾದಿ (ನಾಲ್ಕು ರೂಪಗಳ) ನಾಲ್ಕು ಮೂರ್ತಿಗಳ, ಈ ವಿಧ–ಈ ಉಕ್ತಪ್ರಕಾರ ಕ್ರಮದಿಂದ, ಚತುಃಸ್ಥಾನದಲಿ–ಜೀವಲಿಂಗಾದಿ ನಾಲ್ಕು ಸ್ಥಾನದಲಿ, ಶಾಂತೀವರನ–ಶಾಂತೀಪತಿಯಾದ ಅನಿರುದ್ಧನ, ಈರೆರಡುರೂಪದಿ–ನಾಲ್ಕು ರೂಪಗಳ, ಭಾವಿಸುವುದು–ಪೂರ್ವೋಕ್ತ ನಾಲ್ಕು ರೂಪಗಳು ಅನಿರುದ್ಧನ ಅಂಶಗಳೆಂದು ತಿಳಿಯಬೇಕು. (ಈ ಅನಿರುದ್ಧ ರೂಪಗಳಾದ), ಏಕೋನವಿಂಶತಿಮೂರ್ತಿ ಸರ್ವತ್ರ–ಒಂದು ಕಡಿಮೆ ಇಪ್ಪತ್ತು ಎಂದರೆ ಅನಿರುದ್ಧನ ರೂಪಗಳು ಹತ್ತೊಂಬತ್ತು, ಸರ್ವತ್ರ ಎಂದರೆ ಹತ್ತೊಂಬತ್ತು ರೂಪಗಳಿಂದ ಪೂರ್ವೋಕ್ತ ನಾಲ್ಕು ದೇಹಗತ ಇಂದ್ರಿಯಾದಿಗಳಲ್ಲಿ ಸರ್ವ ಪ್ರಾಣಿಗಳಲ್ಲಿ ಇದ್ದಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಪೂರ್ವೋಕ್ತ ನಾಲ್ಕು ಶರೀರಗಳಾದ ಸ್ವರೂಪಲಿಂಗ, ಅನಿರುದ್ಧ, ಸ್ಥೂಲಗಳಲ್ಲಿ, ಸ್ವರೂಪದೇಹಕ್ಕೆ ಎಂದಿಗೂ ನಾಶವಿಲ್ಲ. ಏಕೆಂದರೆ ಅಚ್ಯುತ ನಾಶರಹಿತನಾದ ವಿಶ್ವ, ಕಡಿಮೆ ಮೂರು ಶರೀರಗಳು ಎಂಥಾವೆಂದರೆ ಅಚ್ಯುತ ಶಬ್ದ ಆವರ್ತನ ಮಾಡಿಕೊಂಡರೆ, ಅಚ್ಯುತ–ನಾಶರಹಿತವಾದ ಶರೀರಗಳು ಮೂರು ಎಂತ ತಾತ್ಪರ್ಯ. ದಾವಾಗ್ಯೂ ನಾಶವಿಲ್ಲವಾ ಎಂದರೆ ವಿವಕ್ಷಾ ಭೇದದಿಂದ ಸ್ಥೂಲದೇಹೋಪಾದಿಯಲಿ ನಾಶವನ್ನೈದಿ ಮತ್ತು ದೇಹಾಂತರ ಪ್ರಾಪ್ತವಾಗತಕ್ಕ ನಾಶದಿಂದ ರಹಿತವಾದದ್ದು. ಅನಿರುದ್ಧ ಲಿಂಗಶರೀರ ಎರಡೂ ಸ್ಥೂಲ ದೇಹವಿವಕ್ಷಯಾ ಎಂದಿಗೂ ನಾಶರಹಿತವಾದದ್ದು ಜೀವನ ಸ್ವರೂಪ ದೇಹ. ಅಂತು ಮೂರು ಶರೀರಗಳು ವಿವಕ್ಷಾ ಭೇದದಿಂದ ನಾಶರಹಿತಗಳೇವೇ. ಆದ್ದರಿಂದ ವಿಶ್ವ, ತುರಗಗ್ರೀವ ಮೂಲೇಶರು ಇರತಕ್ಕ ಪೂರ್ವೋಕ್ತ ಮೂರು ಶರೀರಗಳು ನಾಶರಹಿತವಾದದ್ದು ಎಂಬುದಕ್ಕೆ ಸೂಚನೆ.

ಮೂರು ಭಗವದ್ರೂಪಗಳನ್ನು ಹೇಳಿದ ನಂತರ ಅಚ್ಯುತ ಎಂತ ಪ್ರಯೋಗ ಮಾಡಿದ್ದಾರೆ. ಅಚ್ಯುತ ಶಬ್ದ ಒಂದಾವರ್ತಿ ಆವರ್ತನ ಮಾಡಿಕೊಂಡು ತ್ರಯ ದೇಹಗಳ ಪ್ರಯೋಗ ಮಾಡಿಕೋಬೇಕು. ಹಂಸಮೂರ್ತಿ ನಾಲ್ಕನೆಯದು. ಇದು ಸ್ಥೂಲದಲ್ಲಿ ಇರತಕ್ಕ ರೂಪ. ಮೂರು ದೇಹಕ್ಕೆ ನಾಶವಿಲ್ಲ ಎಂದ ಮ್ಯಾಲೆ ನಾಲ್ಕನೇ ದೇಹಕ್ಕೆ ಅಂದರೆ ಸ್ಥೂಲ ದೇಹಕ್ಕೆ ನಾಶ ಎಂಬುದು ಅರ್ಥಾತ್ ಸಿದ್ಧ ಆಗತದೆ. ಅಚ್ಯುತ ಶಬ್ದ ಎರಡನೇ ಆವರ್ತಿ ಆವರ್ತನ ಮಾಡಿಕೊಂಡು ಅಚ್ಯುತ ನಾಶರಹಿತನಾದ ಪರಮಾತ್ಮ ನಾಶರಹಿತವಾದ ಮೂರು ಶರೀರಗಳಲ್ಲಿ, ನಾಶಯುಕ್ತವಾದ ನಾಲ್ಕನೇ ಶರೀರದಲ್ಲಿ ಪೂರ್ವೋಕ್ತ ನಾಲ್ಕು ಸ್ಥಾನದಲ್ಲಿ ಇದ್ದಾನೆಂದು ತಿಳಿಯಬೇಕು. ಮೂರ್ತಿಗಳ–ಈ

ನಾಲ್ಕು ಮೂರ್ತಿಗಳ ಈ ವಿಧ ಎಂದರೆ ಪೂರ್ವೋಕ್ತ ವಿಧದಿಂದ ಅಚ್ಯುತ ಸ್ಥಾನದಲ್ಲಿ ನಾಲ್ಕು ಸ್ಥಾನಗಳಲ್ಲಿ ತಿಳಿಯಬೇಕು. ಈ ನಾಲ್ಕು ರೂಪಗಳು ದಾವ ಭಗವದ್ರೂಪಗಳು ಅಂತ ಅಂದರೆ ಶಾಂತೀಪತಿಯಾದ ಅನಿರುದ್ಧ ರೂಪಗಳು. ಪೂರ್ವೋಕ್ತ ನಾಲ್ಕು ರೂಪಗಳು ಅನಿರುದ್ಧಾಂಶಗಳೆಂದು ಅನುಸಂಧಾನ ಮಾಡು. ಮತ್ತು ಈ ಅನಿರುದ್ಧನೇ ಹತ್ತೊಂಬತ್ತು ರೂಪಗಳಿಂದ ನಾಲ್ಕು ದೇಹಗಳಲ್ಲಿ ವಿದ್ಯಮಾನವಾದ ಇಂದ್ರಿಯಾದಿ ೧೯ ಸ್ಥಾನಗಳಲ್ಲಿ ಆವಾಸನಾಗಿ ಇದ್ದಾನೆ. ಇದೇ ಪ್ರಕಾರ ಸರ್ವತ್ರ ವಿದ್ಯಮಾನರಾದ ಪ್ರಾಣಿಗಳಲ್ಲಿ ಆವಾಸನಾಗಿ ಇದ್ದಾನೆಂದು ತಿಳಿಯಬೇಕು. ೧೯ ಸ್ಥಾನ, ೧೯ ಭಗವದ್ರೂಪಗಳು ದಾವದೆಂದರೆ,

| | | |
|---|---|---|
| ದಶ ಇಂದ್ರಿಯಗಳು | — | ೧೦ |
| ತನ್ಮಾತ್ರಸಹಿತ ಪಂಚಭೂತಗಳು | — | ೫ |
| ಮನಸ್ಸು | — | ೧ |
| ಮಹತ್ತತ್ವ | — | ೧ |
| ಅಹಂಕಾರತತ್ವ | — | ೧ |
| ಅವ್ಯಕ್ತ ತತ್ವ | — | ೧ |
| | | —— |
| ಅಂತು ೧೯ ಇದೆ. | | |

ಪೂರ್ವೋಕ್ತ ಶ್ಲೋಕ ಸಂಗತಿ ವಿವರ

| | | |
|---|---|---|
| ತ್ರಿ ಎಂದರೆ ತ್ರಿಗುಣಾತ್ಮಕನ ಅವಸ್ಥಾತ್ರಯಗಳು | — | ೩ |
| ಪಂಚ ಎಂದರೆ ಪಂಚಭೂತಗಳು | — | ೫ |
| ಏಕವಿಂಶತಿ ಎಂದರೆ | — | ೨೧ |
| | | —— |
| ದಶ ಇಂದ್ರಿಯ | — | ೧೦ |
| ತನ್ಮಾತ್ರ ಸಹಿತ ಪಂಚಭೂತ | — | ೧೦ |
| ಮನಸ್ಸು | — | ೧ |
| | | —— |
| | | ೨೧ |

ಇದರೊಳಗೆ ಕೇಶವಾದಿ ಚತುರ್ವಿಂಶತಿ ಮೂರ್ತಿಗಳೊಳಗೆ ಹತ್ತೊಂಬತ್ತು ಮೂರ್ತಿಗಳು ಅಂತರ್ಗತಗಳಾಗಿ ಇರೋದಾಗದೆ. ಪಂಚಭೂತಗಳಲ್ಲಿ ತನ್ಮಾತ್ರಗಳ ಸೇರಿಸಿ ಒಂದು ಕಡೆ ತನ್ಮಾತ್ರಗಳ ಬಿಟ್ಟು ಒಂದು ಕಡೆ ಯಾಕೆ ಹೇಳಬೇಕೆಂದಲ್ಲಿ ವಿವಕ್ಷಾ ಭೇದವೂ ಷೋಡಶ ಕಳೆಗಳು.

ಚತುರ್ವಿಂಶತಿ ತತ್ವಕ್ಕೆ ವಿವರ :–

| | | |
|---|---|---|
| ಪೂರ್ವೋಕ್ತ | — | ೨೧ |
| ಮನಸ್ಸು | — | ೧ |
| ಅಹಂಕಾರತತ್ವ | — | ೧ |
| ಅವ್ಯಕ್ತತತ್ವ | — | ೧ |
| | | —— |
| | ಅಂತು | ೨೪ |

ಚತುರ್ವಿಂಶತಿ ತತ್ವಗಳು ಹೇಳೋ ಕಡೆ ಹ್ಯಾಂಗೆ ಸಂಭಾವನಾನೋ ತದ್ವತ್ ಇಲ್ಲೀನೂ ಸಂಭಾವನಾ ಎಂತ ತಿಳಿಯಬೇಕು. ಈ ಯಾವತ್ತರಲ್ಲಿ ಇಷ್ಟು ರೂಪದಿಂದ ಇರೋವನಾಗಿ ಇದ್ದಾನೆ. ಇದಲ್ಲದೆ ದೇಹಗತ ಇಪ್ಪತ್ತೆರಡುಸಾವಿರ ನಾಡಿಗತನೆನಿಸಿ ಇಷ್ಟರಲ್ಲಿ ಇದ್ದು ನಿಯಾಮಕನಾಗಿ ನಿರ್ಲಿಪ್ತನಾಗಿ ಇದ್ದಾನೆಂದು ತಿಳಿಯಬೇಕು.

**ಕಲುಷವಿಲ್ಲದ ದರ್ಪಣದಿ ಪ್ರತಿ ।**
**ಫಲಿಸಿ ಸರ್ವ ಪದಾರ್ಥಗಳು ಕಂ ।**
**ಗೊಳಿಸುವಂದದಿ ಬಿಂಬಜಡಚೇತನಗಳೊಳಗಿದ್ದು ॥**
**ಪೊಳೆವ ಬಹುರೂಪದಲಿ ಸಜ್ಜನ ।**
**ರೊಳಗೆ ಮನದರ್ಪಣದಿ ತಾ ನಿ ।**
**ಶ್ಚಲ ನಿರಾಮಯ ನಿರ್ವಿಕಾರ ನಿರಾಶ್ರಯಾನಂತ ॥ ೪ ॥**

ಪೂರ್ವೋಕ್ತ ಪ್ರಕಾರ ಅನುಸಂಧಾನ ಮಾಡುವವರ ಮನಸ್ಸಿಗೆ ಹೊಳೆಯಥಾನೆ ಎಂತ ಹೇಳತಾರೆ.

ದರ್ಪಣದಿ–ಪಾದರಸದಿಂದ ಸಹಿತವಾದ ಕನ್ನಡಿಯಲ್ಲಿ, ಪ್ರತಿಫಲಿಸಿ–ಸರ್ವಪದಾರ್ಥಗಳು ಪ್ರತಿಫಲಿಸತದೆ. ರಸವಿಲ್ಲದ ಕನ್ನಡಿಯಲ್ಲಿ ಪ್ರತಿಫಲಿಸೋದಿಲ್ಲ. ತದ್ವತು, ಸರ್ವ ಪದಾರ್ಥಗಳು–ರಸಯುಕ್ತವಾದ ಕನ್ನಡಿಯಲ್ಲಿ ಪ್ರತಿಫಲಿಸಿದ ಸಮಸ್ತ ಪದಾರ್ಥಗಳು, ಕಂಗೊಳಿಸುವಂದದಲಿ–ಕಣ್ಣಿಂದ ನೋಡಿದೋಪಾದಿಯಲಿ, ಕಲುಷವಿಲ್ಲದ–ಕಾಮ ಕ್ರೋಧಾದಿ ಕಲುಷವಿಲ್ಲದ, ಸಜ್ಜನರೊಳಗೆ–ಜ್ಞಾನಿಗಳಲ್ಲಿ ವಿದ್ಯಮಾನವಾದ, ಮನ ದರ್ಪಣದಿ–ಪಾದರಸಸದೃಶವಾದ ಜ್ಞಾನ, ಭಕುತಿ, ವೈರಾಗ್ಯಗಳು ಮನವೆಂಬ ದರ್ಪಣ ದಲ್ಲಿ ಲೇಪವಾಗಿ ಇರತದೆ. ಇಂಥಾ ಮನದರ್ಪಣದಲ್ಲಿ, ಬಿಂಬ–ಬಿಂಬರೂಪಿ ಪರಮಾತ್ಮ ತನ್ನ ದೇಹದಲ್ಲೇನು, ಅನ್ಯವಾದ, ಜಡಚೇತನಗಳೊಳಗಿದ್ದು–ಜಡಜೀವರು, ಜಡಗಳು, ಚೇತನ ಜೀವರು ಇವರೊಳಗಿದ್ದು, ಬಹುರೂಪದಲಿ–ಅನೇಕ ರೂಪದಲಿ, ಪೊಳೆವ–ಹೊಳೆಯೋವನಾಗಥಾನೆ. ಆದ್ದರಿಂದ, ಅನಂತ–ಅಂತರಹಿತವಾದ ಮಹಿಮೋಪೇತನಾದ ಪರಮಾತ್ಮನ, ತಾ–ಅಧಿಕಾರಿಯಾದ ತಾನು, ನಿಶ್ಚಲ–ಅಚಂಚಲ ಭಕುತಿಯಿಂದ, ನಿರಾಮಯ–ಅಹಂಮಮತಾದಿಗಳ ರಹಿತನಾಗಿ, ನಿರ್ವಿಕಾರ–ವಿಷಯಾದಿಗಳಿಂದ ವಿಕಾರ ರಹಿತನಾಗಿ, ನಿರಾಶ್ರಯ–ಜಿಹ್ಮ ಗುಹ್ಯಾದಿಗಳಿಗೆ ಅಧೀನನಾಗದೆ ಶ್ರೀ ಪರಮಾತ್ಮನ ಧ್ಯಾನ ಮಾಡತಕ್ಕವರಿಗೆ ಮನದರ್ಪಣದಿ ಹೊಳೆಯುಥಾನೆ.

ಜಡಚೇತನರೊಳಗಿದ್ದು ಬಹುರೂಪದಲಿ ಪೊಳೆವ ಎಂಬುದು ಅಧಿಕಾರಿಗಳ ಯೋಗ್ಯತಾಭೇದದಿಂದ ಹೊಳೆಯುತಾನೆ ಹೊರ್ತು ಸರ್ವರಿಗೆ ಏಕ ಪ್ರಕಾರವಲ್ಲ. ಪ್ರತೀಕಾಲಂಬನರಿಗೆ ಅವರವರ ದೇಹದಲ್ಲಿ ಮಾತ್ರ ಹೊಳೆಯುತಾನೆ. ಅಪ್ರತೀಕಾಲಂಬನರಿಗೆ ತಮ್ಮ ದೇಹದಲ್ಲಿ ಅನ್ಯತ್ರ ಕೂಡಾ ಹೊಳೆಯೋವನಾಗತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :–** ಕಲುಷವಿಲ್ಲದ ದರ್ಪಣ ಎಂದರೆ, ಕಲುಷ ಎಂದರೆ ಪಾದರಸ ವೆಂಬ ಕಲುಷಯುಕ್ತವಾದ ದರ್ಪಣ ಒಂದು, ಪ್ರತಿಫಲಿಸಿ ಎಂಬೋಣದರಿಂದ ಪಾದರಸ ಯುಕ್ತವಾದ ದರ್ಪಣ ಒಂದರಲ್ಲೇ ಪ್ರತಿಫಲನ ಉಂಟಾಗತದೆ. ಆದ್ದರಿಂದ ಕಲುಷವೆಂಬ ಪಾದರಸದಿಂದ ಸಹಿತವಾದ ಕನ್ನಡಿ ಒಂದು. ಇಲ್ಲದ ಎಂದರೆ ಪಾದರಸ ಎಂಬ ಕಲುಷ ವಿಲ್ಲದ ಕನ್ನಡಿ ಒಂದು. ಅಂತೂ ಈ ಎರಡರಲ್ಲಿ ಏನು ವಿಶೇಷ ಎಂದರೆ ಕಲುಷ ಇಲ್ಲದೆ ಅಂದರೆ ಪಾದರಸ ಇಲ್ಲದೇ ಇರತಕ್ಕ ದರ್ಪಣದ ಅಡಿಭಾಗದಲ್ಲಿರತಕ್ಕ ಯಾವತ್ತು ಪದಾರ್ಥ ಗಳು ಕಾಣತದೆ. ಭಕ್ತಿಯೋಪಾದಿಯಲಿ ದರ್ಪಣ ಅಡ್ಡವಿದ್ದ ಕಾಲಕ್ಕೂ ಪ್ರತಿಬಂಧಕ ಬಾಧಕವಾಗದೆ ಎಲ್ಲಾನೂ ಕಣ್ಣಿಗೆ ತೋರೋದಾಗತದೆ. ಕಲುಷವೆಂಬ ರಸಯುಕ್ತ ವಾದ ಕನ್ನಡಿಯಲ್ಲಿ ಎದುರಿಗೆ ಇರತಕ್ಕ ಅಂದರೆ ಕನ್ನಡಿಗೆ ಹಿಂದುಗಡೆ ಇರುವ ಪದಾರ್ಥ ಗಳು ಕಾಣದೆ ನಮಗೆ ಹಿಂಭಾಗದಲ್ಲಿರತಕ್ಕ ಪದಾರ್ಥವು ನೋಡೋಂಥಾ ದರ್ಪಣದಲ್ಲಿ ಪ್ರತಿಫಲಿಸೋದಾಗತದೆ. ಇದು ಉಭಯದರ್ಪಣಗಳಲ್ಲಿ ಕಾಣತಕ್ಕ ಕ್ರಮ. ಸರ್ವ ಪದಾರ್ಥಗಳೂ ಕಣ್ಣಿಂದ ನೋಡೋವಂದದಿ ಬಿಂಬರೂಪಿಯಾದ ಪರಮಾತ್ಮ ಜಡಜೀವರು ಚೇತನಜೀವರು (ಜಡಶಬ್ದದಿಂದ ಚೇತನರಹಿತವಾದ ಯಾವತ್ತು ಶುದ್ಧಜಡಗಳೂನೂ ಗ್ರಾಹ್ಯವೇ) ಈ ಎರಡೂ ಅಧಿಷ್ಠಾನಗಳು ಎರಡು ಪ್ರಕಾರ ಸಾಂಶರು, ನಿರಂಶರು ಎಂತ ಎರಡು ಪ್ರಕಾರ ಜೀವಾಧಿಷ್ಠಾನಗಳು. ಇವರಿಗೆ ಪರಮಾತ್ಮ ಹೊಳೆಯತಕ್ಕ ಕ್ರಮ ಹ್ಯಾಗೆಂದರೆ :—

೧) ಸಾಂಶರ ವಿಚಾರ :—ಈ ಸಾಂಶರಿಗೆ ಕಲುಷ ಅಥವಾ ರಸವಿಲ್ಲದ ಕನ್ನಡಿಯಲ್ಲಿ ಪದಾರ್ಥಗಳು ಕಾಂಬೋಪಾದಿಯಲ್ಲೀನು, ಕಲುಷ ಅಥವಾ ರಸಯುಕ್ತವಾದ ದರ್ಪಣದಲಿ ಪದಾರ್ಥಗಳು ಕಾಂಬೋಪಾದಿಯಲ್ಲೀನು, ಉಭಯವಿಧದಿಂದ ಭಗವದ್ರೂಪಗಳು ಹೊಳಿಯೋದಾಗತದೆ. ನಿರಂಶಜೀವರಿಗೆ ಹ್ಯಾಂಗೆಂದರೆ ಕಲುಷ ಅಥವಾ ರಸಯುಕ್ತ ವಾದ ಕನ್ನಡಿಯಲ್ಲಿ ಪದಾರ್ಥಗಳು ಕಾಣುವ ಹಾಂಗೆ ತಿಳಿಯುತಾನೆ. ತಾತ್ಪರ್ಯ ವೇನೆಂದರೆ, ಸಾಂಶರಿಗೆ ತಮ್ಮ ದೇಹಸ್ವರೂಪಗಳೇನು, ಅನ್ಯಗತರೂಪಗಳೇನು ಉಭಯವೂ ಹೊಳೆಯೋದಾಗುತದೆ. ಯೋಗ್ಯತಾನುಸಾರ ನಿರಂಶಜೀವರಿಗೆ ತಮ್ಮ ದೇಹಸ್ವರೂಪಗಳು ಮಾತ್ರ ಹೊಳೆಯೋದಾಗತದೆ. ಅನ್ಯಗತ ರೂಪಗಳು ಹೊಳೆಯೋದಿಲ್ಲ. ಆದ್ದರಿಂದ ಕಲುಷದರ್ಪಣ ಅಕಲುಷದರ್ಪಣ ಎರಡು ದೃಷ್ಟಾಂತ. ಎರಡು ದೃಷ್ಟಾಂತಗಳು ಸಾಂಶರಿಗೆ, ನಿರಂಶರಿಗೆ ಒಂದೇ ದೃಷ್ಟಾಂತ. ಈ ಪ್ರಕಾರ ಬಿಂಬ ಜಡಜೀವರೊಳಗಿದ್ದು ಅವರ ಯೋಗ್ಯತಾನುಸಾರ ಅನೇಕ ರೂಪಗಳಿಂದ ಅವರವರ ಮನದರ್ಪಣವೆಂಬ ಉಪಾಧಿ ದ್ವಾರಾ ಹೊಳೆಯುತ್ತಾನೆ. ಸಜ್ಜನರಲ್ಲದ ಮಿಥ್ಯಾಜ್ಞಾನಿಗಳಲ್ಲಿ ಪರಮಾತ್ಮ ಇದ್ದಕಾಲಕ್ಕೂ ಹೊಳೆಯೋದಿಲ್ಲ. ಯಾಕೆಂದರೆ ಅವರು ಪರಮಾತ್ಮನ ಕಾಣುವುದರಿಂದ ಅಂತ ಎಂದರೆ ಅನಂತ ಅಂತರಹಿತನಾದವನೆಂತ ಎಂದರೆ ಪರಮಾತ್ಮನಾದ ತಾನು ಹೊಳೆದ ಮೇಲೆ ನಿಶ್ಚಲ ಎಂದರೆ ಚಲಿಸದಂತೆ ಹೊಳೆಯುತಾ ಇರುತ್ತಾನೆ. ನಿಶ್ಚಲವಾದ ಮೋಕ್ಷಸ್ಥಾನವನ್ನು

ಸೇರತಾನೆ. ನಿರಾಮಯ ಎಂದರೆ ಪ್ರಾಣಿಗಳಿಗೆ ಜನನ ಮರಣಾಖ್ಯ ರೋಗದಿಂದ ರಹಿತರನ್ನಾಗಿ ಮಾಡತಾನೆ. ನಿರಾಮಯ–ಅಹಂ ಮಮ ಎಂಬ ಅಜ್ಞಾನದ ಆಶ್ರಯ ವನ್ನು ತಪ್ಪಿಸೋವನಾಗತಾನೆ. ಈ ಪ್ರಕಾರ ತನ್ನ ಭಕ್ತರಲಿ ಅನುಗ್ರಹ ಮಾಡತಾನೆ. ಆದ್ದರಿಂದ ಪರಮಾತ್ಮನ ಸರ್ವತ್ರದಲಿ ಅನುಸಂಧಾನ ಮಾಡಬೇಕೆಂದು ತಾತ್ಪರ್ಯ. ಅನಂತ ಎಂದರೆ, ಅಂ–ಸಮ್ಯಕ್ ಪ್ರಾಣಿಗಳಿಗೆ, ಅಂತ–ಲಿಂಗಶರೀರವನ್ನು ಅಂತ ಕಾಣಿ ಸೋವ (ಅಂತ್ಯಕ್ಕೆ ತಂದು ಇಲ್ಲಧಾಂಗೆ ಮಾಡೋಣ ; ಭಂಗ ಮಾಡೋಣ)

**ಈ ಶರೀರಚತುಷ್ಟಯಗಳೊಳು ।**
**ಕೋಶಧಾತುಗ ಭಾರತೀಪ ಪ್ರಾ ।**
**ಣೇಶನಿಪ್ಪತ್ತೊಂದು ಸಾವಿರದಾರುನೂರೆನಿಪ ॥**
**ಶ್ವಾಸರೂಪಕ ಹಂಸಭಾಸ್ಕರ ।**
**ಭೇಶರೊಳಗಿದ್ದವರ ಕೈವಿಡಿ ।**
**ದೀ ಸರೋಜಭವಾಂಡದೊಳು ಸರ್ವತ್ರ ತುಂಬಿಹನು ॥ ೫ ॥**

ಶ್ರೀ ವಾಯುದೇವರು ಪೂರ್ವೋಕ್ತ ನಾಲ್ಕು ದೇಹಗಳಲ್ಲಿದ್ದು ದಾವ ದೇಹದಲ್ಲಿ ಹಂಸಮಂತ್ರ ಮಾಡತಾರೆ ಎಂದರೆ ಹೇಳತಾರೆ.

ಈ ಶರೀರಚತುಷ್ಟಯಗಳೊಳು–ಈ ಪೂರ್ವೋಕ್ತವಾದ ಜೀವ, ಲಿಂಗ, ಅನಿರುದ್ಧ, ಸ್ಥೂಲ ಈ ನಾಲ್ಕು ಶರೀರಗಳೊಳಗೆ, ಧಾತುಗ–ಸಪ್ತಧಾತುಗಳಿಂದ ಯುಕ್ತವಾದದ್ದು ಸ್ಥೂಲಶರೀರ ಎಂಬುದು (ವಿಶೇಷಾರ್ಥದಲ್ಲಿ ಈ ವಿಷಯ ವಿವರ ನೋಡಬೇಕು). ಕೋಶ– ಅನ್ನಮಯಾದಿ ಕೋಶಗಳು (ಇವುಗಳಿಂದ ಯುಕ್ತವಾದ) ಸ್ಥೂಲದೇಹದ ಒಳಗೆ, ಭಾರತೀಪತಿ–ಭಾರತೀದೇವೇರಿಗೆ ಪತಿಯಾದ, ಪ್ರಾಣೇಶ–ಜೀವೋತ್ತಮರಾದ ಶ್ರೀ ವಾಯುದೇವರು, ಇಪ್ಪತ್ತೊಂದುಸಾವಿರದಾರನೂರೆನಿಪ–೨೧೬೦೦ ಆಗತಕ್ಕ, ಶ್ವಾಸ ರೂಪಕ–ಶ್ವಾಸರೂಪವಾದ, ಹಂಸ–ಹಂಸಮಂತ್ರ ಎಂದರೆ "ಸರ್ವಸ್ಯ ದುಃಖಹಂತೃತ್ವಾ ದ್ಧಂಸಃ" ಹಂಸ ಎಂತ ಎರಡು ವರ್ಣದಿಂದ ವಿಶಿಷ್ಟವಾದ ಶ್ವಾಸಜಪವನ್ನು ಮಾಡತಾರೆ. ಆ ಮಾಡುವ ಬಗೆ, ಭಾಸ್ಕರ–ಸೂರ್ಯನು ಇಡಾನಾಡಿಯಿಂದ ಬರತಕ್ಕ ಶ್ವಾಸಾಭಿ ಮಾನಿಯು. ಭೇಶ–ನಕ್ಷತ್ರಗಳಿಗೆ ಸ್ವಾಮಿಯಾದ ಚಂದ್ರನು ಪಿಂಗಳನಾಡಿಯಿಂದ ಬರ ತಕ್ಕ ಶ್ವಾಸಾಭಿಮಾನಿಯು. ಒಳಗಿದ್ದು– ಈ ಸೂರ್ಯಚಂದ್ರಾದಿಗಳಂತರ್ಗತನಾಗಿದ್ದು ಅಂದರೆ ಶ್ವಾಸರೂಪವಾದ ವಾಯು ಅಧಿಷ್ಠಾನದಲ್ಲಿ ಸೂರ್ಯಚಂದ್ರಾದಿಗಳು ತದಂತರ್ಗತ ಮುಖ್ಯಪ್ರಾಣದೇವರು, ತದಂತರ್ಗತ ಹಂಸರೂಪಿ ಪರಮಾತ್ಮ, ಈ ಪ್ರಕಾರ ಇದ್ದು (ಅವರ ದ್ವಾರಾ), ಈ ಸರೋಜಭವ–ವರ್ತಮಾನಕಾಲದಲ್ಲಿರತಕ್ಕ ಬ್ರಹ್ಮದೇವರ, ಅಂಡ ದೊಳು–ಅಭಿಮನ್ಯವಾದ ಬ್ರಹ್ಮಾಂಡದೊಳಗೆ, ಸರ್ವತ್ರ–ಸರ್ವತ್ರ ಇರತಕ್ಕ ಸರ್ವಪ್ರಾಣಿ ಗಳ ಸ್ಥೂಲದೇಹಗಳಲ್ಲಿ ವಿದ್ಯಮಾನವಾದ ಅಷ್ಟದಳಕಮಲಗಳ ಮೂಲೇಶನ ಪಾದ

ಮೂಲದಲ್ಲಿ ಪೊಂದಿದ್ದು ಶ್ವಾಸಜಪಗಳ ಮಾಡುತ್ತಾ, ತುಂಬಿಹನು–ಚರಾಚರಗಳಲ್ಲಿ ವ್ಯಾಪ್ತನಾಗಿದ್ದಾನೆ.

**ವಿಶೇಷಾರ್ಥ :–** ಅನ್ನಮಯಾದಿ ಕೋಶಗಳು ಐದು. ೧. ಅನ್ನಮಯ, ೨. ಪ್ರಾಣಮಯ, ೩. ಮನೋಮಯ, ೪. ವಿಜ್ಞಾನಮಯ, ೫. ಆನಂದಮಯ. ಸಪ್ತಧಾತುಗಳು ದಾವದೆಂದರೆ :–೧. ತ್ವಕ್ಕು, ೨. ಚರ್ಮ, ೩. ಮಾಂಸ, ೪. ಮೇದ, ೫. ಮಜ್ಜ, ೬. ರುಧಿರ, ೭. ಅಸ್ತಿ ಅಂತು ಏಳು. ಏತಾದೃಶವಾದ ಸ್ಥೂಲಶರೀರ ಒಂದು. ತದನ್ಯ ಶರೀರಗಳು ಮೂರು. ಅಂತು ನಾಲ್ಕು ಶರೀರಗಳು. ಈ ಶ್ಲೋಕದಿಂದ ನಾಲ್ಕು ದೇಹಗಳಲ್ಲಿ ಪ್ರಾಣದೇವರು ಇದ್ದಂತೆ ತೋರುತ್ತದೆ. ತಾತ್ಪರ್ಯ ಏನೆಂದರೆ, ಮೂಲದಲ್ಲಿ "ಈ ಶರೀರಚತುಷ್ಟಯದೊಳು ಕೋಶಧಾತುಗ" ಎಂತ ಪ್ರಯೋಗ ಇರೋಣದರಿಂದ ನಾಲ್ಕು ಶರೀರದೊಳಗೆ ಕೋಶಧಾತುಗಳಿಂದ ಯುಕ್ತವಾದ ಶರೀರದೊಳು, ಭಾರತೀರಮಣ ಮುಖ್ಯಪ್ರಾಣದೇವರು ಗ ಎಂದರೆ ಇರತಕ್ಕವರಾಗಿ ೨೧೬೦೦ ಶ್ವಾಸರೂಪವಾದ ಹಂಸಮಂತ್ರ ಜಪಿಸತಾರೆ ಎಂತ ತಾತ್ಪರ್ಯ. ಕೋಶಧಾತುಗಳಿಂದ ಯುಕ್ತವಾಗಿ ಸೃಜ್ಯವಾದ ಶರೀರ ಸ್ಥೂಲಶರೀರವೇ ಹೊರ್ತು ಅನ್ಯಶರೀರಗಳಲ್ಲ. ಆದ್ದರಿಂದ ಸ್ಥೂಲ ಶರೀರದಲ್ಲಿ ಮಾತ್ರ ಹಂಸಮಂತ್ರ ವಾಯುದೇವರು ಜಪಿಸತಾರೆ ಎಂತ ಶ್ಲೋಕತಾತ್ಪರ್ಯ. ಮತ್ತು ಪೂರ್ವೋಕ್ತ ಮೂರನೇ ನುಡಿಯಲ್ಲಿ ನಾಲ್ಕು ದೇಹಗಳು ಹೇಳಿ ಹಂಸಮಂತ್ರ ಸ್ಥೂಲಶರೀರದಲ್ಲಿ ಮಾತ್ರ ಹೇಳಿರೋಣದರಿಂದಲೂ ಸ್ಥೂಲಶರೀರದಲ್ಲಿ ಪ್ರಾಣದೇವರು ಹಂಸಮಂತ್ರ ಮಾಡತಾರೆ ಎಂತ ತಿಳೀಬೇಕು. ಆದ್ದರಿಂದ ಕೋಶಧಾತುಗ ಎಂತ ಪ್ರಯೋಗ. ಅನ್ಯ ಶರೀರಗಳಲ್ಲಿ ಕೋಶಗಳು ಉಂಟು. ಧಾತುಗಳು ಹೇಳಲಿಲ್ಲ. ಸ್ವರೂಪ ದೇಹದಲ್ಲಿ ಕೋಶಧಾತುಗಳು ಎರಡೂ ಉಂಟು. ಹಿಂಗೆ ಇದ್ದ ಮ್ಯಾಲೆ ಸ್ವರೂಪದೇಹ ಯಾಕೆ ತೊಕೋಬಾರದು ಎಂದರೆ ಸೂರ್ಯಚಂದ್ರಾದಿಗಳ ದ್ವಾರಾ ಶ್ವಾಸಕಾರ್ಯ ಮಾಡಸತಾರೆ ಎಂತ ಹೇಳಿರೋಣದರಿಂದ ಕೂಡದು. ಶ್ವಾಸಹಂಸಮಂತ್ರ ಸ್ಥೂಲಶರೀರ ದಲ್ಲೇ ಆಗತದೆ. ತತ್ಕ್ರಿಯಾ ಸ್ಥೂಲ ನಾಸಿಕಾದ್ವಾರಗಳ ದ್ವಾರಾ ವ್ಯಕ್ತ. ಎಡಭಾಗ ನಾಡಿ ಇಡಾನಾಡಿ, ಬಲಭಾಗ ನಾಡಿ ಪಿಂಗಳಾ ನಾಡಿ. ಎಡಭಾಗ ಇಡಾನಾಡಿಗೆ ಭೇಶ ಎಂದರೆ ಚಂದ್ರ. ಬಲಭಾಗ ನಾಡಿಗೆ ಭಾಸ್ಕರ ಎಂದರೆ ಸೂರ್ಯ ಪ್ರಮಾಣ ರೀತ್ಯಾ ಹಂಸ ಎಂತ ಎರಡು ವರ್ಣದಿಂದ ವಿಶಿಷ್ಟವಾದ ಶ್ವಾಸದ ಕೆಲಸವನ್ನು ಮಾಡತಾನೆ. ಆಯಾ ನಾಡಿ ಗಳಿಂದ ಹೊರಡತಕ್ಕ ಶ್ವಾಸಕ್ಕೂ ಚಂದ್ರಸೂರ್ಯರು ಅಭಿಮಾನಿಗಳು. ಈ ಸೂರ್ಯ ಚಂದ್ರರ ಅಂತರ್ಗತನಾಗಿ ಮುಖ್ಯಪ್ರಾಣದೇವರು ತದಂತರ್ಗತ ಹಂಸರೂಪಿ ಪರಮಾತ್ಮ ಇದ್ದವನಾಗಿ ಅವರ ದ್ವಾರಾ, ಸರೋಜಭವ–ಬ್ರಹ್ಮದೇವರು, ಅಂಡ ಎಂದರೆ ಬ್ರಹ್ಮಾಂಡ ದೊಳು ಮತ್ತು ಸರೋಜಭವನಿಂದ ನಿರ್ಮಿತಗಳಾದ ಅಂಡ ಎಂದರೆ ಪಿಂಡಾಂಡಗಳು ಎಂತ ತಾತ್ಪರ್ಯ.

ಪ್ರಾಣದೇವರು ಸ್ಥೂಲದೇಹದಲ್ಲೇವೇ ಹಂಸಮಂತ್ರ ಮಾಡತಕ್ಕದ್ದು. ಮಿಗಿಲಾದ ದೇಹಗಳಲ್ಲಿ ಜೀವನ ಇಂದ್ರಿಯಗಳು ಲಿಂಗದೇಹದಾರಭ್ಯ ಸರ್ವತ್ರ ವ್ಯಾಪ್ತಿ, ಸ್ಥೂಲದೇಹದಲ್ಲಿ

ಕ್ರಿಯಾ. ತದ್ವತ್ ಜೀವನ ಸ್ವರೂಪತಃ ಶ್ವಾಸ ಲಿಂಗದೇಹಾರಭ್ಯ ಸ್ಥೂಲದೇಹದವರಿಗೂ ವ್ಯಾಪ್ತಿ. ಕ್ರಿಯಾ ಸ್ಥೂಲದೇಹದಲ್ಲಿ ನಡಿಯತದೆ. ಈ ಶ್ಲೋಕದಲ್ಲಿ ನಾಲ್ಕು ಶರೀರಗಳೊಳಗೆ ಸ್ಥೂಲಶರೀರದಲ್ಲಿ ಮಾತ್ರ ಹಂಸರೂಪಿ ಪರಮಾತ್ಮ ವಾಯುದೇವರು ಶ್ವಾಸರೂಪದಿಂದ ಇರ್ತಾರೆ ಎಂತ ಹೇಳಿತೇ ಹೊರ್ತು ವಾಯುದೇವರು ನಾಲ್ಕು ಶರೀರದಲ್ಲಿ ಇದ್ದು ಶ್ವಾಸಜಪ ಮಾಡತಾರೆ ಎಂತ ಏನೂ ಹೇಳಲಿಲ್ಲ. ಹಂಸರೂಪಿ ಪರಮಾತ್ಮ ಭೇಶಭಾಸ್ಕರರು ಶ್ವಾಸಾಭಿಮಾನಿಗಳಾಗಿ ಇರೋಣ ಎಂಬುದು ಸ್ಥೂಲದೇಹ ಆದ್ದರಿಂದಲೂ, ಕೋಶಧಾತುಗಳಿಂದ ಯುಕ್ತವಾದದ್ದು ಸ್ಥೂಲದೇಹವೂ, ಸ್ಥೂಲದೇಹದಲ್ಲಿ ವಿದ್ಯಮಾನವಾದ ಕೋಶಧಾತುಗಳಲ್ಲಿರತಕ್ಕ ಭಾರತೀಪತಿ ಪ್ರಾಣದೇವರಿಗೆ ಈಶನಾದ ಹಂಸರೂಪಿ ಪರಮಾತ್ಮ ೨೧೬೦೦ ಶ್ವಾಸರೂಪದಿಂದ ಇದ್ದಾನೆಂಬೋಣದರಿಂದ ಎಲ್ಲಾ ಸ್ಥೂಲದೇಹ ವಿಚಾರವಾಯಿತು. ಸಂಧಿಗತ ಪ್ರಕರಣವೂ ಸ್ಥೂಲದೇಹದ ಪ್ರಕರಣವೇ. ನಾಲ್ಕು ದೇಹಗಳೊಳಗೆ ಸ್ಥೂಲದೇಹದಲ್ಲಿ ೨೧೬೦೦ ಶ್ವಾಸಕಾರ್ಯ ನಡಿಯುತದೆ. ತದ್ರೂಪದಿಂದ ಪರಮಾತ್ಮ ಹಂಸರೂಪದಿಂದ ಇದ್ದಾನೆಂತಲೇ ಆಯಿತು. ಸ್ಥೂಲದೇಹದಲ್ಲಿ ಹಂಸಮಂತ್ರ ಮಾಡತಕ್ಕವರು ವಾಯುದೇವರೇವೇ. ಸಿದ್ಧಾಂತವಾದ ಕಾಲಕ್ಕೂ ಅದು ಸಂಧ್ಯಂತರದಿಂದಲೇ ಸಿದ್ಧಿಯೇ ಹೊರ್ತು ಶ್ಲೋಕದಲ್ಲಿ ವಾಯುದೇವರು ಸ್ಥೂಲದೇಹದಲ್ಲಿ ಹಂಸಮಂತ್ರ ಮಾಡತಾರೆ ಎಂಬೋದು ಸ್ಪಷ್ಟವಾಗಿ ಹೇಳಲಿಲ್ಲ. ನಾಲ್ಕು ದೇಹದಲ್ಲಿ ಸೂರ್ಯಚಂದ್ರಾದಿಗಳು ಹೇಳಲಿಕ್ಕೆ ಇಲ್ಲ. ಸೂರ್ಯಚಂದ್ರರ ದ್ವಾರಾ ತುಂಬಿಹನು ಎಂದರೆ ಸ್ಥೂಲಕ್ಕೆ ಹೇಳಬೇಕು. ಆದ್ದರಿಂದ ಶ್ವಾಸಮಂತ್ರ ವಾಯುದೇವರು ಮಾಡತಕ್ಕದ್ದು ಸ್ಥೂಲದಲ್ಲಿ ಹೊರ್ತು ಅನ್ಯತ್ರ ಇಲ್ಲ ಎಂತ ತಿಳಿಯಬೇಕು.

**ಶಿರಗಳೈದೆರಡು ಬಾಹುಗ ।**
**ಳೆರಡು ಪಾದಗಳೊಂದು ಮಧ್ಯೋ ।**
**ದರದಿ ಶೋಭಿಪ ವಾಙ್ಮನೋಮಯನೆನಿಪ ನಿತ್ಯದಲಿ ॥**
**ಕರಣಧಾತುಗಳಲ್ಲಿ ಎಪ್ಪ ।**
**ತ್ತೆರಡುಸಾವಿರ ನಾಡಿಗಳಲಿ ।**
**ಪ್ಪರ ವಿದೂರನು ಭಾರತಪ್ರತಿಪಾದ್ಯನೆಂದೆನಿಸಿ ॥ ೬ ॥**

ಶಾಸ್ತ್ರ ಸಂವಾದ ಮಾಡತಕ್ಕ ವಾಙ್ಮನೋಮಯರೂಪಗಳ ಹೇಳತಾರೆ.

ಶಿರಗಳೈದು—ಐದು ಶಿರಗಳಲ್ಲಿ, ಐದೆರಡುಬಾಹುಗಳು—ಐದೆರಡು ಹತ್ತು, ಹತ್ತು ಕರಗಳು, ಎರಡು ಪಾದಗಳು—ಪಾದಗಳು ಎರಡು, ಒಂದು ಮಧ್ಯೋದರದಿ—ಕಂಠಕಟಿ ಮಧ್ಯಗತವಾದ ಒಂದಾದ ಉದರ ಇಷ್ಟರಿಂದ, ಶೋಭಿಪ—ಪ್ರಕಾಶಮಾನನಾದ ಶ್ರೀ ಪರಮಾತ್ಮ, ವಾಙ್ಮಯ—ವಾಕ್ಯದಲ್ಲಿದ್ದು ವಾಙ್ಮಯ ಎಂತಲೂ, ಮನೋಮಯ—ಮನದಲ್ಲಿದ್ದು ಮನೋಮಯನೆಂತಲೂ, ಎನಿಪ—ಎನಿಸೋವನಾಗತಾನೆ. ಇಂಥಾ ಪರಮಾತ್ಮ ನಿತ್ಯದಲಿ—ಪ್ರತಿದಿನದಲ್ಲಿಯೂ, ಕರಣ—ದಶೇಂದ್ರಿಯಗಳಲ್ಲಿಯೂ, ಧಾತುಗಳಲ್ಲಿ—ಸಪ್ತ

ಧಾತುಗಳಲ್ಲಿಯೂ, ಎಪ್ಪತ್ತೆರಡು ಸಾವಿರ ನಾಡಿಗಳೊಳು, ಅರವಿದೂರನು–ದೋಷದೂರ ನಾದ, ಶ್ರೀ ಪರಮಾತ್ಮನಾದ ಶ್ರೀ ವಾಙ್ಮನೋಮಯನೂ, ಭಾರತ–ಏಕೈಕವೇದದ ಕಿಂತಲೂ ಅಧಿಕ ಎನಿಸತಕ್ಕ ನಾಲ್ಕು ವೇದಾರ್ಥಗಳಿಂದ ಯುಕ್ತವಾದ "ಭಾರತಃ ಪಂಚಮೋ ವೇದಃ" ಐದನೇ ವೇದ ಎಂತ ಎನಿಸತಕ್ಕ ಭಾರತದಿಂದ, ಪ್ರತಿಪಾದ್ಯನೆಂದು– ಪ್ರತಿಪಾದ್ಯ ಎಂತ, ಎನಿಸಿ–ಎನಿಸಿದವನಾಗಿ, ಇಪ್ಪ–ಪೂರ್ವೋಕ್ತ ಸ್ಥಾನಗಳಲ್ಲಿರೋವವ ನಾಗಿದ್ದಾನೆ. ಶ್ರೀ ವಾಙ್ಮನೋಮಯರೂಪನಾದ ಪರಮಾತ್ಮನ ರೂಪ ಎಂಥಾದೆಂದರೆ :–

ಭಾರತ ಸಹಿತ ಐದು ವೇದಗಳು ಐದು ಶಿರಗಳು, ದಶ ಉಪನಿಷತ್ತುಗಳು ಹತ್ತು ಬಾಹುಗಳು (ಕರಗಳು), ಪಾದದ್ವಯಗಳು ದಾವದೆಂದರೆ (೧) ೧೮ ಪುರಾಣಗಳು ಸೇರಿ ಒಂದು ಪಾದ, ಹದಿನೆಂಟು ಉಪಪುರಾಣಗಳು ಸೇರಿ ಒಂದು ಪಾದ, ಅಂತು ಎರಡು ಪಾದ. ಭಾರತಾದಿ ಯಾವತ್ತು ಅರ್ಥಗಳು ಸೇರಿ ಒಂದು ಉದರ. ಏತಾದೃಶನಾದ ವಾಙ್ಮನೋಮಯನಾದ ಶ್ರೀ ಪರಮಾತ್ಮ ಇಂಥಾ ಅಧಿಷ್ಠಾನಾಂತರ್ಗತನಾಗಿ ವೇದ ಶಾಸ್ತ್ರಗತ ಅರ್ಥಗಳ ಮನೋದ್ವಾರಾ ವಾಕ್ಯಗಳಿಂದ ಉಚ್ಚಾರ ಮಾಡಸತಾನೆ. ಸಂವಾದ ಮಾಡಸತಾನೆ. ಮನೋವಾಕ್ಯಗಳಲ್ಲಿ ಸಂಚಾರ ಮಾಡತಾ ಇರತಾನೆ ಎಂತ ತಾತ್ಪರ್ಯ.

**ಈರೆರಡು ದೇಹೋರ್ಮಿಭೂತಗ ।**
**ಳಾರಧಿಕದಶಯುಗ್ಮನುತ ಲ ।**
**ಕ್ಷ್ಮೀರಮಣ ವಿಷ್ವಾಖ್ಯರೂಪದಿ ಚತುಷಷ್ಟಿಕಲಾ ॥**
**ಧಾರಕನು ತಾನಾಗಿ ಬ್ರಹ್ಮ ಪು ।**
**ರಾರಿ ಮುಖ್ಯರೊಳಿದ್ದು ಸತತ ವಿ ।**
**ಹಾರ ಮಾಳ್ಪನು ಚತುಷ್ಪಾದಾಹ್ವಯದಿ ಲೋಕದೊಳು ॥ ೭ ॥**

ಪೂರ್ವೋಕ್ತ ಶ್ಲೋಕದಲ್ಲಿ ಜೀವ–ಲಿಂಗ–ಅನಿರುದ್ಧ–ಸ್ಥೂಲ ಈ ನಾಲ್ಕು ದೇಹ ಗಳ ಹೇಳಿದರು. ಈ ಶ್ಲೋಕದಲ್ಲಿ ಆ ನಾಲ್ಕು ದೇಹಗಳೊಳಗೆ ಸ್ಥೂಲದೇಹದ ವಿಚಾರ ಮಾತ್ರ ಹೇಳತಾರೆ.

ಈ ಸ್ಥೂಲದೇಹ ಎಷ್ಟು ಪ್ರಕಾರ ಎಂದರೆ ಈರೆರಡು ದೇಹ–ನಾಲ್ಕು ದೇಹಗಳು ಪೂರ್ವೋಕ್ತ, ಜೀವ–ಲಿಂಗ–ಅನಿರುದ್ಧ–ಸ್ಥೂಲ ದೇಹಗಳಲ್ಲಿ ೧ ಸ್ವೇದಜ, ೨ ಉದ್ಭಿಜ್ಜ, ೩ ಅಂಡಜ, ೪ ಜರಾಯುಜ ಎಂತ ನಾಲ್ಕು ವಿಧಗಳು. ಊರ್ಮಿ–ಆರು ತರಂಗಗಳಿಂದ ಯುಕ್ತವಾದದ್ದು. ದಾವದೆಂದರೆ ೧ ಜನನ, ೨ ಮರಣ, ೩ ಕ್ಷುತ್ತು, ೪ ತೃಷಾ (ನೀರಡಿಕೆ) ಅಂದರೆ ಪಿಪಾಸಾ, ೫ ಶೋಕ, ೬ ದುಃಖ ಎಂತ ಷಡೂರ್ಮಿಗಳು. ಜೀವ–ಲಿಂಗ–ಅನಿರುದ್ಧ ಶರೀರಗಳಿಗೆ ಈ ತರಂಗಗಳು ಇಲ್ಲವಾದ್ದರಿಂದ ಆ ಮೂರು ಶರೀರಗಳು ಗ್ರಾಹ್ಯವಲ್ಲ. ನಾಲ್ಕು ಶರೀರಗಳು ಸ್ಥೂಲಶರೀರಗಳೇ ಎಂತ ತಾತ್ಪರ್ಯ. ಚತುಃಷಷ್ಟಿಕಳಾ–(೬೪) ಅರವತ್ತುನಾಲ್ಕು ಕಳಾಗಳು. ಒಂದೊಂದು ಸ್ಥೂಲಶರೀರ

## ಚತುಃಷಷ್ಟಿ ಕಳಾ ವಿವರ.

| | | |
|---|---|---|
| ೧ ಅಕ್ಷರ ಲಕ್ಷಣ | ೨೩ ಸಾಮುದ್ರಿಕಾಲಕ್ಷಣ | ೪೪ ಪರವಾದ |
| ೨ ಲಿಖಿತ | ೨೪ ಶಕುನ ಶಾಸ್ತ್ರ | ೪೫ ಪರಕಾಯಪ್ರವೇಶ |
| ೩ ಗಣಿತ | ೨೫ ಶಿಲ್ಪಶಾಸ್ತ್ರ | ೪೬ ಅಶ್ವಾರೋಹಣ |
| ೪ ವೈಶೇಷಿಕ | ೨೬ ಕಾಮಶಾಸ್ತ್ರ | ೪೭ ಗಜಾರೋಹಣ |
| ೫ ಸೌರ | ೨೭ ನಿಸತ್ಸರ | ೪೮ ಸಂಧಿವಿಗ್ರಹ |
| ೬ ಗಾಣಪತ್ಯ | ೨೮ ಪ್ರಳಯಕಾಲ | ೪೯ ಚರ್ಮಶಾಸ್ತ್ರ |
| ೭ ವೇದ | ೨೯ ಮಾಯಾವಾದ | ೫೦ ಸ್ವರ್ಣಪರೀಕ್ಷ |
| ೮ ವೇದಾಂತ | ೩೦ ಸಾರವಾದ | ೫೧ ರತ್ನಪರೀಕ್ಷ |
| ೯ ಪ್ರಾತಿಶಾಖ್ಯ | ೩೧ ವಿವಾದ | ೫೨ ಜ್ಯೋತಿಶ್ಯಾಸ್ತ್ರ |
| ೧೦ ಪ್ರಾಭಟ್ಟ | ೩೨ ಗಂಧವಾದ | ೫೩ ಇಂದ್ರಜಾಲ |
| ೧೧ ಪ್ರಾಭಾಕರ | ೩೩ ರಸವಾದ | ೫೪ ಮಹೇಂದ್ರಜಾಲ |
| ೧೨ ನ್ಯಾಯ | ೩೪ ಧಾತುವಾದ | ೫೫ ಅಗ್ನಿಸ್ಥಂಭ |
| ೧೩ ವ್ಯಾಕರಣ | ೩೫ ಸೌಗತ | ೫೬ ಜಲಸ್ಥಂಭ |
| ೧೪ ಛಂದಸ್ಸು | ೩೬ ಗಾರುಡ | ೫೭ ವಾಯುಸ್ಥಂಭ |
| ೧೫ ಅಲಂಕಾರ | ೩೭ ಚಿತ್ರಕರ್ಮ | ೫೮ ಖಡ್ಗಸ್ಥಂಭ |
| ೧೬ ನಟ | ೩೮ ವೈದ್ಯವಾದ | ೫೯ ಬಾಲಾಶನಾ |
| ೧೭ ನಾಟಕ | ೩೯ ವಾಸ್ತುಶಾಸ್ತ್ರ | ೬೦ ದೂರದೃಷ್ಟಿ |
| ೧೮ ಇತಿಹಾಸ | ೪೦ ಶ್ರೌತ | ೬೧ ದೂರಶ್ರವಣ |
| ೧೯ ಆಗಮ | ೪೧ ಸ್ಮಾರ್ತ | ೬೨ ಇಂಗಿತಜ್ಞ |
| ೨೦ ಪುರಾಣ | ೪೨ ಆಚಾರ | ೬೩ ಭಾವಬೋಧ |
| ೨೧ ಸ್ತ್ರೀಲಕ್ಷಣ | ೪೩ ವ್ಯವಹಾರ | ೬೪ ಪರಿಹಾಸ |
| ೨೨ ಪುರುಷ ಲಕ್ಷಣ | | |

೧೬ ಕಳಾಗಳಿಂದ ಯುಕ್ತವಾದದ್ದು. ಕಳೆಗಳು ದಾವದೆಂದರೆ ದಶೇಂದ್ರಿಯಗಳು ೧೦, ಪಂಚಭೂತಗಳು ೫, ಮನಸ್ಸು ೧ ಅಂತು ಹದಿನಾರು ಕಳಾಗಳು. ಈ ಪ್ರಕಾರ ನಾಲ್ಕು ಸ್ಥೂಲಶರೀರಗಳಿಗೆ ಆಗತಕ್ಕ ಕಳಾಗಳು ೬೪. ಆರಧಿಕದಶ_ಹದಿನಾರು ಅಂತ ಅರ್ಥ. ಈ ೧೬ ಋಗ್ವಿನುತ_ವೇದ ಋಕ್ಕುಗಳಿಂದ ವಿನುತನಾದವ ಅಂದರೆ ಸ್ತೋತ್ರ ಮಾಡಿಸಿಕೊಳ್ಳತಕ್ಕವ, ಲಕ್ಷ್ಮೀರಮಣ_ಲಕ್ಷ್ಮೀಪತಿಯಾದ ಶ್ರೀ ನಾರಾಯಣನು ಎಂದರೆ ಪುರುಷಸೂಕ್ತಕ್ಕೆ ಋಕ್ಕುಗಳು ಹದಿನಾರು. ಋಕ್ಕುಗಳಿಗೆ ೧೬ ಭಗವದ್ರೂಪಗಳು. ಈ ಹದಿನಾರು ಭಗವದ್ರೂಪಗಳು ೬೪ ರೂಪಗಳಿಂದ, ಆಧಾರಕನು_೬೪ ಕಳಾಕ್ಕೆ

ಆಧಾರಕನು. ವಿಷ್ಣ್ವಾಖ್ಯರೂಪದಿ–ವಿಷ್ಣುರೂಪದಿಂದ, ತಾನಾಗಿ–ತಾನೇ ಆಧಾರಕನಾಗಿ ಹಾಂಗೆ, ಬ್ರಹ್ಮ–ಚತುರ್ಮುಖ ಬ್ರಹ್ಮದೇವರು, ಪುರಾರಿ–ತ್ರಿಪುರಾಸುರನಿಗೆ ಶತ್ರುವಾದ ರುದ್ರದೇವರು, ಮುಖ್ಯರೊಳಿದ್ದು–ಮುಖ್ಯರಾದ ೨೪ ತತ್ವಾಭಿಮಾನಿಗಳೊಳಗಿದ್ದು, ಸತತ–ನಿರಂತರದಲ್ಲಿಯೂ, ವಿಹಾರ ಮಾಳ್ಪನು–ಕರ್ಮವ್ಯಾಪಾರಗಳಿಂದ ಸಂಚಾರ ಮಾಳ್ಪನು, ಮತ್ತು ಚತುಷ್ಪಾದ–ನಾಲ್ಕು ಪಾದ, ೧) ಸ್ವೇದಜ, ೨) ಉದ್ಭಿಜ್ಜ, ೩) ಅಂಡಜ, ೪) ಜರಾಯುಜ, ಒಂದೊಂದಕ್ಕೆ ಒಂದೊಂದು ಪಾದ, ಅಂತು ನಾಲ್ಕು ಪಾದಗಳೆಂತ ಸಾಂಕೇತ, ಆಹ್ವಯದಿ–ಈ ನಾಲ್ಕು ಪಾದದಲ್ಲಿ ತನ್ನಾಮದಿಂದ ಇದ್ದಾನೆ. ಲೋಕದೊಳು–ಸರ್ವಪ್ರಾಣಿಗಳಲ್ಲಿ ಎಂತ ತಾತ್ಪರ್ಯ.

**ವಿಶೇಷಾರ್ಥ :**—ಈ ಶ್ಲೋಕದಲ್ಲಿ ಊರ್ಮಿ ಎಂತ ಇರುವುದಕ್ಕೆ ಪ್ರಕಾರಾಂತರ ಅರ್ಥ. ೧ ಶುಕ್ಲಾದಿ ರೂಪದಿಂದ ಇರುವುದು. ೨ ಗರ್ಭದಲ್ಲಿ ಜನಿಸುವುದು. ೩ ನಾನಾ ಅವಯವದ ರೂಪವಾಗುವುದು. ೪ ಬೆಳೆಯುವುದು. ೫ ವಾರ್ಧಿಕ್ಯದಲ್ಲಿ ಕುಗ್ಗುವುದು. ೬ ನಷ್ಟವಾಗುವುದು. ಅಂತು ಷಡೂರ್ಮಿಗಳು. ಇನ್ನೊಂದು ಪ್ರಕಾರ ೧ ಖೇಚರ ಎಂದರೆ ಆಕಾಶದಲ್ಲಿ ಸಂಚರಿಸತಕ್ಕ ದೇಹ, ೨ ಭೂಚರ ಎಂದರೆ ಭೂಮಿಯಲ್ಲಿ ಸಂಚರಿಸತಕ್ಕ ದೇಹ, ೩ ವಾರಿಚರ ಅಂದರೆ ಉದಕದಲ್ಲಿ ಸಂಚರಿಸತಕ್ಕ ದೇಹ, ೪ ನಿಶಾಚರ ಅಂದರೆ ರಾತ್ರಿಯಲ್ಲಿ ಸಂಚರಿಸತಕ್ಕ ದೇಹ. ಅಂತು ಈ ನಾಲ್ಕು ಸ್ಥೂಲದೇಹಗಳು ಎಂತಲೂ ಹೇಳಬಹುದು. ಎಲ್ಲಾನೂ ಏಕವಾಕ್ಯತಾವೇ ಆಗುತ್ತದೆ. ಚತುಷಷ್ಟಿ ಕಳಾಧಾರಕನು ಎಂದರೆ ಪ್ರಕಾರಾಂತರ ಅರ್ಥ :—ವೇದಗಳು ೪, ಆಯುರ್ವೇದವೆಂಬ ವೈದ್ಯಶಾಸ್ತ್ರ. ಧನುರ್ವೇದ ಎಂಬ ಯುದ್ಧವಿದ್ಯಾ. ಗಂಧರ್ವವೇದ ಎಂಬ ಸಂಗೀತಶಾಸ್ತ್ರ. ಜ್ಯೋತಿಷ್ಯ ಕಲ್ಪ ಸಹ ಆರು ಶಾಸ್ತ್ರ ಕೂಡಿ ಹದಿನಾಲ್ಕು. ಇದೇ ವಿದ್ಯೆ ಪರಮಾತ್ಮನ ಪರವಾಗಿ ಅರ್ಥಮಾಡಿದರೆ ಪರವಿದ್ಯೆಯೆಂತಲೂ ಎರಡೂ ಸಹ ಸೇರಿ ೧೬ ವಿದ್ಯಗಳು. ಬ್ರಹ್ಮರುದ್ರಾದಿ ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು, ಪಕ್ಷಿಗಳು ಎಂಬ ನಾಲ್ಕು ಜಾತಿಗೆ ಯೋಗ್ಯತಾನುಸಾರ ಜ್ಞಾನಗಳು ೧೬. ಈ ಹದಿನಾರು×ನಾಲ್ಕು=ಅರವತ್ತನಾಲ್ಕು ವಿದ್ಯಾಧಾರನಾಗಿ ಅಥವಾ "ಚತುಃಷಷ್ಟಿರ್ಜಾತಯಃ" ಎಂಬ ವಿಷ್ಣುರಹಸ್ಯ ರೀತ್ಯಾ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಗಳಿಂದ ಹುಟ್ಟಿದ ಕ್ಷತ್ರಿಯ, ವೈಶ್ಯ, ಶೂದ್ರ ಸ್ತ್ರೀಯರಲ್ಲಿ ಬ್ರಾಹ್ಮಣಗೆ ಮೂರ್ಧಾನ್ವಶಕ್ತ, ಅಂಬಷ್ಟ, ಪೊರಶವ (ಪಾರಶ) ಎಂದು ಮೂರು ಜಾತಿ ; ಕ್ಷತ್ರಿಯಗೆ ಬ್ರಾಹ್ಮಣ, ವೈಶ್ಯ, ಶೂದ್ರಸ್ತ್ರೀಯರಲ್ಲಿ ಸೂತ, ಮಾಹಿಷ್ಯ, ಉಗ್ರ ಎಂದು ಮೂರು ಜಾತಿ ; ವೈಶ್ಯಗೆ ಬ್ರಾಹ್ಮಣ, ಕ್ಷತ್ರಿಯ, ಶೂದ್ರಸ್ತ್ರೀಯರಲ್ಲಿ ವೈದೇಹ, ಮಾಹಿಕ, ಕರಣ ಎಂದು ಮೂರು ಜಾತಿ ; ಶೂದ್ರಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಸ್ತ್ರೀಯರಲ್ಲಿ ಚಂಡಾಲ, ಕ್ಷತ್ತಾರ, ಅಯೋಗ ಎಂದು ಮೂರು ಜಾತಿ ಅಂತು (೧೨) ಹನ್ನೆರಡು ಜಾತಿ+೪ ಜಾತಿ. ಒಟ್ಟು ೧೬ ಜಾತಿ. ಅವರು ಪುನಶ್ಚ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿ

ಸ್ತ್ರೀಯರಲ್ಲಿ ಮಕ್ಕಳ ಪಡದ್ದು ೧೬. ಈ ಹದಿನಾರು×ನಾಲ್ಕುಗಳು=೬೪ ಜಾತಿಗೆ ಜೀವನ ಕರವಾದ ಶಿಲ್ಪಗಳು, ಲಿಪಿಜ್ಞಾನ, ಮೊದಲು ಕಳ್ಳತನದವರಿಗೆ ೬೪ ವಿದ್ಯೆಗಳು. ಈ ವಿದ್ಯೆ ಗಳಿಗೆ ಅಥವಾ ೧ ಹಸ್ತಿನಿ ೨ ಚಿತ್ತಿನಿ ೩ ಶಂಖಿಣಿ ೪ ಪದ್ಮಿನಿ ಈ ನಾಲ್ಕು ಜಾತಿ ಸ್ತ್ರೀಯರುಗಳು ಋತುವಾದ ದಿನ ಮೊದಲು ಹದಿನಾರು ದಿವಸದವರೆಗೆ ೬೪ ಕಳೆಗಳಿಗೆ ಆಧಾರವಾಗಿ ಎಂತಲೂ ಪ್ರಕಾರಾಂತರ ಅರ್ಥ ಮಾಡಬಹುದು ಎಂತ ತಾತ್ಪರ್ಯ.

**ತೃಣ ಮೊದಲು ಬ್ರಹ್ಮಾಂತ ಜೀವರ ।**
**ತನುಚತುಷ್ಟಯಗಳಲಿ ನಾರಾ ।**
**ಯಣನ ಸಾವಿರದೈದು ನೂರಿಪ್ಪತ್ತು ಮೇಲಾರು ॥**
**ಗಣನೆ ಮಾಳ್ಪದು ಬುಧರು ರೂಪವ ।**
**ಘೃಣಿಃ ಸೂರ್ಯಾದಿತ್ಯನಾಮಗ ।**
**ಳನುದಿನದಿ ಜಪಿಸುವರಿಗೀವಾರೋಗ್ಯಸಂಪದವ ॥ ೮ ॥**

ಆರೋಗ್ಯಭಾಗ್ಯ ಸಂಪತ್ತುಗಳ ಕೊಡತಕ್ಕ ರೂಪಗಳ ಹೇಳತಾರೆ.

ಚತುಷ್ಟಯ–ನಾಲ್ಕು ಸಂಖ್ಯಾದಿಂದ ಯುಕ್ತವಾದ, ತೃಣಮೊದಲು–ತೃಣಜೀವರು ಆರಂಭಮಾಡಿ, ಬ್ರಹ್ಮಾಂತಜೀವರ–ಬ್ರಹ್ಮದೇವರ ಅಂತ್ಯದವರಿಗೂ ಪ್ರಾಣಿಗಳ ಎಂದರೆ ವಿವರ :– ೧. ಬ್ರಹ್ಮಾದಿ ಶತಸ್ಥರವರೆಗೆ ಮುಖ್ಯತಾತ್ವಿಕರು, ೨. ಅಮುಖ್ಯತಾತ್ವಿಕರಾದ ಕರ್ಮಜರು, ೩. (ಅತಾತ್ವಿಕರಾದ) ಆಜಾನಜರು, ೪. ನಿರಂಶರಾದ ಮಾನುಷ, ಗಂಧರ್ವರಾರಭ್ಯ ತೃಣಾಂತ. ಈ ವಿಧವಾದ ನಾಲ್ಕು ವಿಧ ಜೀವರ, ತನುಗಳಲಿ–ನಾಲ್ಕು ವಿಧ ಸ್ಥೂಲದೇಹಾದಿಗಳು ಎಂತ ಅರ್ಥ. ದೇವತಾದೇಹಗಳೂ ಕೂಡ ಜನನಮರಣಾದಿ ಊರ್ಮಿಗಳಿಂದ ಸಹಿತವಾದದ್ದೇ. ಇಂಥಾ ಶರೀರಚತುಷ್ಟಯಗಳಲ್ಲಿ, ನಾರಾಯಣನ–ಮೂಲರೂಪಿ ನಾರಾಯಣನ ರೂಪಗಳು, ಸಾವಿರದೈದು–ಐದುಸಾವಿರ, ನೂರ ಇಪ್ಪತ್ತು ಮೇಲೆ–ನೂರ ಇಪ್ಪತ್ತರ ಮೇಲೆ, ಆರು–ಆರು, ಅಂತು ೫೧೨೬, ಗಣನೆ ಮಾಳ್ಪದು–ಐದುಸಾವಿರದ ಒಂದುನೂರ ಇಪ್ಪತ್ತಾರು ಎಂತ ಸಂಖ್ಯಾ ಮಾಡೋವರಾಗಬೇಕು. (ಸಂಧಿ ೪, ನುಡಿ ೧೬ರಲ್ಲಿ ಇದರ ವಿವರ ಸೂಚಿಸಿ ಇದೆ.), ಬುಧರು–ಜ್ಞಾನಿಗಳಾದವರು, ರೂಪವ–ಇದೇ ನಾರಾಯಣ ರೂಪವನ್ನು ಸ್ಥಾನತ್ರಯದಲ್ಲಿ ಜಪಿಸಿ ಚಿಂತಿಸಬೇಕು. ಘೃಣಿ–ಸೂರ್ಯಮಂಡಲ ತದಂತರ್ಗತ ಘೃಣಿಶಬ್ದವಾಚ್ಯ ನಾರಾಯಣ, ಸೂರ್ಯ–ಸೂರ್ಯನ ಕಿರಣಗಳು ತದಂತರ್ಗತ ಸೂರ್ಯಶಬ್ದವಾಚ್ಯ ನಾರಾಯಣನು. ಈ ಸೂರ್ಯನಾದವನು ದೇಹಾಂತರ್ಗತ ಕಮಲಕರ್ಣಿಕಾದಮೇಲೆ ಅಗ್ರೇಶಗೆ ಪೀಠನಾಗಿರ ತಕ್ಕ ಸೂರ್ಯಾಂತರ್ಗತ ರೂಪಗಳು, ನಾಮಗಳನು–ಈ ರೂಪಗಳನ್ನೂ ನಾಮಗಳನ್ನೂ ಉಚ್ಚಾರರೂಪದಿಂದ ಜಪಿಸುವವರಿಗೆ–ಘೃಣಿಃ, ಸೂರ್ಯ, ಆದಿತ್ಯ ಎಂತ ಜಪಿಸುವವರಿಗೆ, ಆರೋಗ್ಯ–ಸಮೀಚೀನಜ್ಞಾನರೂಪವಾದ ಆರೋಗ್ಯ ಘೃಣಿನಾಮಕ ಶ್ರೀ ಪರಮಾತ್ಮ, ಭಾಗ್ಯ–ವೈರಾಗ್ಯರೂಪವಾದ ಭಾಗ್ಯ ಸೂರ್ಯನಾಮಕ ಪರಮಾತ್ಮ, ಸಂಪದವ–ಭಕ್ತಿ

ಎಂಬ ಸಂಪತ್ತು ಆದಿತ್ಯನಾಮಕ ಪರಮಾತ್ಮ, ಅನುದಿನದಿ–ಪ್ರತಿದಿನದಲ್ಲೂ ಕ್ರಮೇಣ ಅಭಿವೃದ್ಧಿಮಾಡಿ, ಈವ–ಕೊಡೋವನಾಗತಾನೆ.

**ಐದುನೂರೆಪ್ಪತ್ತನಾಲಕು ।**
**ಆಧಿಭೌತಿಕದಲ್ಲಿ ತಿಳಿವುದು ।**
**ಐದೆರಡು ಶತಏಕವಿಂಶತಿ ರೂಪವಧ್ಯಾತ್ಮ ॥**
**ಭೇದಗಳಲಿನ್ನೂರ ಮೂವ ।**
**ತ್ತಾದ ಮೇಲೊಂದಧಿಕ ಮೂರ್ತಿಗ ।**
**ಳಾದರದಲಧಿದೈವದೊಳು ಚಿಂತಿಪುದು ಭೂಸುರರು ॥ ೯ ॥**

ನಾರಾಯಣನ ರೂಪಗಳಿಗೆ (ಸಂಧಿ ೪, ನುಡಿ ೧೬ ನೋಡಿ). ಘೃಣಿ, ಸೂರ್ಯ, ಆದಿತ್ಯ ಸಂಕೇತವಾದ ಅಧಿಭೂತ, ಅಧ್ಯಾತ್ಮ, ಅಧಿದೈವಗತ ನಾರಾಯಣನ ರೂಪಗಳ ಹೇಳತಾರೆ.

ಆಧಿಭೌತಿಕಾದಿ ವಿಷಯಗಳು ೬ನೇ ಸಂಧಿ, ೯ನೇ ಶ್ಲೋಕದಲ್ಲಿ ವಿಸ್ತಾರವಾಗಿ ಹೇಳಿಯದೆ.

ಆಧಿಭೌತಿಕದಲ್ಲಿ–ಸೂರ್ಯನ ಕಿರಣಗಳೇ ಆಧಿಭೌತಿಕ. ಕಿರಣಗಳಿಗೆ ರಶ್ಮಿಯಲ್ಲಿ, ಐದುನೂರೆಪ್ಪತ್ತನಾಲಕು–೫೭೪ ರಶ್ಮಿಶಬ್ದವಾಚ್ಯರೂಪಗಳು, ರ–೪, ಶಿ–೭, ಮಿ–೫, ಬಲ ಎಂದ ಎಡಕ್ಕೆ ಲೆಖ್ಖ ೫೭೪. ಐದೆರಡು–ಐದೆರಡುಗಳು ಹತ್ತು ೧೦, ಶತ–೧೦೦, ಅಂದರೆ ಹತ್ತು ನೂರುಗಳು (೧೦೦೦) ರಶ್ಮಿಗಳು ಎಂತ, ತಿಳಿವುದು–ತಿಳಿಯೋವರಾಗಬೇಕು. ಅಧ್ಯಾತ್ಮ–ಅಧ್ಯಾತ್ಮಸಂಕೇತನಾದ ಆದಿತ್ಯನು ಅರ್ಕ ಎಂತ ಕರೆಸಿಕೊಳ್ಳುತ್ತಾನೆ. (ಅರ್ಕ ಎಂಬ ಅಕ್ಷರವಾಚ್ಯ ಭಗವದ್ರೂಪಗಳು), ಶತಏಕವಿಂಶತಿರೂಪವ–ಅ–೧, ರ–೨, ಕ–೧=೧೨೧ ಮೂಲದಲ್ಲಿ ಶತ ಶಬ್ದ ಒಂದೇ ಇರೋದಾಗಿ ಅದೆ. ಅದನ್ನ ಆವರ್ತನ ಮಾಡಿಕೋಬೇಕು. ಅಧಿದೈವದೊಳು–ಘೃಣಿ ಸಾಂಕೇತವಾದ ಸೂರ್ಯಮಂಡಲ. ಇದಕ್ಕೆ ಆದಿತ್ಯ ಎಂತ ಸಾಂಕೇತವು (ಅಧಿದೈವದೊಳಗೆ ಅಕ್ಷರಸಾಂಕೇತ ರೂಪಗಳು), ಇನ್ನೂರುಮೂವತ್ತಾದ ಮೇಲೆ ಒಂದಧಿಕ–೨೩೧ ಅಂತು ಆ–೧, ದಿ–೩, ತ್ಯ–೨=೨೩೧, ಮೂರ್ತಿಗಳ–ಭಗವದ್ರೂಪಗಳನ್ನು ತಿಳಿಯಬೇಕು. ಭೇದಗಳಲಿ–ಪೂರ್ವೋಕ್ತ ಅಧಿಭೂತಾದಿ ಭೇದಗಳ ಸೂರ್ಯನಲ್ಲಿ ತಿಳಿದು, ತದ್ಗತ ಅಕ್ಷರಸಾಂಕೇತವಾದ ೫೭೪+೧೨೧+೨೩೧=೯೨೬ ಭಗವದ್ರೂಪಗಳ, ಆದರದಲಿ–ಆದರಪೂರ್ವಕವಾಗಿ ದೇಹಗತ ಸೂರ್ಯನಲ್ಲಿ ಬಾಹ್ಯಗತ ಸೂರ್ಯನಲ್ಲಿ, ಭೂಸುರರು–ಬ್ರಹ್ಮಜ್ಞಾನಿಗಳಾದವರು, ಚಿಂತಿಪುದು–ಚಿಂತನ ಮಾಡೋವರಾಗಬೇಕು.

**ತಾ॥** ಸೂರ್ಯನ ಒಂದೊಂದು ರಶ್ಮಿಯಲ್ಲಿ ೫೭೪ ರೂಪಗಳು ಮ್ಯಾರಿಗೆ ೧೦೦೦ ರಶ್ಮಿಗಳಲ್ಲಿ ೫೭೪೦೦೦ ಐದುಲಕ್ಷದ ಎಪ್ಪತ್ತುನಾಲ್ಕುಸಾವಿರ ರೂಪಗಳು ಅದೆ ಎಂತ ಜ್ಞಾನಿಗಳಾದವರು ಅನುಸಂಧಾನ ಮಾಡಬೇಕೆಂತ ತಾತ್ಪರ್ಯ.

**ಸುರುಚಿ ಶಾರ್ವರೀಕರನೆನಿಸಿ ಸಂ |**
**ಕರುಷಣ ಪ್ರದ್ಯುಮ್ನ ಶಶಿ ಭಾ |**
**ಸ್ಕರರೊಳಗೆ ಅರವತ್ತಧಿಕ ಮುನ್ನೂರು ರೂಪದಲಿ ||**
**ಕರಿಸಿಕೊಂಬನು ಅಹಸ್ಸಂವ |**
**ತ್ಸರನೆನಿಪನು ವಿಶಿಷ್ಟನಾಮದ |**
**ಲರಿತವರಿಗಾರೋಗ್ಯಭಾಗ್ಯವನೀವಾನಂದಮಯ || ೧೦ ||**

ಸೂರ್ಯ ಚಂದ್ರಾದಿಗಳಲ್ಲಿ ರಾತ್ರಿ ಹಗಲಿಗೆ ಅಭಿಮಾನಿಗಳಾದ ಭಗವದ್ರೂಪಗಳ ಹೇಳತಾರೆ.

ಶಶಿಭಾಸ್ಕರರೊಳಗೆ–ಸೂರ್ಯ ಚಂದ್ರರೊಳಗೆ, ಸಂಕರುಷಣ ಪ್ರದ್ಯುಮ್ನ–ಸೂರ್ಯನಲ್ಲಿ ಸಂಕರ್ಷಣ, ಚಂದ್ರನಲ್ಲಿ ಪ್ರದ್ಯುಮ್ನ, ಸುರುಚಿ ಶಾರ್ವರೀಕರನೆನಿಸಿ–ಕ್ರಮಾಲಂಕಾರದಿಂದ ಸೂರ್ಯನಲ್ಲಿ ಸುರುಚಿ ಸಂಕರ್ಷಣ ಎಂತಲೂ ಚಂದ್ರನಲ್ಲಿ ಶಾರ್ವರೀಕರ ಪ್ರದ್ಯುಮ್ನನೆಂತಲೂ ಕರೆಸುವವನಾಗಿ, ಅರವತ್ತಧಿಕ ಮುನ್ನೂರು ರೂಪದಲಿ ಕರಸಿಕೊಂಬನು–೩೬೦ ರೂಪದಿಂದ ಚಂದ್ರ ಸೂರ್ಯರ ಒಳಗೆ ಇದ್ವಾನೆ ಎಂತಲೂ, ಅಹಸ್ಸಂವತ್ಸರನೆನಿಪನು– ಅಹಃ–ಹಗಲು, ಇವರ ಸಂಗಡ ಸೇರಿದ್ದು ರಾತ್ರಿ, ಹಗಲು ಅಭಿಮಾನಿ ಭಗವದ್ರೂಪ ಸೂರ್ಯಾಂತರ್ಗತ ಸಂಕರ್ಷಣನೆಂಬ ಸೂರ್ಯನಾಮಕ ಪರಮಾತ್ಮ, ರಾತ್ರಿಗೆ ಅಭಿಮಾನಿಯಾದ ಭಗವದ್ರೂಪ ಚಂದ್ರಾಂತರ್ಗತನಾದ ಪ್ರದ್ಯುಮ್ನನೆಂಬ ಶಾರ್ವರೀಕರ ಪರಮಾತ್ಮ, ಮುನ್ನೂರಾ ಅರವತ್ತು ರೂಪದಲಿ, ಸೂರ್ಯಾಂತರ್ಗತ ಸುರುಚಿ ರೂಪಗಳು (೩೬೦) ಹಾಗೆ ಚಂದ್ರಾಂತರ್ಗತ ಶಾರ್ವರೀಕರ ರೂಪಗಳು ೩೬೦, ಸಂವತ್ಸರನೆನಿಪನು–ಎಂದರೆ ಒಂದು ವರುಷಕ್ಕೆ ಹಗಲು ಮುನ್ನೂರಾ ಅರವತ್ತು, ರಾತ್ರಿ ಮುನ್ನೂರಾ ಅರವತ್ತು, ಎರಡೂ ಸೇರಿ ಏಳುನೂರ ಇಪ್ಪತ್ತು (೭೨೦) ರೂಪ ಸೇರಿದ ಒಂದು ರೂಪ ಸಂವತ್ಸರ ಎಂತ ಕರಸಿಕೊಂಡು ಸಂವತ್ಸರ ಶಬ್ದವಾಚ್ಯನಾಗಿ ಇದ್ದಾನೆ. ರಾತ್ರಿಹಗಲು ಸೇರಿ ಏಳುನೂರಾ ಇಪ್ಪತ್ತು ಆಗಿ ಒಂದು ಸಂವತ್ಸರ ಎಂತ ಕರಿಸತದೆ. ಪರಮಾತ್ಮನು ಸಂವತ್ಸರನೆನಿಪನು, ವಿಶಿಷ್ಟನಾಮದಲರಿತವರಿಗೆ–ವಿಶಿಷ್ಟ ಎಂದರೆ ಏಳುನೂರ ಇಪ್ಪತ್ತು ನಾಮಗಳಿಂದ ಪ್ರತ್ಯೇಕ ರೂಪಗಳನ್ನೂ ಇದು ವಿಶಿಷ್ಟವೂ ಸೇರಿದ ಸಂವತ್ಸರಾತ್ಮಕ ಒಂದು ರೂಪವನ್ನು, ಅರಿತವರಿಗೆ–ಈ ರೀತ್ಯಾ ಪರಮಾತ್ಮನ ಅರಿತವರಿಗೆ, ಆರೋಗ್ಯಭಾಗ್ಯವನೀವ–ಆರೋಗ್ಯ ಭಾಗ್ಯಗಳನ್ನು ಕೊಟ್ಟವನಾಗಿ, ಆನಂದಮಯ–ಸ್ವರೂಪಾನಂದದಿಂದ ಪ್ರಚುರನ್ನ ಮಾಡತಾನೆ ಎಂತ ತಾತ್ಪರ್ಯ. ಆದ್ದರಿಂದ ಸೂರ್ಯ ಚಂದ್ರಾಂತರ್ಗತನಾಗಿ ದಿವಸ ರಾತ್ರಿಗಳ ಅಭಿಮಾನಿಗಳ ತಿಳಿಯಬೇಕು.

**ವಿಶೇಷಾರ್ಥ :–** ವಿಶಿಷ್ಟನಾಮ ಎಂದರೆ ರಾತ್ರಿ ಹಗಲು ವಿಶಿಷ್ಟವಾಗಿ ಸೇರಿದ ತಿಥಿಗೆ ದಾವ ನಾಮ, ದಾವ ವಾರ, ದಾವ ನಕ್ಷತ್ರ, ದಾವ ವರುಷ ಇಂಥಾದ್ದಕ್ಕೆ ದಾವ

ನಾಮ ಎಂದರೆ ತಿಥಿ ಒಳಗೆ, ೧) ತಿಥಿ ನಾಮ, ೨) ವಾರ ನಾಮ, ೩) ಪಕ್ಷ ನಾಮ, ೪) ಮಾಸ ನಾಮ, ೫) ಋತು ನಾಮ, ೬) ಅಯನ ನಾಮ, ೭) ಸಂವತ್ಸರ ನಾಮ ಇತ್ಯಾದಿ ನಾಮಗಳಿಂದ ಇಷ್ಟು ರೂಪಗಳಿಂದ ಇರುತ್ತಾನೆ. ಒಂದು ತಿಥಿಗೆ ಲೋಕದಲ್ಲಿ ಇಷ್ಟು ನಾಮಗಳಿಂದ ವ್ಯವಹಾರವದೆ. ಏತಾದೃಶವಾದ ವಿಶಿಷ್ಟವಾದ ನಾಮಗಳು ಎಂತ ತಾತ್ಪರ್ಯ.

**ಏಕಪಂಚಾಶದ್ವರಣಗತ ।**
**ಮಾಕಳತ್ರನು ಸರ್ವರೊಳಗ ।**
**ವ್ಯಾಕೃತಾಕಾಶಾಂತ ವ್ಯಾಪಿಸಿ ನಿಗಮತತಿಗಳನು ॥**
**ವ್ಯಾಕರಣ ಭಾರತ ಮುಖಾದ್ಯ ।**
**ನೇಕಶಾಸ್ತ್ರ ಪುರಾಣ ಭಾಷ್ಯಾ ।**
**ನೀಕಗಳ ಕಲ್ಪಿಸಿ ಮನೋವಾಙ್ಮಯನೆನಿಸಿಕೊಂಬ ॥ ೧೧ ॥**

ಐವತ್ತೊಂದು ಅಕ್ಷರದಿಂದ ಪ್ರತಿಪಾದ್ಯನಾದ ಪರಮಾತ್ಮ ಪುರಾಣಾದಿಗಳು ಕಟ್ಟಿಸಿದನೆಂದು ಹೇಳತಾರೆ.

ಏಕಪಂಚಾಶತ್ – (೫೧) ಐವತ್ತೊಂದು ವರಣಗತ – ಅಕ್ಷರಗತನಾದ ಆಯಾ ವರ್ಣಾಕಾರ, ವರ್ಣವಾಚ್ಯನಾದ, ಮಾಕಳತ್ರನು–ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ್ನ ಎಂದರೆ ಅಜಾದಿ ರೂಪಗಳಿಗೆ, ಐವತ್ತೊಂದು ಪತ್ನಿಯರಾಗಿ ಉಳ್ಳ ಪರಮಾತ್ಮನು, ಸರ್ವರೊಳಗೆ–ಅಸ್ವತಂತ್ರ ಚೇತನರಾದ ರಮಾ ಬ್ರಹ್ಮಾದಿ ತ್ರಿವಿಧರಾದ ಸರ್ವರೊಳಗೆ ಅಂದರೆ ಪ್ರತಿ ಚೇತನದಲ್ಲಿ ಐವತ್ತೊಂದು ರೂಪದಿಂದಲೂ ಮತ್ತು ಈ ಐವತ್ತೊಂದು ರೂಪಗಳಿಗೆ ಪತ್ನೀರಾದ ಲಕ್ಷ್ಮೀರೂಪ ಸಹಿತನಾಗಿಯೂ, ಇನ್ನೂ, ಅವ್ಯಾಕೃತಾ ಕಾಶಾಂತ–ರಮಾಭಿಮನ್ಯಮಾನವಾದ ಅವ್ಯಾಕೃತಾಕಾಶ ಎಂತ ಅರ್ಥ. ಪೃಥಿವೀತತ್ವ ಆರಂಭ ಮಾಡಿ ಅಂತ್ಯ ಅವ್ಯಾಕೃತಾಕಾಶದವರಿಗೂ, ಸರ್ವಾಧಿಷ್ಠಾನದಲ್ಲಿ ಇರತಕ್ಕ ನಾಮಗಳು ಅಕ್ಷರ ಸಾಂಕೇತದಿಂದ ಇರೋದಾಗಿ ಅವೆ. ಅಜಾದಿ ಐವತ್ತೊಂದು ರೂಪ ಗಳಿಂದಲೂ ವ್ಯಾಪಿಸಿ ಇರೋವನಾಗಿ ಇದ್ದಾನೆ, ಮತ್ತು, ನಿಗಮತತಿಗಳನು–ಅಜಾದಿ ಐವತ್ತೊಂದು ಅಕ್ಷರಗಳಿಂದ ಯುಕ್ತವಾದದ್ದು ಯಾವತ್ತು ವೇದಗಳು ಅಪೌರುಷೇಯ ಗಳು. ಇಂಥಾ ವೇದ ಸಮೂಹಗಳ ಅಧಿಷ್ಠಾನ ಮಾಡಿಕೊಂಡು ತದಂತರ್ಗತ ವರ್ಣ ರೂಪಗಳಿಂದ ಇದ್ದಾನೆ. ವ್ಯಾಕರಣ, ಭಾರತ ಮುಖಾದ್ಯನೇಕ–ಅದೇ ಅಜಾದಿ ಐವತ್ತೊಂದು ರೂಪಗಳಿಂದ ಅನೇಕ ವ್ಯಾಕರಣಗಳೇನು, ಭಾರತ, ಪಂಚರಾತ್ರ, ವೈಖಾನಸ, ಸಂಹಿತಾದಿ ಮೊದಲಾದ ಸಮೂಹಗಳನ್ನೇ ಆದಿ ಮಾಡಿ ಅನೇಕಗಳಾದ, ಶಾಸ್ತ್ರ–ಶಾಸ್ತ್ರಗಳ, ಪುರಾಣ–ಅಷ್ಟಾದಶ ಪುರಾಣ, ಉಪಪುರಾಣ ಇತ್ಯಾದಿಗಳ ವೇದಾವಿರುದ್ಧಗಳಾಗಿ ವೇದೋಕ್ತ ಅರ್ಥಗಳ ಅನುಸರಿಸಿ ದರ್ಶನ, ಗುಹ್ಯ, ಸಮಾಧಿ ಭಾಷಾಗಳಿಂದ ಅರ್ಥಗರ್ಭಿತ ಮಾಡಿ ಇವುಗಳೇನು ಮತ್ತು, ಭಾಷ್ಯಾನೀಕಗಳ–ಭಾಷ್ಯ

ಸಮುದಾಯಗಳ, ಪ್ರಜರು ಮಾತಾಡತಕ್ಕ ಅನೇಕ ವಿಧವಾದ ಅನೇಕಜಾತೀಯ ಗಳಾದ ಮಾತುಗಳ ಇತ್ಯಾದಿ ಯಾವತ್ತರ, ಕಲ್ಪಿಸಿದ–ನಿರ್ಮಾಣ ಮಾಡೋವನಾಗಿ ದ್ದಾನೆ. ಮನೋವಾಙ್ಮಯನೆನಿಸಿಕೊಂಬ – ಮನೋಮಯ ಎಂತಲೂ, ವಾಙ್ಮಯ ಎಂತಲೂ ಕರಿಸಿಕೊಂಬೋವನಾಗತಾನೆ.

**ವಿಶೇಷಾರ್ಥ :**– ಈ ಸಂಧಿಯ ೭ನೇ ಶ್ಲೋಕದಲ್ಲಿ ಹೇಳಿದ ಮ್ಯಾರಿಗೆ ವೇದ ಶಾಸ್ತ್ರ ಪುರಾಣಸಮೂಹಾಖ್ಯ ಸಾಕಾರರೂಪಾದಿಷ್ಠಿತನಾಗಿ ತದ್ರೂಪದಿಂದ ಯುಕ್ತನಾಗಿ ಮನಇಂದ್ರಿಯದಲ್ಲಿ ಮನೋಮಯ ಎಂತಲೂ, ವಾಗಿಂದ್ರಿಯದಲ್ಲಿ ವಾಙ್ಮಯ ಎಂತಲೂ ಕರೆಸಿಕೊಂಬೋವನಾಗತಾನೆ. ವೇದಶಾಸ್ತ್ರಪುರಾಣಗಳ ಹಾಂಗೆ ಭಾಷಾದಿಗಳ ಮನೋ ದ್ವಾರಾ ಪ್ರೇರಿಸಿ ವಾಕ್ಯದ್ವಾರಾ ಉಚ್ಚಾರ ಮಾಡಸತಾ ಇರತಾನೆ. ಪೂರ್ವೋಕ್ತ ಪುರಾಣಗಳು ವೇದವ್ಯಾಸರಿಂದ ನಿರ್ಮಾಣ ಹ್ಯಾಂಗೆಂದರೆ ವೇದವ್ಯಾಸರು ವರ್ಣಗಳ ಸಮ್ಮೇಳನ ಮಾಡಿದರು. ಆ ವರ್ಣಗಳೇ ಸರ್ವವೂ ಆಗಿ ಅದೆ. ಆದ್ದರಿಂದ ವರ್ಣವಾಚ್ಯ ಭಗವದ್ರೂಪಗಳಿಂದ ಸರ್ವವೂ ಕಲ್ಪನಾ ಎಂತ ತಾತ್ಪರ್ಯ. ಮತ್ತು ಮನುಷ್ಯರಿಂದ ನಿರ್ಮಿತ ನಾನಾ ವಿಧವಾದ ವಿರುದ್ಧಾವಿರುದ್ಧ ಶಾಸ್ತ್ರಗಳು ಕೂಡ ಅಜಾದಿ ಭಗವದ್ರೂಪ ಗಳಿಂದ ನಿರ್ಮಿತವು. ಅಜಾದಿ ವರ್ಣಗಳಿಂದ ಮಾತೃಕಾನ್ಯಾಸರೀತ್ಯಾ ಸಾಕಾರ ರೂಪ ಮನೋಧಿಷ್ಠಿತವಾಗಿ ಅದೆ ಎಂತ ತಾತ್ಪರ್ಯ.

**ಭಾರಭೃನ್ನಾಮಕನ ಸಾವಿರ ।**
**ದಾರನೂರಿಪ್ಪತ್ತನಾಲಕು ।**
**ಮೂರುತಿಗಳು ಚರಾಚರದಿ ಸರ್ವತ್ರ ತುಂಬಿಹವು ॥**
**ಆರುನಾಲಕು ಜಡಗಳಲಿ ಹದಿ ।**
**ನಾರು ಚೇತನಗಳಲಿ ಚಿಂತಿಸೆ ।**
**ತೋರಿಕೊಂಬನು ತನ್ನ ರೂಪವ ಸಕಲ ಠಾವಿನಲಿ ॥ ೧೨ ॥**

ಈ ಚರಾಚರ ಭಾರವನ್ನು ಹೊತ್ತುಕೊಂಡು ಇರತಕ್ಕವ ಶ್ರೀ ಪರಮಾತ್ಮನೆಂದು ಹೇಳತಾರೆ.

ಭಾರಭೃನ್ನಾಮಕನ–ಚರಾಚರಗಳ ಭಾರವನ್ನು ಕೂರ್ಮರೂಪದಿಂದ ಅಂಡದ ಹೊರಗೆ ಅಂಡದ ಒಳಗೆ ಇದ್ದು ಹೊತ್ತುಕೊಂಡು ಇದ್ದಾನಾದ್ದರಿಂದ ಶ್ರೀ ಪರಮಾತ್ಮ ಭಾರಭೃತ್ ಎಂತ ಕರಿಸೋವನಾದ. ಇಂಥಾ ಭಾರಭೃನ್ನಾಮಕನಾದ ಪರಮಾತ್ಮನ ಅಕ್ಷರಸಾಂಕೇತ ರೂಪಗಳು, ಸಾವಿರದಾರನೂರ ಇಪ್ಪತ್ತುನಾಲ್ಕು–೧೬೨೪, ಭಾ–೪, ರ–೨, ಭೃ–೬, ತ್–೧. (ಬಲದಿಂದ ಎಡಕ್ಕೆ ಲೆಕ್ಕಮಾಡಬೇಕು.) ಈ ೧೬೨೪ ಅಕ್ಷರ ಸಾಂಕೇತಗಳಾದ ಭಗವದ್ರೂಪಗಳನ್ನು, ಆರುನಾಲಕು ಜಡಗಳಲಿ–೬×೪=೨೪ ಜಡ ಭೂತಗಳಾದ ೨೪ ಅಂದರೆ ಚತುರವಿಂಶತಿ ತತ್ವಗಳಲ್ಲಿ, ಹದಿನಾರು–೧೬ ಸಂಖ್ಯಾಕವಾದ ಕಳಾಗಳಲ್ಲಿ ಎಂಬೋಣದರಿಂದ ಚತುರ್ವಿಂಶತಿ ತತ್ವಗಳು ಹದಿನಾರರಲ್ಲಿ ಅಂತರ್ಭೂತಗಳು

ಹ್ಯಾಂಗೆಂದರೆ ಪಂಚಭೂತಗಳು (ಇದರಲ್ಲಿ ಪಂಚತನ್ಮಾತ್ರಗಳು ಅಂತರ್ಭೂತಗಳು), ದಶೇಂದ್ರಿಯಗಳು, ಮನಸ್ಸು (ಇದರಲ್ಲಿ ಅಹಂಕಾರತತ್ವ, ಮಹತ್ತತ್ವ, ಅವ್ಯಕ್ತ ತತ್ವ ಈ ಮೂರೂ ಅಂತರ್ಭೂತ), ಈ ಪ್ರಕಾರ ಷೋಡಶಕಳಾದಲ್ಲಿ ಚತುರ್ವಿಂಶತಿ ತತ್ವಗಳು ಅಂತರ್ಭೂತಗಳು. ಅಂತು ಚತುರ್ವಿಂಶತಿ ತತ್ವಗಳು ಎರಡು ಪ್ರಕಾರವಾಯಿತು. ಒಂದು ಚತುರ್ವಿಂಶತಿ ತತ್ವಗಳ ಗೋಳಕಗಳು, ಒಂದು ಚತುರ್ವಿಂಶತಿ ತತ್ವಗಳು. ತತ್ವಗಳ ಗೋಳಕಗಳು ಎಂಬುದು ಸ್ಥೂಲದೇಹಕ್ಕೆ ಸಂಬಂಧಿಸಿದ್ದು, ದೇಹದ ಸಂಗಡ ನಾಶವಾಗತಕ್ಕದ್ದು. ಅನಿರುದ್ಧಶರೀರ ಅನಾದಿಲಿಂಗೋಪಾದಾನದಿಂದ ಆದದ್ದು. ಈ ಶರೀರ ಸ್ಥೂಲಶರೀರದ ಸಂಗಡ ನಾಶವಾಗತಕ್ಕದ್ದಲ್ಲ. ಈ ಶರೀರಸಂಬಂಧ ಚತುರ್ವಿಂಶತಿ ತತ್ವಗಳು ಸ್ಥೂಲದೇಹಗತ ಚತುರ್ವಿಂಶತಿ ಗೋಳಕಗಳಲ್ಲಿ ವ್ಯಾಪಿಸಿ ಅದೆ. ಏತಾದೃಶವಾದ ಉಭಯವಿಧ ಚತುರ್ವಿಂಶತಿ ತತ್ವಗಳಲ್ಲಿ, ಚೇತನಗಳಲ್ಲಿ–ಆಯಾ ಸ್ಥೂಲದೇಹಗತ ಚತುರ್ವಿಂಶತಿ ತತ್ವಗಳಲ್ಲಿ, ಪ್ರಕಾಶತೋ ವ್ಯಾಪ್ತನಾದ ಜೀವನ ಚತುರ್ವಿಂಶತಿ ತತ್ವಗಳಲ್ಲಿ, ಚರಾಚರದಿ ಸರ್ವತ್ರ–ಚರಾಚರಾಖ್ಯ ಸರ್ವಪ್ರಪಂಚದಲ್ಲಿ ವಿದ್ಯಮಾನನಾದ ಅಣು ಸ್ಥೂಲ ಸರ್ವಪದಾರ್ಥದಲ್ಲೂ ಒಂದೊಂದರಲ್ಲಿ ಭಾರಭೃತ್ ನಾಮಕ ಅಕ್ಷರಸಾಂಕೇತವಾದ ಭಗವದ್ರೂಪಗಳು ೧೬೨೪, ತುಂಬಿಹವು–ತುಂಬಿ ಇರೋದಾಗೆ ಅದೆ. ಚಿಂತಿಸೆ–ಈ ಪ್ರಕಾರ ಇರತಕ್ಕ ರೂಪಗಳಲ್ಲಿ ತನ್ನ ಬಿಂಬನ ಐಕ್ಯಚಿಂತನೆ ಮಾಡಿ ಅನುಸಂಧಾನದಿಂದ ಚಿಂತನಾ ಮಾಡಿದರೆ, ತನ್ನ ರೂಪವ–ಪರಮಾತ್ಮ ತನ್ನ ರೂಪವನ್ನು, ಸಕಲ ಠಾವಿನಲಿ–ಸರ್ವಪ್ರದೇಶದಲ್ಲಿ ಚಿಂತನಾ ಮಾಡಿದ ಪುಣ್ಯಬಲದಿಂದ, ತೋರಿಕೊಂಬನು–ಮನಸ್ಸಿಗೆ ಪ್ರತ್ಯಕ್ಷನಾಗುವನು ಎಂದರೆ ತನ್ನ ಬಿಂಬನ ಅಪರೋಕ್ಷವಾಗತದೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಸರ್ವತ್ರ ಬಿಂಬರೂಪಿ ಪರಮಾತ್ಮನ ಚಿಂತಿಸಬೇಕು. ಚತುರವಿಂಶತಿ ತತ್ವದಲ್ಲಿ ಷೋಡಶ ಕಳೆಗಳು ಸೇರಿತು. ಪ್ರತ್ಯೇಕ ಷೋಡಷಕಳೆಗಳು ಯಾಕೆ ಹೇಳಬೇಕೆಂದರೆ, ಚತುರವಿಂಶತಿ ತತ್ವ ಹೇಳೋಣದರಿಂದ ಸ್ಥೂಲದೇಹ ಎಂತಲೂ ಹದಿನಾರು ಕಳಾ ಹೇಳೋಣದರಿಂದ ಅನಾದಿಲಿಂಗ ಎಂತಲೂ, ಚೇತನ ಎಂದರೆ ಪ್ರಾಣಿಗಳು ಎಂತಲೂ ತಾತ್ಪರ್ಯ. ಲಿಂಗದೇಹದಾರಭ್ಯ ಸ್ಥೂಲದೇಹದವರೆಗೂ ಮಧ್ಯದಲಿ ಇರತಕ್ಕ ದೇಹಗಳು ಯಾವತ್ತು ಬಂದಂತಾಯಿತು. ಇಷ್ಟರಲ್ಲಿ ಅನುಸಂಧಾನ ಮಾಡಬೇಕು.

**ಮಿಸುನಿ ಮೇಲಿನ ಮಣಿಯವೋಲ್ ರಾ ।**
**ಜಿಸುವ ಬ್ರಹ್ಮಾದಿಗಳ ಮನದಲಿ ।**
**ಬಿಸಜಜಾಂಡಾಧಾರಕನು ಆಧೇಯನೆಂದೆನಿಸಿ ॥**
**ದ್ವಿಶತ ನಾಲ್ವತ್ತೆರಡು ರೂಪದಿ ।**
**ಶಶಿಯೊಳಿಪ್ಪನು ಶರದೊಳಗೆ ಶೋ ।**
**ಭಿಸುವ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ ॥ ೧೩ ॥**

ಜಗತ್ತಿಗೆ ಪರಮಾತ್ಮ ಆಧಾರ ಎಂತಲೂ, ಜೀವರು ಆಧೇಯರೆಂತಲೂ ಹೇಳತಾರೆ. ಆಧಾರ ಆಧೇಯ ರೂಪೋಪಾಸನ ಹೇಳತಾರೆ.

ಮಿಸುನಿ ಮೇಲಿನ–ಮಿಸುನಿ ಎಂದರೆ ಭಂಗಾರ. ಅದರ ಮ್ಯಾಲಿರತಕ್ಕ, ಮಣಿಯ ವೋಲ್–ಮಣಿಯೋಪಾದಿಯಲಿ ಎಂದರೆ ಭಂಗಾರದಿಂದ ನಿರ್ಮಿತವಾದ ಉಂಗುರದ ಮ್ಯಾಲೆ ವಿದ್ಯಮಾನವಾದ ಮಣಿ ಎಂದರೆ, ರತ್ನವೋಲ್–ಇದರೋಪಾದಿಯಲಿ, ಬ್ರಹ್ಮಾದಿಗಳ ಮನದಲಿ–ಬ್ರಹ್ಮಾದಿಗಳ ಮನಸ್ಸಿನಲ್ಲಿ, ಬಿಸಜಜಾಂಡ–ಬ್ರಹ್ಮಾಂಡಕ್ಕೇನು, ಈ ಬ್ರಹ್ಮಾಂಡಗತ ಜೀವರಿಗೇನು, ಆಧಾರಕನು ಆಧೇಯನು–ಆಧೇಯನು ಎಂದರೆ ಆ– ಸಮ್ಯಕ್ ಧೇಯ–ಧ್ಯಾನಕ್ಕೆ ಯೋಗ್ಯನಾದವನು. ಜೀವರ ಒಳಗೆ ಆವಾಸ ಮಾಡಿ ಕೊಂಡು ಆಧೇಯನಾಗಿ ಇರತಕ್ಕವನು ಎಂತಲೂ ತಾತ್ಪರ್ಯವೇ. ಎಂದೆನೆಸಿ– ಈ ಪ್ರಕಾರ ಇರ್ತಾನೆ ಎಂತ ಅನಿಸಿಕೊಂಡು, ರಾಜಿಸುವ–ಪ್ರಕಾಶಮಾನನಾಗಿ ಇದ್ದಾನೆ. ದ್ವಿಶತನಾಲ್ವತ್ತೆರಡು–ಆಧಾರ ಆಧೇಯನಾಮಕ ಭಗವದ್ರೂಪಗಳು ಅಕ್ಷರಸಾಂಕೇತದಿಂದ ತಿಳಿಯತಕ್ಕದ್ದು. ದ್ವಿಶತ–ದ್ವಿ ಎಂದರೆ ಎರಡು, ಶತ ಎಂದರೆ ನೂರು ಅಂತು ೨೦೦. ಶತಶಬ್ದ ಆವರ್ತನ ಮಾಡಿದರೆ ೧೦೦. ದ್ವಿಶತ ಎಂಬವದನ್ನು ಆವರ್ತನಮಾಡಿಕೊಂಡು ಎರಡು ನಾಲ್ವತ್ತೆರಡುಗಳು ಎಂಭತ್ತನಾಲ್ಕು ಎಂತ ಸಂಖ್ಯಾ ಮಾಡಿಕೋಬೇಕು. ಬಲ ದಿಂದ ಎಡಕ್ಕೆ ಲೆಖ್ಖ—೨೪೨ (ಆ–೨, ಧಾ–೪, ರ–೨) (ಆ–೨, ಧೇ–೪, ಯ–೧)– ೧೪೨ ಅಂತೂ ಎರಡೂ ಸೇರಿದರೆ ಮುನ್ನೂರ ಎಂಭತ್ತುನಾಲ್ಕು ಸರಿಯಾಗತದೆ. ಈ ಪ್ರಕಾರವಾಗಿ, ರೂಪದಿ–೩೮೪ ರೂಪದಿಂದ ಅಣುರೇಣುತೃಣಕಾಷ್ಠದಲ್ಲಿ ಪ್ರತಿಪ್ರತಿ ಯಲ್ಲೂ ಇಷ್ಟು ರೂಪಗಳಿಂದ ಇದ್ದಾನೆ. ಪ್ರತಿ ಅಧಿಷ್ಠಾನದಲ್ಲೂ ಅಂತರ್ಗತ ರೂಪ ಒಂದು, ಬಾಹ್ಯರೂಪ ಒಂದು ಈ ಎರಡು ಆಧಾರ ಆಧೇಯ ರೂಪಗಳು ಎಂತ ತಿಳಿಯೋವ ರಾಗಬೇಕು. ಶಶಿಯೊಳಿಪ್ಪನು–ಚಂದ್ರನ ಒಳಗೆ ೨೪೨ ರೂಪದಿಂದ, ಸಸ್ಯಾದಿಗಳಿಗೆ ಆಧಾರಭೂತನಾದವ ಚಂದ್ರನಾದ್ದರಿಂದ ಅವನಲ್ಲಿ ಆಧಾರಶಬ್ದವಾಚ್ಯ ರೂಪಗಳು ಇನ್ನೂರ ನಲವತ್ತೆರಡು, ಶರದೊಳಗೆ–ಪೈರುಗಳೊಳಗೆ, ನಾಲ್ವತ್ತೆರಡಧಿಕಶತರೂಪದಲಿ–(೧೪೨) ನೂರನಲವತ್ತೆರಡು. ಶಶಿ ಒಳಗೆ ರೂಪಗಳು ಹೇಳಲಿಲ್ಲ, ಆದರೂ ಈ ಸಂಖ್ಯಾದಿಂದ ಶರದೊಳಗೆ ಎಂತ ಹೇಳಿ ದಿಕ್ಪ್ರದರ್ಶನದಿಂದ ದ್ವಿಶತ ನಾಲ್ವತ್ತೆರಡು ಆವರ್ತನ ಅವಶಿಷ್ಟ ಚಂದ್ರನಲ್ಲೇ ಎಂತ ಅರ್ಥಾತ್ ಸಿದ್ಧಿಯು. ಪೈರುಗಳಲ್ಲಿ ಆಧೇಯರೂಪವು, ಆಧೇಯ ಆಧಾರಾಧೀನವು, ಬಿಡದೆ–ಈ ಪ್ರಕಾರ ಪ್ರಳಯಕಾಲದವರಿಗ್ಯೂ ಬಿಡದೆ, ಶೋಭಿಸುವ– ಪ್ರಕಾಶಮಾನನಾಗಿ ಇದ್ದಾನೆ. ಸರ್ವಪ್ರಾಣಿಗಳಿಗೆ ಜೀವನೋಪಾಯಕ್ಕೆ ಕಾರಣಗಳು ಪೈರು. ಆದ್ದರಿಂದ, ಚಂದ್ರನಲ್ಲಿ ಪೈರುಗಳಲ್ಲಿ ಆಧಾರ ಆಧೇಯರೂಪಗಳು ಆವರ್ತನವೂ ಕಾರ್ಯಭೇದದಿಂದ ಎಂತ ತಾತ್ಪರ್ಯ.

**ವಿಶೇಷಾರ್ಥ :**—ಮಿಸುನಿಯ ಮೇಲಿನ ಮಣಿಯವೋಲ್ ಎಂದರೆ ಭಂಗಾರ ದಿಂದ ನಿರ್ಮಿತವಾದ ಉಂಗುರದ ಮ್ಯಾಲೆ ವಿದ್ಯಮಾನವಾದ ಮಣಿ ಎಂದರೆ ರತ್ನದೋ

ಪಾದಿಯಲಿ. ಉಂಗುರ ಮೂರರಿಂದ ಯುಕ್ತವಾಗಿ ಅದೆ. ಉಂಗುರ ಒಂದು, ಉಂಗುರದ ಗೂಡು ಒಂದು, ಗೂಡಿನ ಮ್ಯಾಲಿರತಕ್ಕ ಮಣಿ ಒಂದು. ಅಂತು ಮೂರು. ಗೂಡಿನ ಕೆಳಗೆ ಇರತಕ್ಕ ಉಂಗುರ ಗೂಡಿಗೆ ಆಧಾರ ಎಂತಲೂ, ಗೂಡಿನ ಒಳಗೆ ಇರತಕ್ಕ ರತ್ನ ಗೂಡಿಗೆ ಆಧೇಯ ಎಂತಲೂ ಕರಿಸೋದಾಗತದೆ. ಇದರೋಪಾದಿಯಲಿ ಬ್ರಹ್ಮಾದಿಗಳ ಸ್ಥೂಲದೇಹಗಳೇ ಒಂದು ಉಂಗುರ ಸಾಮ್ಯ, ಮನವ್ಯಂಬೋದೆ ಉಂಗುರದ ಮ್ಯಾಲಿನ ಗೂಡಿಗೆ ಸಾಮ್ಯ. ತದ್ಗತ ಶ್ರೀ ಪರಮಾತ್ಮನೇ ಉಂಗುರಗತ ರತ್ನಕ್ಕೆ ಸಾಮ್ಯ. ಈ ಪರಮಾತ್ಮನು ಆಧಾರನು ಆಧೇಯನು ಎರಡೂ ಆಗಿದ್ದಾನೆ. ಉಂಗುರದ ದೃಷ್ಟಾಂತ ದಿಂದ ಸಮನ್ವಯ ಮಾಡಿ ಹೇಳಬೇಕು. ಆದಿಯಲ್ಲಿ ಬ್ರಹ್ಮಾಂಡಕ್ಕೆ ಮೊದಲು ಹೇಳತಾರೆ : ೧. ಬ್ರಹ್ಮಾಂಡದ ಹೊರಗೆ ಬ್ರಹ್ಮಾಂಡವನ್ನು ಹೊತ್ತುಕೊಂಡು ಇರತಕ್ಕ ಕೂರ್ಮ ರೂಪ. ಇದು ಉಂಗುರಕ್ಕೆ ಸದೃಶ, ಬ್ರಹ್ಮಾಂಡಕ್ಕೆ ಆಧಾರರೂಪ, ೨. ಬ್ರಹ್ಮಾಂಡವೇ ಉಂಗುರದ ಗೂಡು ಸದೃಶ. ೩. ಬ್ರಹ್ಮಾಂಡದ ಒಳಗೆ ಇರತಕ್ಕ ಕೂರ್ಮರೂಪ ಆಧೇಯ ರೂಪ ಗೂಡುಗತ ರತ್ನಸದೃಶ. ಈ ಪ್ರಕಾರ ಬ್ರಹ್ಮಾಂಡವನ್ನ ಆಧಾರ ಆಧೇಯರೂಪ ದಿಂದ ಧರಿಸಿದ್ದಾನೆ. ಬ್ರಹ್ಮಾದಿ ಜೀವರಲ್ಲಿ ಆಧಾರ ಆಧೇಯ ರೂಪಗಳು ಸ್ಥೂಲದೇಹಗತ ರೂಪ, ಆಧಾರರೂಪ. ಮನೋಗತರೂಪವೇ ಆಧೇಯರೂಪ. ಈ ಎರಡು ರೂಪಗಳಿಂದ ಮನಸ್ಸಿಗೆ ಆಧಾರ ಆಧೇಯನಾಗಿ ಇದ್ದಾನೆ ಎಂತ ತಿಳಿಯಬೇಕು. ಆಧೇಯ ಎಂದರೆ ಇನ್ನೊಂದು ಅರ್ಥ. ಪರಮಾತ್ಮನ ವ್ಯತಿರಿಕ್ತರ ಮಾಡಿ ಸರ್ವವೂ ಪರಮಾತ್ಮಗೆ ಆಧೇಯಗಳೇವೇ ಎಂತ ತಾತ್ಪರ್ಯ. ಶಶ ಎಂತಲೂ ಒಂದು ಪಾಠವೇ. ಶಶ ಎಂದರೆ ಚಂದ್ರಗತ ಕಳಂಕ.

**ಎರಡುಸಾವಿರದೆಂಟು ರೂಪವ ।**
**ನರಿತು ಸರ್ವಪದಾರ್ಥದಲಿ ಸಿರಿ ।**
**ವರನ ಪೂಜೆಯ ಮಾಡು ವರಗಳ ಬೇಡು ಕೊಂಡಾಡು ॥**
**ಬರಿದೆ ಜಲದಲಿ ಮುಣುಗಿ ಬಿಸಿಲೊಳು ।**
**ಬೆರಳನೆಣಿಸಿದರೇನು ಸದ್ಗುರು ।**
**ಹಿರಿಯರನನುಸರಿಸಿರದೆ ಮರ್ಮವನರಿಯದಿಹ ನರನು ॥ ೧೪ ॥**

ಜ್ಞಾನಶೂನ್ಯನಾಗಿ ಮಾಡಿದ ಕರ್ಮ ಪರಲೋಕ ಸಾಧನಿಗೆ ಕಾರಣವಾಗೋದಿಲ್ಲ ಎಂತ ಹೇಳತಾರೆ.

ಎರಡುಸಾವಿರದೆಂಟು ರೂಪವನರಿತು—೨೦೦೮ ರೂಪಗಳ ತಿಳಿದು (೧೨ನೇ ಶ್ಲೋಕ ದಲ್ಲಿ ಹೇಳಿದ ಭಗವದ್ರೂಪಗಳು ೧೬೨೪, ೧೩ನೇ ಶ್ಲೋಕಗತ ಭಗವದ್ರೂಪಗಳು ೩೮೪, ಅಂತು ೨೦೦೮. ಆಧಾರ ರೂಪಗಳು ೨೪೨, ಆಧೇಯ ರೂಪಗಳು ೧೪೨) ಈ ಪ್ರಕಾರ ಆವರ್ತನಾಗಿ, ಸರ್ವಪದಾರ್ಥದಲಿ — ಚರಾಚರ ಸರ್ವ ಪದಾರ್ಥದಲ್ಲಿ, ಸಿರಿವರನ— ಲಕ್ಷ್ಮೀಪತಿ ನಾರಾಯಣನ ರೂಪಗಳ ಅನುಸಂಧಾನ ಮಾಡಿ, ಪೂಜೆಯ ಮಾಡು—ನಿನ್ನ

ಬಿಂಬನ್ನ ಸರ್ವತ್ರ ಐಕ್ಯ ಚಿಂತನ ಮಾಡಿ ಪರಸ್ಪರ ಭಗವದ್ರೂಪಗಳಿಗೆ ಅಭೇದ ಎಂತ ಅನುಸಂಧಾನ ಮಾಡಿ ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಐಕ್ಯಚಿಂತನ ರೂಪವಾದ ಪೂಜೆ ಮಾಡು, ವರಗಳ ಬೇಡು—ಜ್ಞಾನ, ಭಕ್ತಿ, ವೈರಾಗ್ಯಗಳೆಂಬ ವರಗಳನ್ನ ಬೇಡು, ಕೊಂಡಾಡು—ಪರಮಾತ್ಮನ ಸ್ತೋತ್ರ ಮಾಡು. ಜಲದಲಿ ಮುಣುಗಿ—ಕಾಗೆ,ಕಪ್ಪೆಗಳಂತೆ ಜಲದಲಿ ಮುಣುಗಿ, ಬೆರಳನೆಣಿಸಿದರೇನು—ಬೊಟ್ಟುಗಳ ಎಣಿಸುತ ಜಪ ಮಾಡಿದರೆ ಅದ ರಿಂದ ಆಗತಕ್ಕ ಫಲ ಏನು ಅಂದರೆ, ಬರಿದೆ—ಶುದ್ಧವಾಗಿ ಫಲವಾಗೋದಿಲ್ಲ ಎಂತ ತಾತ್ಪರ್ಯ. ಸದ್ಗುರು ಹಿರಿಯರನನುಸರಿಸಿ— ಹಿರಿಯ—ಜೀವೋತ್ತಮರಾದ, ವಾಯು ದೇವರ ಪಾದಾವಲಂಬಿಗಳಾದ, ಅನುಸಂಧಾನ ಮರ್ಮವ ತಿಳಿದು, ಸದ್ಗುರು—ನಿಸ್ಪೃಹ ರಾದ ಗುರುಗಳ ಆಶ್ರಯ ಮಾಡಿ, ಇರದೆ—ಅವರ ಸೇವಾ ಮಾಡಿ ಅವರ ಅನುಗ್ರಹ ಸಂಪಾದಿಸಿ ಉಪದೇಶವಾಗೋವರಿಗೂ ಇರದೇ ಇರೋಣದರಿಂದ, ಮರ್ಮವನರಿಯದಿಹ ನರನು—ಅಧ್ಯಾತ್ಮ ಮರ್ಮಗಳ ಅಧಿಕಾರಿಯಾದವ ತಿಳಿಯದೇ ಇರತಾನೆ. ಆದ್ದರಿಂದ ಗುರುಸೇವಾ ಮಾಡಿ ಅಧ್ಯಾತ್ಮ ಮರ್ಮಗಳ ತಿಳಿಯೋವನಾಗಬೇಕು ಎಂತ ತಾತ್ಪರ್ಯ.

**ಮತ್ತೆ ಚಿದ್ದೇಹದ ಒಳಗೆ ಎಂ ।**
**ಭತ್ತು ಸಾವಿರದೇಳುನೂರಿ ।**
**ಪ್ಪತ್ತ ಐದು ನೃಸಿಂಹ ರೂಪದಲಿದ್ದು ಜೀವರಿಗೆ ॥**
**ನಿತ್ಯದಲಿ ಹಗಲಿರುಳು ಬಪ್ಪಪ ।**
**ಮೃತ್ಯುವಿಗೆ ತಾ ಮೃತ್ಯುನೆನಿಸುವ ।**
**ಭೃತ್ಯವತ್ಸಲ ಭಯವಿನಾಶನ ಭಾಗ್ಯಸಂಪನ್ನ ॥ ೧೫ ॥**

ಸ್ಥೂಲ ದೇಹಗೆ ಪ್ರಾಪ್ತವಾಗತಕ್ಕ ಸಾಧನಿಗೆ ಪ್ರತಿಬಂಧಕಗಳಾದ ರೋಗಗಳೆಂಬೋ ಅಪಮೃತ್ಯು ಪರಿಹಾರ ಮಾಡತಕ್ಕ ರೂಪವನ್ನು ಹೇಳತಾರೆ.

ಮತ್ತೆ—ಸೂಕ್ಷ್ಮದೇಹದ ವಿಚಾರ ಪೂರ್ವದಲ್ಲಿ ಹೇಳಿದ್ದಲ್ಲದೆ ಮತ್ತು, ಚಿದ್ದೇಹದ ಒಳಗೆ—ಜೀವನ ಸ್ವರೂಪ ದೇಹದ ಒಳಗೆ, ಎಂಭತ್ತು ಸಾವಿರದ—೮೦,೦೦೦, ಏಳುನೂರ ಇಪ್ಪತ್ತೈದು—೭೨೫. ಅಂತು ೮೦,೭೨೫, ನೃಸಿಂಹ ರೂಪದಲ್ಲಿದ್ದು—ನೃಸಿಂಹ ರೂಪಗಳಿಂದ ಇದ್ದು ಎಂದರೆ ಅಕ್ಷರ ಸಾಂಕೇತದಿಂದ ಆಗತಕ್ಕ ರೂಪಗಳಿಂದ ತಾ ಇದ್ದು ನ—೫, ರ—೨, ಸಿಂ—೭, ಹ—೮೦ ಬಲದಿಂದ ಎಡಕ್ಕೆ ಲೆಖ್ಖ ೮೦,೭೨೫ ಆಯಿತು. ಜೀವರಿಗೆ ನಿತ್ಯದಲಿ— ಪ್ರಾಣಿಗಳಿಗೆ ಪ್ರತಿದಿವಸದಲ್ಲಿ, ಹಗಲಿರುಳು—ರಾತ್ರಿ ಹಗಲುಗಳ ಒಳಗೆ, ಬಪ್ಪ—ಪೂರ್ವ ಜನ್ಮದಲ್ಲಿ ಮಾಡಿದ ಪಾಪಾನುಸಾರ ಬರತಕ್ಕ, ಅಪಮೃತ್ಯುವಿಗೆ—ಮೃತಿಗೆ ಆಸ್ಪದವಲ್ಲದ ಆಯುರ್ಮಾನ ಇರೋ ಕಾಲಕ್ಕೆ ಪ್ರಾಪ್ತವಾಗತಕ್ಕ ಮೃತಿಸದೃಶ ಶವದ ಚಿನ್ಹೆಗಳು ಉಂಟು ಮಾಡತಕ್ಕ ರೋಗಾದಿ ಉಪದ್ರವಗಳು ಇಂಥಾ ಅಪಮೃತ್ಯುವಿಗೆ, ತಾ—ಉಕ್ತ ನಾದ ಜೀವಾಂತರ್ಗತನಾದ ನರಸಿಂಹ ರೂಪಿಯಾದ ಶ್ರೀ ಪರಮಾತ್ಮನಾದ ತಾನು, ಮೃತ್ಯುನೆನಿಸುವ—ಆ ರೋಗಾದಿ ಉಪದ್ರವಗಳ ನಾಶ ಮಾಡತಾನೆ. ಭೃತ್ಯವತ್ಸಲ—

ಸ್ವಾಮಿಭೃತ್ಯನ್ಯಾಯ ಉಳ್ಳವರಾಗಿ ತನ್ನಲ್ಲಿ ಭಕ್ತಿ ಮಾಡಿ ಈ ಅನುಸಂಧಾನ ತಿಳಿದು ತನ್ನ ಭಜಿಸಿ ಪ್ರಾರ್ಥಿಸತಕ್ಕ ಭೃತ್ಯರಲ್ಲಿ ವಾತ್ಸಲ್ಯ ಉಳ್ಳವನಾಗಿ, ಭಯವಿನಾಶನ–ಅಪಮೃತ್ಯುಭಯ ನಾಶನ ಮಾಡಿ, ಭಾಗ್ಯಸಂಪನ್ನ–ಅಜ್ಞಾನವೆಂಬ ದುರಿತವನ್ನ ನಾಶ ಮಾಡಿ ಜ್ಞಾನ ಭಕುತಿ ವೈರಾಗ್ಯಗಳೆಂಬ ಸೌಭಾಗ್ಯದಿಂದ ಸಂಪನ್ನರನ್ನಾಗಿ ಮಾಡಿ ಇನ್ನೂ ಐಹಿಕದಲ್ಲಿ ದಾರಿದ್ರ್ಯವೆಂಬ ದುರಿತವನ್ನ ನಾಶಮಾಡಿ ಮಹದೈಶ್ವರ್ಯ ಭಾಗ್ಯವನ್ನು ಕೊಟ್ಟು ಸಂರಕ್ಷಣೆ ಮಾಡತಾನೆ ಎಂತಲೂ ತಾತ್ಪರ್ಯ.

**ಜ್ವರನೊಳಿಪ್ಪತ್ತೇಳು ಹರನೊಳ ।**
**ಗಿರುವನಿಪ್ಪತ್ತೆಂಟು ರೂಪದಿ ।**
**ಎರಡುಸಾವಿರದೆಂಟುನೂರಿಪ್ಪತ್ತರೇಳೆನಿಪ ॥**
**ಜ್ವರಹರಾಹ್ವಯ ನಾರಸಿಂಹನ ।**
**ಸ್ಮರಣೆಮಾತ್ರದಿ ದುರಿತರಾಶಿಗ ।**
**ಳಿರದೆ ಪೋಪವು ತರಣಿಬಿಂಬವ ಕಂಡ ಹಿಮದಂತೆ ॥ ೧೬ ॥**

ಜ್ವರಹರಾದಿ ರೂಪಗಳ ಹೇಳತಾರೆ.

ಜ್ವರನ–ಜ್ವರ ಎಂಬುದು ಸಕಲ ವ್ಯಾಧಿಗಳಿಗೆ ರಾಜ. ಸನ್ನಿದೋಷ ಶೋಭಾದಿಗಳು ಜ್ವರದಿಂದ ಉತ್ಪತ್ತಿ. ಆದ್ದರಿಂದ ಇಂಥಾ ಜ್ವರದಲ್ಲಿ ಜ್ವರಾಭಿಮಾನಿಯಾದ ಜ್ವರಶಬ್ದವಾಚ್ಯ ದೇವತಾ ಇರೋವನಾಗಿ ಇದ್ದಾನೆ. ಇದು ಶಿವಜ್ವರ. ಒಳು–ಈ ಜ್ವರಸಾಂಕೇತನಾದ ದೇವತೆಯಲ್ಲಿ, ಇಪ್ಪತ್ತೇಳು–ಜ್ವರಶಬ್ದವಾಚ್ಯ ಭಗವದ್ರೂಪಗಳು ೨೭. ಜ್ವ–೭, ರ–೨ ಬಲದಿಂದ ಎಡಕ್ಕೆ ಲೆಖ್ಖ. ಹರನೊಳಗೆ–ಹರ ಎಂದರೆ ಜ್ವರ ಪರಿಹಾರ ಮಾಡತಕ್ಕ ದೇವತೆಗೆ ಹರ ಎಂತ ಹೆಸರು. ಹರ ಎಂಬುದಕ್ಕೆ ಅಭಿಮಾನಿಯಾದ ಹರಶಬ್ದವಾಚ್ಯ ದೇವತೆಯಲ್ಲಿ ಶ್ರೀ ಪರಮಾತ್ಮ ಹರಶಬ್ದವಾಚ್ಯನಾಗಿ ಹರ ಎಂಬ ಅಕ್ಷರಸಾಂಕೇತದಿಂದ ಆಗತಕ್ಕ, ಇಪ್ಪತ್ತೆಂಟು ರೂಪದಿ–೨೮ ರೂಪದಿಂದ ಎಂದರೆ ಹ–೮, ರ–೨ ಬಲದಿಂದ ಎಡಕ್ಕೆ ಲೆಖ್ಖ ಮಾಡಿದರೆ, ೨೮ ರೂಪದಿಂದ, ಇರುವ–ಇರೋವನಾಗಿದ್ದಾನೆ. ರೂಪದಿ–ಈ ಉಕ್ತ ರೂಪಗಳಿಂದ ಉಭಯದೇವತೆಗಳಲ್ಲಿ ಇದ್ದಾನೆ ಎಂತ ಅರ್ಥ. ಹರ ಎಂದರೆ ವಿಷ್ಣುಜ್ವರ ಎಂತ ತಾತ್ಪರ್ಯ. ಈ ಪ್ರಕಾರ, ಜ್ವರಹರಾಹ್ವಯ– ಜ್ವರ– ಜ್ವರಕ್ಕೆ ಕಾರಣವಾದ ದುರಿತ ಹರ–ಇಂಥ ದುರಿತಗಳ ಪರಿಹಾರಕ್ಕೆ ಹರ ಎಂತ ನಾಮ. ಆಹ್ವಯ–ಇಂಥಾ ಜ್ವರಹರನಾಮದಿಂದ ಕರಿಸತಕ್ಕ ಶ್ರೀ ಪರಮಾತ್ಮನ ರೂಪಗಳು ಅಕ್ಷರಸಾಂಕೇತದಿಂದ ಆಗ ತಕ್ಕದ್ದು, ಎರಡುಸಾವಿರದ ಎಂಟುನೂರಿಪ್ಪತ್ತೇಳೆನಿಪ–೨೮೨೭ ಎಂತ. ಜ್ವ–೭, ರ–೨, ಹ–೮, ರ–೨ ಅಂದರೆ ೨೮೨೭. ಇಷ್ಟು ರೂಪದಿಂದ ಜ್ವರ ಎಂಬ ಅಧಿಷ್ಠಾನದಲ್ಲಿ, ನಾರಸಿಂಹನ–ಇರುವಂಥಾ ಶ್ರೀನೃಸಿಂಹದೇವರನ್ನು, ಸ್ಮರಣೆ ಮಾತ್ರದಿ–ಭಕ್ತಿಯಿಂದ ಸ್ಮರಣೆ ಮಾಡಿದ ಮಾತ್ರದಿಂದ, ದುರಿತರಾಶಿಗಳು–ಜ್ವರಾದಿ ರೋಗಗಳಿಗೆ ಕಾರಣವಾದ ಪಾಪ ಗಳು, ತದಭಿಮಾನಿಗಳು, ಇರದೆ ಪೋಪವು–ದೇಹದಲ್ಲಿ ನಿಲ್ಲದೆ ಹೊರಟುಹೋಗೋ

ಡಾಗತದೆ. ಎಂದರೆ ಭಗವದ್ದ್ವೇಷಿಗಳಾದವರ ದೇಹದಲ್ಲಿ ಪ್ರವೇಶಮಾಡತದೆ. ಅದು ಹ್ಯಾಂಗೆಂದರೆ ದೃಷ್ಟಾಂತ ಹೇಳತಾರೆ. ತರಣಿಬಿಂಬವ ಕಂಡ–ಸೂರ್ಯನ ಮಂಡಲವನ್ನು ನೋಡಿದಂಥಾ ಹಿಮದಂತೆ–ಛಳಿಯೋಪಾದಿಯಲ್ಲಿ ಅಂದರೆ ಮಂಜಿನೋಪಾದಿಯಲ್ಲಿ.

**ತಾ||** "ವಿಲಯಂ ಯಾಂತಿ ಪಾಪಾನಿ ಹಿಮವದ್ಭಾಸ್ಕರೋದಯೇ" ಎಂತ ಇರುವದರಿಂದ ಶ್ರೀ ನೃಸಿಂಹದೇವರ ಸ್ಮರಣೆ ಮಾಡೋಣದರಿಂದ ಸರ್ವಪಾಪಗಳು ಸಂಹಾರವಾಗುತ್ತವೆ. ಮಹಾರೋಗಾದ್ಯುಪದ್ರವಗಳು ಪರಿಹಾರವಾಗುತ್ತವೆ ಎಂತ ತಾತ್ಪರ್ಯ. ಜ್ವರದೊಳಗೆ ವಿಷ್ಣುಜ್ವರ, ಶಿವಜ್ವರ ಎಂತ ಎರಡು ಪ್ರಕಾರ. ಇದರ ವಿವರ ಶ್ರೀ ಹರಿವಂಶದಲ್ಲೂ ಭಾಗವತ ದಶಮಸ್ಕಂಧದಲ್ಲೂ ಅದೆ.

**ಮಾಸಪರಿಯಂತರವು ಬಿಡದೆ ನೃ |**
**ಕೇಸರಿಯ ಶುಭನಾಮ ಮಂತ್ರ ಜಿ |**
**ತಾಸನದಲೇಕಾಗ್ರಚಿತ್ತದಿ ನಿಷ್ಕಪಟದಿಂದ ||**
**ಬೇಸರದೆ ಜಪಿಸಲು ವೃಜಿನಗಳ |**
**ನಾಶಗೈಸಿ ಮನೋರಥಗಳ ಪ |**
**ರೇಶ ಪೂರ್ತಿಯ ಮಾಡಿಕೊಡುವನು ಕಡೆಗೆ ಪರಗತಿಯ || ೧೭ ||**

ಪೂರ್ವೋಕ್ತ ನೃಸಿಂಹಮಂತ್ರವನ್ನು ಜಪಿಸಿ ಉದ್ಧಾರವಾಗಬೇಕೆಂದು ಹೇಳತಾರೆ.

ಮಾಸಪರಿಯಂತರವು–ಒಂದು ತಿಂಗಳು ಪೂರ್ತಿಯಾಗಿ, ಬಿಡದೆ–ಅವಿಚ್ಛಿನ್ನವಾಗಿ, ಬಿಡದೇ, ನೃಕೇಸರಿಯ–ಶ್ರೀ ನೃಸಿಂಹರೂಪಿ ಪರಮಾತ್ಮನ್ನ ಹೃದಯಾಕಾಶದಲ್ಲಿ ನಿಲ್ಲಿಸಿ ಆ ರೂಪವನ್ನ ಧ್ಯಾನಮಾಡುತ, ಶುಭನಾಮ–ಮಂಗಳಕರವಾದ "ಶ್ರೀ ನೃಸಿಂಹಾಯ ನಮಃ" ಎಂತಲೂ, ಮಂತ್ರ– "ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ | ನೃಸಿಂಹಂ ಭೀಷಣಂ ಭದ್ರಂ ಮೃತ್ಯೋರ್ಮೃತ್ಯುಂ ನಮಾಮ್ಯಹಂ ||" ಎಂಬ ಮಂತ್ರವನ್ನ ಪ್ರಾಣಾಯಾಮಪೂರ್ವಕ ನ್ಯಾಸಧ್ಯಾನಶ್ಲೋಕದಿಂದ ಸಹಿತವಾಗಿ ಜಿತಾಸನದಲಿ–ಅಚಂಚಲವಾದ ಜಿತಚಿತ್ತದಿಂದ ಕೃಷ್ಣಾಜಿನಾದಿ ಯೋಗ್ಯವಾದ ಆಸನದಲ್ಲಿ ವಿಧ್ಯುಕ್ತಪ್ರಕಾರ ಕೂತವನಾಗಿ, ಏಕಾಗ್ರಚಿತ್ತದಿ–ಒಂದೇ ಮನಸ್ಸಿನಿಂದ ಯುಕ್ತನಾಗಿ, ನಿಷ್ಕಪಟದಿಂದ–ಅಹಂಮಮರಹಿತನಾಗಿ ಕೇವಲ ಶ್ರೀವಿಷ್ಣುಪ್ರೀತಿಕರವಾಗಿ, ಜಪಿಸಲು–ಸಂತೋಷದಿಂದ ಆದರಪೂರ್ವಕ ಜಪಿಸಲು, ವೃಜಿನಗಳ–ಸತ್ಸಾಧನೆಗೆ ಪ್ರತಿಬಂಧಕಗಳ, ನಾಶಗೈಸಿ–ದೂರ ಓಡಿಸಿ ಮತ್ತೂ ಪ್ರವೇಶಮಾಡಧಾಂಗೆ ಮತ್ತು ಬಾರಧಾಂಗೆ ಅದರನ್ನ ಬೆನ್ನಹತ್ತಿ ಓಡಿಸಿ, ಮನೋರಥಂಗಳ–ಮುಖ್ಯವಾಗಿ ಅಧಿಕಾರಿಗೆ ಬೇಕಾದದ್ದು ಜ್ಞಾನ, ಭಕ್ತಿ, ವೈರಾಗ್ಯಗಳು. ಇದಕ್ಕೆ ಅನುಸಾರಿಯಾದ ಐಶ್ವರ್ಯಗಳ, ಪೂರ್ತಿಯ ಮಾಡಿ–ಯೋಗ್ಯತಾನುಸಾರ ಪೂರ್ತಿಯಾಗಿ, ಪರೇಶ–ಸರ್ವೋತ್ತಮನಾದ ಶ್ರೀ ನೃಸಿಂಹದೇವರು, ಕಡೆಗೆ–ಇಹದಲ್ಲಿ ಕೊಟ್ಟು, ಅಧಿಕಾರಿ ಮೃತನಾದ ನಂತರ, ಪರಗತಿಯ–ಉತ್ತಮವಾದ

ಮಹರಾದಿ ಲೋಕಗಳಲ್ಲಿ ಇಟ್ಟು ಬ್ರಹ್ಮಣಾ ಸಹ ಮುಕ್ತಿಯನ್ನ ಕೊಡತಾನೆ. ಕೊಡುವನು–ಇನ್ನೂ ಇಹದಲ್ಲಿ ದಿವ್ಯ ಅಪರೋಕ್ಷಜ್ಞಾನವನ್ನು ಕೊಡತಾನೆ ಎಂತ ತಾತ್ಪರ್ಯ.

**ಚತುರವಮೂರ್ತ್ಯಾತ್ಮಕ ಹರಿಯು ತ್ರಿಂ ।**
**ಶತಿಸ್ವರೂಪದಿ ಬ್ರಹ್ಮನೊಳು ಮಾ ।**
**ರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ ॥**
**ಸುತರೊಳಿಪ್ಪತ್ತೈದು ಹದಿನೆಂ ।**
**ಟತುಳರೂಪಗಳರಿತು ವತ್ಸರ ।**
**ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವ ॥ ೧೮ ॥**

ಆಯುರ್ಮಾನ ನೂರು ವರುಷವರಿಗ್ಯೂ ಪೂಜಾಕ್ರಮವನ್ನು ಹೇಳತಾರೆ.

ಚತುರವಮೂರ್ತ್ಯಾತ್ಮಕ – ನಾಲ್ಕು ರೂಪಗಳಿಂದ ಪ್ರಚುರನಾದ, ಹರಿಯು – ಶ್ರೀ ಪರಮಾತ್ಮನು ಅನಿರುದ್ಧಾದಿ ನಾಲ್ಕು ರೂಪಗಳಿಂದ ಯುಕ್ತನಾದ ಶ್ರೀ ನಾರಾಯಣ ದೇವರು, ಬ್ರಹ್ಮನೊಳು–ಬ್ರಹ್ಮದೇವರೊಳು, ತ್ರಿಂಶತಿಸ್ವರೂಪದಿ–೩೦ ಅನಿರುದ್ಧರೂಪಗಳಿಂದಲೂ, ಮಾರುತನೊಳು–ಪ್ರಧಾನವಾಯುದೇವರೊಳು, ಪ್ರದ್ಯುಮ್ನ–ಪ್ರದ್ಯುಮ್ನ ರೂಪಿ ಶ್ರೀ ಪರಮಾತ್ಮ, ಇಪ್ಪತ್ತೇಳು ರೂಪದೊಳಿಪ್ಪ–೨೭ ರೂಪದಿಂದಲೂ ಇರೋವನಾಗಿದ್ದಾನೆ. ಸುತರೊಳು–ಈ ಬ್ರಹ್ಮವಾಯುಗಳಿಗೆ ಪುತ್ರರಾದ ಗರುಡ, ಶೇಷ, ರುದ್ರ ಈ ಮೂರು ಮಂದಿಗಳಲ್ಲಿ, ಇಪ್ಪತ್ತೈದು–೨೫ ರೂಪಗಳಿಂದ ಸಂಕರ್ಷಣ ಇರೋವನಾಗಿದ್ದಾನೆ. ಹದಿನೆಂಟು–೧೮ ರೂಪಗಳಿಂದ ವಾಸುದೇವ ಇದ್ದಾನೆ ರುದ್ರದೇವರಲ್ಲಿ, ಅಂತು ರೂಪಗಳು ೧೦೦, ವತ್ಸರಶತಗಳಲಿ–ಆಯುರ್ಮಾನ ವರುಷಗಳ ನೂರರಲ್ಲಿ ಅಂತು ಪೂರ್ವೋಕ್ತ ಪ್ರಕಾರ ವರುಷ ಒಂದು, ರೂಪ ಒಂದು ಪ್ರಕಾರ, ಅತುಳರೂಪಗಳ–ಅಸದೃಶವಾದ ಅನಿರುದ್ಧಾದಿ ನಾಲ್ಕು ರೂಪಗಳ, ಪೂಜಿಸುತಲಿರು–ಆಯುರ್ಮಾನ ಸರ್ವಾಧಿಷ್ಠಾನಗಳಲ್ಲಿ ಅನುಸಂಧಾನದಿಂದ, ತಿಳಿದು–ಪೂಜೆಯ ಮಾಡು (ಅಂದರೆ ಸಂವತ್ಸರಕ್ಕೆ ಅಂಗಗಳಾದ ಮಾಸ, ಪಕ್ಷ, ಋತು ಮೊದಲಾದವುಗಳ ಅಂತರ್ಗತನಾದ ಶ್ರೀ ಕಾಲನಾಮಕ ಪರಮಾತ್ಮನ) ಚತುರಾತ್ಮಕನ–ಚತುರ್ವ್ಯೂಹನಾದ ಶ್ರೀ ಪರಮಾತ್ಮನ, ಪದವ–ಪಾದಗಳನ್ನು ಸ್ಮರಿಸುತಾ ಈ ಆಯುರ್ಮಾನವನ್ನು ಆಯಾ ದೇವತಾಂತರ್ಗತ ಶ್ರೀ ಪರಮಾತ್ಮಗೆ ಸಮರ್ಪಣೆ ಮಾಡಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಪೂರ್ವೋಕ್ತ ರುದ್ರದೇವರಲ್ಲಿ ೧೦೦ ರೂಪಗಳು ಹ್ಯಾಂಗೆಂದರೆ

| | |
|---|---|
| ೩೦ | ಅನಿರುದ್ಧ ರೂಪಗಳು, ಪ್ರಥಮ ೩೦ ವರ್ಷಗಳಿಗೆ ಬ್ರಹ್ಮಾಂತರ್ಗತ. |
| ೨೭ | ಪ್ರದ್ಯುಮ್ನ ರೂಪಗಳು, ದ್ವಿತೀಯ ೨೭ ವರ್ಷಗಳಿಗೆ ವಾಯ್ವಂತರ್ಗತ. |
| ೨೫ | ಸಂಕರ್ಷಣ ರೂಪಗಳು, ತೃತೀಯ ೨೫ ವರ್ಷಗಳಿಗೆ ಗರುಡ ಶೇಷಾಂತರ್ಗತ. |
| ೧೮ | ವಾಸುದೇವ ರೂಪಗಳು, ಚತುರ್ಥ ೧೮ ವರ್ಷಗಳಿಗೆ ರುದ್ರಾಂತರ್ಗತ. |
| ೧೦೦ | ಅಂತು ನೂರು ರೂಪಗಳು, ನೂರು ವರ್ಷಗಳು. |

**ನೂರು ವರುಷಕೆ ದಿವಸ ಮೂವ ।**
**ತ್ತಾರು ಸಾವಿರವಹವು ನಾಡಿ ಶ ।**
**ರೀರದೊಳಗಿನಿತಿಹವು ಸ್ತ್ರೀಪುಂಭೇದದಲಿ ಹರಿಯ ॥**
**ಈರಧಿಕ ಎಪ್ಪತ್ತು ಸಾವಿರ ।**
**ಮೂರುತಿಗಳನೆ ನೆನೆದು ಸರ್ವಾ ।**
**ಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿದು ॥ ೧೯ ॥**

ನೂರು ವರುಷಕ್ಕೆ ಆಗತಕ್ಕ ದಿನಗಳು ಅದರ ಅರ್ಪಣ ಕ್ರಮವನ್ನು ಹೇಳತಾರೆ.

ನೂರು ವರುಷಕೆ–ಆಯುರ್ಮಾನ ಪೂರ್ವೋಕ್ತ ನೂರು ವರುಷಕ್ಕೆ, ದಿವಸ–ರಾತ್ರಿ ಹಗಲು ಸೇರಿದ ಒಂದು ದಿವಸ ಇಂಥಾ, ಮೂವತ್ತಾರುಸಾವಿರವಹವು–ದಿನಗಳು ೩೬,೦೦೦ ಆಗತದೆ. ತಿಂಗಳಿಗೆ ೩೦ ದಿನ, ೧೨ ತಿಂಗಳಿಗೆ ೩೦×೧೨=೩೬೦ ದಿನ. ಅಂದರೆ ೧ ವರ್ಷಕ್ಕೆ ೩೬೦ ದಿನ. ೧೦೦ ವರ್ಷಕ್ಕೆ ೩೬೦×೧೦೦=೩೬,೦೦೦ ದಿನಗಳು. ಇನಿತು–ಇಷ್ಟು ಸಂಖ್ಯಾದಿಂದ, ಶರೀರದೊಳಗೆ–ಈ ಸ್ಥೂಲಶರೀರದೊಳಗೆ ನಾಡಿ, ಇಹವು–೩೬,೦೦೦ ನಾಡಿಗಳು ಇರೋದಾಗಿ ಅದೆ. ಸ್ತ್ರೀಪುಂಭೇದದಲಿ–ಪೂರ್ವೋಕ್ತ (೩೬,೦೦೦) ಮೂವತ್ತಾರು ಸಾವಿರ ದಿನಗಳು ರಾತ್ರಿ ಹಗಲು ಸೇರಿದ್ದನ್ನು ವಿಭಾಗ ಮಾಡಿದರೆ ಏನಾಗತದೆ ಎಂದರೆ, ೩೬,೦೦೦ ಹಗಲು ಪುರುಷ ದೇವತೆಗಳು ಅಭಿಮಾನಿಗಳು ಎಂತಲೂ, ೩೬,೦೦೦ ರಾತ್ರಿ ಸ್ತ್ರೀ ದೇವತೆಗಳು ಅಭಿಮಾನಿಗಳು ಎಂತಲೂ ಈ ಪ್ರಕಾರ (೭೨,೦೦೦) ಎಪ್ಪತ್ತೆರಡು ಸಾವಿರ ದಂಪತಿನಾಡಿಗಳು ಎಂತ ಕರಿಸೋದಾಗತದೆ. ಹರಿಯ–ದೇಹಾಂತರ್ಗತ ಬಿಂಬರೂಪಿ ಹರಿನಾಮಕ ಶ್ರೀ ಪರಮಾತ್ಮ ದೇಹಗತ ೭೨,೦೦೦ ನಾಡಿಗಳ ಒಳಗೆ ಮಾತೃಸ್ಥಾನವಾದ ನಾಡಿಗಳು ೧೦೦ (ಇದರ ವಿಚಾರ ನಾಡಿಪ್ರಕರಣ ಸಂಧಿಯಲ್ಲಿ ವಿವರವಾಗಿ ಹೇಳಲ್ಪಟ್ಟಿದೆ) ಈ ನೂರು ನಾಡಿಗಳ ಒಳಗೆ ಆಯಸ್ಸು ನೂರು ವರ್ಷಕ್ಕೆ ಅಭಿಮಾನಿಗಳಾದ ಅನಿರುದ್ಧಾದಿ ರೂಪಗಳು ಇರೋದಾಗಿ ಅದೆ. (ಹಿಂದಿನ ಶ್ಲೋಕದಲ್ಲಿ ರುದ್ರಾಂತರ್ಗತ ನೂರು ರೂಪಗಳ ವಿವರಿಸಿದ್ದು ನೋಡಬೇಕು) ಈರಧಿಕ ಎಪ್ಪತ್ತೆರಡುಸಾವಿರ–ಪೂರ್ವೋಕ್ತ ೧೦೦ ನಾಡಿಗಳಿಗೆ ನಾಡಿ ಒಂದಕ್ಕೆ ೭೨ ಪ್ರಕಾರ ೭೨,೦೦೦, ಮೂರುತಿಗಳ ನೆನೆದು–೩೬,೦೦೦ ಸ್ತ್ರೀರೂಪಗಳಾದ ಮೂರ್ತಿಗಳು, ೩೬,೦೦೦ ಪುರುಷ ರೂಪಗಳಾದ ಮೂರ್ತಿಗಳು, ಈ ಪ್ರಕಾರ ಆಯುರ್ಮಾನ ದಿನಗಳಲ್ಲಿ ಸ್ಮರಣೆ ಮಾಡಿ, ಸರ್ವಾಧಾರಕನ–ಸರ್ವ ಜೀವರಲ್ಲಿ ದೇಹಧಾರಕನಾದ ಶ್ರೀ ಪರಮಾತ್ಮನ, ಸರ್ವತ್ರ–ನಾಡೀ ಅಂತರ್ಗತ, ಆಯುರಂತರ್ಗತ ಶ್ರೀ ಪರಮಾತ್ಮನ ಐಕ್ಯ ಚಿಂತನ ಮಾಡಿ, ಪೂರ್ಣನೆಂದರಿದು–ಶ್ರೀ ನಾರಾಯಣ ಗುಣಪೂರ್ಣ ಎಂತ ತಿಳಿದು, ಪೂಜಿಸು–ಭಗವದ್ರೂಪಗಳಿಂದ ಭಗವದ್ರೂಪಗಳಿಗೆ ಪೂಜಿಸೋವನಾಗಬೇಕು.

**ತಾ||** ಆಯಸ್ಸು ಎಂಬುದು ಸೂರ್ಯಗತಿಯನ್ನು ಅನುಸರಿಸಿ ನಾಡಿಗಳ ದ್ವಾರಾ ಕ್ಷೀಣವಾಗತಾ ಬರುತ್ತದೆ ಎಂತ ತಾತ್ಪರ್ಯ.

**ಕಾಲಕರ್ಮಗುಣಸ್ವಭಾವಗ ।**
**ಳಾಲಯನು ತಾನಾಗಿ ಲಕುಮೀ ।**
**ಲೋಲ ತತ್ತದ್ರೂಪನಾಮದಿ ಕರೆಸುತೊಳಗಿದ್ದು ॥**
**ಲೀಲೆಯಿಂದಲಿ ಸರ್ವಜೀವರ ।**
**ಪಾಲಿಸುವ ಸಂಹರಿಸಿ ಸೃಷ್ಟಿಪ ।**
**ಮೂಲಕಾರಣ ಪ್ರಕೃತಿಗುಣಕಾರ್ಯಗಳ ಮನೆಮಾಡಿ ॥ ೨೦ ॥**

ಸೃಷ್ಟಿ, ಸ್ಥಿತಿ, ಸಂಹಾರಾದಿಗಳು ಶ್ರೀ ಪರಮಾತ್ಮ ಮಾಡತಾನೆ ಎಂತ ಹೇಳತಾರೆ.

ಕಾಲ–ಮಹಾಪ್ರಳಯಾನಂತರ ಸೃಷ್ಟಿಕಾಲ, ಗುಣ–ತ್ರಿಗುಣಾತ್ಮಕವಾದ ಜೀವರಿಗೆ ಬಂಧಕರೂಪದಿಂದ ಇರತಕ್ಕ ಅನಾದಿಲಿಂಗ ಶರೀರ, ಕರ್ಮ–ಇದರ ತೃತೀಯ ಪರಿಚ್ಛೇದವಾದ ತಮಃಪರಿಚ್ಛೇದಗತ ಅನಾದಿಕರ್ಮ, ಸ್ವಭಾವ–ಈ ಲಿಂಗಾಂತರ್ಗತನಾದ ಜೀವನ ಅನಾದಿಸ್ವರೂಪ ಸ್ವಭಾವ ಹಾಂಗೆ ಜೀವ, ಗಳ–ಇವುಗಳ ಧರಿಸೋ ವಿಷಯದಲ್ಲಿ, ಆಲಯನು ತಾನಾಗಿ–ಆಲಯ ಮನೆ, ಇಂಥಾ ಆಲಯಭೂತನು ಎಂದರೆ ಲಿಂಗದೇಹದಿಂದ ಸಹಿತರಾದ ಜೀವರ ಧರಿಸೋದಕ್ಕೆ ಆಲಯಭೂತನಾಗಿ ಪ್ರಳಯಕಾಲದಲ್ಲಿ ಸರ್ವಜೀವರ ಉದರದಲ್ಲಿ ಧರಿಸಿ, ಲಕುಮೀಲೋಲ–ಪ್ರಳಯೋದಕದಲ್ಲಿ ಶಯನಮಾಡಿ ಲಕ್ಷ್ಮೀದೇವೇರ ಕೂಡ ಲೋಲನಾಗಿರತಾನೆ. ಆಗ್ಗೆ ಬ್ರಹ್ಮಾದಿಗಳು ದಾರೂ ಇರೋದಿಲ್ಲ. ತತ್ತದ್ರೂಪನಾಮದಿ ಕರೆಸುತ ತನ್ನ ಉದರಗತ ಜೀವರ ೧ ಸ್ವರೂಪದಲಿ, ಸ್ವರೂಪ ಸ್ವಭಾವದಲಿ, ೨ ಲಿಂಗದೇಹದಲಿ, ೩ ಲಿಂಗದೇಹಗತ ಅನಾದಿಕರ್ಮದಲಿ, ಈ ಮೂರರಲ್ಲಿ ಆಯಾ ರೂಪಗಳಿಂದ ಆಯಾ ನಾಮಗಳಿಂದ ಕರೆಸುತ, ಒಳಗಿದ್ದು–ಜೀವದಲಿ, ಲಿಂಗದಲಿ, ಅನಾದಿ ಕರ್ಮದಲಿ ಈ ಮೂರರಲ್ಲಿ ಇದ್ದು ಪ್ರಳಯಾಂತವಾಗಿ ಸೃಷ್ಟಿಕಾಲ ಪ್ರಾರಂಭವಾಗುತಿರಲಾಗಿ, ಲೀಲೆಯಿಂದಲಿ–ತನ್ನ ಆಟದಿಂದ ಲಿಂಗಗತ ರಜೋಗುಣದಿಂದ ಗುಣವೈಷಮ್ಯ ಐದಿಸಿ ಅನಂತರ ಕ್ರಮಾತ್ ಅನಿರುದ್ಧಶರೀರದವರಿಗ್ಯೂ ಸೂಕ್ಷ್ಮ ಸೃಷ್ಟಿ ಮಾಡಿದನಂತರ ಸ್ಥೂಲಶರೀರಗಳಿಗೆ, ಕಾರಣ–ಉಪಾದಾನಕಾರಣವಾದ, ಮೂಲ–ಬ್ರಹ್ಮಾಂಡ ಸೃಷ್ಟಿಗೆ ಮೂಲಭೂತವಾದ, ಗುಣ–ಗುಣತ್ರಯಾತ್ಮಕ ಲಿಂಗೋಪಾದಾನಕ್ಕೆ ಅನ್ಯವಾದ ಗುಣತ್ರಯಾತ್ಮಕ, ಪ್ರಕೃತಿ–ಮೂಲಜಡಪ್ರಕೃತಿದೇಶೆಯಿಂದ, ಕಾರ್ಯಗಳ–ಕಾರ್ಯರೂಪವಾದ ಸ್ಥೂಲದೇಹಗಳ, ಮನೆಮಾಡಿ–ಸೂಕ್ಷ್ಮಸೃಷ್ಟಿಯಲ್ಲಿ ಅಂಡದ ಹೊರಗೆ ಲಿಂಗೋಪಾದಾನದಿಂದ ಅನಿರುದ್ಧ ಶರೀರ ಹೊಂದಿದ ಪ್ರಾಣಿಗಳ ಆ ದೇಹಸಹಿತ ಆವಾಸರಾಗಿ ಇರೋದಕ್ಕೆ ಮನೆಮಾಡಿ ಅದರಲಿ ಜೀವರನ್ನ ಪ್ರವೇಶ ಮಾಡಿಸಿ ಅಂಡದ ಒಳಗೆ ಸ್ಥೂಲ ಶರೀರದಿಂದ ಸೃಷ್ಟಿಪ–ಸರ್ವಜೀವರನ್ನ ಸೃಷ್ಟಿಮಾಡತಾನೆ. ಸರ್ವಜೀವರ–ಈ ಸೃಷ್ಟಿ ಮಾಡಿದ ಸರ್ವಜೀವರನ್ನ, ಪಾಲಿಸುವ–ಸಂರಕ್ಷಣೆ ಮಾಡುವ, ಸಂಹರಿಸಿ–ಪ್ರಳಯಕಾಲ

ದಲ್ಲಿ ಸಂಹರಿಸುವ, ಸಂಹಾರಮಾಡಿ ಪೂರ್ವೋಕ್ತ ಪ್ರಕಾರ ಉದರದಲಿ ಧರಿಸುವ, ಸಾಧನೆ ಪೂರ್ತಿ ಆದವರಿಗೆ ಮೋಕ್ಷ ಕೊಡುವ. ಕಾಲಕರ್ಮಗುಣಸ್ವಭಾವಗಳ ಅನುಸರಿಸಿ ಅನೇಕ ಜನ್ಮಗಳಿಂದ ಸೃಷ್ಟಿ, ಸ್ಥಿತಿ, ಸಂಹಾರಾದಿಗಳು ಮಾಡತಾ ಇರತಾನೆ ಎಂತ ತಾತ್ಪರ್ಯ.

**ತಿಲಜವರ್ತಿಗಳನುಸರಿಸಿ ಪ್ರ ।**
**ಜ್ವಲಿಸಿ ದೀಪಗಳಾಲಯದ ಕ ।**
**ತ್ತಲೆಯ ಭಂಗಿಸಿ ತದ್ಗತಾರ್ಥವ ತೋರುವಂದದಲಿ ॥**
**ಜಲರುಹೇಕ್ಷಣ ತನ್ನವರ ಮನ ।**
**ದೊಳಗೆ ಭಕ್ತಿಜ್ಞಾನಕರ್ಮಕೆ ।**
**ಒಲಿದು ಹೊಳೆವುತ ತೋರುವನು ಗುಣರೂಪಕ್ರಿಯೆಗಳನು ॥ ೨೧ ॥**

ಸೃಜ್ಯರಾದ ತನ್ನ ಭಕ್ತರಿಗೆ ತನ್ನ ದರ್ಶನ ಕೊಟ್ಟು ಮೋಕ್ಷ ಕೊಡತಾನೆ ಎಂತ ಹೇಳತಾರೆ.

ದೀಪಗಳು—ದೀಪಗಳು, ವರ್ತಿಗಳ—ಬತ್ತಿಗಳು, ತಿಲಜ—ಎಳ್ಳಿನಿಂದ ಉತ್ಪನ್ನವಾದ ಎಣ್ಣೆಯನ್ನ, ಅನುಸರಿಸಿ—ಆಶ್ರಯಮಾಡಿದಂಥಾದ್ದಾಗಿ, ಪ್ರಜ್ವಲಿಸಿ—ಛಂದಾಗಿ ಉರದು, ಆಲಯದ ಕತ್ತಲೆಯ—ಮನಿ ಒಳಗೆ ಇರತಕ್ಕ ಅಂಧಕಾರವನ್ನು, ಭಂಗಿಸಿ—ಪರಿಹಾರಮಾಡಿ ತದ್ಗತಾರ್ಥವ—ಆ ಮನಿ ಒಳಗೆ ಇರುವಂಥಾ ಪದಾರ್ಥಗಳನ್ನು, ತೋರುವಂದದಲಿ—ತನ್ನ ಪ್ರಕಾಶದಿಂದ ತೋರಿಸೋದಾಗತದೆ. ಈ ದೀಪದೋಪಾದಿಯಲಿ ಅಧಿಕಾರಿಗಳ ದೇಹಾಖ್ಯ ಮನಿ ಒಳಗೆ ಇರುವ, ಮನದೊಳಗೆ—ಮನಸ್ಸಿನಲ್ಲಿ ಇರುವ, ಭಕ್ತಿ—ಭಕ್ತಿ ಎಂಬೋ ತೈಲದಲ್ಲಿ, ವೈರಾಗ್ಯ ಎಂಬೋ ಬತ್ತಿಯನ್ನು ಇಟ್ಟು, ಜ್ಞಾನ—ಜ್ಞಾನವೆಂಬ ದೀಪ ಮುಡಿಸಿ ಅಜ್ಞಾನಾಂಧಕಾರ ಓಡಿಸಿ, ಕರ್ಮಕ್ಕೆ—ಮಾಡತಕ್ಕ ಯಾವತ್ತು ಕರ್ಮಗಳಿಗೆ, ಜಲರುಹೇಕ್ಷಣ—ಕಮಲದಳದೋಪಾದಿಯಲಿ ನೇತ್ರಗಳು ಉಳ್ಳ ಬಿಂಬರೂಪಿ ಶ್ರೀ ಪರಮಾತ್ಮ ಮೆಚ್ಚಿದವನಾಗಿ, ಒಲಿದು—ಅವರಿಗೆ ವಶವಾಗಿ, ತನ್ನವರ—ಇಂಥಾ ತನ್ನ ಭಕ್ತರ ಮನಕ್ಕೆ, ಹೊಳೆವುತ—ಹೃದಯಾಕಾಶದಲ್ಲಿ ಹೊಳೆಯುತ, ಗುಣರೂಪಕ್ರಿಯೆಗಳ—ಅವರವರ ಯೋಗ್ಯತಾನುಸಾರ ಶ್ರೀ ಪರಮಾತ್ಮ ತನ್ನ ಗುಣವೇನು, ರೂಪವೇನು, ಕ್ರಿಯೆಗಳೇನು, ತೋರುವನು—ತೋರಿಸೋವನಾಗತಾನೆ ಎಂತ ತಾತ್ಪರ್ಯ.

**ಆವ ದೇಹವ ಕೊಡಲಿ ಹರಿ ಮು ।**
**ತ್ತಾವಲೋಕದಲಿಡಲಿ ತಾ ಮು ।**
**ತ್ತಾವ ದೇಶದೊಳಿಡಲಿ ಆವಾವ ಸ್ಥಿತಿಗಳು ಬರಲಿ ॥**
**ಈ ವಿಧದಿ ಜಡಚೇತನದೊಳು ಪ ।**
**ರಾವರೇಶನ ರೂಪಗುಣಗಳ ।**
**ಭಾವಿಸುತ ಸುಜ್ಞಾನ ಭಕುತಿಯ ಬೇಡು ಕೊಂಡಾಡು ॥ ೨೨ ॥**

ಶ್ರೀ ಪರಮಾತ್ಮನ ಜ್ಞಾನ ಭಕುತಿಗಳ ಬೇಡು ಎಂತ ಹೇಳತಾರೆ.

ಹರಿ – ಬಿಂಬರೂಪಿಯಾದ ಶ್ರೀ ಲಕ್ಷ್ಮೀನಾರಾಯಣದೇವರು, ಆವ ದೇಹವ ಕೊಡಲಿ–ಭೂಮಿಯಲ್ಲಿ ದಾವ ದೇಹದಿಂದ ಉತ್ಪತ್ತಿ ಮಾಡಲಿ, ಮತ್ತಾವಲೋಕದಲಿಡಲಿ– ಪುನಶ್ಚ ಮರಣ ಐದಿಸಿ ಊರ್ಧ್ವ ಅಧೋ ನರಕ ಇದರೊಳಗೆ ದಾವಲೋಕದಲ್ಲಿಡಲಿ, ತಾ ಮತ್ತಾವ ದೇಶದೊಳಿಡಲಿ–ಮತ್ತು ಶ್ರೀಹರಿ ಎಂಥಾ ಪ್ರದೇಶದಲ್ಲಾದರೂ ಇಡಲಿ, ಆವಾವ ಸ್ಥಿತಿಗಳು ಬರಲಿ–ಸುಖದುಃಖಾತ್ಮಕ ಅನೇಕ ವಿಧವಾದ ದಾವ ದಾವ ಅವಸ್ಥೆಗಳು ಪ್ರಾಪ್ತ ವಾದರೂ, ಈ ವಿಧದಿ– ಶ್ರೀ ಪರಮಾತ್ಮನ್ನ ಮರಿಯದೆ ಈ ಪೂರ್ವೋಕ್ತ ವಿಧದಿಂದ, ಜಡಚೇತನದೊಳು–ಸ್ಥಾವರಗಳಲ್ಲಿ, ಸ್ಥಾವರಜಂಗಮ ಜೀವರುಗಳಲ್ಲಿ, ಪರಾವರೇಶನ– ಪರಾ–ಜೀವೋತ್ತಮರಾದ ವಾಯುದೇವರಿಗೆ, ವರಾ–ಉತ್ತಮರಾದ ರಮಾದೇವೇರು, ಈಶನ–ಇವರಿಗೆ ಈಶನಾದ ಪರಮಾತ್ಮನ, ರೂಪಗುಣಗಳ–ರೂಪಗಳನ್ನೇನು, ಗುಣ ಗಳನ್ನೇನು, ಭಾವಿಸುತ–ಜ್ಞಾನಾನುಸಂಧಾನದಿಂದ ತಿಳಿಯೋವನಾಗುತ, ಸುಜ್ಞಾನ ಭಕುತಿಯ–ಇನ್ನೂ ಆ ದೇವರ ನಿನ್ನ ವಿಷಯಕವಾದ ದಿವ್ಯಜ್ಞಾನವನ್ನೇನು, ಅಚಂಚಲ ವಾದ ಭಕ್ತಿಯನ್ನೇನು, ಬೇಡು ಕೊಂಡಾಡು – ಕೊಟ್ಟು ಸಂರಕ್ಷಣೆ ಮಾಡು ಎಂತ ಪ್ರಾರ್ಥನಾ ಮಾಡಿ, ಸದಾ ಆ ಪರಮಾತ್ಮನ್ನ ಸ್ಮರಣಮಾಡತಾ ಇರೋವನಾಗಬೇಕೆಂತ ತಾತ್ಪರ್ಯ. ತದ್ವ್ಯತಿರಿಕ್ತ ಅಹಿತ ಸುಖಗಳನ್ನು ಬೇಡಬ್ಯಾಡ ಎಂತಲೂ ತಾತ್ಪರ್ಯ.

**ಒಂದರೊಳಗೊಂದು ಬೆರೆದಿಹ ।**
**ಇಂದಿರೇಶನ ರೂಪಗಳ ಮನ ।**
**ಬಂದ ತೆರದಲಿ ಚಿಂತಿಸಿದಕನುಮಾನವಿನಿತಿಲ್ಲ ॥**
**ಸಿಂಧುರಾಜನೊಳಂಬರಾಲಯ ।**
**ಬಂಧಿಸಲು ಪ್ರತಿ ತಂತುಗಳೊಳುದ ।**
**ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದಿ ॥ ೨೩ ॥**

ಸರ್ವತ್ರ ಶ್ರೀ ಪರಮಾತ್ಮನ್ನ ಚಿಂತನ ಮಾಡಬೇಕೆಂದು ಹೇಳತಾರೆ.

ಒಂದರೊಳಗೆ–ಖಂಡಖಂಡಗಳಾಗಿ ಇರತಕ್ಕದ್ದು ಅನೇಕ ಅಧಿಷ್ಠಾನಗಳು. ಅದರಲ್ಲಿ ಒಂದು ಅಧಿಷ್ಠಾನದೊಳಗೆ ಒಂದು ಭಗವದ್ರೂಪದ ಮ್ಯಾರಿಗೆ ಅನೇಕ ಅಧಿಷ್ಠಾನಗಳೊಳಗೆ ಪ್ರತಿ ಅಧಿಷ್ಠಾನದಲ್ಲೂ, ಒಂದೊಂದು–ಒಂದೊಂದು ರೂಪದ ಮ್ಯಾರಿಗೆ, ಬೆರೆದಿಹ– ತುಂಬಿಕೊಂಡು ಇರತಕ್ಕ, ಇಂದಿರೇಶನ–ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ, ರೂಪಗಳ–ಒಂದೊಂದು ರೂಪದ ಮೇರೆಗೆ ಅನೇಕ ಅಧಿಷ್ಠಾನಗಳಲ್ಲಿ ಅನೇಕ ರೂಪಗಳ, ಮನ ಬಂದ ತೆರದಲಿ–ಮನಸ್ಸಿಗೆ ಎಷ್ಟು ಪರಿ ಎಂತ ಚಿಂತನಕ್ಕೆ ಸಾಧ್ಯವಾಗತದೋ ಅದೇ ರೀತಿ ಶ್ರೀ ಭಗವದ್ರೂಪಗಳ, ಚಿಂತಿಸು–ಚಿಂತನ ಮಾಡೋವನಾಗು. ಒಂದೊಂದರಲಿ– ಒಂದೊಂದು ರೂಪ ಎಂಬುದು ಬಿಂಬ ಒಂದು ಪ್ರತಿಬಿಂಬ ಒಂದು ಎಂತ ತಾತ್ಪರ್ಯ. ಇದಕನುಮಾನವಿನಿತಿಲ್ಲ–ಈ ವಿಷಯದಲ್ಲಿ ಕಿಂಚಿತ್ತಾದರೂ ಅನುಮಾನಪಡುವ ಕೆಲಸವಿಲ್ಲ.

ದೇವತೆಗಳಿಗೆ ವ್ಯಾಪ್ತರೂಪದರ್ಶನ ವ್ಯಾಪ್ತ್ಯೋಪಾಸನ ಎರಡೂ ಉಂಟು. ಪ್ರತೀಕಾಲಂಬನರಿಗೆ ವ್ಯಾಪ್ತದರ್ಶನ ಇಲ್ಲ. ಅನುಸಂಧಾನದಿಂದ ವ್ಯಾಪ್ತ್ಯೋಪಾಸನಾ ಮಾತ್ರ ಉಂಟು. ಅದಕ್ಕೆ ದೃಷ್ಟಾಂತ ಹೇಳತಾರೆ. ಹ್ಯಾಂಗೆಂದರೆ, ಸಿಂಧುರಾಜನೊಳು–ಸಮುದ್ರರಾಜನೊಳು, ಅಂಬರಾಲಯ–ವಸ್ತ್ರದಿಂದ ಮನಿ ಆಕಾರವಾಗಿ, ಬಂಧಿಸಲು–ಕಟ್ಟಿದರೆ, ಮತ್ತು ಆಲಯ–ಜಂಬೂದ್ವೀಪವೇ ಮನಿಯಾಗಿ ಉಳ್ಳ, ಸಿಂಧುರಾಜನೊಳು–ಸಮುದ್ರರಾಜನೊಳು, ವಿದ್ಯಮಾನವಾದ, ಅಂಬರ–ಉದಕವನ್ನ ವಸ್ತ್ರದಿಂದ ನಿಲ್ಲುವಂತೆ, ಬಂಧಿಸಲು–ಗಂಟುಕಟ್ಟಿದರೆ, ಪ್ರತಿತಂತುಗಳೊಳು–ವಸ್ತುಗತ ಪ್ರತಿ ದಾರಗಳಲ್ಲಿ, ಉದಕಬಿಂದು–ಉದಕಬಿಂದುಗಳು, ವ್ಯಾಪಿಸಿದಂತೆ–ವ್ಯಾಪಿಸಿ ಇರೋಪಾದಿಯಲ್ಲಿ, ಬಿಂದುಶಬ್ದ ಇಲ್ಲಿ ಸಮನ್ವಯ ಏನೆಂದರೆ, ಸಮುದ್ರೋದಕ ಅಖಂಡವು, ಬಿಂದುಗಳು ಖಂಡಗಳು. ತದ್ವತ್ ಅಖಂಡರೂಪನಾಗಿ, ಸರ್ವತ್ರ ವ್ಯಾಪ್ತ ಹ್ಯಾಂಗೋ ಹಾಂಗೆ ಅಧಿಷ್ಠಾನಭೇದದಿಂದ ಖಂಡರೂಪದಿಂದ ವ್ಯಾಪ್ತ ಎಂತ ತಾತ್ಪರ್ಯ. ಪ್ರತಿ ದಾರಗಳಲ್ಲಿ ಖಂಡಖಂಡವಾಗಿ ಉದಕ ವ್ಯಾಪಿಸಿದಂತೆ, ಚರಾಚರದಿ–ಚರಾಚರದಲ್ಲಿ ಅಖಂಡರೂಪದಿಂದ ವ್ಯಾಪ್ತನಾದ ಶ್ರೀ ಪರಮಾತ್ಮ ಖಂಡರೂಪದಿಂದ ಬಿಂಬ ಒಂದೊಂದು ಪ್ರತಿಬಿಂಬದಲಿ ಒಂದೊಂದು ಬಿಂಬರೂಪದಿಂದ ಶ್ರೀ ಪರಮಾತ್ಮ, ಇರುತಿಪ್ಪನು–ಇರೋವನಾಗಿದ್ದಾನೆ. ಇಂಥಾ ರೂಪಗಳನ್ನು ಮನಸ್ಸಿಗೆ ಸಾಧ್ಯವಾದವರಿಗೆ ಚಿಂತಿಸಬಹುದೆಂದು ತಾತ್ಪರ್ಯ.

**ಒಂದು ರೂಪದೊಳೊಂದವಯವದೊ ।**
**ಳೊಂದು ರೋಮದೊಳೊಂದು ದೇಶದಿ ।**
**ಪೊಂದಿ ಇಪ್ಪಬುಜಾಂಡನಂತಾನಂತ ಕೋಟಿಗಳು ॥**
**ಹಿಂದೆ ಮಾರ್ಕಂಡೇಯ ಕಾಣನೆ ।**
**ಒಂದು ರೂಪದಿ ಸೃಷ್ಟಿ ಪ್ರಳಯವ ।**
**ಇಂದಿರೇಶನೊಳೇನಿದಚ್ಚರಿ ಅಪ್ರಮೇಯ ಸದಾ ॥ ೨೪ ॥**

ಶ್ರೀ ಪರಮಾತ್ಮನಲ್ಲಿ ಅನಂತ ಬ್ರಹ್ಮಾಂಡಗಳು ಇರತಕ್ಕ ಕ್ರಮವನ್ನ ಹೇಳತಾರೆ.

ಒಂದು ರೂಪದೊಳು – ಶ್ರೀ ಪರಮಾತ್ಮನ ಒಂದು ರೂಪದಲ್ಲಿರುವ, ಒಂದು ಅವಯವ–ಕರಚರಣಾದಿ ಅವಯವಗಳೊಳಗೆ, ದೊಳೊಂದು–ಇದರೊಳಗಿರುವ ಅನೇಕ ರೋಮಗಳಿಗೆ ಒಂದಾದ, ರೋಮದೊಳೊಂದು–ರೋಮದೊಳಗೆ ವಿದ್ಯಮಾನವಾದ, ವಿಸ್ತಾರವಾದ ಪ್ರದೇಶದಲಿ, ದೇಶದಿ ಅದರಲ್ಲಿ–ಏಕದೇಶ ಪ್ರದೇಶದಲ್ಲಿ, ಅಬುಜಾಂಡ–ಈ ಬ್ರಹ್ಮಾಂಡದೋಪಾದಿಯಲಿ ಬ್ರಹ್ಮಾಂಡಗಳು, ಅನಂತಾನಂತ ಕೋಟಿಗಳು–ಅನಂತಾನಂತ ಕೋಟಿಗಳು, ಹಾಂಗೆ ಅಂತ್ಯರಹಿತಗಳಾದವುಗಳಾಗಿ, ಪೊಂದಿ ಇಪ್ಪವು–ಹೊಂದಿಕೊಂಡು ಇರೋದಾಗಿ ಅದೆ. ಈ ಪ್ರಕಾರ ಅದೆ ಎಂಬುದಕ್ಕೆ ದೃಷ್ಟಾಂತವೇನೆಂದರೆ, ಒಂದು ರೂಪದಿ–ಶ್ರೀ ಪರಮಾತ್ಮನ ಒಂದು ರೂಪದಲ್ಲೇ, ಹಿಂದೆ–ಪೂರ್ವದಲ್ಲಿ, ಸೃಷ್ಟಿ ಪ್ರಳಯವ–ಸೃಷ್ಟಿಯೇನು, ಸ್ಥಿತಿಯೇನು, ಪ್ರಳಯವೇನು, ಮಾರ್ಕಂಡೇಯ–ಇದು ಮೂರು

ಮಾರ್ಕಂಡೇಯ ಋಷಿ, ಕಾಣಿನೆ–ಕಾಣಲಿಲ್ಲವೇ ಎಂದರೆ ನೋಡೋವನಾಗಿದ್ದಾನೆ. ಹ್ಯಾಂಗೆಂದರೆ ವಿದ್ಯಮಾನ ಬ್ರಹ್ಮಾಂಡ ಸ್ಥಿತಿಯಾಗಿ ಇರೋ ಕಾಲದಲ್ಲೇ ಪ್ರಳಯವನ್ನ ಕಾಣೋವನಾಗಿ ಆ ಪ್ರಳಯೋದಕದಲ್ಲಿ ತಾನು ಸಂಚರಿಸುತ ವಟಪತ್ರಶಾಯಿ ನಾರಾಯಣ ದೇವರನ್ನು ಕಂಡು ನಾಸಿಕಾ ದ್ವಾರದಿಂದ ಪರಮಾತ್ಮಶ್ವಾಸದಿಂದ ಆಕರ್ಷಿತನಾಗಿ ಪರ ಮಾತ್ಮನ ಉದರ ಪ್ರವೇಶನಾಗಿ ಅಲ್ಲಿ ಸ್ಥಿತಿ ಕಂಡು ಪುನಶ್ಚ ಶ್ವಾಸದಿಂದ ನಾಸಿಕಾ ಮಾರ್ಗ ವಾಗಿ ಹೊರಗೆ ಬಂದು ಪ್ರಳಯ ಕಂಡ ನಂತರ ಆ ವಟಪತ್ರಶಾಯಿಯಿಂದ ಆದ ಸೃಷ್ಟಿಯ ಕಾಣೋವನಾಗಿದ್ದಾನೆ. ಆದ್ದರಿಂದ ಶ್ರೀ ಪರಮಾತ್ಮನ ಒಂದೊಂದು ರೋಮ ದಲ್ಲಿ ಅನಂತಾನಂತ ಬ್ರಹ್ಮಾಂಡಗಳು ಇರೋದಾಗಿ ಅದೆ. ಆದಕಡಿಯಿಂದ ಶ್ರೀ ಪರ ಮಾತ್ಮ, ಸದಾ–ಅನಾದ್ಯನಂತ ಕಾಲಕ್ಕೂ, ಅಪ್ರಮೇಯ–ಅಪರಿಚ್ಛಿನ್ನವಾದ ಅಂತ ರಹಿತವಾದ ಮಹಿಮೋಪೇತನಾದ್ದರಿಂದಲೇ ರಮಾ ಬ್ರಹ್ಮಾದಿಗಳಿಂದ ಪರಮಾತ್ಮನ ರೂಪ ಗಳ ತದ್ಗತ ಬ್ರಹ್ಮಾಂಡಗಳ ಸಾಕಲ್ಯೇನ ತಿಳಕೊಂಬೋದಕ್ಕೆ ಅಶಕ್ಯನಾದವ. ಇಂಥಾ ಮಹಿಮಾವುಳ್ಳ, ಇಂದಿರೇಶನೊಳು–ಲಕ್ಷ್ಮೀಪತಿಯಾದ ಶ್ರೀ ನಾರಾಯಣ ದೇವರಲ್ಲಿ ಈ ಪ್ರಕಾರ ಇರೋಣ ಎಂಬುದು, ಇದು ಅಚ್ಚರಿಯೇನು–ಇದು ಏನು ಆಶ್ಚರ್ಯ ಅಂದರೆ ಆಶ್ಚರ್ಯವೇನೂ ಇಲ್ಲ ಎಂತ ತಾತ್ಪರ್ಯ.

**ಒಂದನಂತಾನಂತ ರೂಪಗ ।**
**ಳೊಂದು ರೂಪದೊಳಿಹವು ಲೋಕದೊ ।**
**ಳೊಂದೆ ರೂಪದಿ ಸೃಷ್ಟಿ ಸ್ಥಿತಿ ಮೊದಲಾದ ವ್ಯಾಪಾರ ॥**
**ಒಂದೆ ಕಾಲದಿ ಮಾಡಿ ತಿಳಿಸದೆ ।**
**ಸಂದಣಿಸಿಕೊಂಡಿಪ್ಪ ಜಗದೊಳು ।**
**ನಂದನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ ॥ ೨೫ ॥**

ಅನಂತಾನಂತ ಬ್ರಹ್ಮಾಂಡಗಳು ಸೃಷ್ಟಿ, ಸ್ಥಿತಿ, ಲಯ ಕ್ರಮವೂ ಅನಂತಾನಂತ ಬ್ರಹ್ಮಾಂಡಗಳು ಸತ್ಯ ಎಂತಲೂ ಹೇಳತಾರೆ.

ಒಂದು–ಶ್ರೀ ಪರಮಾತ್ಮನ ಒಂದು ರೂಪ ಎಂಬುದು, ಅನಂತಾನಂತ ರೂಪಗಳು– ಅನಂತಾನಂತ ರೂಪಗಳಿಂದ ಯುಕ್ತವಾಗಿ ಅದೆ. (ನವನಾರೀ ಕುಂಜರವತ್) (ಮುಂದಿನ ಶ್ಲೋಕದಲ್ಲಿ ಹೇಳತಾರೆ), ಒಂದು ರೂಪದಿ–ಅನಂತಾನಂತ ಬ್ರಹ್ಮಾಂಡಗಳೇನು, ಲೋಕ ದೊಳು–ಒಂದೊಂದು ಬ್ರಹ್ಮಾಂಡದಲ್ಲಿ, ವೈಕುಂಠಾದಿ ಅಂಧಂತಮಸ್ಸು ಅಂತವಾಗಿ ಹದಿ ನಾರು ಲೋಕಗಳು, ಅದನನುಸರಿಸಿದ, ಬ್ರಹ್ಮಾದಿ ತೃಣಾಂತ ವಿವಿಧ ಜೀವರು, ಇನ್ನೂ ಅನೇಕ ಜಡಗಳು, ಇಹವು–ಇರೋದಾಗಿ ಅವೆ. ಒಂದು ರೂಪದಿ–ಒಂದು ರೂಪದಲಿ, ವಿದ್ಯಮಾನವಾದ, ಒಂದೆ ಕಾಲದಿ–ಏಕಕಾಲಾವಚ್ಛೇದೇನ ಭಿನ್ನ ಭಿನ್ನಗಳಾದ ಅನಂತಾ ನಂತ ಬ್ರಹ್ಮಾಂಡಗಳ, ಧರಿಸಿದ್ದಾನೆ ಎಂತ ಅರ್ಥ. ಸೃಷ್ಟಿ–ಸ್ಥಿತಿ–ಮೊದಲಾದ ವ್ಯಾಪಾರ– ಆಯಾ ಬ್ರಹ್ಮಾಂಡಗಳಲ್ಲಿ ಅಲ್ಲಲ್ಲಿ ಇರತಕ್ಕ ರೂಪಗಳಿಂದ ಜೀವರ ಸೃಷ್ಟಿಯೇನು,

ಪಾಲನ, ಸಂಹಾರ ಮೊದಲಾದ ವ್ಯಾಪಾರ ಆಯಾ ಜೀವರಿಗೆ ಅಲ್ಲಲ್ಲೀ ಮೋಕ್ಷ, ಇನ್ನೂ ಅವತಾರರೂಪಗಳಿಂದ ದುಷ್ಟರಾಕ್ಷಸರ ಸಂಹಾರ ಮೊದಲಾದ ಅನೇಕ ಕಾರ್ಯಗಳಿಂದ, ಮಾಡಿ–ಅಲ್ಲಲ್ಲಿ ಇದ್ದವನಾಗಿ ಮಾಡಿ, ತಿಳಿಸದೆ–ಒಂದು ಬ್ರಹ್ಮಾಂಡದಲ್ಲಿ ತಾನು ಮಾಡತಕ್ಕ ವ್ಯಾಪಾರ ಮತ್ತೊಂದು ಬ್ರಹ್ಮಾಂಡಗತ ಬ್ರಹ್ಮಾದಿ ಜೀವರಿಗೆ ತಿಳಿಸದೆ, ಜಗದೊಳು–ಆಯಾ ಬ್ರಹ್ಮಾಂಡಗಳಲ್ಲಿ ತದ್ಗತ ಲೋಕಗಳಲ್ಲಿ, ತದ್ಗತ ಪ್ರಾಣಿಗಳಲ್ಲಿ, ಜಡ ಗಳಲ್ಲಿ, ಜಡಜೀವಗಳಲ್ಲಿ, ಸಂದಣಿಸಿಕೊಂಡಿಪ್ಪ–ಘಂದಾಗಿ ಪೂರ್ಣನಾಗಿ ವ್ಯಾಪ್ತನಾಗಿ ಇರೋವನಾಗಿದ್ದಾನೆ. ಈ ಪ್ರಕಾರ ಇರೋದಾಗಿ ಅವೆ ಎಂಬೋದಕ್ಕೆ ದೃಷ್ಟಾಂತ ವೇನೆಂದರೆ, ನಂದನಂದನ–ನಂದಗೋಪಗೆ ಮಗನಾದ ಶ್ರೀಕೃಷ್ಣ ದೇವರು, ರಣದೊಳು– ಭಾರತಯುದ್ಧರಂಗದೊಳಗೆ, ಇಂದ್ರಾತ್ಮಜಗೆ–ಅರ್ಜುನಗೆ, ತೋರಿಸನೆ – ತನ್ನ ವಿಶ್ವ ರೂಪವ ತೋರಿಸನೆ.

**ವಿಶೇಷಾರ್ಥ :**—ಅನಂತಾನಂತ ರೂಪಗಳೂನೂ ಒಂದೊಂದು ಅನಂತಾನಂತ ರೂಪಗಳಿಂದ ನವನಾರೀಕುಂಜರವತ್ ಇರೋದಾಗಿ ಅವೆ. ಈ ಪ್ರಕಾರ ಆದ್ಯಂತ ಶೂನ್ಯಗಳಾಗಿ ಅದೆ. ಪರಮಾತ್ಮನ ಮಹಿಮಾ ಅಪರಿಚ್ಛಿನ್ನಗಳು ಹ್ಯಾಂಗೋ, ರೂಪ ಗುಣಗಳೂ ಅಪರಿಚ್ಛಿನ್ನಗಳೇ. ರೋಮಾದಿ ಸರ್ವ ಅವಯವಗಳು ಇದೇ ಪ್ರಕಾರವದೆ. ರೋಮಾದಿ ಸರ್ವ ಅವಯವಗಳಲ್ಲಿ ಒಂದೊಂದರಲಿ ಕರಚರಣಾದಿ ಸರ್ವ ಅವಯವಗಳೂ ಇರೋದಾಗಿ ಸಾಕಾರಗಳಾಗಿ ಅದೆ. "ಸರ್ವತಃ ಪಾಣಿಪಾದಾಭ್ಯಾಂ" ಎಂಬ ಪ್ರಮಾಣವೂ, ರೋಮವೇನು, ರೋಮಕೂಪಗಳೇನು, ಸರ್ವವೂ ಪೂರ್ಣಮಹಿಮೋ ಪೇತವಾದದ್ದು, ಅಭಿನ್ನಗಳಾದದ್ದು. "ರೋಮಃ ಪೂರ್ಣೋ ರೋಮಕೂಪಶ್ಚ ಪೂರ್ಣಃ||" ಎಂತ ಪ್ರಮಾಣವೂ ಈ ಪ್ರಕಾರ ಅಖಂಡರೂಪದಿಂದ ಅಪರಿಚ್ಛಿನ್ನವ್ಯಾಪ್ತನಾಗಿ ಮತ್ತು ಖಂಡರೂಪದಿಂದ ಖಂಡಖಂಡಗಳಾದ ಅಧಿಷ್ಠಾನಗಳಲ್ಲಿ ವ್ಯಾಪ್ತನಾಗಿದ್ದಾನೆ. ಇಂಥಾ ಅನಂತಾನಂತ ರೂಪವುಳ್ಳವನು ಶ್ರೀ ಪರಮಾತ್ಮನು ಎಂತ ತಿಳಿಯಬೇಕು.

ತನ್ನ ವಿಶ್ವರೂಪದಲ್ಲಿ ಭಾರತಯುದ್ಧವನ್ನು ಹ್ಯಾಂಗೆ ಯಶೋದಾದೇವೇರಿಗೆ ತನ್ನ ಮುಖದಲ್ಲಿ ನವಾವರಣ ಸಹಿತ ಬ್ರಹ್ಮಾಂಡವ ತೋರಿಸೋವನಾಗಿದ್ದಾನೆ. ವಿದ್ಯಮಾನ ಬ್ರಹ್ಮಾಂಡ ಸ್ಥಿರವಾಗಿ ಇರಲಾಗಿ ತದನ್ಯಗಳ ತೋರಿಸಿದ್ದಾನೆ. ಆದ್ದರಿಂದ ಅನಂತಾನಂತ ಬ್ರಹ್ಮಾಂಡಗಳು ಶ್ರೀ ಪರಮಾತ್ಮ ಧರಿಸಿದ್ದಾನೆ. ಎಂಬುವುದು ಸತ್ಯ. ಅತ ಏವ ಶ್ರೀ ಪರಮಾತ್ಮ ಅಪ್ರಮೇಯ ಎಂತ ತಾತ್ಪರ್ಯ. ಪ್ರಮಾಣ :—

"ಏಕಸ್ಮಿನ್ ಪರಕಾಲೇತು ಏಕಮಂಡಂ ಜಗತ್ ಪ್ರಭುಃ| ನ ತತೋ ಮೇಜಾಂಡ ಬಹುಳಂ ಶ್ರಷ್ಟುಮಿಚ್ಛತಿ ಕೇಶವಃ||" ಎಂಬ ಪ್ರಮಾಣಾನುಸಾರ ಅನಂತ ಬ್ರಹ್ಮಾಂಡಗಳು ಏಕಕಾಲಾವಚ್ಛೇದೇನ ಸೃಷ್ಟಿಮಾಡೋದಿಲ್ಲ ಎಂತ ತೋರತದೆ. ತಾತ್ಪರ್ಯವೇನೆಂದರೆ ಪೂರ್ವದಲ್ಲಿ ಬ್ರಹ್ಮಾಂಡ ಸೃಷ್ಟಿಮಾಡಿದ ಸ್ಥಳದಲ್ಲಿ, ಪುನಶ್ಚ ಅದೇ ಸ್ಥಳದಲ್ಲಿ ಪೂರ್ವದ

ಮ್ಯಾರಿಗೆ ಒಂದು ಬ್ರಹ್ಮಾಂಡ ಸೃಷ್ಟಿಮಾಡತಾನೆ, ಹೊರತು ಅಲ್ಲಿ ಅನಂತಬ್ರಹ್ಮಾಂಡಗಳು ಸೃಷ್ಟಿಮಾಡೋದಿಲ್ಲ ಎಂತ ತಾತ್ಪರ್ಯ.

"ವಾಮಪಾದಾಂಗುಷ್ಠನಖಭಿನ್ನಬ್ರಹ್ಮಾಂಡಮಸ್ತಕೇ । ಶ್ರೀ ವಾಮನಸ್ಯ ವಿವರೇ ಬ್ರಹ್ಮದ್ರವಸಮಾಕುಲೇ ॥ ೧೦ ॥ ಜಲಯಾನೇನ ಮಾರ್ಗೇಣ ಬಹಿಸ್ತೇ ನಿರ್ಯಯುಃ ಸುರಾಃ । ಕಲಿಂಗಬಿಂಬವಚ್ಛೇದಂ ಬ್ರಹ್ಮಾಂಡಂ ದದೃಶುಸ್ತ್ವಧಃ ॥ ೧೧ ॥ ಇಂದ್ರಾಯಣ-ಫಲಾನೀವ ಲುಠಂತ್ಯನ್ಯಾನಿ ವೈ ಜಲೇ । ವಿಲೋಕ್ಯ ವಿಸ್ಮಿತಾಃ ಸರ್ವೇ ಬಭೂವುಶ್ಚಕಿತಾ ಇವ ॥ ೧೨ ॥ ಕಸ್ಯಾಂಡಾಧಿಪಾ ದೇವಾ ಯೂಯಂ ಸರ್ವೇ ಸಮಾಗತಾಃ । ವದತಾಶು ಗಮಿಷ್ಯಾಮಿ ತಸ್ಮೈ ಭಗವತೇ ಹ್ಯಹಮ್ ॥ ೨೪ ॥ ದೇವಾ ಊಚುಃ ॥ ಅಹೋ ಅಂಡಾನ್ಯತಾನ್ಯಾನಿ ನಾಸ್ಮಾಭಿಃ ದರ್ಶಿತಾನಿ ಚ । ಏಕಮಂಡಂ ಪ್ರಜಾನೀಮೋಽಥೋಽ-ಪರಂ ನಾಸ್ತಿ ನಃ ಶುಭೇ ॥ ೨೫ ॥ ಶ್ರೀ ಚಂದ್ರಾನನೋವಾಚ – ಬ್ರಹ್ಮದೇವ ಲುಠಂತೀಹ ಕೋಟಿಶೋ ಹ್ಯಂಡರಾಶಯಃ । ತೇಷು ಯೂಯಂ ಯಥಾ ದೇವಾಸ್ತಥಾಂಡೇ ಅಂಡೇ ಪೃಥಕ್ ಪೃಥಕ್ ॥ ೨೬ ॥ ಬ್ರಹ್ಮಾಂಡಮೇಕಂ ಜಾನಂತಿ ಯತ್ರ ಜಾತಾಸ್ತಥಾ ಜನಾಃ । ಮಶಕಾಶ್ಚ ಯಥಾಂತಸ್ಥಾ ಔದುಂಬರಫಲೇಷು ವೈ ॥ ೨೮ ॥ ಶ್ರೀವಿಷ್ಣುರುವಾಚ – ಯಸ್ಮಿನ್ನಂಡೇ ಪ್ರಶ್ನಿಗರ್ಭೋಽವತಾರೋಭೂತ್ಸನಾತನಃ । ತ್ರಿವಿಕ್ರಮನಖೋದ್ಭಿನ್ನೇ ತಸ್ಮಿನ್ನಂಡೇ ಸ್ಥಿತಾ ವಯಮ್ ॥ ೩೦ ॥

ಬ್ರಹ್ಮವೈವರ್ತಪುರಾಣೇ ಅಷ್ಟಾದಶೋಧ್ಯಾಯಃ ॥ ೧೮ ॥ ಸೋಪಿ ಪುನರ್ನಮ-ಶ್ಚಕ್ರೇ ತಸ್ಮೈ ವಟುವರಾಯಚ । ಉವಾಚ ತೇ ವಚೋ ರೂಪಂ ದರ್ಶಯಸ್ವ ಸ್ವಕಂ ಮಮ ॥ ೪೧ ॥ ವಟುರೂಪಂ ತು ಸಂತ್ಯಕ್ತ್ವಾ ನಿಜರೂಪಂ ಪರಂ ದಧೇ । ಮಹಾ-ಮರಕತಪ್ರಖ್ಯಂ ಕೌಸ್ತುಭಾದ್ಯೈರ್ವಿಭೂಷಿತಂ ॥ ೪೨ ॥ ಋಷಿಸಂಘೈರ್ದೇವಸಂಘೈಃ ಸೇವ್ಯಮಾನಂ ಮುದಾ ಸದಾ । ನಖಪ್ರಭಾಂ ತಸ್ಯ ದಿವ್ಯಾಂ ಪ್ರಥಮಂ ಸವ್ಯಲೋಕಯತ್ ॥ ೪೩ ॥ ಅನೇಕಪ್ರೌಢಿಮಾದಿತ್ಯಪ್ರಭಾಸಂಖ್ಯಾಧಿಕಾಮಿವ । ತಸ್ಮಿನ್ನಖೇ ವಿಶ್ವಮಿದಂ ಸೋಽಪಶ್ಯಜ್ಜನಸಂವೃತಂ ॥ ೪೪ ॥ ಸತ್ಯಃ ಸ್ವರ್ಗೋ ಮಹರ್ಲೋಕಃ ಪಾತಾಳೋ ದ್ವೀಪಸಪ್ತಮಃ । ತತ್ರ ಕ್ಷೀರಾಬ್ಧಿಶೇಷೇ ತು ಶಯಾನಂ ಪುರುಷೋತ್ತಮಂ ॥ ೪೫ ॥ ಮಹಾಕಾಯಂ ಮಹಾದಿತ್ಯಂ ಉತ್ಪ್ರೇಕ್ಷ್ಯಂ ಸ ವ್ಯಲೋಕಯತ್ । ತಸ್ಯ ರೋಮೇಷು ಸರ್ವೇಷು ಭುವನಾನಿ ಬಹೂನಿ ಚ । ಸ ತಂ ನಖಂ ನಿವೇಶ್ಯಾದಾವಪಶ್ಯದಖಿಲಂ ಜಗತ್ । ಬ್ರಹ್ಮಾಂಡಾನಿ ಯಥಾ ವೃಕ್ಷಸಂಲಗ್ನಾನಿ ಫಲಾನಿ ಚ ॥ ೪೬ ॥ ಅಗಮತ್ತಸ್ಯ ಪುರುಷಸ್ಯ ನಿಕಟಂ ತಸ್ಯ ರೋಮಸು । ದೃಷ್ಟ್ವಾ ಲಗ್ನಾನ್ಯನೇಕಾನಿ ಬ್ರಹ್ಮಾಂಡಾನಿ ಬಹೂನಿ ಚ ॥ ೪೮ ॥ ಪ್ರವೇಷ್ಟುಮೈಚ್ಛದೇಕಸ್ಮಿನ್ ಬ್ರಹ್ಮಾಂಡೇ ಮಾರ್ಗಹೀನಕಂ । ಅಪಶ್ಯಮಾನಃ ಸ ಋಷಿಃ ಮಾರ್ಗಂತತ್‌ಪುರುಷಂ ಪದಂ ॥ ೪೯ ॥ ಅಸ್ತುವತ್ ಸ್ತುತಿಭಿಃ ಸ್ತುತ್ವಾ ಅಥ ಕೀಟಂ ದದರ್ಶ ಸಃ । ಬ್ರಹ್ಮಾಂಡೋಪರಿ ತಿಷ್ಠಂತಂ ಸ ತತ್ರ ಸ್ವಮುಖೇನ ತು ॥ ೫೦ ॥ ವಿದಾರ್ಯ ಚ ಖಿಲಂ ಚಕ್ರೇ ಮಹದ್ಗಮನಗೋಚರಂ । ವಿವೇಶ ತೇನ

ಮಾರ್ಗೇಣ ಸದ್ಬ್ರಹ್ಮಾಂಡಂ ಮಹತ್ತರಂ ||೫೧|| ಏವಂ ಬಹೂನಿ ನಿವಿಶನ್ ಬ್ರಹ್ಮಾಂಡಾನಿ ಮುಹುರ್ಮುನಿಃ | ಶ್ರಾಂತೋಽಭೂತ್ಸುಬಹಿರ್ಯಾತುಂ ಮಾರ್ಗಂ ನಾಪಶ್ಯದಾತುರಃ || ೫೨ || ನಿಮೀಲ್ಯ ಲೋಚನಂ ಸ್ವೀಯಂ ತದಾಜ್ಞಾ ಕುರುತೇ ಮುನೇ | ಪುನರುತ್ಥಾಯ ಪಶ್ಯಂತು ಯಥಾಸ್ಥಾನಂ ಸ ಪೂರ್ವವತ್ || ೫೩ || ಅಪಶ್ಯತ್ತತ್ರ ತಿಷ್ಠಂತಂ ಆತ್ಮಾನಂ ಪುರತಃ ಸ್ಥಿತಃ | ನಖಪ್ರಭಾಂ ಪ್ರಪಶ್ಯಾದೌ ಸೌಂತರ್ಘನಮಥಾಯಯೌ || ೫೪ || ಶ್ರುತಿಪ್ರಮಾಣ :—

"ಬ್ರಹ್ಮಾಣಂ ಗರುಡಂ ಶೇಷಂ ಇಂದ್ರಂ ಪ್ರಾಣಂ ರವಿಂ ಸುರಾನ್ | ಏಕೈಕಂ ತು ಹರಿರ್ಮುಕ್ತಂ ಪರಕಾಲೇ ಕರೋತ್ಯಜಃ || ತಥಾಪ್ಯಜಾಂಡಾನಂತಾನಾಂ ನಿಯಂತಾಽಜಾಂಡರೂಪವಾನ್| ಹರಿಸ್ತಾದೃಕ್ ಮಹಾರೂಪಾನಂತಾನಂತಾನಿ ವೈ ಹರೇಃ || ರೋಮಕೂಪೇಷ್ವನಂತೇಷು ಸಂವಸಂತೀತಿ ಹಿ ಶ್ರುತಿಃ || " ಇತ್ಯಾದಿ ಪ್ರಮಾಣಗಳು ಅನೇಕ ಅವೆ.

ಒಂದನಂತಾನಂತ ರೂಪಗಳು ಎಂದರೆ ಒಂದೇ ರೂಪ ಅನಂತಾನಂತ ರೂಪಗಳಿಂದ ಯುಕ್ತವಾಗಿದೆ. ನವನಾರೀಕುಂಜರವತ್. ಆದ್ದರಿಂದ ಪರಮಾತ್ಮನ ಒಂದು ರೂಪವೇ ಅನಂತಾನಂತರೂಪವು. ಒಂದು ರೂಪದಿ ಎಂದರೆ ನವನಾರೀಕುಂಜರ ಸದೃಶ ರೂಪಗಳು ಅನಂತಾನಂತ ರೂಪಗಳು. ಇಂಥಾ ಅನಂತಾನಂತ ರೂಪಗಳೊಳಗೆ ಒಂದು ರೂಪದಲಿ ಪೂರ್ವೋಕ್ತ ಪ್ರಕಾರ ಒಂದು ರೂಪದಿ ವಿದ್ಯಮಾನವಾದ ಒಂದು ಅವಯವಗತ ಒಂದು ರೋಮದಲಿ ವಿದ್ಯಮಾನವಾದ ಒಂದು ಪ್ರದೇಶದಲಿ ಇಹವು ಎಂದರೆ ಇರೋದಾಗಿ ಅದೆ. ದಾವದು ಎಂದರೆ ಪೂರ್ವೋಕ್ತ ಅನಂತಾನಂತ ಬ್ರಹ್ಮಾಂಡ ಕೋಟಿಗಳು. ಒಂಬತ್ತು ರೂಪಗಳಿಂದ ಯುಕ್ತವಾದ ಕುಂಜರಗತ ಖಂಡರೂಪಗಳಾದ ಒಂಬತ್ತು ರೂಪಗಳೊಳಗೆ ಒಂದು ರೂಪದಿ ಎಂತ ತಾತ್ಪರ್ಯ. ಏಕತ್ರ ನ್ಯಾಯ ಸರ್ವ ಖಂಡಾಖಂಡ ರೂಪಗಳಲ್ಲಿಯೂ ಸಹ ತಿಳಿಯಬೇಕು. ಈ ಅನಂತಾನಂತ ರೂಪಗಳು ದಾವದರಿಂದ ವಿಶಿಷ್ಟಗಳಾಗಿ ಅವೆ ಅಂದರೆ ಹದಿನಾಲ್ಕು ಲೋಕಗಳಿಂದ ವೈಕುಂಠ, ನರಕಾದಿ ಲೋಕಗಳಿಂದ, ಒಂದೇ ರೂಪದಿ ಎಂದರೆ ಏತಾದೃಶವಾದ ಅನೇಕ ಬ್ರಹ್ಮಾಂಡಗಳು ಒಂದೇ ಎಂದರೆ ಅನಂತಾನಂತ ಬ್ರಹ್ಮಾಂಡಗಳು ಒಂದೇ ಪ್ರಕಾರ ಪರಸ್ಪರ ಲಕ್ಷಣದಿಂದ ಭೇದ ಭೇದಗಳಾಗಿ ಇರದೆ ಸಮಾನ ಲಕ್ಷಣದಿಂದ ಒಂದು ಬ್ರಹ್ಮಾಂಡದಂತೆ ಅನಂತಾನಂತ ಬ್ರಹ್ಮಾಂಡಗಳು ಲೋಕಗಳಿಂದ ಸಹಿತವಾಗಿ ಇದೆ. ಏತಾದೃಶವಾದ ಅನಂತಾನಂತ ಬ್ರಹ್ಮಾಂಡಗಳು ಒಂದು ರೂಪದಲಿ ಇದ್ದು, ಸೃಷ್ಟಿ, ಸ್ಥಿತಿ, ಪಾಲನೆ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧಮೋಕ್ಷಾದಿ ವ್ಯಾಪಾರಗಳಿಂದ ಯುಕ್ತವಾಗಿ ಅದೆ. ಶ್ರೀ ಪರಮಾತ್ಮನಿಂದ ಸೃಷ್ಟ್ಯಾದಿ ವ್ಯಾಪಾರಗಳು ಮಾಡಲ್ಪಡತಾ ಇರೋದಾಗಿ ಅದೆ. ಅನಂತಾನಂತ ಕೋಟಿ ಬ್ರಹ್ಮಾಂಡಗಳಲ್ಲಿ ಸೃಷ್ಟಾದಿ ವ್ಯಾಪಾರಗಳು ಏಕ ಕಾಲದಲ್ಲಿ ಆಗತದಾ ಭಿನ್ನ ಕಾಲದಲ್ಲಿ ಆಗತದಾ ಎಂದರೆ ಸಮಸ್ತವೂ ಒಂದೇ ಕಾಲದಲ್ಲಿ ಮಾಡತಾನೆ. ಅನಂತಾನಂತ ಬ್ರಹ್ಮಾಂಡಗಳು ಭಿನ್ನ ಭಿನ್ನ ದೇಹದಲ್ಲಿ ಇರತಕ್ಕದ್ದು. ಕೆಲವು

ಬ್ರಹ್ಮಾಂಡಗಳು ಏಕಕಾಲಾವಚ್ಛೇದೇನ ಸೃಷ್ಟಿಯು ಆಗತಾ ಇರತದೆ. ಹಾಂಗೆ ಭಿನ್ನ ಭಿನ್ನ ದೇಶದಲ್ಲಿ ಇರತಕ್ಕ ಅನಂತಾನಂತ ಬ್ರಹ್ಮಾಂಡಗಳು ಒಂದೇ ಕಾಲದಲ್ಲಿ ಸ್ಥಿತಿಯು ಮಾಡತಾ ಇದ್ದಾನೆ. ದೇಶ ಮಾತ್ರ ಭೇದ. ಕಾಲ ಮಾತ್ರ ಒಂದೇ ಕಾಲವು. ಈ ಪ್ರಕಾರ ಒಂದೇ ಕಾಲದಿ ಎಂದರೆ ಏಕಕಾಲಾವಚ್ಛೇದದಲ್ಲಿ ಮಾಡೋವನಾಗಿ ಆ ಮಾಡ ತಕ್ಕ ಸೃಷ್ಟಿ, ಸ್ಥಿತಿ ಸಂಹಾರಗಳ ತಿಳಿಸದೆ ಏಕ ಬ್ರಹ್ಮಾಂಡಗತ ಜೀವರಿಗೆ ಅನಂತಾನಂತ ಬ್ರಹ್ಮಾಂಡಗಳು ಏಕ ಕಾಲದಲ್ಲಿ ಮಾಡತಕ್ಕ ಸೃಷ್ಟ್ಯಾದಿಗಳ ತಿಳಿಸದೆ ಮಾಡತಾನೆಂತ ತಾತ್ಪರ್ಯ. ಸಂದಣಿಸಿಕೊಂಡಿಪ್ಪ ಜಗದೊಳು, ಈ ಪ್ರಕಾರ ಅನಂತಕೋಟಿ ಬ್ರಹ್ಮಾಂಡ ಗಳ ಧರಿಸಿಕೊಂಡು ಸೃಷ್ಟ್ಯಾದಿಗಳು ಮಾಡುವ, ಸಂದು ಇಲ್ಲವೆ ಎಣೆ (ಜೋಡಿಸಿ ಕೊಂಡು) ಹಾಕಿಕೊಂಡು, ತುಂಬಿಕೊಂಡು ಇರೋವನಾಗಿ ಇದ್ದಾನೆ. ಇದಕ್ಕೆ ದೃಷ್ಟಾಂತ ಇಂದ್ರನ ಮಗನಾದಂತಾ ಅರ್ಜುನಗೆ, ನಂದಗೋಪನ ಮಗನಾದಂತಾ ಶ್ರೀ ಕೃಷ್ಣರೂಪಿ ಪರಮಾತ್ಮನಾದ ತಾನು ಭಾರತ ಯುದ್ಧದಲ್ಲಿ ವಿಶ್ವರೂಪವನ್ನು ತೋರಿಸಲಿಲ್ಲವೇ ? ಆಗ್ಗೆ ತೋರಿಸಿದ ಜಗತ್ತು ವರ್ತಮಾನ ಜಗತ್ತಿಗೆ ಭಿನ್ನವಲ್ಲವೇ ಏನು ? ಅಂದರೆ ಭಿನ್ನವೇ. ಆದ್ದರಿಂದ ಮಾರ್ಕಂಡೇಯನ ದೃಷ್ಟಾಂತದಿಂದಲೂ, ಅರ್ಜುನನ ದೃಷ್ಟಾಂತದಿಂದಲೂ, ಯಶೋದಾ ದೃಷ್ಟಾಂತದಿಂದಲೂ, ಅನಂತಾನಂತ ಬ್ರಹ್ಮಾಂಡಗಳು ಸತ್ಯವಾದದ್ದು. ಪೂರ್ವೋಕ್ತ ಪ್ರಕಾರ ದೇಶಭೇದದಿಂದ ಒಂದೇ ಕಾಲದಲ್ಲಿ ಸೃಷ್ಟಿ, ಸ್ಥಿತಿ, ಸಂಹಾರ ಮೂರೂನೂ ಆಗತಾ ಇವೆ ಅಂತ ತಿಳಿಯಬೇಕು. ಈ ಶ್ಲೋಕದ ತಾತ್ಪರ್ಯ ಇದು. ಈ ಶ್ಲೋಕವನ್ನು ಅನುಸರಿಸಿ ಸಂಧ್ಯಂತರದಲ್ಲಿ ಹೇಳಿದ ಶ್ಲೋಕಗಳು ಎರಡು (೧೪ನೇ ಸಂಧಿ ೨೪ನೇ ಶ್ಲೋಕ), ವರ್ತಮಾನ ಈ ಏಳನೇ ಸಂಧಿ ೨೪ನೇ ಶ್ಲೋಕದಲ್ಲಿ ವಿದಿತ ವಾದ ಅನಂತಾನಂತ ಕೋಟಿ ಬ್ರಹ್ಮಾಂಡಗಳ ಒಳಗೆ ಇರತಕ್ಕ ವಿದ್ಯಮಾನ ಅನ್ಯಸಂಧಿಗತ ೨೫ನೇ ಶ್ಲೋಕದಿಂದ ವಿಸ್ತಾರ ಮಾಡತೇವೆ. ಒಂದೊಂದು ಬ್ರಹ್ಮಾಂಡದಲ್ಲೀನೂ ವರ್ತ ಮಾನ ಬ್ರಹ್ಮಾಂಡ ಸದೃಶವಾಗಿ ಪೊಂದಿಕೊಂಡಿಹರು, ಆಶ್ರಯ ಮಾಡಿಕೊಂಡಿಹರು ಎಂದರೆ ಅಜ ಬ್ರಹ್ಮದೇವರು, ಭವ ರುದ್ರದೇವರು ಆದಿ ಮೊದಲಾದ ಸಮಸ್ತ ಜೀವರೂ ಎಂದರೆ ಸಮಸ್ತರಾದ ತ್ರಿವಿಧರಾದ ಜೀವರ ಗಣ ಎಂದರೆ ಸಮೂಹವು, ಭೂತಭವಿಷ್ಯ, ವರ್ತಮಾನ ಜೀವಗಣಗಳು ಎಂತ ತಾತ್ಪರ್ಯ.

ಇದಲ್ಲದೆ ಸಿಂಧು ಎಂದರೆ ಸಪ್ತಸಮುದ್ರಗಳು, ಸಪ್ತದ್ವೀಪಗಳು, ಮೇರುಮಂದಾರ ಎಂದರೆ ಮೇರು ಮಂದರವೇ ಮೊದಲಾದ ಪರ್ವತಗಳು. ಇದಲ್ಲದೆ ಬ್ರಹ್ಮದೇವರೇನು, ಪುರಂದರ ಇಂದ್ರನೇನು, ಮೊದಲಾದ ಸಮಸ್ತ ದೇವತೆಗಳು. ಆವಾಸಕ್ಕೆ ಯೋಗ್ಯ ಗಳಾದ ಲೋಕವೆಂದರೆ ಅತಳಾದಿ ಊರ್ಧ್ವ ಪರಿಯಂತ ಹದಿನಾಲ್ಕು ಲೋಕಗಳೇನು, ಪರಾಲಯ ಅಂದರೆ ಪರಮಾತ್ಮನ ಆಲಯಗಳಾದ ಶ್ವೇತದ್ವೀಪ, ಅನಂತಾಸನ ಮತ್ತು ವೈಕುಂಠ ಎಂಬುದು ಮೂರು ಆಲಯಗಳು. ಎಲ್ಲಾನೂ ಈ ಪ್ರಕಾರ ಅನಂತಾನಂತಗಳಾದ ಯಾವತ್ತು ಬ್ರಹ್ಮಾಂಡಗಳಲ್ಲಿ ಇರೋದಾಗಿ ಅದೆ. ಈ ಪ್ರಕಾರ ಇದರನ್ನ ಅಂಗೀಕರಿಸಿದ

ಮ್ಯಾಲೆ ಇದರನ್ನ ಅನುಸರಿಸಿದ್ದೇ ಸೃಷ್ಟ್ಯಾದಿ ವ್ಯಾಪಾರಗಳು. ಆದ್ದರಿಂದ ಅಲ್ಲಲ್ಲಿ ಪ್ರತ್ಯೇಕ ಪ್ರತ್ಯೇಕ ಆಗತಾ ಇರುತ್ತದೆ ಎಂಬುದು ಅರ್ಥಾತ್ ಸಿದ್ಧವೇ ಸರಿ. ಅದರಮ್ಯಾಲೆ ಕಂಠೋಕ್ತಿಯಾಗಿ ಜೀವರಿಗೆ ತಿಳಿಸದಲೆ ಮಾಡತಾನೆ ಎಂತ ಹೇಳತಾರೆ. ಕಕ್ಷ ತಾರತಮ್ಯ ಸಂಧಿ ಪ್ರಮಾಣ :– "ರೋಮಕೂಪಗಳೊಳಗೆ ಪೃಥಕ್ ಪೃಥುಕಾ ಮಹಾಪುರುಷನ ಸುಮೂರ್ತಿಯ ತಾಮರಸಜಾಂಡಗಳ ತದ್ಗತ ವಿಶ್ವರೂಪಗಳ, ಶ್ರೀಮಹಿಳೆ ರೂಪಗಳ ಗುಣ ಗಳ ಸೀಮೆಗಾಣದೆ ಯೋಚಿಸುತ ಮನ | ಸ್ವಾಮಿ ಮಹಿಮೆಯು ಎಂತುಂಟೆದಡಿಗಡಿಗೆ ಬೆರಗಾದೆ || " ಈ ಪ್ರಮಾಣವಾದರೋ ಅನಂತಾನಂತ ಬ್ರಹ್ಮಾಂಡಗಳು ಬ್ಯಾರೆ ಬ್ಯಾರೆ ಎಂತ ಹೇಳತದೆ. ರೋಮಕೂಪಗಳೊಳಗೆ ಎಂದರೆ ಪರಮಾತ್ಮನ ದೇಹಗತ ಅಭಿನ್ನವಾದ ರೋಮಕೂಪಗಳು ಅನೇಕಗಳು, ಅನೇಕ ರೋಮಗಳು ಆಶ್ರಯಮಾಡಿಕೊಂಡು ಇರುವ ಸ್ಥಾನಗತ ಕೂಪವೆಂದರೆ ಹಳ್ಳಗಳು ಅನೇಕ. ಈ ಕೂಪಗಳೊಳು ಪೃಥಕ್ ಪೃಥಕ್ ಎಂದರೆ ಪ್ರತ್ಯೇಕ ತಾಮರಸಜಾಂಡಗಳು ಎಂದರೆ ಬ್ರಹ್ಮಾಂಡಗಳು, ತದ್ಗತ ಆಯಾ ಬ್ರಹ್ಮಾಂಡಗತ ವಿಶ್ವರೂಪಗಳು ಎಂದರೆ ಬ್ರಹ್ಮಾಂಡಾಕಾರ ಪರಮಾತ್ಮನ ರೂಪಗಳು ಅಂತಗಾಣಲಿಲ್ಲ (ಕೊನೆಗಾಣಲಿಲ್ಲ). ರಮಾದೇವೇರು ಎಂತ ಹೇಳಿರೋಣದರಿಂದ ಅನಂ ತಾನಂತ ಬ್ರಹ್ಮಾಂಡಗಳು ಅನಂತಾನಂತವಾಗಿ ಒಂದೊಂದು ರೂಪದಲ್ಲಿ ಇರೋದಾಗಿ ಅದೆ, ಎಂತಲೇ ಪ್ರಮಾಣವೂ ಹೇಳಿರೋಣದಾಗಿ ಅದೆ. ಒಂದು ಜಾಂಡವೊಳೊಂದು, ರೂಪ ದೊಳೊಂದು, ಅವಯವದೊಳೊಂದು, ನಖದೊಳೊಂದು, ಗುಣಗಳ ಪಾರಗಾಣದೆ ರಮಾ ದೇವೇರು ಪರಮಾತ್ಮನ ಮಹಿಮೆ ಮಹಾ ಗುಂಭವಾದದ್ದು ಎಂದು ಅಂತಗಾಣದೆ ಆನಂದ ದಲ್ಲಿ ಮುಣಗೋವಳಾದಳು ಎಂತ ಕಕ್ಷಾತಾರತಮ್ಯಸಂಧಿ ಪ್ರಮಾಣ. ಅನಂತಾನಂತ ಬ್ರಹ್ಮಾಂಡಗಳೊಳಗೆ ಒಂದು ಬ್ರಹ್ಮಾಂಡಗತ ಪರಮಾತ್ಮನ ಮಹಿಮೆಯ ಅರಿಯಲಿಲ್ಲ ಎಂದ ಮ್ಯಾಲೆ ಅನಂತಾನಂತ ಬ್ರಹ್ಮಾಂಡಗಳು ಸತ್ಯವೇ ಆಯಿತು. ಅನಂತಾನಂತ ಬ್ರಹ್ಮಾಂಡಗಳಲ್ಲಿ ಅನಂತಾನಂತ ಬ್ರಹ್ಮರು, ಅನಂತಾನಂತ ಗರುಡರು, ಅನಂತಾನಂತ ಶೇಷರು ಇರೋವರಾಗಿದ್ದಾರೆ, ಅಷ್ಟೇ ಹೊರತು ಒಂದು ಬ್ರಹ್ಮಾಂಡದಲ್ಲೇ ಅನಂತಾನಂತ ಬ್ರಹ್ಮಾದಿಗಳು ಇಲ್ಲ. ಅಂದರೆ ಒಂದು ಬ್ರಹ್ಮಾಂಡದಲ್ಲೇ ಅನಂತ ಬ್ರಹ್ಮರ, ಗರುಡರ, ಶೇಷರ ಸೃಷ್ಟಿ ಮಾಡೋದಿಲ್ಲ. ಏಕಕಾಲದಲ್ಲಿ ಒಂದು ಬ್ರಹ್ಮಾಂಡದಲ್ಲಿ ಅನಂತಾನಂತ ಬ್ರಹ್ಮರಿಗೆ ಮೋಕ್ಷವೂ ಇಲ್ಲ. ಪರಮಾತ್ಮಗೆ ಅನಂತಾನಂತ ಬ್ರಹ್ಮಾಂಡಗಳು ಸೇರೋದ ರಲ್ಲೀನೂ ಅಲ್ಲಿಲ್ಲಿ ಸೃಷ್ಟ್ಯಾದಿ ವ್ಯಾಪಾರಗಳು ಮಾಡೋದರಲ್ಲೀನೂ ಸಾಮರ್ಥ್ಯ ಉಳ್ಳವ ನಾದ್ದರಿಂದ ಅನಂತಾನಂತ ಬ್ರಹ್ಮಾಂಡಗಳ ತದ್ಗತ ಜೀವರ ಒಂದೇ ಬ್ರಹ್ಮಾಂಡದಲ್ಲೇ ಮೋಕ್ಷ ಕೊಡತಾನೆಂತ ತಿಳಿಯಬಾರದು. ಒಂದು ಬ್ರಹ್ಮಾಂಡಕ್ಕೆ ಒಬ್ಬನೇ ಬ್ರಹ್ಮ, ಒಬ್ಬನೇ ಗರುಡ, ಒಬ್ಬನೇ ಶೇಷ, ಒಬ್ಬರಿಗೇ ಮೋಕ್ಷ ಎಂತ ತಿಳಿಯಬೇಕು. ಪ್ರಮಾಣ :–

"ಬ್ರಹ್ಮಾಣಂ ಗರುಡಂ ಶೇಷಂ ಇಂದ್ರಂ ಪ್ರಾಣಂ ರವಿಂ ಸುರಾನ್| ಏಕಮೇಕಂ ಹರಿ ರ್ಮುಕ್ತಂ ಪರಕಾಲೇ ಕರೋತ್ಯಜಃ || ತಥಾಪ್ಯಜಾಂಡಾನಂತಾನಾಂ ನಿಯಂತ್ರ್ಯಾಜಾಂಡ

ರೂಪವಾನ್ | ಹರಿಸ್ತಾದೃಕ್ ಮಹಾರೂಪಾನಂತಾನಂತಾನಿ ವೈ ಹರೇಃ | ರೋಮ ಕೂಪೇಷ್ವನಂತೇಷು ಸಂವಸಂತೀತಿ ಹಿ ಶ್ರುತಿಃ || "

ಅರ್ಥ :— ಬ್ರಹ್ಮಾಣಂ ಬ್ರಹ್ಮದೇವರನ್ನು, ಗರುಡಂ—ಗರುಡದೇವರನ್ನು, ಶೇಷಂ—ಶೇಷದೇವರನ್ನು, ಇಂದ್ರಂ—ಇಂದ್ರದೇವರನ್ನು, ಪ್ರಾಣಂ—ಪ್ರಾಣದೇವರನ್ನು ಎಂದರೆ ಆಹಂಕಾರಿಕ ಪ್ರಾಣ ಎಂತ ತಾತ್ಪರ್ಯ. ರವಿಂ—ಸೂರ್ಯನನ್ನು, ಸುರಾನ್—ತದ್ವ್ಯತಿರಿಕ್ತ ಯಾವತ್ತು ದೇವತೆಗಳನ್ನು, ಪ್ರಾಣಂ—ಸಮಸ್ತ ಪ್ರಾಣಿಗಳನ್ನೂ, ಏಕಮೇಕಂ ಹರಿರ್ಮುಕ್ತಂ—ಬ್ರಹ್ಮ ಪ್ರಳಯಕ್ಕೆ ಒಂದೊಂದು ಬ್ರಹ್ಮಾಂಡದಲ್ಲಿ ಒಬ್ಬೊಬ್ಬರನ್ನೇ, ಹರಿ—ಪರಮಾತ್ಮನು, ಮುಕ್ತಂ—ಎಂದರೆ ಲಿಂಗಭಂಗರೂಪವಾದ ಮುಕ್ತರನ್ನ ಮಾಡತಾನೆ. ಪರಕಾಲೇ ಎಂದರೆ ಸ್ಥಿತಿಕಾಲಕ್ಕೂ, ಅನ್ಯವಾದ ಕಾಲೇ—ಪ್ರಳಯಕಾಲದಲ್ಲಿ, ಕರೋತಿ—ಮಾಡತಾನೆ. ಮತ್ತು ದಾವದರನ್ನ ಸೃಷ್ಟಿಮಾಡತಾನೆ ಎಂದರೆ ಮುಕ್ತರಾದ ಒಬ್ಬೊಬ್ಬರಿಗೆ ಸದೃಶವಾದ ಒಬ್ಬೊಬ್ಬ ಜೀವರ ಸೃಷ್ಟಿ ಮಾಡತಾನೆ. ದಾವಾಗ ಎಂದರೆ ಪ್ರಳಯಕಾಲಕ್ಕೂ ಅನ್ಯವಾದ ಸೃಷ್ಟಿಕಾಲದಲ್ಲಿ ಎಂತ ತಾತ್ಪರ್ಯ. ಪುನಃ ಸೃಷ್ಟಿಕಾಲಕ್ಕೆ ಬ್ರಹ್ಮಪದ ಜೀವ ಒಂದು, ಗರುಡಪದ ಜೀವ ಒಂದು, ಶೇಷಪದ ಜೀವ ಒಂದು, ಹಾಂಗೆ ಸೃಷ್ಟಿಮಾಡಿ ಮುಕ್ತರಾಗಿ ಕಡಿಮಿ ಬಿಟ್ಟಿರುವ ಅವಶಿಷ್ಟವನ್ನು ಪೂರ್ಣಮಾಡತಾನೇ ಹೊರ್ತು ಒಂದು ಬ್ರಹ್ಮಾಂಡದಲ್ಲಿ ಅನಂತಾನಂತ ಬ್ರಹ್ಮಾದಿ ಸಜಾತಿ ಜೀವರ ಸೃಷ್ಟಿಮಾಡೋದಿಲ್ಲ ಎಂತ ತಿಳಿಯಬೇಕು. ಈ ಸೃಷ್ಟಿ ದಾರು ಮಾಡುತಾರೆಂದರೆ ಅಜಃ—ಉತ್ಪನ್ನಶೂನ್ಯನಾದ ಪರಮಾತ್ಮ ಎಂತ ತಾತ್ಪರ್ಯ. ತಥಾಪ್ಯಜಾಂಡಾನಂತಾನಾಂ—ಎಂದರೆ, ತಥಾ—ಹೀಂಗೆ ಒಂದು ಬ್ರಹ್ಮಾಂಡದ ಹಾಂಗೆ, ಅಜಾಂಡಾನಂತಾನಾಂ ಎಂದರೆ ಬ್ರಹ್ಮಾಂಡ ಅನಂತಗಳಲ್ಲಿ ಸೃಷ್ಟ್ಯಾದಿಗಳು ಮಾಡತಾ, ನಿಯಂತಾ—ನಿಯಮನ ಮಾಡತಾ, ಎಂದರೆ ಅನಂತಾನಂತ ರೋಮಕೂಪಗತ ಪ್ರತ್ಯೇಕಪ್ರತ್ಯೇಕ ಬ್ರಹ್ಮಾಂಡಗಳಲ್ಲಿ ಪೂರ್ವೋಕ್ತ ಪ್ರಕಾರ ನಡಿಸುತ್ತಾ ಆ ಬ್ರಹ್ಮಾಂಡಗತ ಜೀವರಿಗೆ ನಿಯಮನ ಮಾಡತಾ ಅಜಾಂಡರೂಪವನ್ನು ಬ್ರಹ್ಮಾಂಡಾಂತರ್ಗತನಾಗಿ ಬ್ರಹ್ಮಾಂಡಾಕಾರರೂಪವನ್ನು ಧರಿಸಿ ಇರೋವನಾಗಿದ್ದಾನೆ. ಹರಿಃ—ಪರಮಾತ್ಮನು, ತಾದೃಕ್—ಒಂದು ಬ್ರಹ್ಮಾಂಡದಲ್ಲಿ, ಬ್ರಹ್ಮಾಂಡಾಕಾರ ರೂಪ ಧರಿಸಿದ ವಪ್ಪಿಂದ ತತ್ಸದೃಶ ಬ್ರಹ್ಮಾಂಡಾಕಾರ ಮಹಾರೂಪ ಎಂದರೆ ಅನಂತಾನಂತಗಳಾದ ಬ್ರಹ್ಮಾಂಡಗಳಲ್ಲಿ ಅನಂತಾನಂತಗಳಾಗಿ ಇರೋದಾಗಿ ಇದೆ. ಈ ಪ್ರಕಾರ, ಹರೇಃ—ಪರಮಾತ್ಮನ, ರೋಮಕೂಪೇಷು ಅನಂತೇಷು—ಅನಂತ ರೋಮಕೂಪಗಳಲ್ಲಿ ಪ್ರತಿ ಪ್ರತಿ ಕೂಪಗಳಲ್ಲೀನೂ ಪ್ರತ್ಯೇಕ ಪ್ರತ್ಯೇಕ ಬ್ರಹ್ಮಾಂಡಗಳು ಅನಂತಾನಂತಗಳಾಗಿ, ಸಂವಸಂತಿ—ಛಂದಾಗಿ ವಾಸವಾಗಿ ಇರೋದಾಗಿ ಅದೆ. ಇತಿ—ಈ ಪ್ರಕಾರ, ತಿಳಿಯತಕ್ಕದ್ದು, ಹಿ—ಪ್ರಸಿದ್ಧವು.

ಪ್ರಮಾಣ :— ತಾದೃಶಾನಂತ ರೂಪಾಣಾಮನಂತಾನಂತಯೋಗತಃ | ಅಥ ಶ್ಚೋರ್ಧ್ವಂ ಚಾಷ್ಟದಿಕ್ಷು ಸಂಯುಕ್ತಾನಾಮನಂತಶಃ || ರೂಪಾನಂತೈರಪೂರ್ಣೋರು

ತನುರ್ಹರಿಃ | ಅತ್ಯಭಿನ್ನೋರುಚಿತ್ಸೌಖ್ಯಬಲಾದಿಗುಣವಿಗ್ರಹಃ || ನಿರ್ವಿಶೇಷಃ ಸರ್ವ ಗತಃ ಸೂಕ್ಷ್ಮಸ್ಥೂಲಾದಿ ರೂಪಕಃ | ಸಮಶಕ್ತಿಸಮಜ್ಞಾನಬಲಾದಿಶುಭಸದ್ಗುಣಃ || ಸಮಾಧಿಕವಿಹೀನಶ್ಚ ರಮಯಾನಂತರೂಪಯಾ | ಸಹ ಸ್ವಾಧೀನಯಾ ಸತ್ಯ ಶೇಷಚಿಜ್ಜಡ ಭೃದ್ಧರಿಃ || ಸ್ವಾಭಿನ್ನಯಾ ಶ್ರಿಯಾ ಭಿನ್ನಂ ಮುಕ್ತಾ ಮುಕ್ತಿಷು ಚಿದ್ಗಣೈಃ | ಭಿನ್ನರಿತ್ಯ ಜಡೈಸ್ಸತ್ಯೈಃ ಭಿನ್ನಜೀವೇಶ್ವರೈಸ್ಸದಾ ||

**ಅರ್ಥ :**— ತಾದೃಶಾನಂತರೂಪಾಣಾಂ—ಪೂರ್ವೋಕ್ತ ಅನಂತಾನಂತ ಬ್ರಹ್ಮಾಂಡ ಗಳ ಧರಿಸಿದ ರೂಪಕ್ಕೆ ಸದೃಶವಾದ ಅಭಿನ್ನಗಳಾದ ಅನಂತಾನಂತರೂಪಾಣಾಂ—ಅನಂತಾ ನಂತ ರೂಪಗಳುಳ್ಳ ಪರಮಾತ್ಮ ಅನಂತಾನಂತ ರೂಪಗಳಿಗೆ ಯೋಗ್ಯವಾದ ಅನಂತಾನಂತ ಎಂದರೆ ಅನಂತಾನಂತ ಬ್ರಹ್ಮಾಂಡಗಳನ್ನು ಹ್ಯಾಂಗೆ ಧರಿಸಿದ್ದಾನೆ ಎಂದರೆ ಯೋಗತಃ ಎಂದರೆ ತನ್ನ ಯೋಗ ಸಾಮರ್ಥ್ಯದಿಂದ ಧರಿಸಿದ್ದಾನೆ ಎಂತ ತಾತ್ಪರ್ಯ. ಪರಮಾತ್ಮ ನಿಂದ ಧರಿಸಲ್ಪಟ್ಟ ಬ್ರಹ್ಮಾಂಡಗಳು ಎಂಥಾದ್ದರಿಂದ ಯುಕ್ತವಾಗಿದೆ ಎಂದರೆ ಅಧಶ್ಚೋರ್ಧ್ವಂ ಎಂದರೆ, ಅಧ ಎಂದರೆ ಅಧೋಭಾಗಗತ ಏಳು ಲೋಕದಿಂದಲೂ, ಊರ್ಧ್ವಭಾಗಗತ ಏಳು ಲೋಕಗಳಿಂದಲೂ ಮತ್ತು ಅಷ್ಟದಿಕ್ಕು ಎಂದರೆ ಎಂಟು ದಿಕ್ಕುಗಳಲ್ಲಿ ವಿದ್ಯಮಾನ ರಾದ ದಿಕ್ಪಾಲಕರ ಪಟ್ಟಣಗಳಿಂದ ಸಹಿತವಾಗಿನ್ನು, ದಶದಿಕ್ಕು ಸಹಿತವಾಗಿನ್ನು, ಸಂಯುಕ್ತಾನಾಂ— ಸಂ—ಭಂದಾಗಿ, ಯುಕ್ತಾನಾಂ—ಸ್ಥಿತಗಳಾದಂತ, ಅನಂತಶಃ—ಅನಂತ ಗಳಾಗಿ ಧರಿಸಲ್ಪಟ್ಟ ಬ್ರಹ್ಮಾಂಡಗಳು ಉಳ್ಳ ರೂಪಾನಂತೈಃ— ಅನಂತ ರೂಪಗಳಿಂದ ಸಹಿತನಾದ ಪರಮಾತ್ಮನು ಅನಂತಾನಂತ ಬ್ರಹ್ಮಾಂಡಗಳು ಉದರದಲ್ಲಿ ಧರಿಸೋಣದರಿಂದ ಪರಮಾತ್ಮನ ಉದರ ಎಷ್ಟು ಬ್ರಹ್ಮಾಂಡಗಳ ಧರಿಸಿದ ಕಾಲಕ್ಕೂ ಪೂರ್ಣವಾಗದೇ ಅಪೂರ್ಣವಾದ, ಉರು—ಅಂದರೆ ಉತ್ಕೃಷ್ಟವಾದ ಸರ್ವಾವಯವಗಳು ಉಳ್ಳವ ಎಂತ ತಾತ್ಪರ್ಯ. ಅಂದರೆ ಅವಕಾಶಕ್ಕೆ ಅಂತ್ಯವಿಲ್ಲದ ಲಿಂಗ ಉಳ್ಳವ ಎಂತ ತಿಳಿಯಬೇಕು. ದೇಶಪೂರ್ಣಕನು ಹರಿಃ ಎಂದರೆ ದೇಶ ಯಾವತ್ತು ದೇಶದಲ್ಲಿ ಪೂರ್ಣ ಎಂದರೆ ಛಿದ್ರರಹಿತ ವಾದ ಸಂಪೂರ್ಣವಾಗಿ ವ್ಯಾಪ್ತನಾಗಿ, ತನು ಎಂದರೆ ಅಷ್ಟು ವಿಸ್ತಾರವಾದ ದೇಹದಿಂದ ಯುಕ್ತನಾದವ. ಅತ್ಯಭಿನ್ನೋರು ಚಿತ್ಸೌಖ್ಯ—ಎಂದರೆ ಪರಮಾತ್ಮನ ಅನಂತಾನಂತ ರೂಪಗಳು ಅತ್ಯಭಿನ್ನ ಪರಸ್ಪರ ಅತ್ಯಂತವಾಗಿ ಅಭಿನ್ನಗಳಾದದ್ದು, ಚಿತ್‌ಸೌಖ್ಯ ಎಂದರೆ ಚಿತ್—ಜ್ಞಾನ ಸೌಖ್ಯ—ಆನಂದ, ಜ್ಞಾನಾನಂದವೇ ಶರೀರವಾಗಿ ಉಳ್ಳವ. ಉರು ಎಂದರೆ ಉತ್ಕೃಷ್ಟನಾದವ, ಸರ್ವಶ್ರೇಷ್ಠನಾದವ, ಬಲಾದಿಗುಣವಿಗ್ರಹ—ಪರಸ್ಪರ ರೂಪಗಳಲ್ಲಿ ವಿದ್ಯ ಮಾನಗಳಾದ, ಬಲವೇನು, ಗುಣವೇನು ಎಂದರೆ ಸ್ವಾಖ್ಯಬಲ, ಸ್ವಾಖ್ಯಗುಣ ಆದಿ ಶಬ್ದದಿಂದ ಸ್ವಾಖ್ಯ ಜ್ಞಾನಾನಂದಾದಿಗಳು ಇವುಗಳೇ, ವಿಗ್ರಹ—ಶರೀರವಾಗಿ ಉಳ್ಳವ. ನಿರ್ವಿಶೇಷ ಎಂದರೆ ತನ್ನ ಇಂದ್ರಿಯಗಳಿಗೂ ಪರಸ್ಪರ ವಿಶೇಷದಿಂದ ರಹಿತವಾದದ್ದು ಅಂದರೆ ಒಂದು ಇಂದ್ರಿಯವೇ ಸರ್ವೇಂದ್ರಿಯಗಳ ವ್ಯಾಪಾರಗಳು ಹಾಂಗೆ ರೋಮಾದಿಗಳು ಯಾವತ್ತೂ ಒಂದೊಂದೇ ಸರ್ವ ವ್ಯಾಪಾರಗಳು ಮಾಡತದೆ ಎಂತ ತಾತ್ಪರ್ಯ.

ಆದ್ದರಿಂದ ನಿರ್ವಿಶೇಷ ಇಂದ್ರಿಯ ಅವಯವ ರೋಮಾದಿಗಳು ಉಳ್ಳವ ಎಂತ ತಾತ್ಪರ್ಯ. ಜೀವ ಸವಿಶೇಷವುಳ್ಳ ಇಂದ್ರಿಯ ವ್ಯಾಪಾರದವ. ಸರ್ವಗತ–ಎಂದರೆ ಪರಮಾತ್ಮನ ಸ್ಥೂಲ ರೂಪಕ್ಕೇನು, ಸೂಕ್ಷ್ಮರೂಪಕ್ಕೇನು ವ್ಯತ್ಯಾಸವಿಲ್ಲದೆ ಸಮಶಕ್ತಿ ಎಂದರೆ ಸಮಾನ ಶಕ್ತಿಯು. ಸಮಾನ ಜ್ಞಾನ ಎಂದರೆ ಸಮಾನ ಜ್ಞಾನವು, ಬಲ ಎಂದರೆ ಸಮಾನ ಬಲ. ಜ್ಞಾನಗಳೇನು, ಶುಭಸದ್ಗುಣ–ಎಂದರೆ ಸಮಾನವಾದ ಶುಭ ಮಂಗಳಕರಗಳಾದ ಸದ್ಗುಣಗಳುಳ್ಳವ ಮತ್ತು ಸಮಾಧಿಕವಿಹೀನಶ್ಚ – ಪರಮಾತ್ಮ ತನಗೆ ಸಮಾನರಾದವರಿಂದಲೂ, ಅಧಿಕರಾದವರಿಂದಲೂ ವಿಹೀನಶ್ಚ–ರಹಿತನಾದವನು, ರಮಯಾನಂತರೂಪಯಾ–ಎಂದರೆ ರಮಾದೇವೇರು ಅನಂತರೂಪಯಾ, ಅನಂತ ರೂಪಗಳಿಂದ ಸಹಿತಳಾಗಿದ್ದಾಳೆ. ರಮಾದೇವೇರಾದರೋ ಆ ಪರಮಾತ್ಮನ ಸ್ವಾಧೀನಯಾ–ಎಂದರೆ ಸ್ವಾಧೀನದಿಂದ ಸತೀ ಇರೋವಳಾಗಿದ್ದಾಳೆ. ಅಶೇಷಚಿಜ್ಜಡಭೃದ್ಧರಿಃ– ಅಶೇಷ–ಸಮಸ್ತರಾದ ಜೀವರುಗಳ, ಹಾಂಗೆ, ಚಿತ್ ಎಂದರೆ ಜಡಪ್ರಕೃತಿಯ, ಭೃದ್ಧರಿ–ಹರಿ ಪರಮಾತ್ಮ ಅನಂತಾನಂತ ರೂಪಗಳಲ್ಲಿ, ಭೃತು–ಧರಿಸೋವನಾಗಿದ್ದಾನೆ. ಸ್ವಾಭಿನ್ನಯಾ ಶ್ರಿಯಾ ಭಿನ್ನ ಎಂದರೆ, ಸ್ವ–ಸ್ವಕೀಯವಾದ, ತನ್ನ ಅನಂತಾನಂತ ರೂಪಗಳಿಗೂ ತನಗೂ ಅಭೇದದಿಂದ ಇರತಕ್ಕವ. ಶ್ರಿಯಾ ಭಿನ್ನ–ಎಂದರೆ ಲಕ್ಷ್ಮೀದೇವೇರಿಂದ ಭಿನ್ನನಾದವ, ಮುಕ್ತಾಮುಕ್ತೇಷು, ಚಿದ್ಗಣೈಃ–ಸ್ವರೂಪದಲ್ಲಿ ಶುಚಿತ್ವವುಳ್ಳ ಅಮುಕ್ತ, ಮುಕ್ತಗಣೈಃ–ಸಮೂಹಗಳಿಂದ ಭಿನ್ನನಾದವ, ಭಿನ್ನ–ಭಿನ್ನನೆಂದು, ಇತಿ–ಈ ಪ್ರಕಾರ ತಿಳಿಯಬೇಕು. ಜಡೈಃ–ಜಡಗಳಿಂದ ಜಡಗಳು, ಜೀವದಿಂದ ಜೀವರು ಭಿನ್ನರು. ಸತ್ಯೈಃ–ಸತ್ಯದಿಂದ, ಸದಾ–ಸರ್ವದಾ ತಿಳಿಯತಕ್ಕದ್ದು ಎಂತ ತಾತ್ಪರ್ಯ.

ಪರಮಾತ್ಮನ ಏಕರೂಪಕ್ಕೂ, ಅನಂತಾನಂತ ರೂಪಗಳಿಗೂ ಅತ್ಯಂತ ಅಭೇದ ಎಂತ ಯಾಕೆ ಹೇಳಿದರೆಂದರೆ ಪರಮಾತ್ಮನ ಏಕರೂಪಗಳ ವಿದ್ಯಮಾನಗಳು ಅನಂತರೂಪಗಳಲ್ಲೀನೂ, ಅನಂತರೂಪಗತ ವಿದ್ಯಮಾನಗಳು ಏಕರೂಪದಲ್ಲೀನೂ, ಇರೋಣವೆಂಬೋದೇ ಅಭೇದಕ್ಕೆ ಲಕ್ಷಣ ಎಂತ ತಾತ್ಪರ್ಯ. ಆದ್ದರಿಂದ ಅನಂತಾನಂತ ಬ್ರಹ್ಮಾಂಡಗಳು ಏಕರೂಪದಲ್ಲಿದ್ದಂತೆ ಅನಂತಾನಂತ ರೂಪದಲ್ಲಿ ಅದೆ ಎಂತಲೂ ಏಕರೂಪದಲಿ ದಾವ ರೀತಿಯಿಂದ ಸೃಷ್ಟ್ಯಾದಿಗಳು ಆಗತದೋ ತದ್ವತು ಅನಂತರೂಪಗಳಲ್ಲಿ ಆಗತಾ ಇದೆ, ಎಂತಲೂ ಏತಾದೃಶ ಲಕ್ಷಣ ಸರ್ವರೂಪದಲಿ ಇರೋಣದರಿಂದ ಅಭೇದ ಎಂತ ಹೇಳೋದಕ್ಕೆ ಕಾರಣವಾಯಿತು. ಹೀಂಗೆ ಹೇಳಿದರೆ ಪರಸ್ಪರ ಭೇದವೂ ಅಪೂರ್ಣತ್ವವೂ ಬರೋದಾಗತದೆ. ಆದ್ದರಿಂದ ಪ್ರತ್ಯೇಕ ಅನಂತಾನಂತ ಬ್ರಹ್ಮಾಂಡಗಳು ತದ್ವ್ಯಾಪಾರಗಳು ಸರ್ವರೂಪಗಳಲ್ಲಿ ಅದೆ ಎಂತ ಸಿದ್ಧಾಂತ. ಮತ್ತು ಇದರ ಮುಂದೆ ಉದಾಹರಿಸತಕ್ಕ ಪ್ರಮಾಣದಿಂದ ಪರಮಾತ್ಮ ಏಕಕಾಲಕ್ಕೆ ಅನಂತಬ್ರಹ್ಮಾಂಡಗಳು ಸೃಷ್ಟಿಮಾಡೋ ಇಚ್ಛಾ ಮಾಡೋದಿಲ್ಲ ಎಂತ ತೋರತದೆ. ಅದು ಪ್ರತೀತಾರ್ಥವೂ, ಗರ್ಗಸಂಹಿತಾಪ್ರಮಾಣವೂ ಅದಕ್ಕೆ ಅರ್ಥವೂ ಮುಂದೆ ಹೇಳಲ್ಪಟ್ಟಿದೆ.

ತಾತ್ಪರ್ಯನಿರ್ಣಯ ಇಪ್ಪತ್ತೇಳನೆ ಅಧ್ಯಾಯ ಶ್ಲೋಕ "ಯಸ್ಮಿನ್ಪರೇನ್ಯೇಪ್ಯಜಜೀವಕೋಶಾಃ ನಾಹಂಪರಾಯೋರ್ನಮರೀಚಿಮುಖ್ಯಾಃ || ಜಾನಂತಿ ಯದ್ಗುಣಗಣಾನ್ನರಮಾದಯೋಪಿ ನಿತ್ಯಸ್ವತಂತ್ರ ಉತ ಕೋಸ್ತಿ ತದನ್ಯ ಈಶಃ" ವ್ಯಾಖ್ಯಾನ :—ವರದರಾಜೀಯ ವ್ಯಾಖ್ಯಾನ. ಏಕಶ್ಲೋಕಘಟಿಕೀಭೂತ ಅಜಜೀವಕೋಶಾ ಇತ್ಯಸ್ಯ ಪದಸ್ಯ ವ್ಯಾಖ್ಯಾನಂ. ಅಜಜೀವಕೋಶಾಃ—ಅಜಸ್ಯ ಚತುರ್ಮುಖಸ್ಯ ಜೀವಕೋಶಾಃ ಜೀವನಿಧಾನಸ್ಥಾನಭೂತಾಃ ಬ್ರಹ್ಮಾಂಡಾಃ ಸಹಸ್ರಶೋಪಿ ಸೃಷ್ಟಿಕಾಲೇ ಭವಂತಿ. ಸಂಹಾರಕಾಲೇ ನ ಭವಂತಿ || ಏಕಸ್ಮಿನ್ ಪರೇ ಸರ್ವೋತ್ತಮೇ ಭೂಮ್ನಿ ಪರಿಪೂರ್ಣೇ ಈದೃಶಾಃ ವರ್ತಮಾನಬ್ರಹ್ಮಾಂಡಸದೃಶಾಃ ಅನ್ಯೇಪಿ ಭೂತಭವಿಷ್ಯಂತಃ ||

ಇದಕ್ಕೆ ಅರ್ಥ ಏನೆಂದರೆ :—ಬ್ರಹ್ಮಾಂಡಗಳು ಉತ್ಪತ್ತಿಕಾಲದಲ್ಲಿ ಸಹಸ್ರಸಂಖ್ಯಾದಿಂದ ಸೃಷ್ಟಿ ಆಗೋದಾಗಿ, ಇರೋದಾಗಿ ಅದೆ. ಸಂಹಾರಕಾಲದಲ್ಲಿ ಸಂಹಾರವಾಗಿ ಇರೋದಿಲ್ಲ. ಅಂದರೆ ಒಂದು ಬ್ರಹ್ಮಾಂಡಸದೃಶ ಅನೇಕ ಬ್ರಹ್ಮಾಂಡಗಳು ಪೂರ್ವೋಕ್ತ ಪ್ರಕಾರ ದೇಶಭೇದಗಳಲ್ಲಿ ಏಕಕಾಲವಚ್ಛೇದೇನ ಸಹಸ್ರ ಪ್ರಕಾರ ಬ್ರಹ್ಮಾಂಡಗಳ ಸೃಷ್ಟಿಯೂ ಸಂಹಾರವೂ ಮಾಡತಾ ಇರ್ತಾನೆ ಎಂತ ತಾತ್ಪರ್ಯ. ಸಹಸ್ರಶಬ್ದ ಅನಂತ ವಾಚಿ ಎಂತ ತಿಳಿಯಬೇಕು. ಇದು ಒಂದೊಂದು ಪ್ರದೇಶದ ವಿಚಾರ. ಲಯ ಕಾಲ ಪ್ರಾಪ್ತವಾದರೆ ಆಗ್ಗೆ ಲಯವಾಗಿ ಆ ಕಾಲದಲ್ಲಿ ಇರೋದಿಲ್ಲ. ಒಂದೊಂದು ಪ್ರದೇಶದಲಿ ಒಂದೊಂದಾಗೇ ಲಯ ಎಂತ ಹೇಳಿದಂತಾಯಿತು. ಈ ರೀತ್ಯಾ ಅನಂತ ಅಂಡಗಳು ಅನಂತ ದೇಶದಲ್ಲಿ ಒಂದೇ ಕಾಲದಲ್ಲಿ ಸೃಷ್ಟಿಯೂ ಆಗೋದಾಗತದೆ. ಪರೇ ಎಂದರೆ ಪ್ರಳಯಕಾಲಕ್ಕೆ ಅನ್ಯವಾದ ಸೃಷ್ಟಿಕಾಲ ಎಂತ ತಾತ್ಪರ್ಯ. ಸೃಷ್ಟಿ ಕಾಲದಲ್ಲಿ ದಾವ ಪ್ರದೇಶದಲ್ಲಿ ಪೂರ್ವದಲ್ಲಿ ಒಂದು ಬ್ರಹ್ಮಾಂಡ ಸೃಷ್ಟಿಮಾಡಿತ್ತೋ ಆ ಪ್ರದೇಶದಲಿ ಪುನಃ ಒಂದೇ ಬ್ರಹ್ಮಾಂಡ ಸೃಷ್ಟಿಯು, ಆ ಪ್ರದೇಶದಲ್ಲಿ ಸಹಸ್ರವಾಗಿ ಬ್ರಹಾಂಡಗಳ ಸೃಷ್ಟಿಯು ಇಲ್ಲ. ಸಹಸ್ರವಾಗಿ ಬ್ರಹ್ಮಾಂಡಗಳ ಲಯವೂ ಇಲ್ಲ ಎಂತ ತಾತ್ಪರ್ಯವು. ಮತ್ತು ಸೃಷ್ಟಿಕಾಲೇ ಅನಂತ ಬ್ರಹ್ಮಾಂಡಗಳು ಎಂದರೆ ಲಯಾನಂತರ ಸೃಷ್ಟಿಮಾಡತಕ್ಕ ಕಾಲದಲ್ಲಿ ಅಂಡಗಳು ಬಹುತ್ವೇನ ಪ್ರತ್ಯೇಕವಾಗಿ ರೋಮಕೂಪಗಳಲ್ಲಿ ಧರಿಸತಾನೆ ಎಂತ ತಾತ್ಪರ್ಯ. ಸಂಹಾರಕಾಲದಲ್ಲಿ ಅಂಶಿಭೂತವಾದ ಬ್ರಹ್ಮಾಂಡದಲಿ ಸೇರಿ ಲಯವಾಗತದೆ. ಇದು ಒಂದು ಪ್ರಕಾರ. ಇದೂನೂ ಸತ್ಯವೇ. ಪರಿಪೂರ್ಣನಾದ ಪರಮಾತ್ಮನು ವಿದ್ಯಮಾನ ಬ್ರಹ್ಮಾಂಡಕ್ಕೆ ಸದೃಶವಾದ ಅನ್ಯವಾದ ಅನಂತಾನಂತ ಬ್ರಹ್ಮಾಂಡಗಳು ಮತ್ತು ಮುಕ್ತರು ಬರತಕ್ಕ ಅಸ್ಪೃಶ್ಯರು ಏಕೈಕ ದೇಶದಲ್ಲಿ ಒಂದೊಂದಾಗಿ ಅನಂತಾನಂತ ಬ್ರಹ್ಮಾಂಡಗಳ ಭೂತಭವಿಷ್ಯದ್ವರ್ತಮಾನ ಜೀವರ ಸಹಿತ ತನ್ನ ರೋಮಕೂಪದಲಿ ಧರಿಸಿ ಸೃಷ್ಟ್ಯಾದಿಗಳು ಮಾಡತಾನೆಂತ ತಾತ್ಪರ್ಯ. ಒಂದೇ ಸ್ಥಳದಲ್ಲಿ ಸೃಷ್ಟಿಮಾಡತಾನಾ ಎಂದರೆ ಕಾಲ ಭೇದೇನ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಸೃಷ್ಟಿಮಾಡತಕ್ಕ ಬ್ರಹ್ಮಾಂಡಗಳ ವಿವಕ್ಷಯಾ ಅನಂತಬ್ರಹ್ಮಾಂಡಗಳು ಒಂದು ಪ್ರದೇಶದಲ್ಲಿ ಸೃಷ್ಟಿ ಎಂತ ತಾತ್ಪರ್ಯ.

ಉಭಯ ವಿಧ ಬ್ರಹ್ಮಾಂಡಗಳು ಸತ್ಯವೇ. ಅನಂತಾನಂತ ಬ್ರಹ್ಮಾಂಡಗಳು ಪ್ರತ್ಯೇಕ ಪ್ರತ್ಯೇಕವಾಗಿ ಏಕಕಾಲಾವಚ್ಛೇದೇನ ಇರೋಣವೂ ಸತ್ಯವೇ. ಈ ಪ್ರಕಾರ ತಿಳಿಯ ಬೇಕು. ಈ ವಿಷಯದಲ್ಲಿ ಅನೇಕ ಪ್ರಮಾಣಗಳು ಅವೆ. ಇಲ್ಲಿ ಬರೆಯಲಿಕ್ಕೆ ಅವಕಾಶವಿಲ್ಲ.

**ಶ್ರೀ ರಮೇಶನ ಮೂರ್ತಿಗಳು ನವ ।**
**ನಾರಿಕುಂಜರದಂತೆ ಏಕಾ ।**
**ಕಾರ ತೋರ್ಪುವು ಅವಯವಾಹ್ವಯ ಅವಯವಗಳಲ್ಲಿ ॥**
**ಬೇರೆಬೇರೆ ಕಂಗೊಳಿಸುವ ಶ ।**
**ರೀರದೊಳು ನಾನಾ ಪ್ರಕಾರ ವಿ ।**
**ಕಾರಶೂನ್ಯ ವಿರಾಟನೆನಿಸುವ ಪದುಮಜಾಂಡದೊಳು ॥ ೨೬ ॥**

ಆಯಾ ಒಂದೊಂದು ಬ್ರಹ್ಮಾಂಡದಲ್ಲಿ ನವನಾರೀಕುಂಜರ ದೃಷ್ಟಾಂತದಿಂದ ವಿರಾಟ್ ರೂಪದಿಂದ ಶ್ರೀ ಪರಮಾತ್ಮ ಇದ್ದಾನೆ ಎಂತ ಹೇಳತಾರೆ.

ಶ್ರೀ ರಮೇಶನ–ಶ್ರೀಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರ, ಮೂರ್ತಿಗಳು– ಅನಂತಾನಂತರೂಪಗಳು, ನವನಾರೀಕುಂಜರದಂತೆ–ಒಂಭತ್ತು ಸ್ತ್ರೀರೂಪಗಳ ಆಕಾರವಾಗಿ ಒಂದೇ ಆನೆ ಶರೀರದಲ್ಲಿ ಆನೆಯೋಪಾದಿಯಲ್ಲಿ, ಏಕಾಕಾರ–ಒಂದಾದಂಥಾ ಆಕಾರವೂ, ತೋರ್ಪವು–ತೋರೋದಾಗತದೆ. ಅಂದರೆ ಅನಂತಾನಂತ ರೂಪಗಳಿಂದ ಸಹಿತವಾದದ್ದು ಶ್ರೀ ಪರಮಾತ್ಮನ ಒಂದೊಂದು ರೂಪ ಎಂತ ತಾತ್ಪರ್ಯ. ಅವಯವಾಹ್ವಯ–ಶ್ರೀ ಪರ ಮಾತ್ಮ ತನ್ನ ದೇಹಗತ ಕರಚರಣಾದ್ಯವಯವಗಳು ತನ್ನ ಒಂದೊಂದು ರೂಪದಿಂದ ತಾನೇ ಆಗಿ ಅವಯವನಾಮದಿಂದ ಕರೆಸುತ, ಅವಯವಗಳಲ್ಲಿ–ಶ್ರೀಪರಮಾತ್ಮ ತನ್ನ ಅವಯವ ಗಳಲ್ಲಿ, ಬೇರೆ ಬೇರೆ–ನವನಾರೀಕುಂಜರಗತ ಸ್ತ್ರೀಯರುಗಳು ಬ್ಯಾರೆ ಬ್ಯಾರೆ ಇರುವೋಪಾದಿ ಯಲ್ಲಿ ಇದ್ದು, ಕಂಗೊಳಿಸುವ–ಅಧಿಕಾರಿಗಳ ಕಣ್ಣಿಗೆ ತೋರೋವನಾಗತಾನೆ. ಶರೀರ ದೊಳು–ಪರಮಾತ್ಮ ತನ್ನ ಸ್ವಶರೀರದಲ್ಲಿ, ನಾನಾ ಪ್ರಕಾರ–ನಾನಾ ವಿಧವಾದ ತನ್ನ ಸ್ವಾಖ್ಯರೂಪಗಳಿಂದ ಇರೋವನಾಗಿ ಇದ್ದಾನೆ. ಇಂಥಾ ಶ್ರೀ ಪರಮಾತ್ಮ, ವಿಕಾರ ಶೂನ್ಯ–ಚರಾಚರಗಳಲ್ಲಿ ವ್ಯಾಪ್ತನಾಗಿದ್ದ ಕಾಲಕ್ಕೂ ಚರಾಚರಗಳು ವಿಕಾರಹೊಂದು ವೋಪಾದಿಯಲ್ಲಿ ತಾನು ವಿಕಾರ ಹೊಂದದೆ ಅಂದರೆ ವಿಕಾರದಿಂದ ಶೂನ್ಯನಾದವ, ಮತ್ತು ಅನಂತಾನಂತ ರೂಪಗಳಿಂದ ಸಹಿತನಾದ ಕಾಲಕ್ಕೂ ವಿಕಾರನಾಗಿ ತೋರೋದಿಲ್ಲ. ಇಂಥಾ ದಿವ್ಯರೂಪಸೌಂದರ್ಯದಿಂದ, ಪದುಮಜಾಂಡದೊಳು–ಪ್ರತಿ ಬ್ರಹ್ಮಾಂಡದಲ್ಲೂ, ವಿರಾಟನೆನಿಸುವ–ತದಾಕಾರದಿಂದಿದ್ದು ವಿರಾಟ್‌ರೂಪ ಎಂತ ಕರಿಸೋವನಾಗಿದ್ದಾನೆ. ತನ್ನಾಮದಿಂದಲೂ ಕರಿಸತಾನೆ ಎಂತ ತಾತ್ಪರ್ಯ.

**ವಾರಿಜಭವಾಂಡದೊಳು ಲಕುಮೀ ।**
**ನಾರಸಿಂಹನ ರೂಪಗುಣಗಳು ।**
**ವಾರಿಧಿಯೊಳಗಿಹ ತೆರೆಗಳಂದದಿ ಸಂದಣಿಸಿ ಇಹವು ॥**
**ಕಾರಣಾಂಶಾವೇಶವ್ಯಾಪ್ತವ ।**
**ತಾರಕಾರ್ಯಾವ್ಯಕ್ತ ವ್ಯಕ್ತವು ।**
**ಆರು ನಾಲ್ಕು ವಿಭೂತಿಯಂತರ್ಯಾಮಿ ರೂಪಗಳು ॥ ೨೭ ॥**

ಶ್ರೀ ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರು ದಶವಿಭೂತಿಗಳಿಂದ ವ್ಯಾಪ್ತ ಎಂತ ಹೇಳತಾರೆ.

ವಾರಿಜಭವಾಂಡದೊಳು—ಪ್ರತಿ ಬ್ರಹ್ಮಾಂಡದಲ್ಲೂ, ಲಕುಮಿನಾರಸಿಂಹನ—ಲಕ್ಷ್ಮೀ ಪತಿ ಶ್ರೀ ನೃಸಿಂಹ ಅಭಿನ್ನ ಶ್ರೀ ನಾರಾಯಣದೇವರ, ರೂಪಗುಣಗಳು—ರೂಪಗಳೇನು, ಅವನ ಗುಣಗಳೇನು ವಾರಿಧಿಯೊಳಗಿಹ—ಸಮುದ್ರದೊಳಗೆ ಇರತಕ್ಕ, ತೆರೆಗಳಂದದಿ—ಅಲೆ ಗಳೋಪಾದಿಯಲ್ಲಿ, ಸಂದಣಿಸಿ ಇಹವು—ತುಂಬಿಕೊಂಡು ಇರೋದಾಗಿ ಅದೆ. ಕಾರಣ—ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ ಕರ್ಮದಲಿ ಒಂದು ರೂಪ, ಅಂಶ—ಸರ್ವಜೀವರ ಸ್ವರೂಪದಲ್ಲಿ ಒಂದು ರೂಪ, ಆವೇಶ—ಅರ್ಜುನಾದಿಗಳಲ್ಲಿ ಆವೇಶವಿಶೇಷದಿಂದ ಇರತಕ್ಕ ರೂಪ, ವ್ಯಾಪ್ತ—ದೇಹೇಂದ್ರಿಯಗತ ಅಸುರನಿಗ್ರಹಕ್ಕೆ ದೇಹೇಂದ್ರಿಯಾದಿಗಳಲ್ಲಿ ವ್ಯಾಪ್ತ ನಾಗಿರುವ ಒಂದು ರೂಪ, ಅವತಾರ—ರಾಮ, ಕೃಷ್ಣ, ವೇದವ್ಯಾಸ, ಹಯಗ್ರೀವ ಆದಿ ಭಗವದವತಾರಗಳ (ರೂಪಗಳು) ರೂಪ, ಕಾರ್ಯ—ಸರ್ವೇಂದ್ರಿಯಗಳ ಕಾರ್ಯರೂಪ, ವ್ಯಕ್ತ—ಮುಕ್ತಿಯೋಗ್ಯರ ಮನದಲ್ಲಿ ಅವ್ಯಕ್ತರೂಪ, ವ್ಯಕ್ತಾವ್ಯಕ್ತ—ನಿತ್ಯಸಂಸಾರಿ ಮನ ದಲ್ಲಿ ವ್ಯಕ್ತಾವ್ಯಕ್ತರೂಪ, ಅಂತರ್ಯಾಮಿ—ಜಡಗಳಲ್ಲಿ ಅಂತರ್ಯಾಮಿ ರೂಪ, ಈ ಪ್ರಕಾರ ಹತ್ತು ನಾಮಗಳಿಂದ (ಆಯಾ ನಾಮಗಳಿಂದ) ಆಯಾ ಅಧಿಷ್ಠಾನಗಳಲ್ಲಿ, ರೂಪಗಳ—ಭಗವದ್ರೂಪಗಳ, ಆರುನಾಲ್ಕು ವಿಭೂತಿರೂಪಗಳು—೬ನೂ ೪ನೂ ಸೇರಿ ಹತ್ತು ವಿಭೂತಿ ರೂಪಗಳು ತುಂಬಿ ಇರೋದಾದಿ ಅವೆ. ದುಷ್ಟಶಿಕ್ಷ ಶಿಷ್ಟಪರಿಪಾಲನ ಮಾಡತಕ್ಕ ರೂಪ ಗಳು, ಪಾಪಸ್ವರೂಪಗಳು, ಪಾಪಸ್ವರೂಪರಿಗೆ ಪುಣ್ಯನಾಶ, ಪುಣ್ಯಸ್ವರೂಪಿಗೆ ಪಾಪನಾಶ, ಈ ಕಾರ್ಯ ವಿಭೂತಿಕಾರ್ಯಗಳೆಂದು ತಿಳಿಯಬೇಕೆಂತ ತಾತ್ಪರ್ಯ.

**ಮಣಿಗಳೊಳಗಿಹ ಸೂತ್ರದಂದದಿ ।**
**ಪ್ರಣವಪಾದ್ಯನು ಚೇತನಾಚೇ ।**
**ತನ ಜಗತ್ತಿನೊಳನುದಿನದೊಳಾಡುವನು ಸುಖಪೂರ್ಣ ॥**
**ದಣುವಿಕೆಯು ಇವನಿಗಿಲ್ಲ ಬಹು ಕಾ ।**
**ರುಣಿಕನಂತಾನಂತ ಜೀವರ ।**
**ಗಣದೊಳೇಕಾಂಶ ರೂಪದಿ ನಿಂತು ನೇಮಿಸುವ ॥ ೨೮ ॥**

ರಮಾದಿ ಸರ್ವಜೀವರಿಗೆ ಏಕಾಂಶದಿಂದ ನಿಯಮನ ಮಾಡತಾನೆ ಎಂದು ಹೇಳತಾರೆ.

ಮಣಿಗಳೊಳಗಿಹ_ಮಣಿಗಳೊಳಗೆ ಇರತಕ್ಕ, ಸೂತ್ರದಂದದಿ_ದಾರದೋಪಾದಿಯಲಿ, ಪ್ರಣವಪಾದ್ಯನು_ಓಂಕಾರಪ್ರತಿಪಾದ್ಯನಾದ ಬಿಂಬರೂಪಿ ಪರಮಾತ್ಮನು, ಚೇತನ_ಚಲನ ಮಾಡತಕ್ಕ ಮಾನುಷ ಪಶ್ವಾದಿ ಜೀವರು, ಚೇತನ ಜೀವರು, ಅಚೇತನ_ಗಮನಾಗಮನ ರಹಿತವಾದ ಅಚೇತನ ಜೀವರು ಎಂದರೆ ವೃಕ್ಷಾದಿ ಜೀವರು (ಚೇತನಾಚೇತನ ಎಂಬೋದು ಸ್ವರೂಪ ವಿವಕ್ಷಾ ಎಂತ ತಾತ್ಪರ್ಯ) ಇಂಥಾ ಜಗತ್ತಿನೊಳು_ಜೀವರು, ಜಡಜೀವರುಗಳಲ್ಲಿ, ಅನುದಿನದೊಳು – ಪ್ರತಿದಿನದಲ್ಲೂ, ' ಆಡುವನು_ಒಂದೊಂದು ಇಂದ್ರಿಯಗಳಲ್ಲಿ ಸಂಚಾರ ಮಾಡುವನು. ಸುಖಪೂರ್ಣ_ಶ್ರೀ ಪರಮಾತ್ಮನು ಸುಖಪೂರ್ಣನಾದ್ದರಿಂದ ಆಯಾ ಅಧಿಷ್ಠಾನಗತ ಸುಖಪೂರ್ಣಗಳಾದ ತನ್ನ ಸ್ವರೂಪಗಳೇ ತಾನು ಆಗಿ ಅಧಿಷ್ಠಾನಾಂತರ್ಗತ ತನ್ನ ಅಭೇದ ರೂಪಗಳ ಗ್ರಾಹ್ಯ ಮಾಡತಾನೆ. ದಣಿವಿಕೆಯು ಇವಗಿಲ್ಲ_ಜೀವೇಂದ್ರಿಯಗಳಿಂದ ಸ್ಥೂಲ ದೇಹದಿಂದ ಅನೇಕ ಕರ್ಮಗಳು ಬಿಂಬಕ್ರಿಯಾ ದ್ವಾರಾ ಮಾಡಿಸಿದಾಗ್ಯೂ (ಮಾಡಿಸಿದ ಕಾಲಕ್ಕೂ) ಅದರಿಂದ ಆಯಾಸ ಎಂಬುದು ಬಿಂಬರೂಪಿ ಶ್ರೀ ದೇವರಿಗೆ ಇಲ್ಲ. ಜೀವಗೆ ಮಾತ್ರ ದಣುವಿಕೆ ಉಂಟು. ಅಪೂರ್ಣನಾದ್ದರಿಂದ ಜೀವಗೆ ದಣಿವು ಅಂದರೆ ಆಯಾಸಗಳು ಉಂಟು. ಶ್ರೀ ಪರಮಾತ್ಮಗೆ ಶ್ರಮ ಇಲ್ಲಾ ಎಂಬುದು ಹ್ಯಾಂಗೆಂದರೆ ಶ್ರೀ ಪರಮಾತ್ಮನ ಮೂಲರೂಪ ಸಚ್ಚಿದಾನಂದಾತ್ಮಕವಾದದ್ದು. ರೂಪಗಳು ಅಭೇದವಾದ ಕಡಿಯಿಂದ ಈ ತಾತ್ಪರ್ಯವು. ಬಹುಕಾರುಣಿಕ_ಜೀವರಲ್ಲಿ ಅವರವರ ಯೋಗ್ಯತಾನುಸಾರವಾಗಿ ಅಂತಃಕರಣ ಮಾಡತಕ್ಕವ. ಅನಂತಾನಂತ ಜೀವರ ಗಣದೊಳು_ಅಸಂಖ್ಯಾತರಾದ ಅಪರಿಮಿತ ಜೀವರ ಸಮೂಹದೊಳು, ಏಕಾಂಶ_ಒಂದಾದಂಥಾ ನಾರಾಯಣ ರೂಪದಿಂದ ಹೊರಟ ವಾಸುದೇವ ರೂಪವೆಂಬ ಅಂಶ ರೂಪದಿಂದ ಜೀವನ ಸ್ವರೂಪದಲ್ಲೂ, ಅಂಶ_ಅದೇ ವಾಸುದೇವ ರೂಪದಿಂದ ಹೊರಟಂಥಾ ಅಂಶ ಸ್ಥೂಲ ದೇಹದಲ್ಲೂ ಎಂತ ತಾತ್ಪರ್ಯ. "ವಾಸನಾತ್ ವಾಸುದೇವೋಸಿ ವಾಸಿತಂ ತೇ ಜಗತ್ತ್ರಯಮ್। ಸರ್ವಭೂತನಿವಾಸೋಸಿ ವಾಸುದೇವ ನಮೋಸ್ತುತೇ" ಎಂತಲೂ "ಬ್ರಹ್ಮಣಿ ಬ್ರಹ್ಮ ರೂಪೋಸೌ ಶಿವರೂಪಃ ಶಿವಸ್ಥಿತಃ ||" ಎಂಬ ವಚನಾನುಸಾರ ಆಯಾ ಜೀವಾಕಾರಗಳಂತೆ ಅನಂತಾನಂತ ರೂಪಗಳ ಧರಿಸಿ ಆಯಾ ಜೀವರಿಗೆ ನಿತ್ಯಬಿಂಬನಾದ ಜೀವಾಕಾರವಾದ ತನ್ನ ಸ್ವರೂಪದಲಿ ತಾನು ಅಂಶದಿಂದ ಪ್ರವೇಶ ಮಾಡಿ ಅದೇ ರೂಪದಿಂದ ಅಂಶ ಹೊರಟು, ಸ್ಥೂಲದೇಹದಲಿ ಜೀವಾಕಾರ ಬಿಂಬನಾದ ಅಗ್ರೇಶನಲಿ ಪ್ರವೇಶಿಸಿ, ರೂಪದಿ ನಿಂತು_ಆಕಾರ ರೂಪದಿಂದ ನಿಂತು, ನೇಮಿಸುವ_ಬಾಹ್ಯಾಂತರ್ಗತ ಜೀವೇಂದ್ರಿಯಗಳಿಗೆ ನಿಯಮನ ಮಾಡತಾನೆ. ಸ್ವರೂಪಗತ ನಿತ್ಯಬಿಂಬನ ಕಾರ್ಯ ಲಿಂಗಭಂಗಾನಂತರ ಸ್ವರೂಪ ದೇಹಗಳ ಕಾರ್ಯ ನಡೆಸತಕ್ಕವ. ಆ ಬಿಂಬಕಾರ್ಯ ಪೃಥಕ್ ಪೃಥಕ್ಕಾಗಿ ಇಲ್ಲ. ಪ್ರವಿಷ್ಟರೂಪ ನಿತ್ಯಬಿಂಬನಾದ

ಜೀವಬಿಂಬ ವ್ಯತಿರಿಕ್ತ ಮಾಡಲಿಕ್ಕೆ ಇಲ್ಲ. ರಾಮಾವತಾರದಿಂದ ರಾವಣಸಂಹಾರ ನೇಮ ದಂತೆ ನೇಮವು. ಈ ಪ್ರಕಾರ ಇದ್ದು ಸ್ವರೂಪದಲಿ ಇಚ್ಛಾ, ಬಾಹ್ಯದಲಿ ತತ್ಕ್ರಿಯಾ ಆಯಾ ಇಂದ್ರಿಯಗಳ ದ್ವಾರಾ ನಡೆಸತಾನೆ. ಪ್ರವಿಷ್ಟ ರೂಪಗಳು ಪ್ರಳಯದಲ್ಲಿ ಪುನಃ ಮೂಲ ರೂಪ ಸೇರತವೆ. ಈ ಪ್ರಕಾರ ತಿಳಿಯಬೇಕು ಎಂತ ತಾತ್ಪರ್ಯ.

**ಜೀವಜೀವರ ಭೇದ ಜಡಜಡ ।**
**ಜೀವಜಡ ಜಡಜೀವರಿಂದಲಿ ।**
**ಶ್ರೀವರನು ಅತ್ಯಂತ ಭಿನ್ನ ವಿಲಕ್ಷಣನು ಲಕ್ಷ್ಮೀ ॥**
**ಮೂವರಿಂದಲಿ ಪದುಮಜಾಂಡದಿ ।**
**ತಾ ವಿಲಕ್ಷಣಳೆನಿಸುತಿಪ್ಪಳು ।**
**ಸಾವಧಿಕಸಮಶೂನ್ಯಳೆಂದರಿತೀರ್ವರನು ಭಜಿಸು ॥ ೨೯ ॥**

ಜೀವಜೀವರಿಗೆ ಪರಸ್ಪರ ಭೇದ ಉಂಟು ಎಂತಲೂ, ಪರಮಾತ್ಮನಿಂದ ಭಿನ್ನರೂ ಎಂತಲೂ ಹೇಳತಾರೆ.

ಜೀವಜೀವರ ಭೇದ–ಚೇತನ ಜೀವರೊಳಗೆ ಪರಸ್ಪರ ಭೇದ, ಜಡಜಡ–ಜಡಜೀವ ರೊಳು ಪರಸ್ಪರ ಭೇದ, ಜೀವಜಡ–ಚೇತನ ಜೀವಕ್ಕೂ ಜಡ ಜೀವಕ್ಕೂ ಭೇದ. ಜಡ– ಜಡ ಜೀವರಿಗೂ ಶ್ರೀ ಪರಮಾತ್ಮಗೂ ಭೇದ. ಇಂದಲಿ–ಈ ಪ್ರಕಾರ ಜೀವರಿಂದಲೂ ಜಡಗಳಿಂದಲೂ ಅಂದರೆ ಜಡಜೀವಗಳಿಂದಲೂ, ಶ್ರೀವರನು–ಶ್ರೀ ಲಕ್ಷ್ಮೀಪತಿಯಾದ ಶ್ರೀ ನಾರಾಯಣ ದೇವರು, ಅತ್ಯಂತಭಿನ್ನನು–ವಿಶೇಷಾಕಾರವಾಗಿ ಭಿನ್ನನಾದವನು. ವಿಲಕ್ಷಣನು–ಈ ಯಾವತ್ತು ಜೀವರಿಂದಲೂ ಜಡರಿಂದಲೂ ವಿಲಕ್ಷಣನಾದವನು ಎಂದರೆ ಯಾವ ವಿಷಯದಲ್ಲೂ ಸಂಬಂಧಿಸದವನು. ಲಕ್ಷ್ಮೀ–ಅಸ್ವತಂತ್ರಳಾದ ಶ್ರೀಪರಮಾತ್ಮನ ಪತ್ನಿಯಾದ ಲಕ್ಷ್ಮೀದೇವೇರು, ಪದುಮಜಾಂಡದಿ–ಬ್ರಹ್ಮಾಂಡದಲ್ಲಿ ಸೃಜ್ಯರಾದ ತದನ್ಯ ಮುಕ್ತರಾದ, ಅಮುಕ್ತರಾದ, ಅಸೃಜ್ಯರಾದ, ಮೂವರಿಂದಲೂ–ಏತಾದೃಶರಾದ ತ್ರಿವಿಧ ರಿಂದಲೂ, ತಾ ವಿಲಕ್ಷಣಳೆನಿಸುತಿಪ್ಪಳು–ಜೀವರೋಪಾದಿಯಲಿ ಅಸ್ವತಂತ್ರ ಚೇತನಗಳಾದ ಕಾಲಕ್ಕೂ, ಅನಾದ್ಯನಂತ ಕಾಲಕ್ಕೂ ರಮಾದೇವೇರು ಒಬ್ಬಳೇ ಆದ್ದರಿಂದಲೂ ವಿಲಕ್ಷಣ ವ್ಯಾಪಾರ ಉಳ್ಳವಳಾದ್ದರಿಂದಲೂ ತಾನು ದಾರಿಗೂ ಸಂಬಂಧಿಸದೆ ಇರತಕ್ಕವಳು. ಶ್ರೀ ಪರಮಾತ್ಮನ ವಿವಕ್ಷಯಾ ಜೀವಳು ಬ್ರಹ್ಮಾದ್ಯಪೇಕ್ಷಯಾ ಈಶಳು. ಈ ಪ್ರಕಾರ ಕರಸುವಳಾಗಿದ್ದಾಳೆ. ಸಾ–ಆ ಲಕ್ಷ್ಮೀದೇವೇರು, ಅಧಿಕ–ಶ್ರೀ ಪರಮಾತ್ಮಗೆ ಅಧಿಕಳು ಎಂತಾಗಲಿ, ಸಮ–ಸಮಾನಳು ಎಂತಾಗಲಿ, ಶೂನ್ಯಳೆಂದರಿತು–ಈ ಉಭಯ ವಿಧ ದಿಂದಲೂ ಶೂನ್ಯಳು ಅಂದರೆ ಶ್ರೀ ಪರಮಾತ್ಮಗೆ ಅವರಳು ಎಂತ ಈ ತಾರತಮ್ಯವನ್ನು ತಿಳಿದು, ಈರ್ವರನು ಭಜಿಸು–ರಮಾ ಮಧುಸೂದನರನ್ನು ಭಜಿಸುವನಾಗಬೇಕು ಎಂದರೆ ರಮಾಸಮೇತನಾದ ಶ್ರೀ ಪರಮಾತ್ಮನ ಭಜಿಸಬೇಕು ಎಂತ ತಾತ್ಪರ್ಯ. ಇದರಿಂದ ಬ್ರಹ್ಮಾದಿ ಜೀವರಲಿ, ಜಡಜೀವರಲಿ, ಶುದ್ಧ ಜಡಗಳಲ್ಲಿ, ಪಂಚಭೇದವೂನೂ,

ರಮಾ ಮಧುಸೂದನರಲ್ಲಿ ಒಂದು ಭೇದವೂನೂ ಅಂತು ಆರು ಭೇದ ತಿಳಿಯಬೇಕೆಂದು ಹೇಳಿದಂತಾಯಿತು ಎಂತ ತಾತ್ಪರ್ಯ.

**ವಿಶೇಷಾರ್ಥ :**—ಪೂರ್ವೋಕ್ತ ದೇವರ ರೂಪಗಳೆಲ್ಲಾ ಜೀವ ಜಡಾತ್ಮಕ ಪ್ರಪಂಚಕ್ಕೆ ಅತ್ಯಂತ ಭಿನ್ನ ಪ್ರತ್ಯೇಕವೆಂದು ತಿಳಿಯುವುದಕ್ಕೆ ಪಂಚಭೇದಜ್ಞಾನ ಅತ್ಯಾವಶ್ಯಕವಾದ್ದರಿಂದ ಆ ಪಂಚಭೇದಗಳನ್ನು ವಿವರಿಸಿ ತಿಳಿಸುತ್ತಾರೆ. ಈ ಪದ್ಯದಲ್ಲಿ ಜೀವರುಗಳೊಳಗೆ ಆಯಾಯಾ ದೇಹದಲ್ಲಾಗುವ ಸುಖದುಃಖಗಳು ಆ ಆ ಜೀವ ಒಬ್ಬಗೆ ಅಭಿಮಾನದಿಂದ ಆಗುವದಲ್ಲದೆ ಮತ್ತೊಂದು ದೇಹಗತ ಜೀವಗೆ ಆಗುವ ಸುಖದುಃಖ ಇನ್ನೊಂದು ದೇಹಗತ ಜೀವಗೆ ಇಲ್ಲವಾದ್ದರಿಂದ ದೇಹೋಪಾದಿ ಎಂಬ ನಿಮಿತ್ತ ಹೋದರೆ ಜೀವ ಚೈತನ್ಯ ಒಂದೇ ಆಗುವದೆಂದು ಭಾವಿಸಬಾರದು. ಅಂದರೆ ಹಾಗೆ ತಿಳಿಯಬಾರದು. ಒಬ್ಬ ಜೀವನು ಮತ್ತೊಂದು ಜೀವನಿಂದ ಐಕ್ಯ ಹೊಂದುವುದಿಲ್ಲವೆಂಧು ಜೀವರುಗಳನ್ನು ಬ್ಯಾರೆ ಬ್ಯಾರೆ ತಿಳಿಯುವುದು ಜೀವ ಜೀವ ಭೇದ ೧) ಕತ್ತಲು, ಬೆಳಕು, ನೀರು, ಬೆಂಕಿ ಮುಂತಾದ ಜ್ಞಾನವಿಲ್ಲದ ಜಡವೆಲ್ಲಾ ಒಂದೇ ವಸ್ತು ಎಂತಲೂ ದೃಶ್ಯವಾದದ್ದರಿಂದ ಕಪ್ಪೇ ಚಿಪ್ಪಿನಲ್ಲಿ ತೋರುವ ಬೆಳ್ಳಿಯಂತೆ ಭ್ರಾಂತಿಯಿಂದ ನಿಜವೆಂದು ತೋರುವುದು. ಪರಮಾರ್ಥವಾಗಿ ಸರ್ವವೂ ಮಿಥ್ಯವೂ ಎಂದೂ ತಿಳಿಯದೆ ಪ್ರತ್ಯೇಕ ಪ್ರತ್ಯೇಕ ಸ್ವಭಾವ ಜಡಗಳೆಲ್ಲಾ ಬ್ಯಾರೆ ಬ್ಯಾರೆ ಎಂದು ತಿಳಿಯುವದೇ ಜಡಜಡ ಭೇದ. ೨) ಜೀವ ಜ್ಞಾನ ರೂಪನಾದ್ದರಿಂದ ಜಡ ಜ್ಞಾನರಹಿತವಸ್ತುವಾದ್ದರಿಂದ ಎರಡೂ ಒಂದಲ್ಲ, ಬ್ಯಾರೆ ಬ್ಯಾರೆ ಎಂದು ತಿಳಿಯುವದೇ ಜಡಜೀವಭೇದ. ೩) ದೇವರು ಸ್ವತಂತ್ರ, ಜ್ಞಾನರೂಪ. ಜೀವ ಪರಾಧೀನನಾದ ಅಲ್ಪಜ್ಞಾನರೂಪ. ಹಾಂಗೆ ವಿರುದ್ಧಸ್ವಭಾವವುಳ್ಳವರಾದ್ದರಿಂದ ಜೀವ ಬ್ಯಾರೆ ದೇವರು ಬ್ಯಾರೆ ಎಂದು ತಿಳಿಯುವದೇ ಜೀವ ಪರಮಾತ್ಮ ಭೇದ. ೪) ತನ್ನ ಜ್ಞಾನಕ್ಕೆ ಇತರ ಸಹಾಯಾಪೇಕ್ಷ ಇಲ್ಲದೇ ಅನಂತ ಜೀವ ಜಡಾತ್ಮಕ ಪ್ರಪಂಚವನ್ನು ಸಾಕ್ಷಾತ್ತಾಗಿ ನೋಡುವ ಸರ್ವಜ್ಞದೇವರು ಜ್ಞಾನರಹಿತ ಸ್ವರೂಪನಾಗನು ಎಂದು ದೇವರು ಬ್ಯಾರೆ, ಜಡವಸ್ತುವು ಬ್ಯಾರೆ ಎಂದು ತಿಳಿಯುವದೇ ಜಡ ಪರಮಾತ್ಮ ಭೇದ. ೫) ಹೀಂಗೆ ಪಂಚಭೇದಜ್ಞಾನ, ರಮಾದೇವಿಯು ಜೀವ, ಜಡ, ಪರಮಾತ್ಮ ಎಂಬ ಮೂರು ವಸ್ತುಗಳಿಗೂ ಅತ್ಯಂತ ವಿಲಕ್ಷಣಗಳು ಅಂದರೆ ಜೀವರಂತೆ ಪರಾಧೀನಸ್ವರೂಪ ಳಾದಾಗ್ಯೂ ದೇವರಂತೆ ನಿತ್ಯಮುಕ್ತಳಾದ್ದರಿಂದಲೂ, ಜಡದಂತೆ ಜ್ಞಾನರಹಿತಳಲ್ಲವಾದ್ದ ರಿಂದಲೂ, ಈಕೆ ಪ್ರತ್ಯೇಕ ವಸ್ತುವೆಂದು ಸಹತಿಳಿದು, ಸಾವಧಿಕಸಮಶೂನ್ಯಳೆಂದು ಎಂದರೆ ದೇಶಕಾಲವ್ಯಾಪ್ತಿಯಲ್ಲಿ ಇಲ್ಲಿಯವರೆಗೆ ಅವಧಿಯುಂದು ಇಲ್ಲದ್ದರಿಂದ ಲಕ್ಷ್ಮೀ ನಾರಾಯಣರೆಂಬ ಈ ಇಬ್ಬರನ್ನ ದೇಶಕಾಲವ್ಯಾಪ್ತಿಯಲ್ಲಿ ನಿರವಧಿಕಸಾಮ್ಯ ಉಳ್ಳವಳೆಂದು ಗುಣತಃ ಅಸಮಳು ಎಂದು ಅರ್ಥ.

**ಆದಿತೇಯರು ತಿಳಿಯದಿಹ ಗುಣ ।**
**ವೇದಮಾನಿಗಳೆಂದೆನಿಪ ವಾ ।**
**ಣ್ಯಾದಿಗಳು ಬಲ್ಲರವರರಿಯದ ಗುಣಗಣಂಗಳನು ॥**

**ವೇಧ ಬಲ್ಲನು ಬೊಮ್ಮನರಿಯದ ।**
**ಗಾಧಗುಣಗಳ ಲಕುಮಿ ಬಲ್ಲಳು ।**
**ಶ್ರೀಧರೊಬ್ಬನುಪಾಸ್ಯ ಸದ್ಗುಣಪೂರ್ಣಹರಿಯೆಂದು ॥ ೩೦ ॥**

ಗುಣೋಪಾಸನಾತಾರತಮ್ಯವನ್ನು ತಿಳಿಯಬೇಕೆಂದು ಹೇಳತಾರೆ.

ಆದಿತೇಯರು–ರುದ್ರದೇವರು ಮೊದಲು ಮಾಡಿಕೊಂಡು ಯಾವತ್ತು ದೇವತೆಗಳು, ತಿಳಿಯದಿಹ–ಅರಿಯದೇ ಇರತಕ್ಕ, ಗುಣ–ಶ್ರೀ ಪರಮಾತ್ಮನ ಗುಣಗಳನ್ನು, ವೇದಮಾನಿಗಳೆಂದೆನಿಪ–ವೇದಾಭಿಮಾನಿಗಳೆಂದು ಕರಿಸತಕ್ಕ, ವಾಣ್ಯಾದಿಗಳು–ಸರಸ್ವತಿ ಭಾರತಿ ದೇವೇರು ಹಾಂಗೇ ಋಜುಪತ್ನೇರು ತಾರತಮ್ಯದಿಂದ ಕ್ರಮವಾಗಿ, ಬಲ್ಲರು–ತಿಳಿಯೋವರಾಗಿದ್ದಾರೆ. ಅವರರಿಯದ–ಈ ಸರಸ್ವತ್ಯಾದಿಗಳು ತಿಳಿಯದಂಥಾ, ಗುಣಗಣಂಗಳನು–ಗುಣಸಮೂಹಗಳನ್ನು, ವೇಧ ಬಲ್ಲನು–ಬ್ರಹ್ಮದೇವರು ಬಲ್ಲರು, ಹಾಂಗೆ ವಾಯುದೇವರು, ಹಾಂಗೆ ತಾರತಮ್ಯದಿಂದ ಋಜುಗಳು ತಿಳಿಯೋವರಾಗಿದ್ದಾರೆ. ಬೊಮ್ಮನರಿಯದ–ಈ ಬ್ರಹ್ಮದೇವರು ಅರಿಯದೇ ಇರತಕ್ಕಂಥಾ, ಅಗಾಧಗುಣಗಳು–ಅಪರಿಮಿತ ಗುಣಗಳನ್ನು, ಲಕುಮಿ ಬಲ್ಲಳು–ರಮಾದೇವೇರು ತಿಳಿಯೋವರಾಗಿದ್ದಾರೆ ಎಂಬೋಣದರಿಂದ ಶ್ರೀ ಪರಮಾತ್ಮನ ಗುಣಗಳನ್ನು ಅವರವರು ತಮ್ಮ ಯೋಗ್ಯತಾನುಸಾರ ತಿಳಿಯೋವರಾಗಿದ್ದಾರೆ ಹೊರ್ತು ಸರ್ವ ಗುಣಗಳನ್ನೂ ಅರಿಯರು. ಸದ್ಗುಣಪೂರ್ಣ–ಆದಕಡಿಯಿಂದ ಶ್ರೀ ಪರಮಾತ್ಮನ ಗುಣಗಳು ಅಪರಿಚ್ಛಿನ್ನಗಳಾಗಿನ್ನೂ, ಅಪಾರಗಳಾಗಿನ್ನೂ ಆದ್ಯಂತರಹಿತಗಳಾಗಿನ್ನೂ ಛಂದಾಗಿ ಪೂರ್ಣಗಳಾಗಿನ್ನೂ ಅವೆ. ನಚ್ಛಬ್ದದಿಂದ ಅಸ್ವಾತಂತ್ರ್ಯ ಅಪೂರ್ಣತಾ ಮೊದಲಾದ ದೋಷಗಳಿಲ್ಲವೆಂದು ತಾತ್ಪರ್ಯ. ಶ್ರೀಧರನೊಬ್ಬನು–ಶ್ರೀವತ್ಸಾಂಕಿತ ಶ್ರೀ ಪರಮಾತ್ಮನೊಬ್ಬನೇ, ಉಪಾಸ್ಯ–ರಮಾಬ್ರಹ್ಮಾದಿಗಳಿಂದ ಸರ್ವೋತ್ತಮನೆಂದು ಉಪಾಸನಾ ಮಾಡಿಸಿಕೋತಾನೆ. ತದನ್ಯರಾದ ರಮೊಬ್ರಹ್ಮಾದಿಗಳು ತಾರತಮ್ಯಾನುಸಾರ ಉಪಾಸನಾಕ್ಕೆ ಯೋಗ್ಯರೇ ಹೊರ್ತು ಸರ್ವೋತ್ತಮತ್ವೇನ ಉಪಾಸನಾಕ್ಕೆ ಯೋಗ್ಯರಾದವರಲ್ಲ. ಆದಕಡಿಯಿಂದಲೇ, ಹರಿಯೆಂದು–ಶ್ರೀ ಲಕ್ಷ್ಮೀಪತಿ ನಾರಾಯಣದೇವರು ಪೂರ್ವೋಕ್ತರೀತ್ಯಾ ತಾರತಮ್ಯ ಪಂಚಭೇದದಿಂದ ಸರ್ವೋತ್ತಮನೆಂದು ಹೇಳಿಸಿಕೊಳ್ಳಲ್ಪಡತಾನೆ. ಗುಣೋಪಾಸನಾದಿಂದ ಜೀವರ ತಾರತಮ್ಯ ಹೇಳಿದಂತಾಯಿತು.

**ಇಂತನಂತಾನಂತ ಗುಣಗಳ ।**
**ಪ್ರಾಂತಗಾಣದೆ ಮಹಾಲಕುಮಿ ಭಗ ।**
**ವಂತಗಾಭರಣಯುಧಾಂಬರವಾಲಯುಗಳಾಗಿ ॥**
**ಸ್ವಾಂತದಲಿ ನೆಲೆಗೊಳಿಸಿ ಪರಮುದು ।**
**ರಂತಮಹಿಮನ ದೌತ್ಯಕರ್ಮ ನಿ ।**
**ರಂತರದಿ ಮಾಡುತಲಿ ತದಧೀನತ್ವವೈದಿಹಳು ॥ ೩೧ ॥**

ಶ್ರೀ ಪರಮಾತ್ಮನ ಗುಣಗಳ ರಮಾದೇವೇರು ಉಪಾಸನಾಕ್ರಮ ಸೇವಾಮಾಡತಕ್ಕ ಕ್ರಮವಿಚಾರ ಹೇಳತಾರೆ.

ಇಂತ–ಈ ಪೂರ್ವೋಕ್ತನಾದ ಶ್ರೀ ನಾರಾಯಣದೇವರ, ಅನಂತಾನಂತ ಗುಣಗಳ–ಅಪರೋಕ್ಷಿನ್ನ ಗುಣಗಳ ಪ್ರಾಂತ ಕಾಣದೆ–ಅಂತ ಕಾಣದೇ (ತನ್ನ ಯೋಗ್ಯತಾನುಸಾರ ಕಂಡಿದ್ದಾಳೆ ಎಂತ ತಾತ್ಪರ್ಯ.), ಮಹಾಲಕುಮಿ–ಬ್ರಹ್ಮಾದಿ ಜೀವರಪೇಕ್ಷಯಾ ಭಿನ್ನಳಾದ ಮತ್ತು ಇನ್ನೂ ಉತ್ತಮಳಾದ ಶ್ರೀಲಕ್ಷ್ಮೀದೇವೇರು ತನ್ನ ರಮಾಖ್ಯ ಶ್ರೀಭಾಗದ ಒಳಗೆ ನಿಲಿಸಿ ಮತ್ತು, ಸ್ವಾಂತದಲಿ–ತನ್ನ ಹೃದಯ ಅಷ್ಟದಳ ಕಮಲದಲ್ಲಿ, ನೆಲೆಗೊಳಿಸಿ–ನಿಲ್ಲಿಸಿದವಳಾಗಿ, ಭಗವಂತಗೆ–ತನ್ನ ಪತಿಯಾದ ಶ್ರೀ ನಾರಾಯಣದೇವರಿಗೆ ಎಂದರೆ ರಮಾದೇವೇರಿಗೆ ಬಿಂಬರೂಪ ಸರ್ವದಾ ಹೃದಯಾಕಾಶದಲ್ಲಿ ಇರೋದಾಗಿ ಅದೆ. ಅವಿಯೋಗ ರೂಪ ಒಂದು, ಪತಿತ್ವೇನ ಬಾಹ್ಯಗತರೂಪ ಒಂದು, ಸ್ವಾಂತದಲಿ ಮಾಡಿಕೊಂಡ ರೂಪ ಬಾಹ್ಯಗತ ಪತಿಸಾಂಕೇತ ರೂಪ ಒಂದು, ಇವರನ್ನ ಹೃದಯಾಕಾಶದಲ್ಲಿ ನಿಲ್ಲಿಸಿದಂಥಾವಳಾಗಿ, ಆಭರಣ–ಅನೇಕ ನವರತ್ನಾತ್ಮಕಗಳಾದ ಆಭರಣಗಳು, ಆಯುಧ–ಗದಾ ಮೊದಲಾದ ಆಯುಧಗಳು, ಅಂಬರವು–ದಿವ್ಯ ವಸ್ತ್ರಗಳು, ಆಲಯಗಳಾಗಿ–ಮನಿಗಳು ಇನ್ನೂ ಛತ್ರಚಾಮರಾದಿ ಉಪಚಾರರೂಪ ಪದಾರ್ಥಗಳು ಆದಂಥಾವಳಾಗಿ, ಪರಮದುರಂತ ಮಹಿಮನ–ಅವಶ್ಯಕವಾದ ಮಹಾಮಹಿಮೋಪೇತನಾದ ಶ್ರೀ ಪರಮಾತ್ಮನ, ದೌತ್ಯ ಕರ್ಮ–ದೂತಕರ್ಮಗಳ, ನಿರಂತರದಿ ಮಾಡುತಲಿ–ಪ್ರತಿನಿತ್ಯ ಮಾಡುವಂಥಾವಳಾಗಿ, ತದಧೀನತ್ವವೈದಿಹಳು–ಶ್ರೀ ಪರಮಾತ್ಮನ ಅಧೀನದಲ್ಲಿ ಇರೋವಳಾಗಿದ್ದಾಳೆ.

**ವಿಶೇಷಾರ್ಥ :–** ವೈಢೂರ್ಯಸ್ತಬಕಛತ್ರಪಾದುಕೇ ರತ್ನಪೀಠಕೇ | ಸರ್ವರಾಜೋಪಚಾರಾಣಿ ರಾಜಚಿನ್ಹಾನಿ ಯಾನಿ ಚ || ೬೬ || ಸರ್ವಾಣ್ಯಭೂದ್ರಮಾದೇವೀ ದೇವಾಯಾನಂತತೇಜಸೇ | ಭೋಗ್ಯವಸ್ತುಸ್ವರೂಪೇಣ ತವ ಸೇವಾಭಿಲಾಷಿಣೀ ||೬೭|| ಇತ್ಯಾದಿ ಆದಿತ್ಯಪುರಾಣ ವೆಂಕಟೇಶಮಹಾತ್ಮ್ಯೋಕ್ತ ಪ್ರಮಾಣಗಳು ಬಹಳ ಇದೆ. ಆದ ಕಡಿಯಿಂದ ರಮಾದೇವೇರು ಇಂಥಾ ಪರಮಾತ್ಮಗೆ ವೈಕುಂಠದಲ್ಲಿ ಶುದ್ಧ ಶ್ರೀಭಾಗಗಳು ತಾನೇ ಆಗಿ ಅದರಲ್ಲಿ ಅನೇಕ ಮನಿಗಳು ತಾನೇ ಆಗಿ ಆ ತನ್ನ ಸ್ವಾಂತದಲಿ ತನ್ನ ಪತಿಯನ್ನ ನೆಲೆಗೊಳಿಸಿ ಆಯುಧಾಂಬರ ಆಭರಣಗಳು ತಾನಾಗಿ ಸೇವಾ ಮಾಡೋದರಲ್ಲಿ ಪತ್ನಿಯಾಗಿನ್ನು ಅನೇಕ ರೂಪಗಳಿಂದ ದಾಸೀರೂಪಗಳ ಧರಿಸಿನ್ನು ಸೇವಾ ಮಾಡುತಾ ಆಯಾ ರೂಪಗಳಿಂದ ಅವನ ಅಧೀನದಿಂದ ಇದ್ದಾಳೆ. ಅವನ ಆಜ್ಞಾನುಸಾರ ಪ್ರವರ್ತಿಸತಾ ಸೇವಾ ಮಾಡುತಾ ಇದ್ದಾಳೆ ಎಂತ ತಾತ್ಪರ್ಯವು.

**ಪ್ರಳಯ ಜಲಧಿಯೊಳುಳ್ಳ ನಾವೆಯು |**
**ಹೊಲಬುಗಾಣದೆ ಸುತ್ತುವಂದದಿ |**
**ಜಲರುಹೇಕ್ಷಣನಮಲ ಗುಣರೂಪಗಳ ಚಿಂತಿಸುತ ||**
**ನೆಲೆಯ ಕಾಣದೆ ಮಹಾಲಕುಮಿ ಚಂ |**
**ಚಲವನೈದಿಹಳಲ್ಪ ಜೀವರಿ |**
**ಗಳವಡುವುದೇ ನಿವನ ಮಹಿಮೆಗಳೀ ಜಗತ್ರಯದಿ || ೩೨ ||**

ಶ್ರೀ ರಮಾದೇವೇರು ಶ್ರೀ ಪರಮಾತ್ಮನ ಗುಣಗಳನ್ನು ಅಂತ ಕಾಣಲಿಲ್ಲ ಎಂಬುವುದಕ್ಕೆ ಸದೃಷ್ಟಾಂತರೂಪದಿಂದ ಹೇಳತಾರೆ.

ಪ್ರಳಯಜಲಧಿಯೊಳುಳ್ಳ–ಮಹಾಪ್ರಳಯೋದಕದಲ್ಲಿ ಇರತಕ್ಕ, ನಾವೆಯು–ಪಡವಿಯು ಅಂದರೆ ದೋಣಿಯು, ಹೊಲಬು ಕಾಣದೆ–ಉಭಯ ಪಾರ್ಶ್ವದಲ್ಲಿ ದಡವನ್ನು ಕಾಣದೆ, ಸುತ್ತುವಂದದಿ–ಸುತ್ತುತ್ತಾ ಇರೋಪಾದಿಯಲಿ, ಜಲರುಹೇಕ್ಷಣನ–ಕಮಲದಳದೋಪಾದಿಯಲಿ ನೇತ್ರಗಳುಳ್ಳ ಶ್ರೀ ಪರಮಾತ್ಮನ, ಅಮಲಗುಣರೂಪಗಳ–ನಿರ್ದೋಷಗಳಾದ ಗುಣರೂಪಗಳೆಂಬ ಪ್ರಳಯೋದಕದಲ್ಲಿ, ಚಿಂತಿಸುತ–ಮನವೆಂಬೋ ನಾವಿಯನ್ನು ಈ ಪ್ರಳಯೋದಕ ಸಮುದ್ರದಲ್ಲಿ ಪ್ರವೇಶಮಾಡಿಸಿ ದಡಾ ಕಾಣೋ ಉದ್ದಿಶ್ಯ ನಾವಿಯೆಂಬ ಮನಸ್ಸನ್ನ ಸಂಚಾರಮಾಡಿಸುತ್ತಾ ಎಂದರೆ ಚಿಂತನಾರೂಪದಿಂದ ಸಂಚಾರಮಾಡಿಸುತಾ, ನೆಲೆಯು ಕಾಣದೆ ಶ್ರೀ ಪರಮಾತ್ಮನ ಗುಣಸಮುದ್ರಕ್ಕೆ ನೆಲೆಯೆನತಕ್ಕ ಉಭಯಪಾರ್ಶ್ವದಡಗಳ ಕಾಣದವಳಾದಂಥಾ, ಮಹಾಲಕುಮಿ–ದೇಶತಃ ಕಾಲತಃ ಸಮಳಾಗಿನ್ನು ಗುಣತಃ ಅಸಮಳಾಗಿನ್ನು ಇರುವಂಥಾ ರಮಾದೇವೇರು, ಚಂಚಲಪನ್ನೈದಿಹಳು – ಅದರ ಮ್ಯಾಲೆ ಮನಸ್ಸಿಗೆ ಒಂದೂ ತೋರದಂತೆ ದಿಗ್ಭ್ರಮೆಯೈದಿ ಮನಸ್ಸು ಚಪಲ ಹೊಂದೋವಳಾಗಿದ್ದಾಳೆ. ಹೀಂಗಿರಲಾಗಿ, ಈ ಜಗತ್ರಯದಿ – ವಿದ್ಯಮಾನ ಬ್ರಹ್ಮಾಂಡಗತ ಚತುರ್ದಶ ಲೋಕಗತ ಬ್ರಹ್ಮಾದಿ ತೃಣಾಂತ ಸಮಸ್ತರಾದ, ಅಸ್ವತಂತ್ರರಾದ, ಅಲ್ಪಜೀವರಿಗೆ–ಅಲ್ಪಜ್ಞಾನವುಳ್ಳ ಜೀವರಿಗೆ, ಅಳವಡುವದೇ–ಶ್ರೀ ಪರಮಾತ್ಮನ ಗುಣಗಳ ಆದ್ಯಂತ ಸಿಕ್ಕುವುದೇ ಎಂದರೆ ಇವನ ಮಹಿಮೆಗಳು ಸಿಕ್ಕಲಾರದು. ಇವನ ಮಹಾಮಹಿಮೆಯ ನೋಡೋದಕ್ಕೆ ಸಾಧ್ಯವಾಗಲಾರದು. ಅಪರಿಚ್ಛಿನ್ನ ಗುಣಗಳೆಂತಲೂ, ಅಪಾರವಾದ ಮಹಿಮೆಗಳು ಎಂತಲೂ ತಾತ್ಪರ್ಯ.

**ಶ್ರೀನಿಕೇತನ ಸಾತ್ತ್ವತಾಂಪತಿ ।**
**ಜ್ಞಾನಗಮ್ಯ ಗಯಾಸುರಾರ್ದನ ।**
**ಮೌನಿಕುಲಸನ್ಮಾನ್ಯ ಮಾನದ ಮಾತುಳಧ್ವಂಸಿ ॥**
**ದೀನಜನಮಂದಾರ ಮಧುರಿಪು ।**
**ಪ್ರಾಣದ ಜಗನ್ನಾಥವಿಠ್ಠಲ ।**
**ತಾನೆ ಗತಿಯೆಂದನುದಿನದಿ ನಂಬಿದವರನು ಪೊರೆವ ॥ ೩೩ ॥**

ಇಂಥಾ ಶ್ರೀ ಪರಮಾತ್ಮನ್ನ ನಂಬಿದವರನ್ನ ಶ್ರೀದೇವರು ಸಂರಕ್ಷಣ ಮಾಡತಾನೆ ಎಂತ ಹೇಳತಾರೆ.

ಶ್ರೀನಿಕೇತನ–ಶ್ರೀ ರಮಾದೇವೇರೇ ಮನಿಯಾಗಿ ಉಳ್ಳವಾ ಎಂದರೆ ಸರ್ವತ್ರದಲಿ ರಮಾಂತರ್ಗತನಾಗಿ ಇರತಕ್ಕವ, ಸಾತ್ವತಾಂಪತಿ–ಸಜ್ಜನರಿಗೆ ಸ್ವಾಮಿಯಾದವ, ಜ್ಞಾನಗಮ್ಯ–ದಿವ್ಯಜ್ಞಾನದಿಂದ ಪ್ರತ್ಯಕ್ಷನಾಗತಕ್ಕವ, ಗಯಾಸುರಾರ್ದನ – ಗಯಾನಾಮಕ ದೈತ್ಯನ್ನ ಸಂಹಾರಮಾಡಿದವ, ಮೌನಿಕುಲಸನ್ಮಾನ್ಯ–ಬಹಿರ್ಲೋಕವಾರ್ತಾದಲ್ಲಿ ಇಷ್ಟವಿಲ್ಲದೇ ಪರಮಾತ್ಮನ ವಿಷಯಕವಾದ ವಾರ್ತಾದಲ್ಲಿ ದೃಷ್ಟಿಯಿರುವ ಜ್ಞಾನಿಗಳಿಂದ ಛಂದಾಗಿ ಸರ್ವೋತ್ತಮನೆಂದು ಮಾನ್ಯನಾದವ, ಮಾನದ–ತನ್ನ ಭಕ್ತರನ್ನ ತನ್ನ ವೈಕುಂಠಲೋಕದಲಿ ಇಟ್ಟು ಮಾನಮಾಡತಕ್ಕವ, ಪೂಜ್ಯಸ್ಥಾನವಾದ ವೈಕುಂಠಲೋಕ ಕೊಡತಕ್ಕವ. ಮಾತುಳಧ್ವಂಸಿ–ತನ್ನ ಸೋದರಮಾವನ್ನ ಸಂಹಾರಮಾಡದವ. ದೀನಜನ

ಮಂದಾರ–ತನಗೆ ಶರಣಾಗತರಾದವರಿಗೆ ಯೋಗ್ಯತಾನುಸಾರ ಇಷ್ಟಾರ್ಥಗಳ ಕೊಡತಕ್ಕ ಕಲ್ಪವೃಕ್ಷಸದೃಶನಾದವ, ಮಧುರಿಪು–ಮಧುನಾಮಕ ದೈತ್ಯಗೆ ಶತ್ರುವಾದವ, ಪ್ರಾಣದ–ಜೀವರಿಗೆ ಲಿಂಗಭಂಗ ಐದಿಸಿ ಸ್ವರೂಪವ್ಯಕ್ತಿ ಮಾಡಿಕೊಡತಕ್ಕವ, ಮತ್ತು ಪ್ರಾಣದೇವರದ್ವಾರಾ ಮೋಕ್ಷ ಕೊಡತಕ್ಕವ, ಜಗನ್ನಾಥವಿಠ್ಠಲ–ಜಗತ್ತಿಗೆ ಸ್ವಾಮಿಯಾಗಿ, ವಿಠ್ಠಲಶಬ್ದವಾಚ್ಯ ಶ್ರೀಪರಮಾತ್ಮನ, ತಾನೇ ಗತಿಯೆಂದು–ನೀನೇ ಗತಿಪ್ರದನೆಂದು, ಅನುದಿನದಿ–ಪ್ರತಿದಿವಸದಲ್ಲ್ಯೂ, ನಂಬಿದವರನು–ನಂಬಿ ಇರತಕ್ಕಂಥಾ ಮುಕ್ತಸ್ವರೂಪರಾದ ಭಕ್ತರನ್ನು, ಪೊರೆವ–ತನ್ನ ಲೋಕವಾದ ವೈಕುಂಠಾದಿ ಲೋಕಗಳಲ್ಲಿ ಇಟ್ಟು ಸಂರಕ್ಷಣ ಮಾಡೋವನಾಗತಾನೆ. ತನ್ನ ದ್ವೇಷಿಗಳನ್ನೂನು ಅವರಿಗೆ ಯೋಗ್ಯವಾದ ಲೋಕಗಳಲ್ಲಿಟ್ಟು ಸಂರಕ್ಷಣರೂಪವಾದ ದುಃಖಾದಿಗಳನ್ನು ಕೊಡತಾ ಇರತಾನೆ. ಆದಕಡಿಯಿಂದ ಸರ್ವವಿಷಯದಿಂದಲೂ ಶ್ರೀ ಪರಮಾತ್ಮ ಸರ್ವೋತ್ತಮನೆಂದು ತಿಳದು ಉಪಾಸನಾ ಮಾಡಬೇಕು ಎಂತ ತಾತ್ಪರ್ಯ.

**ವಿಶೇಷಾರ್ಥ** :– ಪರಮಾತ್ಮನ ಪಾದ ಸೇರತಕ್ಕವರಿಗೆ ತ್ರಿವಿಧ ಜ್ಞಾನ ಬೇಕು. ಅದು ಹೊರ್ತು ಭಗವತ್ಸಂದರ್ಶನವಾಗೋದಿಲ್ಲ. ಆ ತ್ರಿವಿಧವು ದಾವದೆಂದರೆ ೧. ಆಪ್ತ ಜ್ಞಾನ, ೨. ಮಿತ್ರಜ್ಞಾನ, ೩. ದ್ವೇಷಜ್ಞಾನ. ಇದು ಮೂರೂ ಇರಬೇಕು. ಯಾವುದರಲ್ಲಿ ಎಂದರೆ, ಪರಮಾತ್ಮನಲ್ಲಿ ಆಪ್ತಜ್ಞಾನ ಇರಬೇಕು. ಮಿತ್ರಜ್ಞಾನ ಎಂದರೆ ಉದಾಸೀನ ಜ್ಞಾನ. ಲಾಭನಷ್ಟಗಳಲ್ಲಿ ಉದಾಸೀನ ಇರಬೇಕು. ಸ್ರಕ್ಚಂದನವನಿತಾದಿ ವಿಷಯಗಳಲ್ಲಿ ದ್ವೇಷಜ್ಞಾನ ಇರಬೇಕು. ಇದು ಮೂರು ಹೊರ್ತು ಮೋಕ್ಷವಾಗಲಾರದು. ಆದ್ದರಿಂದ ತ್ರಿಗುಣಕಾರ್ಯಗಳು ಇವು. ತ್ರಿಗುಣಗಳನ ತತ್ಕಾರ್ಯಗಳನ ಈ ರೀತ್ಯಾ ಪರಮಾತ್ಮನ ಸೇವಾದಲ್ಲಿ ಅರ್ಪಿಸಬೇಕು. ಸತ್ವಗುಣದ ಜ್ಞಾನ, ಆಪ್ತಜ್ಞಾನ, ರಜೋಗುಣದ ಜ್ಞಾನ ಉದಾಸೀನ, ತಮೋಗುಣದ ಜ್ಞಾನ ದ್ವೇಷ. ಈ ಪ್ರಕಾರ ತ್ರಿವಿಧ, ಈ ತ್ರಿಗುಣಗಳನ್ನು ಮನೋದ್ವಾರಾ ಪ್ರಕಾರಾಂತರ ತಿರಿಗಿರೆ ಸಾರ್ಥಕ್ಯ ಮಾಡಿಕೋಬೇಕು. ಇದರಂತೆ ಅನುಷ್ಠಾನ ಮಾಡಬೇಕು. || ೩೩ ||

ಪಂಚತನ್ಮಾತ್ರಸಂಧಿಯಲ್ಲಿ ಮುಖ್ಯವಾದ ವಿಚಾರವಿಷಯಗಳು.

೫ನೇ ಶ್ಲೋಕ :– ಶರೀರಚತುಷ್ಟಯದಲ್ಲಿ ಹಂಸಮಂತ್ರ.

೬ನೇ ಶ್ಲೋಕ :– ಶಿರಗಳೈದೆರಡು.

೧೫ನೇ ಶ್ಲೋಕ :– ಕಾಲಮೃತ್ಯು. ಅಪಮೃತ್ಯುರೋಗ.

೨೪ನೇ ಶ್ಲೋಕ :– ಮಾರ್ಕಂಡೇಯ ಪ್ರಳಯ.

೨೫ನೇ ಶ್ಲೋಕ :– ಅನಂತಾನಂತ ಬ್ರಹ್ಮಾಂಡವಿಚಾರ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಪಂಚತನ್ಮಾತ್ರಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||